# ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ
# ಸಂಪುಟ-೧

## ಭಾಗ-೧
## ವೇದಗಳ ಪರಿಚಯ

## ಭಾಗ-೨
## ಕೃಷ್ಣಯಜುರ್ವೇದ ಪರಿಚಯ

## ಭಾಗ-೩
## ಯಜ್ಞಗಳ ಪರಿಚಯ

ಪ್ರಧಾನ ಸಂಪಾದಕರು
ವಿದ್ವಾನ್ ಪಿ.ಎಸ್. ರಾಮೇಶ್ವರಾವಧಾನೀ



ಪ್ರಕಾಶನ
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ
ಬೆಂಗಳೂರು-೫೬೦ ೦೦೪



**KRISHNA YAJURVEDA KANNADA PRAKASHANA-VOLUME 1**
**Part-1 :** Vedagala Parichaya, **Part-2 :** Krishna Yajurveda Parichaya, **Part-3** :Yaznagala Parichaya, **Chief Editor : Vidwan P.S. Rameshwara Avadhani,** and Published by **Jyothi Samskritika Pratishthana** (R.), No. 31, Pampamahakavi Road, Bangalore-04.

**Copyright : Publishers (Reserved)**

**Third Edition : July 2015**

**Pages : 628**

**Price : ₹ 350/-**



ತೃತೀಯ ಮುದ್ರಣ : ಜುಲೈ 2015

ಬೆಲೆ ರೂ. : ₹ 350/-

ಮುದ್ರಕರು :
ಪರಿಮಳ ಮುದ್ರಣಾಲಯ
# 184, ಅಲ್ಲಮಪ್ರಭುರಸ್ತೆ, 14ನೇ ಮುಖ್ಯರಸ್ತೆ,
ಹನುಮಂತನಗರ, ಬೆಂಗಳೂರು–560 050
ದೂರವಾಣಿ : 2660 6061, 2660 9899



ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ — ಸಂಪುಟ ೧

ಭಾಗ ೧

# ವೇದಗಳ ಪರಿಚಯ

ಪ್ರಧಾನ ಸಂಪಾದಕ
ವಿದ್ವಾನ್ ಪಿ.ಎಸ್. ರಾಮೇಶ್ವರಾವಧಾನೀ

ಪ್ರಕಾಶನ
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ
ಬೆಂಗಳೂರು



**KRISHNA YAJURVEDA KANNADA PRAKASHANA-VOLUME 1**
**Chief Editor : Vidwan P.S. Rameshwara Avadhani,** and Published by **Jyothi Samskritika Pratishthana** (R.), No. 31, Pampamahakavi Road, Bangalore-04.



**Third Edition : July 2015**

**Pages : 180**



ತೃತೀಯ ಮುದ್ರಣ : ಜುಲೈ 2015

ಮುದ್ರಕರು :
ಪರಿಮಳ ಮುದ್ರಣಾಲಯ
# 184, ಅಲ್ಲಮಪ್ರಭುರಸ್ತೆ, 14ನೇ ಮುಖ್ಯರಸ್ತೆ,
ಹನುಮಂತನಗರ, ಬೆಂಗಳೂರು–560 050
ದೂರವಾಣಿ : 2660 6061, 2660 9899



# ಪರಿವಿಡಿ


| | |
|---|---|
| ಆಶೀರ್ವಚನ | v |
| ಮುನ್ನುಡಿ | ix |
| ಪ್ರತಿಷ್ಠಾನದ ಅಧ್ಯಕ್ಷರ ನುಡಿ | xii |
| ನಿವೇದನೆ | xvi |
| ಸಂಪಾದಕರ ನುಡಿ | xviii |
| ಪ್ರಧಾನ ಸಂಪಾದಕರ ಪರಿಚಯ | xxi |
| ಪ್ರಕಾಶನ ಸಮಿತಿ | xxii |
| ಸಂಪಾದಕ ವರ್ಗ | xxiii |
| ಏಕೆ? ಯಾರಿಗೆ? | 1 |
| ಸಂಪ್ರದಾಯದ ನೆಲೆ-ಆಧುನಿಕದ ಸೆಲೆ | 12 |
| ವೇದವೆಂದರೇನು? | 17 |
| ಇಷ್ಟಪ್ರಾಪ್ತಿ—ಅನಿಷ್ಟಪರಿಹಾರ | 21 |
| ವೇದಗಳೆಷ್ಟು? | 27 |
| ವೇದವಿಭಾಗ | 28 |
| ವಿಭಾಗ ಏಕೆ? | 31 |
| ಋಗ್ವೇದ ಪ್ರಧಾನವೇ? | 34 |
| ವೇದದ ಶಾಖೆಗಳೆಷ್ಟು? | 45 |
| ಋಷಿ ದೇವತಾ ಛಂದಸ್ಸುಗಳು | 48 |
| ವೇದಗಳು ಅಪೌರುಷೇಯ : ಏಕೆ? ಹೇಗೆ? | 81 |
| ವೇದಗಳ ಪ್ರಾಮಾಣ್ಯ : ಆಕ್ಷೇಪ-ಸಮಾಧಾನ | 83 |
| ಏಕದೇಶಪ್ರಾಮಾಣ್ಯವಾದ | 92 |
| ಸಮನ್ವಯವೇ ತಾರಕ | 94 |
| ಸಂಹಿತೆಗಳ ಅಧ್ಯಯನಕ್ರಮ | 96 |
| ಸಸ್ವರ ಪಾಠ | 100 |
| ಸಾಂಗಾಧ್ಯಯನ | 104 |




| | |
|---|---|
| ವೇದಾರ್ಥಜ್ಞಾನದ ಆವಶ್ಯಕತೆ | 105 |
| ವೇದಾರ್ಥಕ್ಕೆ ಸಹಕಾರಿಯಾದ ಇತರ ಶಾಸ್ತ್ರಗಳು | 117 |
| ವೇದಾರ್ಥಜ್ಞಾನ-ಪೂರ್ವಸಿದ್ಧತೆ | 122 |
| ವೇದದಲ್ಲಿಯ ಶಬ್ದ ಮತ್ತು ಅರ್ಥ | 125 |
| ವೇದಭಾಷ್ಯಗಳು | 132 |
| ವೇದಾಧಿಕಾರದ ರಹಸ್ಯ | 135 |
| ರಾಷ್ಟ್ರಜೀವನ : ಸಾರ್ವಭೌಮಸ್ಥಾನ | 137 |
| ಅನುಬಂಧ-೧ : ವೇದಗಳಲ್ಲಿ ವಿಜ್ಞಾನವುಂಟೆ? | 141 |
| ಅನುಬಂಧ-೨ : ನಾಲ್ಕು ವೇದಗಳಲ್ಲದೆ ಬೇರೆ ವೇದಗಳುಂಟೇ? | 143 |


---



# ಆಶೀರ್ವಚನ

## ಶ್ರೀ ಗುರುಭ್ಯೋ ನಮಃ

ಚತುರ್ವೇದಭಾಷ್ಯಕಾರರಾದ ಶ್ರೀ ಸಾಯಣಾಚಾರ್ಯರು ಕೃಷ್ಣಯಜುರ್ವೇದ ಭಾಷ್ಯಭೂಮಿಕೆಯಲ್ಲಿ "ನನು ಕೋಽಯಂ ವೇದೋನಾಮ" ಎಂದು ಪ್ರಶ್ನೆ ಮಾಡಿ ಅದಕ್ಕೆ ಸಮಾಧಾನವನ್ನು "ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋಃ ಅಲೌಕಿಕಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ" ಎಂದು ಸಮಾಧಾನವನ್ನು ತಿಳಿಸಿದರು. ಇಷ್ಟಪ್ರಾಪ್ತಿ ಮತ್ತು ಅನಿಷ್ಟಪರಿಹಾರಗಳ ಅಲೌಕಿಕೋಪಾಯವನ್ನು ತಿಳಿಸುವ ಗ್ರಂಥವೇ ವೇದ. ಅಲೌಕಿಕೋಪಾಯವು ಧರ್ಮವು. ನಮ್ಮ ಶ್ರೇಯಃಪ್ರೇಯಸ್ಸುಗಳಿಗೂ ದುಃಖಪರಿಹಾರಕ್ಕೂ ಸಾಧಕವಾದ ಧರ್ಮವನ್ನು ವೇದಗಳಿಂದಲೇ ತಿಳಿಯಬೇಕು.

ನಾವು ವೇದಾಧ್ಯಯನವನ್ನು ಮಾಡುತ್ತೇವೆ. ಅರ್ಥಜ್ಞಾನವಿಲ್ಲದೆ ಮಾಡಿದ ಅಧ್ಯಯನವು ವಿಶಿಷ್ಟವಾದ ಫಲವನ್ನು ಕೊಡಲು ಅಸಮರ್ಥ. ಅರ್ಥಜ್ಞಾನಕ್ಕಾಗಿ ಭಾಷ್ಯಗಳನ್ನು ಪರಿಶೀಲಿಸಬೇಕು. ಈ ಪರಿಶೀಲನೆಗೆ ಸಂಸ್ಕೃತಭಾಷಾಪಾಂಡಿತ್ಯ, ಮೀಮಾಂಸಾಪರಿಚಯ ಎರಡೂ ಬೇಕು. ಇವೆರಡನ್ನೂ ಸಾಧಿಸುವುದಕ್ಕೆ ನಾಲ್ಕಾರು ವರುಷಗಳ ಸತತ ಪ್ರಯತ್ನ ಆವಶ್ಯಕ. ಸರ್ವರಿಂದಲೂ ಸುಲಭವಾಗಿ ಸಾಧಿಸಲಶಕ್ಯ.

ನಮ್ಮ ಶಿಷ್ಯರಾದ ಶ್ರೀ ಬಿ.ಎನ್.ವಿ. ಸುಬ್ರಹ್ಮಣ್ಯಂ ಅವರು "ಜ್ಯೋತಿಸಾಂಸ್ಕೃತಿಕ ಪ್ರತಿಷ್ಠಾನ" ವೆಂಬ ಸಂಸ್ಥೆಯನ್ನು ಸ್ಥಾಪಿಸಿ ತನ್ಮೂಲಕ ವೇದಮಂತ್ರಗಳ ತಾತ್ಪರ್ಯ ವನ್ನು ಎಲ್ಲರೂ ಸುಲಭವಾಗಿ ಅರಿಯಲು ಅನುಕೂಲವಾಗಲೆಂಬ ಉದ್ದೇಶದಿಂದ ಯಜುರ್ವೇದ ಕನ್ನಡ ಪ್ರಕಾಶನವನ್ನು ಆರಂಭಿಸಿದ್ದಾರೆ. ಈ ಕಾರ್ಯವು ಬೃಹತ್ತರ ವಾದುದು. ಶ್ರೀಸುಬ್ರಹ್ಮಣ್ಯಂ ಅವರು ಪರಹಿತಮತಿಯಿಂದ ಆರಂಭಿಸಿರುವ ಈ ಪ್ರಕಾಶನಕಾರ್ಯವು ಸುಲಭವಾಗಿ ಮುಂದುವರಿಯಲಿ. ಆಸ್ತಿಕಜನಸ್ತೋಮದ ಸಹಾಯ ಸಹಕಾರಗಳು ನಿರಂತರವಾಗಿ ಪ್ರವಹಿಸಲಿ. ಪ್ರಕಾಶನಗ್ರಂಥಗಳು ಆಸ್ತಿಕರ ಹೃದಯಗಳಲ್ಲಿ ಪ್ರಕಾಶವನ್ನು ಬೀರಲಿ. ತಮೋಗ್ರಂಥಿಗಳು ನಿರ್ಮೂಲಗೊಳ್ಳಲಿ ಮತ್ತು ಪ್ರಕಾಶಕರು ಭವಭಯಪ್ರಶಮನಕರನಾದ ಪರಮೇಶ್ವರನ ಕೃಪೆಯಿಂದ ಮಂಗಲ ಪರಂಪರೆಗಳನ್ನು ಅನುಭವಿಸಲೆಂದು ಹಾರೈಸುತ್ತೇವೆ.

ಪ್ರಭವ ಫಾಲ್ಗುನ ಶುಕ್ಲದಶಮೀ — ಇತಿ ನಾರಾಯಣಸ್ಮರಣಂ

27-2-88 — ವಿದ್ಯಾತೀರ್ಥಃ

ಶೃಂಗಗಿರಿ.



श्री गुरुभ्यो नमः



"धर्मो विश्वस्य जगतः प्रतिष्ठे"ति श्रुतिः सर्वस्यापि जगतः प्रतिष्ठा-साधनं धर्ममेव ब्रूते। स च धर्मः श्रुत्या अवगन्तव्यः इति "वेदोऽखिलो धर्ममूलं" इत्यादि वचनानि ऐककण्ठ्येन प्रतिपादयन्ति। यद्यपि स्मृत्याचारादीनामपि धर्मे प्रमाजनकत्वमस्ति तथापि वेदमूलकत्वेनैव तासां धर्मे प्रामाण्यं न स्वातन्त्र्येण। अत एव श्रुतिस्मृत्योर्विरोधे स्मृतिरेव बाध्येति निर्णीतं पूर्वतन्त्रे।

स च वेदः 'अनन्ता वै वेदा' इति वचनानुसारेण अनन्तोपि ऋग्यजुस्सामाथर्वरूपेण चतुर्धा विभक्तो विराजते। एकैकस्यापि वेदस्य बह्व्यः शाखा आसन्निति 'एकशतमध्वर्युशाखा' इत्यादिभिर्वाक्यैः प्रतीयते। परन्तु तासु नैकाः अधुना उत्सन्नाः केवलं अङ्गुलिमेयाः काश्चन शाखा एव अवशिष्टाः।

तत्र 'स्वाध्यायोऽध्येतव्यः' इति विधिः स्वशाखाध्ययनं विधत्ते। अत एव विहितस्य वेदाध्ययनस्याकरणेन प्रत्यवायः समापतती ति "विहितस्याननुष्ठानान्निन्दितस्य च सेवनात्। अनिग्रहाच्चेन्द्रियाणां नरः पतनमृच्छति" इत्यादीनि वाक्यानि स्पष्टं ब्रुवते। एतेन वेदाध्ययनेनास्माकं किं





फलमिति केषांचिच्छङ्कापि निरस्ता वेदितव्या। 'ब्राह्मणेन निष्कारणं षडङ्गो वेदोऽध्येयो ज्ञेयश्च' इति महाभाष्यकारोदाहृतस्मात् वचनमप्येतदेवोपोद्बलयति। अत उपनीतेन ब्राह्मणेन स्वशाखाध्ययनमवश्यं कर्तव्यम्।

वेदाध्ययनोत्तरमर्थज्ञानमवश्यं सम्पादनीयम्। तत्र अर्थज्ञानहीनस्य निन्दा, अर्थज्ञानवतः स्तुतिश्च शास्त्रे दृश्यते। तथाहि "स्थाणुरयं भारहरः किलाभूदधीत्यवेदं न विजानाति योऽर्थम्। योऽर्थज्ञ इत्सकलं भद्रमश्नुते नाकमेति ज्ञानविधूतपाप्मा"। इत्युक्तम्। अत्र चन्दनकाष्ठभारवाही गर्दभः स्वेनोह्यमानस्य चन्दनकाष्ठस्य गन्धं मनागपि न जानातीति। अर्थज्ञानहीनस्तेनोपमीयमानो निन्द्यत इति प्रतीयते। अर्थज्ञानवतस्तु शुभावाप्तिः दुरितनिवृत्तिः इत्यादिफलकथनेन संस्तूयते। अतो वेदार्थज्ञानमवश्यं सम्पाद्यम्।

तत्र च मितम्पचमतयः वेदस्यार्थं वेत्तुं न पारयन्ति इति सर्वज्ञकल्पास्सायणाचार्याः लोकानुजिघृक्षया





चतुरोपि वेदान् व्याचचक्षिरे। वेदार्थं जिज्ञासमानानां सायणभाष्यं कल्पवृक्षायत इति नात्युक्तिः। वेदेषु वेदाङ्गेषु दर्शनेषु च सर्वेषु अप्रतिहता खलु गतिस्सायणाचार्याणाम्। अतस्सायणभाष्यमवलम्ब्यैव वेदार्थो ज्ञेयो जिज्ञासुभिः।

तत्र यजुर्वेदस्य सायणभाष्यानुसारेण कर्णाटक भाषया अनुवादं विधाप्य सुब्रह्मण्यार्यः प्रकाशयतीति विदित्वा मोदामहे। अस्यायं प्रयत्नः फलेग्रहिर्भूयात् सुब्रह्मण्यार्यश्च श्रेयःपरम्पराभिस्समभिवर्धतामित्याशास्महे।

इति नारायणस्मरणम्

भारती तीर्थः

यात्रास्थानम् दिण्डिगल्

प्रभववर्षीय महाशिवरात्रिः भौमवासरः



ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯಮಹಾಸಂಸ್ಥಾನಂ ಶಾರದಾಪೀಠಮ್
ಶೃಂಗೇರಿ

# ಮುನ್ನುಡಿ

## ಶ್ರೀಗುರುಭ್ಯೋ ನಮಃ

"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬುದಾಗಿ ಶ್ರುತಿಯು ಧರ್ಮವನ್ನೇ ಜಗತ್ತಿನ ಸ್ಥಿತಿಗೆ ಸಾಧನವನ್ನಾಗಿ ಹೇಳುತ್ತದೆ. ಆ ಧರ್ಮವು ವೇದದಿಂದಲೇ ತಿಳಿಯಲ್ಪಡತಕ್ಕದ್ದು ಎಂಬುದಾಗಿ 'ವೇದೋಽಖಿಲೋ ಧರ್ಮಮೂಲಮ್' ಮೊದಲಾದ ಉಕ್ತಿಗಳು ಒಕ್ಕೊರಲಿನಿಂದ ಹೇಳುತ್ತವೆ. ಸ್ಮೃತಿಗಳೂ, ಆಚಾರವೂ ಧರ್ಮದ ಯಥಾರ್ಥಜ್ಞಾನವನ್ನು ಉಂಟುಮಾಡಿಕೊಡತಕ್ಕವುಗಳಾಗಿದ್ದರೂ ಅವುಗಳಿಗೆ ಧರ್ಮದ ವಿಷಯದಲ್ಲಿ ವೇದದ ಮೂಲಕ ಪ್ರಾಮಾಣ್ಯವೇ ಹೊರತು ಸ್ವತಂತ್ರವಾಗಿ ಅಲ್ಲ. ಆದುದರಿಂದಲೇ ಶ್ರುತಿ ಮತ್ತು ಸ್ಮೃತಿಗಳಿಗೆ ವಿರೋಧವೊದಗಿದಾಗ ಸ್ಮೃತಿಯೇ ಬಾಧಿಸಲ್ಪಡತಕ್ಕದ್ದು ಎಂಬುದಾಗಿ ಪೂರ್ವಮೀಮಾಂಸಾಶಾಸ್ತ್ರದಲ್ಲಿ ನಿರ್ಣಯಿಸಲ್ಪಟ್ಟಿದೆ.

ಅಂತಹ ವೇದವು 'ಅನಂತಾ ವೈ ವೇದಾಃ' ಎಂಬ ವಚನವನ್ನು ಅನುಸರಿಸಿ ಅನಂತವಾಗಿದ್ದರೂ ಋಕ್, ಯಜುಸ್, ಸಾಮ ಮತ್ತು ಅಥರ್ವ ಎಂಬುದಾಗಿ ನಾಲ್ಕು ರೀತಿ ವಿಂಗಡಿಸಲ್ಪಟ್ಟು ಬೆಳಗುತ್ತಾ ಇದೆ. 'ಏಕಶತಮಧ್ವರ್ಯುಶಾಖಾಃ' ಮೊದಲಾದ ವಾಕ್ಯಗಳಿಂದ ಒಂದೊಂದು ವೇದಕ್ಕೂ ಬಹಳ ಶಾಖೆಗಳಿದ್ದವು ಎಂಬುದಾಗಿ ತಿಳಿದುಬರುತ್ತದೆ. ಆದರೆ ಅವುಗಳಲ್ಲಿ ಅನೇಕ ಶಾಖೆಗಳು ಲುಪ್ತವಾಗಿದ್ದು ಕೇವಲ ಬೆರಳೆಣಿಕೆಯಷ್ಟು ಕೆಲವು ಶಾಖೆಗಳೇ ಉಳಿದಿವೆ.

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿಯು ಪ್ರತಿಯೊಬ್ಬನೂ ತನ್ನ ತನ್ನ ಶಾಖೆಯ ಅಧ್ಯಯನವನ್ನು ಮಾಡಬೇಕೆಂದು ವಿಧಿಸುತ್ತದೆ. ವಿಧಿಸಲ್ಪಟ್ಟ ವೇದಾಧ್ಯಯನವನ್ನು ಮಾಡದಿದ್ದರೆ ಪ್ರತ್ಯವಾಯವು ಉಂಟಾಗುವುದೆಂಬುದಾಗಿ

> ವಿಹಿತಸ್ಯಾನನುಷ್ಠಾನಾನ್ನಿಂದಿತಸ್ಯ ಚ ಸೇವನಾತ್ ।
> ಅನಿಗ್ರಹಾಚ್ಚೇಂದ್ರಿಯಾಣಾಂ ನರಃ ಪತನಮೃಚ್ಛತಿ ॥

ಇತ್ಯಾದಿ ವಚನಗಳು ಸ್ಪಷ್ಟವಾಗಿ ತಿಳಿಸುತ್ತಾ ಇವೆ. (ಶಾಸ್ತ್ರವಿಹಿತವಾದುದನ್ನು



ಮಾಡದಿದ್ದರೂ ಶಾಸ್ತ್ರದಿಂದ ನಿಂದಿತವಾದುದನ್ನು ಮಾಡಿದರೂ, ಮತ್ತು ಇಂದ್ರಿಯಗಳನ್ನು ನಿಗ್ರಹಿಸದಿದ್ದರೂ ಮಾನವನು ಕೇಡಿಗೀಡಾಗುವನು.) ಇದರಿಂದ ವೇದಗಳ ಅಧ್ಯಯನದಿಂದ ನಮಗೇನು ಪ್ರಯೋಜನ?ಎಂಬ ಕೆಲವರ ಸಂಶಯವು ದೂರವಾದಂತಾಯಿತು. 'ಬ್ರಾಹ್ಮಣೇನ ನಿಷ್ಕಾರಣಂ ಷಡಂಗೋ ವೇದೋಽಧ್ಯೇಯೋ ಜ್ಞೇಯಶ್ಚ" ಎಂಬ ಮಹಾಭಾಷ್ಯಕಾರರ ಮಾತೂ ಇದನ್ನೇ ಪುಷ್ಟೀಕರಿಸುತ್ತದೆ. ಆದುದರಿಂದ ಉಪನೀತನಾದ ಬ್ರಾಹ್ಮಣನು ತನ್ನ ವೇದದ ಶಾಖೆಯ ಅಧ್ಯಯನವನ್ನು ಅವಶ್ಯವಾಗಿ ಮಾಡಲೇಬೇಕು.

ವೇದಾಧ್ಯಯನದ ಬಳಿಕ ವೇದಾರ್ಥಜ್ಞಾನವನ್ನು ಅವಶ್ಯವಾಗಿ ಗಳಿಸಬೇಕು. ಈ ವಿಷಯದಲ್ಲಿ ಅರ್ಥಜ್ಞಾನವಿಲ್ಲದವನ ಬಗ್ಗೆ ನಿಂದೆಯೂ, ಅರ್ಥವನ್ನರಿತವನ ಬಗ್ಗೆ ಪ್ರಶಂಸೆಯೂ ಶಾಸ್ತ್ರದಲ್ಲಿ ಕಾಣಬರುತ್ತದೆ.

ಸ್ಥಾಣುರಯಂ ಭಾರಹಾರಃ ಕಿಲಾಭೂತ್
ಅಧೀತ್ಯ ವೇದಂ ನ ವಿಜಾನಾತಿ ಯೋಽರ್ಥಮ್ ।
ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ
ನಾಕಮೇತಿ ಜ್ಞಾನವಿಧೂತಪಾಪ್ಮಾ ॥

ವೇದವನ್ನು ಅಧ್ಯಯನ ಮಾಡಿ ಅರ್ಥವನ್ನರಿಯದವನು ಗಂಧದ ಮರದ ಭಾರವನ್ನು ಹೊರುವ ಕತ್ತೆಯಂತೆ. ಅರ್ಥವನ್ನರಿತವನು ಎಲ್ಲ ಮಂಗಳವನ್ನು ಪಡೆದು ಪಾಪರಹಿತನಾಗಿ ಸ್ವರ್ಗವನ್ನೇರುವನು.

ಗಂಧದ ಕಟ್ಟಿಗೆಯ ಭಾರವನ್ನು ಹೊತ್ತ ಕತ್ತೆಯು ತಾನು ಹೊತ್ತಿರುವ ಗಂಧದ ಕಟ್ಟಿಗೆಯ ಪರಿಮಳವನ್ನು ಸ್ವಲ್ಪವೂ ತಿಳಿಯಲಾರದು. ಅದರೊಡನೆ ಹೋಲಿಸಲ್ಪಟ್ಟ ಅರ್ಥಜ್ಞಾನವಿಲ್ಲದವನು ನಿಂದಿಸಲ್ಪಟ್ಟಂತೆಯೇ. ಅರ್ಥಜ್ಞಾನ ಉಳ್ಳವನಿಗೆ ಶುಭಪ್ರಾಪ್ತಿ, ದುಃಖನಿವೃತ್ತಿ ಮೊದಲಾದ ಪ್ರಯೋಜನವನ್ನು ಹೇಳಿರುವುದರಿಂದ ಅವನು ಸ್ತುತಿಸಲ್ಪಟ್ಟಂತೆಯೇ. ಆದುದರಿಂದ ವೇದಾರ್ಥಜ್ಞಾನವನ್ನು ಅವಶ್ಯವಾಗಿ ಗಳಿಸಬೇಕು.

ಹೀಗಿರುವಾಗ ವೇದಾರ್ಥವನ್ನು ಅಲ್ಪಬುದ್ಧಿಯುಳ್ಳವರು ತಿಳಿಯಲಾರರೆಂದು ಸರ್ವಜ್ಞರಂತೆಯೇ ಇರುವ ಸಾಯಣಾಚಾರ್ಯರು ಲೋಕವನ್ನು ಅನುಗ್ರಹಿಸಲು ನಾಲ್ಕು ವೇದಗಳನ್ನೂ ವ್ಯಾಖ್ಯಾನಿಸಿದರು. ವೇದಾರ್ಥವನ್ನು ತಿಳಿಯಬಯಸುವವರಿಗೆ ಸಾಯಣ ಭಾಷ್ಯವು ಕಲ್ಪವೃಕ್ಷದಂತಿದೆಯೆಂದರೆ ಅದು ಹೆಚ್ಚಿನ ಮಾತಲ್ಲ. ವೇದಗಳಲ್ಲಿಯೂ, ವೇದಾಂಗಗಳಲ್ಲಿಯೂ ಮತ್ತು ಎಲ್ಲ ದರ್ಶನಗಳಲ್ಲಿಯೂ ತಡೆಯಿಲ್ಲದ ನಡೆ ಅವರದು. ಆದುದರಿಂದ ಜಿಜ್ಞಾಸುಗಳಾದವರು ಸಾಯಣಭಾಷ್ಯವನ್ನವಲಂಬಿಸಿಯೇ ವೇದಾರ್ಥವನ್ನು ತಿಳಿಯಬೇಕು.



ಹೀಗಿರುವಲ್ಲಿ ಯಜುರ್ವೇದಕ್ಕೆ ಸಾಯಣಭಾಷ್ಯವನ್ನನುಸರಿಸಿದ ಕನ್ನಡ ಅನುವಾದವನ್ನು ಮಾಡಿಸಿ, ಶ್ರೀ ಸುಬ್ರಹ್ಮಣ್ಯಂರವರು ಪ್ರಕಟಿಸುವರೆಂದು ತಿಳಿದು ಸಂತೋಷಗೊಂಡಿದ್ದೇವೆ. ಇವರ ಈ ಪ್ರಯತ್ನವು ಫಲಪ್ರದವಾಗಲೆಂದೂ ಶ್ರೀಸುಬ್ರಹ್ಮಣ್ಯಂರವರು ಶ್ರೇಯಃಪರಂಪರೆಯಿಂದ ವರ್ಧಿಸಲೆಂದೂ ಆಶಿಸುತ್ತೇನೆ.

ಮೊಕ್ಕಾಂ-ದಿಂಡಿಗಲ್
ಪ್ರಭವ ಸಂವತ್ಸರದ ಮಹಾಶಿವರಾತ್ರಿ
ಮಂಗಳವಾರ

ಇತಿ ನಾರಾಯಣಸ್ಮರಣಂ
**ಭಾರತೀತೀರ್ಥಃ**



# ಪ್ರತಿಷ್ಠಾನದ ಅಧ್ಯಕ್ಷರ ನುಡಿ

**ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ**
**ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।**
**ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್**
**ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥**

ಎಲ್ಲ ಶಕ್ತಿಗಳ ಗಣಿಯಂತಿರುವ ಯಾವನು ಅಂತಃಕರಣದಲ್ಲಿದ್ದುಕೊಂಡು ತನ್ನ ಶಕ್ತಿಯಿಂದ, ಅಡಗಿರುವ ನನ್ನ ಮಾತನ್ನೂ, ಅಂಗಗಳಾದ ಕೈ-ಕಾಲುಗಳನ್ನೂ ಪ್ರಾಣವನ್ನೂ ಚೈತನ್ಯದಿಂದ ತುಂಬುತ್ತಿರುವನೋ ಅಂತಹ ಭಗವಂತನಿಗೆ ನಮಸ್ಕಾರಗಳು.

ಪ್ರತಿಯೊಬ್ಬರ ಜೀವನಗತಿಯಲ್ಲಿ ಕೆಲವು ಘಟನೆಗಳು ತೀವ್ರವಾಗಿ ಪ್ರಭಾವ ಬೀರಿ ವಿಶೇಷಚಿಂತನೆಗೆ ಕಾರಣವಾಗುವುದು ಅನುಭವವೇದ್ಯವೇ ಸರಿ. ಅಂತೆಯೇ ವೇದಪ್ರಕಾಶನದ ಬಗ್ಗೆ ಆಲೋಚಿಸಲು ಪ್ರಾರಂಭಿಸಿದ ನನಗೂ ಅಂತಹ ಒಂದು ಘಟನೆ ಪ್ರೇರಕವಾದರೆ ಇಲ್ಲಿ ಅದನ್ನು ಪ್ರಸ್ತಾಪಿಸುವುದು ಅಪ್ರಕೃತವಾಗದಿರಬಹುದು ಎಂದು ಭಾವಿಸುತ್ತೇನೆ.

ವೈಯಕ್ತಿಕವಾಗಿ ನಾನಾದರೋ, ಒಂದು ಪುಟ್ಟ ಗ್ರಾಮದಲ್ಲಿ ಜನಿಸಿ, ತಂದೆಯ ಆಸರೆಯಿಲ್ಲದೆ, ಉತ್ತಮ ಶಿಕ್ಷಣದ ಅವಕಾಶವಿಲ್ಲದೆ, ಜೀವನಕ್ಕಾಗಿ ಒಂದು ಪುಟ್ಟ ಉದ್ಯೋಗವನ್ನು ಆರಿಸಿಕೊಂಡು, ಗೃಹಸ್ಥನಾಗಿ, ಏಕಮೇವ ಪುತ್ರಿಯನ್ನು ಪಡೆದು, ನನ್ನ ಕೈಗಾರಿಕಾಕ್ಷೇತ್ರದಲ್ಲಿ ಹಂತಹಂತವಾಗಿ ಮುಂದುವರೆದೆ. ನನ್ನ ಕೆಲಸಗಳಿಗೆ ನನ್ನ ಕುಮಾರಿ ಜ್ಯೋತಿ ಒಂದು ರೀತಿ ಸ್ಫೂರ್ತಿ ನೀಡಿದಾಗ ಜೀವನದಲ್ಲಿ ಸಂತಸವನ್ನು ಕಂಡು ಅನುಭವಿಸಿದೆ. ಆದರೆ 15 ವರ್ಷಬೆಳೆದ ನನ್ನ ಮುದ್ದು ಕುವರಿಯನ್ನು ವಿಧಿ ಕಸಿದುಕೊಂಡಾಗ ಜೀವನದಲ್ಲಿ ಸಹಜವಾಗಿಯೇ ಮುಸುಕು ಕವಿದಂತಾದಾಗ, ಏಕಕಾಲದಲ್ಲಿ ಏಕೆ ಹೀಗೆ, ಏನಿದು ಎಂಬ ಚಿಂತನೆ ಪ್ರಾರಂಭವಾಯಿತು. ಸಹಜವಾಗಿಯೇ ಈ ಬಾಳಿನ ಸೂತ್ರಧಾರನ ಅಣತಿಗೆ ಯಾರೂ ಹೊರತಲ್ಲ ಎಂಬುದೂ ಅನುಭವವಾಯಿತು. ಪರಿಣಾಮವಾಗಿ ಮಾನಸಿಕ ಸಮಾಧಾನಕ್ಕಾಗಿ ಹಾತೊರೆಯುತ್ತಿದ್ದಾಗ ಧಾರ್ಮಿಕಕಾರ್ಯಗಳ ಬಗ್ಗೆ ಮನಸ್ಸು ಹರಿಯಿತು. ತತ್ಪರಿಣಾಮವಾಗಿ ದೈವಿಕವಾಣಿಯಾದ ವೇದಗಳ ಬಗ್ಗೆ ಪ್ರಚಾರ ಮತ್ತು ಪ್ರಸಾರ ಮಾಡುವ ಹಂಬಲ ಮೂಡಿತು. ಇದೇ ಸಮಯಕ್ಕೆ ಪೂಜ್ಯ ಬಸವಾನಿ ರಾಮಶರ್ಮರ ಪ್ರೇರಣೆಯೂ ದೊರೆಯಿತು. ಈ ವಿಷಯವನ್ನು ನನ್ನ ಆತ್ಮೀಯ ಮಿತ್ರರಲ್ಲಿ ಪ್ರಸ್ತಾಪಿಸಿದಾಗ ಮೂಡಿ ಬಂದ ಸಂಸ್ಥೆಯೇ "ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ". ಈ



ಸಂದರ್ಭದಲ್ಲಿ ಶ್ರೀ ಶರ್ಮರನ್ನು ನಾವು ಕೃತಜ್ಞತೆಯಿಂದ ನೆನೆಯುತ್ತೇವೆ. ಅತ್ಯಂತ ಪುರಾತನವಾದ ಆರ್ಷೇಯ ಸಂಸ್ಕೃತಿಯ ಭವ್ಯ ಪರಂಪರೆಯು ಭಾರತೀಯರಿಗಿದ್ದು ಅದು ಹೆಮ್ಮೆ ಪಡುವ ವಿಷಯವಾಗಿದೆ. ಈ ಪರಂಪರೆಯಲ್ಲಿ ನಮಗಿರುವ ಗೌರವಾಭಿಮಾನ ಗಳನ್ನು ಅಭಿವ್ಯಕ್ತಿಗೊಳಿಸಲು ಹಲವು ಮಾರ್ಗಗಳಿದ್ದರೂ ನಮ್ಮ ಪ್ರತಿಷ್ಠಾನವು ಪರಂಪರೆಯ ಮೂಲವಾದ ವೇದದ ಪ್ರಸಾರಕಾರ್ಯವನ್ನು ಕೈಗೊಂಡಿದೆ. ಈ ಹಿಂದೆ ಮೈಸೂರಿನ ಮಹಾರಾಜರಾದ ಕೀರ್ತಿಶೇಷರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರು ಋಗ್ವೇದವನ್ನು ಕನ್ನಡಭಾಷೆಗೆ ಅನುವಾದ ಮಾಡಿಸಿದುದನ್ನು ನೆನೆದು ಕೃಷ್ಣಯಜುರ್ವೇದವನ್ನು ಕನ್ನಡದಲ್ಲಿ ಪ್ರಕಟಿಸುವ ಕಾರ್ಯವು ಎಷ್ಟು ಆಳ, ಎಷ್ಟು ಎತ್ತರ ಎಂಬುದರ ಬಗ್ಗೆ ಸಂಪೂರ್ಣ ಅರಿವು ಇರುವುದರಿಂದ ಈ ಪ್ರೇರಣೆಯು ಬಂದೊಡನೆಯೇ ಪ್ರಥಮವಾಗಿ ಶ್ರೀ ಶೃಂಗೇರಿ ಶಾರದಾ ಪೀಠಾಧೀಶ್ವರರಾದ ಉಭಯಶ್ರೀಗಳವರಲ್ಲಿ ಅರಿಕೆ ಮಾಡಿಕೊಂಡೆವು. ಅವರಿಂದ ದೊರೆತ ಆಶೀರ್ವಾದ ಮಾತ್ರವಲ್ಲದೆ ಈ ಸದಭಿಪ್ರಾಯಕ್ಕೆ ಮನ್ನಣೆ ನೀಡಲು ಅನೇಕ ವಿದ್ವಾಂಸರು ಮುಂದೆ ಬಂದಾಗ ನಮಗೊಂದು ಧೈರ್ಯ ಮೂಡಿತು.

ಭಗವಂತನ ಇಚ್ಛೆಯೇ ಹಾಗೆಯೇ ಏನೋ? ಅವನು ಇಚ್ಛಿಸಿದ ಕಾರ್ಯ ಹೇಗೆ ತೀವ್ರವಾಗಿ ಮುಂದುವರೆಯುವುದು ಎಂಬುದಕ್ಕೆ ಈ ಪ್ರಕಾಶನದ ಸಂಪಾದಕರಾಗಿ ನೇತೃತ್ವ ವಹಿಸಲು ವಿದ್ವಾನ್ ರಾಮೇಶ್ವರ ಅವಧಾನಿಗಳವರಿಂದ ದೊರೆತ ಸಮ್ಮತಿಯೇ ಸಾಕ್ಷಿ. ವೇದಾಧ್ಯಯನಸಂಪನ್ನರೂ, ಸದಾಚಾರನಿಷ್ಠರೂ, ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಪರಿಣತರೂ ಆದ ಅವರು ಈ ಕಾರ್ಯವನ್ನು ಮಾಡಿಕೊಡಲು ಒಪ್ಪಿದುದು ನಮ್ಮ ಸೌಭಾಗ್ಯ. ಈ ಕಾರ್ಯದಲ್ಲಿ ನಮಗೆ ಮಾರ್ಗದರ್ಶನ ಮಾಡಲು ವಿದ್ವಾನ್ ವರದದೇಶಿಕಾಚಾರ್ಯ ರಂಗಪ್ರಿಯರು ಅಂಗೀಕರಿಸಿದುದು ನಮ್ಮೆಲ್ಲರ ಸುಕೃತ. ಮಹಾಭಾರತಪ್ರಕಾಶನಕಾರ್ಯದಲ್ಲಿಯೂ, ರಾಮಾಯಣಪ್ರಕಾಶನಕಾರ್ಯದಲ್ಲಿಯೂ ಅವರು ಸಮರ್ಥವಾಗಿ ಮಾರ್ಗದರ್ಶನವನ್ನು ನೀಡಿರುತ್ತಾರೆ. ಕರ್ನಾಟಕದ ಉದ್ದಗಲಕ್ಕೂ ಪ್ರವಚನಗಳಿಂದ ಧಾರ್ಮಿಕ ಜಾಗೃತಿಯನ್ನು ಉಂಟು ಮಾಡುತ್ತಿರುವ ಅವರು ಈ ಕಾರ್ಯದಲ್ಲಿ ನಮ್ಮೊಡನೆ ಇರಲು ಒಪ್ಪಿರುವುದನ್ನು ಇನ್ನೊಮ್ಮೆ ಕೃತಜ್ಞತೆಯಿಂದ ನೆನೆಯುತ್ತೇವೆ. ಈ ಉಭಯ ವಿದ್ವಾಂಸರ ಮಾರ್ಗದರ್ಶನದೊಂದಿಗೆ ಈ ಕಾರ್ಯ ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ. ಇದರಂತೆ ಪ್ರಕಾಶನದ ಪ್ರಾರಂಭದಲ್ಲಿ ಅನೇಕ ಉಪಯುಕ್ತ ವಿಚಾರಗಳನ್ನು ನೀಡಿ ಭಾಷಾಂತರದ ಬಗ್ಗೆ ಮಾರ್ಗದರ್ಶನವನ್ನು ನೀಡಿರುವ ವಿದ್ವಾನ್ ಕೇಶವಮೂರ್ತಿ ಘನಪಾಠಿಗಳವರಿಗೂ, ಸಂಹಿತಾಗ್ರಂಥದ ಮೊದಲನೆಯ ಅನುವಾಕದ ಮಾದರಿ ಅನುವಾದವನ್ನು ಮಾಡಿಕೊಟ್ಟು ನೆರವಾದ ವಿದ್ವಾನ್ ಪದ್ಮನಾಭ ಐತಾಳರಿಗೂ, ವಿದ್ವಾನ್ ವಾಸುದೇವ



ಪರಾಂಜಪೆಯವರಿಗೂ, ವಿದ್ವಾನ್ ಲಿಂಗದಹಳ್ಳಿ ನರಸಿಂಹಮೂರ್ತಿ ಶಾಸ್ತ್ರಿಗಳಿಗೂ ನಾವು ಕೃತಜ್ಞರು. ಬೆಂಗಳೂರು ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಅಧ್ಯಾಪಕರೂ, ವೇದವನ್ನು ಬಲ್ಲವರೂ ಆದ ಮಾನ್ಯ ವಿದ್ವಾನ್ ಸೋ.ತಿ. ನಾಗರಾಜ ಅವರು ನಮ್ಮ ಯಜುರ್ವೇದಪ್ರಕಾಶನದ ಹೊಣೆ ಹೊತ್ತಿರುವುದು ನಮಗೆ ಅತೀವ ಸಂತೋಷ ವನ್ನುಂಟುಮಾಡಿದೆ. ವಿದ್ವಾಂಸರಿಂದ ಲೇಖನಗಳನ್ನು ಪಡೆದು ಸಂಪೂರ್ಣ ಮುದ್ರಣವಾಗುವವರೆಗೆ ಎಲ್ಲ ಹಂತದ ಕಾರ್ಯಗಳನ್ನೂ ಸ್ವತಃ ತಾವೇ ಕೈಗೊಂಡು ಅತಿ ಹೆಚ್ಚಿನ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ. ಅವರಿಗೆ ಭಗವಂತನು ಮಂಗಳವನ್ನುಂಟುಮಾಡಲೆಂದು ಪ್ರಾರ್ಥಿಸುತ್ತೇವೆ.

ಗುರ್ವನುಗ್ರಹದಿಂದಲೂ ಅನೇಕ ವಿದ್ವಾಂಸರ ನೆರವಿನಿಂದಲೂ ಆಗಬೇಕಾದ ಈ ಕಾರ್ಯಕ್ಕೆ ನಿಮಿತ್ತಮಾತ್ರನಾದ ನಾನು ಉಭಯಗುರುವರ್ಯರಿಗೂ ಎಲ್ಲ ವಿದ್ವಾಂಸರಿಗೂ ಅತ್ಯಂತ ಭಕ್ತಿಗೌರವಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಇನ್ನು ಈ ಗ್ರಂಥದ ಬಗ್ಗೆ ಎರಡು ಮಾತುಗಳನ್ನು ಹೇಳಬೇಕಾಗಿದೆ. ಇಡೀ ಯಜುರ್ವೇದವನ್ನು ಕನ್ನಡದಲ್ಲಿ ಪ್ರಕಟಿಸುವ ಅಭಿಲಾಷೆಯಿದ್ದರೂ ಪ್ರಕೃತ ಕೃಷ್ಣ ಯಜುರ್ವೇದದ ಸಂಹಿತಾಭಾಗದ ಅನುವಾದವನ್ನು ಮಾತ್ರ ಕೈಗೊಂಡಿದ್ದು, ಅದನ್ನು ಸುಮಾರು ಹತ್ತು ಸಂಪುಟಗಳಲ್ಲಿ ಪ್ರಕಟಿಸುವ ಉದ್ದೇಶವನ್ನು ಹೊಂದಿದ್ದೇವೆ. ಪ್ರಥಮ ಸಂಪುಟದಲ್ಲಿ ವೇದವನ್ನು ತಿಳಿಯಲು ಅಗತ್ಯವಾಗುವ ಮಾನಸಿಕಭೂಮಿಕೆಯನ್ನು ಸಿದ್ಧಪಡಿಸಲು ವೇದಗಳ, ಕೃಷ್ಣಯಜುರ್ವೇದದ ಮತ್ತು ಯಜ್ಞಗಳ ಪರಿಚಯವನ್ನು ನೀಡಲಾಗುವುದು. ಈ ಕಾರ್ಯದಲ್ಲಿ ಯಾವುದೇ ವಾಣಿಜ್ಯದೃಷ್ಟಿ ಇಲ್ಲದೆ, ಸೇವಾ ಭಾವನೆಯೇ ಪ್ರಮುಖವಾಗಿದೆ. ಈ ಪ್ರಕಾಶನದಿಂದ, ಮುಂದೆ ವೇದಾರ್ಥ ಹೇಳುವವ ರಿಗೂ ವೇದಾಧ್ಯಯನ ಮಾಡುವವರಿಗೂ ವೇದವನ್ನು ತಿಳಿಯಬಯಸುವವರಿಗೂ ಅನುಕೂಲವಾಗುವಂತೆ ನಮ್ಮ ಹಿರಿಯರ ಕೊಡುಗೆಯನ್ನು ಒಂದು ಗ್ರಂಥರೂಪ ದಲ್ಲಿಡುವ ಪ್ರಯತ್ನ ನಮ್ಮದಾಗಿದೆ.

ಇನ್ನು ಪ್ರಕಾಶನದ ವ್ಯವಸ್ಥೆಯಲ್ಲಿ ನಮ್ಮ ಜೊತೆಯಿದ್ದು ಪೂರ್ಣ ಸಹಕಾರ ಮತ್ತು ಸಹಾಯ ನೀಡಿ ಅಪಾರ ಪರಿಶ್ರಮದಿಂದ ಸಾಧ್ಯವಾಗುವ ಕಾರ್ಯವನ್ನು ಮೌನವಾಗಿ ನಿರ್ವಹಿಸುವ ಅಪೂರ್ವ ಸಾಮರ್ಥ್ಯವುಳ್ಳ ಸಮಿತಿಯ ಕಾರ್ಯದರ್ಶಿಗಳೂ ಆಪ್ತಹಿತೈಷಿಗಳೂ ಆದ ಶ್ರೀ ಕೆ.ಎನ್. ವೆಂಕಟನಾರಾಯಣರವರಿಗೂ, ಹಿರಿಯರಾಗಿ ನಮಗೆ ಮಾರ್ಗದರ್ಶನ ನೀಡುತ್ತಿರುವ ಶ್ರೀ ಎಚ್. ಸುಬ್ರಹ್ಮಣ್ಯ ಜೋಯಿಸ್, ಟ್ರಸ್ಟಿಗಳಾದ ಶ್ರೀ ಎಂ. ನರಸಿಂಹನ್ ಮತ್ತು ಶ್ರೀ ರಮೇಶ್‌ರವರಿಗೂ ಸ್ನೇಹಿತರಾದ ಶ್ರೀ ವೈ.ಎನ್. ಶ್ರೀನಿವಾಸ್ ಮತ್ತು ಶ್ರೀ ಹೊ.ನಾ. ಹಿರಿಯಣ್ಣಸ್ವಾಮಿಯವರಿಗೂ ಮತ್ತು ಆಡಿಟರ್ ಶ್ರೀ ಎಂ.ಪಿ. ಮೋಹನ್‌ರವರಿಗೂ ನಮ್ಮ ವಂದನೆಗಳು. ಈ



ಕಾರ್ಯಕ್ಕೆ ಸಹಕಾರ ನೀಡುತ್ತಿರುವ ಎಲ್ಲ ಬಂಧು-ಮಿತ್ರರಿಗೂ ನಮ್ಮ ಪ್ರಣಾಮಗಳು ಸಲ್ಲುತ್ತವೆ. ವೈಯಕ್ತಿಕವಾಗಿ ನನ್ನೆಲ್ಲ ಧಾರ್ಮಿಕ ಸಾಮಾಜಿಕ ಕಾರ್ಯಗಳಿಗೆ ಹಾಗೂ ಈ ಪ್ರಕಟಣೆಗೆ ಮಾನಸಿಕ ಪ್ರೇರಣೆ ಮತ್ತು ನೈತಿಕಬಲ ನೀಡಿ ಪ್ರೋತ್ಸಾಹಿಸುತ್ತಿರುವ ನನ್ನ ಧರ್ಮಪತ್ನಿ ಸೌ॥ ಬಿ.ವಿ. ಸೀತಾ (ಪ್ರಖ್ಯಾತ ಸಂಸ್ಕೃತ ವಿದ್ವಾನ್ ದಿ॥ ಮಲ್ಲಿಕಾರ್ಜುನ ಶಾಸ್ತ್ರಿಗಳ ಪುತ್ರಿ) ರವರ ಹೆಸರನ್ನು ಉಲ್ಲೇಖಿಸಲು ಹರ್ಷಿಸುತ್ತೇನೆ.

ಪುಸ್ತಕದ ಮುದ್ರಣಕಾರ್ಯವನ್ನು ಅತಿಶೀಘ್ರವಾಗಿ ಸುಂದರವಾಗಿ ಸಕಾಲದಲ್ಲಿ ನೆರವೇರಿಸಿಕೊಟ್ಟ ಶ್ರೀ ನಿತ್ಯಾನಂದ ಪ್ರಿಂಟರ್ಸ್‌ರವರಿಗೂ, ಪುಸ್ತಕದ ಮುಖಚಿತ್ರವನ್ನು ಅಂದವಾಗಿ ರಚಿಸಿಕೊಟ್ಟ ಕಲಾವಿದ ಶ್ರೀ ಕೆ.ಎನ್. ನಾಗರಾಜರವರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಒಟ್ಟಿನಲ್ಲಿ ಈ ಸಮಗ್ರ ಪ್ರಯತ್ನದಿಂದ ವೇದಾಭಿಮಾನಿಗಳಿಗೆ ವೇದಾರ್ಥವನ್ನು ತಿಳಿಯಲು ಸಹಾಯವಾದ ನಮ್ಮ ಶ್ರಮವು ಸಾರ್ಥಕವೆಂದು ತಿಳಿದು ಜ್ಯೋತಿರ್ಮಯನಾದ ಭಗವಂತನಿಗೆ ಈ ಕೃತಿಪುಷ್ಪವನ್ನು ಸಮರ್ಪಿಸುತ್ತೇವೆ.

ಬಿ.ಎನ್.ವಿ. ಸುಬ್ರಹ್ಮಣ್ಯಂ
ಅಧ್ಯಕ್ಷರು
ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ

ಬೆಂಗಳೂರು-4
ವಿಭವ ಚೈತ್ರ ಕೃಷ್ಣ ದ್ವಿತೀಯಾ
4-4-1988



# ನಿವೇದನೆ

ಒಂದು ವಿಶಿಷ್ಟವಾದ ಸನ್ನಿವೇಶದಲ್ಲಿ ನಾವು ಕೃಷ್ಣಯಜುರ್ವೇದದ ಕನ್ನಡ ಪ್ರಕಾಶನದ ಕಾರ್ಯಕ್ಕೆ ಕೈ ಹಾಕಿದ್ದೇವೆ.

ಇಂದು ನಮ್ಮ ಸಮಾಜದ ರೀತಿ, ನೀತಿ, ಆಚಾರ ಮತ್ತು ವಿಚಾರಗಳನ್ನು ಗಮನಿಸಿದಾಗ ಒಂದು ಅಂಶವು ಎದ್ದು ಕಾಣುತ್ತದೆ. ಪರಂಪರಾಗತವಾಗಿ ಬಂದ ನಡವಳಿಕೆಯನ್ನೂ, ಚಿಂತನೆಯನ್ನೂ ಕೈ ಬಿಡಲಾಗದ ಅತ್ಯಂತ ನವೀನವಾದ ಪಾಶ್ಚಾತ್ಯ ನಡವಳಿಕೆ ಮತ್ತು ಚಿಂತನೆಯೊಡನೆಯೂ ಪೂರ್ಣ ಬೆರೆಯಲಾಗದ ಮಧ್ಯಮಸ್ಥಿತಿ ಅದು. ಸಮಾಜದ ಚಿತ್ತವನ್ನು ಹೀಗೆ ಹಿಂದಕ್ಕೂ ಮುಂದಕ್ಕೂ ಎಳೆಯುತ್ತಾ ಎರಡು ಶಕ್ತಿಗಳೂ ಸ್ಪರ್ಧಿಸುವಂತೆ ಕಾಣುತ್ತಿವೆ. ಆದರೆ ಭಾವನಾತ್ಮಕ ಸಂದರ್ಭಗಳಲ್ಲಿ ನಮ್ಮ ಸಮಾಜದ ಚಿಂತನೆಯು ಪರಂಪರೆಯನ್ನೇ ಬಹುತೇಕ ಅವಲಂಬಿಸುತ್ತದೆ. ಹೊರದೃಷ್ಟಿಯಿಂದ ಸಮಾಜದಲ್ಲಿ ನಮ್ಮತನದ ಕೊರತೆ ಕಾಣುವುದಾದರೂ ಚಿರಂತನವಾದ ನಂಬಿಕೆ ಮತ್ತು ನಡವಳಿಕೆಯ ವಿಚಾರಗಳು ಅಂತರಗಂಗೆಯಂತೆ ಪ್ರವಹಿಸುತ್ತಲೇ ಇವೆ. ಈ ರೀತಿಯ ಅಂತಃಪ್ರವಾಹದ ಸೆಲೆಯು ಋಷಿಗಳು ಕಂಡುಕೊಂಡ ಆರ್ಷಸಾಹಿತ್ಯವಾದ ವೇದಗಳೇ.

ವ್ಯಕ್ತಿಜೀವನದಲ್ಲಿ ಮಾತ್ರವಲ್ಲದೆ ರಾಷ್ಟ್ರಜೀವನ ಮತ್ತು ರಾಷ್ಟ್ರೀಯಚಿಂತನವು ವೇದದ ಪ್ರಭಾವಕ್ಕೆ ಹೊರತಲ್ಲ. ಭಾರತ ಎಂದೊಡನೆ ಪ್ರಪಂಚದ ಜನಮಾನಸದಲ್ಲಿ ಮೂಡುವುದು ವೇದೋಪನಿಷತ್ತಿನ ಸಂದೇಶದ ಚಿತ್ರಗಳೇ. ಪ್ರಪಂಚದ ಉಳಿದ ಜನಾಂಗದವರು ಬದುಕು, ಜೀವನದ ಗುರಿ ಇವುಗಳ ಬಗ್ಗೆ ತಳೆದಿರುವ ಅಭಿಪ್ರಾಯಗಳಿಗಿಂತ ತೀರ ಭಿನ್ನವಾದ ಅಭಿಪ್ರಾಯಗಳು ನಮ್ಮವು. ಆ ಅಭಿಪ್ರಾಯಕ್ಕೆ ವೇದವೇ ಮೂಲ. ಅಂತೆಯೇ ನಮ್ಮತ್ತ ಪಾಶ್ಚಾತ್ಯರ ದೃಷ್ಟಿ. ಜೀವನದ ಬಗ್ಗೆ ಇರುವ ನಮ್ಮ ದೃಷ್ಟಿಕೋನವು ನೆಮ್ಮದಿ ತಂದೀತೆಂದು ಅವರ ಹಂಬಲ. ಇಂದಿಗೂ ಅನೇಕ ಸಾಧುಗಳು ವಿದೇಶಗಳಲ್ಲಿ ಗೌರವಕ್ಕೆ ಪಾತ್ರರಾಗುವ ಹಿನ್ನೆಲೆಯೂ ಇದೇ ಆಗಿದೆ. ಇಂತಹ ರಾಷ್ಟ್ರೀಯ ಸಂಪತ್ತು ನಮ್ಮ ಪೂರ್ವಜರಿಂದ ನಮಗೆ ಒದಗಿ ಬಂದಿದೆ. ವೇದವು ಅನೇಕ ಸಾವಿರ ವರ್ಷಗಳ ಕಾಲದಿಂದ ನಾವು ನಡೆಸಿಕೊಂಡು ಬರುತ್ತಿರುವ ಜೀವನ ನೌಕೆಯನ್ನು ಸರಿಯಾದ ದಿಕ್ಕಿಗೆ ಒಯ್ಯಬಲ್ಲ ಚುಕ್ಕಾಣಿ.

ಇಂತಹ ವೇದಗಳ ಬಗ್ಗೆ ನಾವೆಲ್ಲರೂ ತಿಳಿಯಲೇಬೇಕು. ಕಾಲದ ಪರಿಮಿತಿ, ಜೀವನಸಂದರ್ಭಗಳ ಬದಲಾವಣೆ ಇವುಗಳ ದೆಸೆಯಿಂದ ಸಂಸ್ಕೃತಭಾಷೆಯನ್ನು ಅರಿತು ವೇದಗಳ ವ್ಯಾಸಂಗ ಮಾಡುವುದು ಕೊಂಚ ಕಷ್ಟಸಾಧ್ಯವೇ. ಅಲ್ಲದೆ ನಮ್ಮವರೇ ಆದ



ಕೆಲವರು ವೇದಗಳು ವಿಚ್ಛಿದ್ರಕಾರಕಗಳೆಂಬ ಮುದ್ರೆಯನ್ನೊತ್ತಿದ್ದಾರೆ. ಒಂದೆಡೆ ಗಾಢನಂಬಿಕೆಗೂ ಮತ್ತೊಂದೆಡೆ ಅಪವಾದಕ್ಕೂ ಗುರಿಯಾಗಿರುವ ವೇದಗಳಲ್ಲಿರುವ ಸತ್ಯಾಂಶವನ್ನು ಹೊರತರುವುದು ಪ್ರಸಕ್ತವೇ ಹೌದು. ತಾಯ್ನುಡಿಯಲ್ಲಿ ವೇದವನ್ನು ಕನ್ನಡಿಗರಿಗೆ ನೀಡಬೇಕೆಂಬ ಹಂಬಲಕ್ಕೆ ಇದೇ ಪ್ರೇರಕ. ಹೀಗೆ ವೇದದ ಬಗೆಗಿನ ಭಕ್ತಿಮಿಶ್ರಿತ ಅಮೂರ್ತಭಾವನೆಗೆ ಆಕಾರವನ್ನು ಕೊಡಲು, ಭೌತಿಕ ಆಕರ್ಷಣೆಗೂ ಶಾಶ್ವತವಾದ ಸುಖಸಮೃದ್ಧಿಗಳಿಗೂ ನಡುವೆ ಇರುವ ಅಂತರದ ವಿವೇಕವನ್ನು ಮನಗಾಣಿಸಲು ಈ ಯತ್ನವನ್ನು ಕೈಗೊಳ್ಳಲಾಗಿದೆ.

ಒಂದಾನೊಂದು ಕಾಲದಲ್ಲಿ ಜಗಜ್ಜೀವನದ ಸಾರ್ವಭೌಮಸ್ಥಾನವನ್ನು ಅಲಂಕರಿಸಿದ ನಮ್ಮ ಸಮಾಜಜೀವನವನ್ನು ಹಸನುಗೊಳಿಸಲು ಈ ಪ್ರಕಾಶನವು ನೆರವಾಗುವುದಾದರೆ ನಮ್ಮ ಯತ್ನವು ಸಾರ್ಥಕ. ಈ ಬಗ್ಗೆ ಸಹೃದಯರಾದ ವಾಚಕರ ಹೃದಯವೇ ನಮಗೆ ರನ್ನಗನ್ನಡಿ.

ಈ ಗ್ರಂಥವನ್ನು ಮತ್ತಷ್ಟು ಉಪಯುಕ್ತಗೊಳಿಸುವತ್ತ ಸಹೃದಯರಾದ ವಾಚಕರ ಸಲಹೆ ಸೂಚನೆಗಳಿಗೆ ಸದಾ ಸ್ವಾಗತ.

ಪ್ರಕಾಶಕರು



ಶ್ರೀಃ

# ಸಂಪಾದಕರ ನುಡಿ

ಆಸ್ತಿಕರಾದ ಸಹೃದಯ ಭಾರತೀಯ ಬಂಧುಗಳಲ್ಲಿ ಬಿನ್ನಹ.

ಮಾನ್ಯರೇ,

ಈ ಸಂಪುಟದ ಸಮರ್ಪಣೆಯ ಸಮಯದಲ್ಲಿ ತಮ್ಮಲ್ಲಿ ಕೆಲವು ಮಾತುಗಳನ್ನು ಬಿನ್ನವಿಸಿಕೊಳ್ಳುತ್ತೇನೆ.

ನನ್ನ ಮಿತ್ರರಾದ ಶ್ರೀ ಬಸವಾನಿ ರಾಮಶರ್ಮರು ನಾಲ್ಕಾರು ವರ್ಷಗಳ ಹಿಂದೆ ಯಜುರ್ವೇದದ ಭಾಷ್ಯವನ್ನು ಕನ್ನಡದಲ್ಲಿ ಅನುವಾದ ಮಾಡುವ ವಿಷಯವನ್ನು ಪ್ರಸ್ತಾಪಿಸಿದ್ದರು. ಯಾವುದಕ್ಕೂ ಕಾಲಕರ್ಮಸಂಯೋಗವು ಬೇಕು. ಪರಮೇಶ್ವರನ ಕರುಣೆಯು ಬೇಕು. ಶ್ರೀ ಶರ್ಮರ ಪ್ರಯತ್ನವು ಧರ್ಮನಿಷ್ಠರಾದ, ಉತ್ಸಾಹಿಗಳಾದ ಶ್ರೀ ಸುಬ್ರಹ್ಮಣ್ಯಂ ಅವರ ಮತ್ತು ಅವರ ಮಿತ್ರರ ಬೆಂಬಲದಿಂದ ಫಲಿಸುವಂತೆ ಆಗಿದೆ. ಶ್ರೀಶ್ರೀ ಶೃಂಗೇರಿ ಜಗದ್ಗುರುಗಳವರ ಆಶೀರ್ವಾದ ಅನುಗ್ರಹಗಳಿಂದ ಈ ಕಾರ್ಯವು ಸುಗಮವಾಗಿ ಕೈಗೂಡುವುದೆಂಬ ಭರವಸೆಯಿದೆ.

ವೇದವು ಧರ್ಮಮೂಲವಾದ, ಅಮೂಲ್ಯವಾದ, ಪುರಾತನವಾದ, ಪ್ರಧಾನವಾದ ನಿಧಿಯಾಗಿದೆ.

**ಋಚಸ್ಸಾಮಾನಿ ಯಜೂಗ್ಂಷಿ । ಸಾ ಹಿ ಶ್ರೀರಮೃತಾ ಸತಾಮ್ ।**

'ಈ ವೇದನಿಧಿಯು ಸತ್ಪುರುಷರಿಗೆ ನಾಶರಹಿತವಾದ, ಮೋಕ್ಷಕ್ಕೂ ಸಾಧನವಾದ ಸಂಪತ್ತಾಗಿದೆ' ಎಂದು ಶ್ರುತಿಯು ಸಾರುತ್ತದೆ.

**ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ ।**
**ವೇದಃ ಪ್ರಾಚೇತಸಾದಾಸೀತ್ ಸಾಕ್ಷಾದ್ರಾಮಾಯಣಾತ್ಮನಾ ॥**

'ಪರಮಾತ್ಮನು ರಾಮನಾಗಿ ಅವತರಿಸಿದನು; ವೇದವು ರಾಮಾಯಣರೂಪವಾಗಿ ಶ್ರೀ ವಾಲ್ಮೀಕಿಗಳಿಂದ ರಚಿತವಾಯಿತು.'

**ಭಾರತಂ ಪಂಚಮೋ ವೇದಃ ।**

ಮಹಾಭಾರತವು ಐದನೆಯ ವೇದ.



**ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ।**

'ಇತಿಹಾಸ ಪುರಾಣಗಳಿಂದ ವೇದಾರ್ಥವು ಸುಸ್ಪಷ್ಟವಾಗುವಂತೆ ಮಾಡಬೇಕು' ಇಂತಹ ಅಸಂಖ್ಯಾತವಚನಗಳು ವೇದದ ಮಹತ್ತ್ವವನ್ನು ಸಾರುತ್ತವೆ.

ಪ್ರಪಂಚದ ಇತರ ಭಾಗಗಳ ಜನರಿಗೆ ಇಲ್ಲದಂತಹ ಇಂತಹ ನಿಧಿಯು ಭಾರತೀಯರಿಗೆ ಅನಾದಿಕಾಲದಿಂದಲೂ ಶ್ರುತಿಪ್ರವಾಹರೂಪವಾಗಿ ಹರಿದು ಬಂದಿದೆ.

ಆದರೆ ಕಾಲವಶದಿಂದ ಈ ನಿಧಿಯನ್ನು ಉಪಯೋಗಿಸಿಕೊಳ್ಳುವುದಿರಲಿ; ರಕ್ಷಿಸಿಕೊಳ್ಳುವುದಿರಲಿ; ಅಪ್ರಯೋಜಕವಾದ ವಸ್ತುವೆಂದು ಭಾವಿಸಿ ಉಪೇಕ್ಷಿಸುವ ಪ್ರವೃತ್ತಿಯು ಬೆಳೆಯುತ್ತಿರುವುದು ವಿಷಾದಕರ. ಇದಕ್ಕೆ ಕೆಲವು ತಪ್ಪು ಕಲ್ಪನೆಗಳೂ ಕಾರಣಗಳಾಗಿರಬಹುದು.

**ಚಕ್ರವತ್ಪರಿವರ್ತಂತೇ ದುಃಖಾನಿ ಚ ಸುಖಾನಿ ಚ ।**

ಎನ್ನುವಂತೆ ಕಾಲಚಕ್ರದಲ್ಲಿ ಒಮ್ಮೆ ಸುಖ, ಮತ್ತೊಮ್ಮೆ ದುಃಖ; ಒಮ್ಮೆ ಉನ್ನತಿ ಮತ್ತೊಮ್ಮೆ ಅವನತಿ; ಇವು ಉಂಟಾಗುವುದು ಪ್ರಕೃತಿಸಿದ್ಧವೇ. ಆದುದರಿಂದ ತಪ್ಪುಕಲ್ಪನೆಗಳನ್ನು ಹೋಗಲಾಡಿಸಿ, ವೇದಗಳ ವಿಷಯದಲ್ಲಿ ಶ್ರದ್ಧೆಯನ್ನು ಮೂಡಿಸಲು ಈ ಪ್ರಯತ್ನಕ್ಕೆ ಕೈಹಾಕಿರುತ್ತೇವೆ.

**ಕರ್ಮಣ್ಯೇವಾಧಿಕಾರಸ್ತೇ......।**
**ಯತ್ನೇ ಕೃತೇ ಯದಿ ನ ಸಿಧ್ಯತಿ ಕೋಽತ್ರ ದೋಷಃ ।**

ಇಂತಹ ವಚನಗಳು ನಮಗೆ ಮಾರ್ಗದರ್ಶಕಗಳಾಗಿವೆ.

ಇಂತಹ ಕಾರ್ಯವನ್ನು ಮಾಡುವ ಸಾಮರ್ಥ್ಯವು ನಿಮಗಿದೆಯೇ? ಎಂದು ಪ್ರಶ್ನಿಸಿದರೆ ಇದೆಯೆಂದು ಹೇಳುವ ಧೈರ್ಯವು ನಮಗಿಲ್ಲ. ಕವಿರತ್ನ ಕಾಳಿದಾಸನೇ

**ಮಂದಃ ಕವಿಯಶಃಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಮ್ ।**
**ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ ॥**

ಎಂದು ಹೇಳುವುದಾದರೆ ನಮ್ಮಂತಹವರ ಪಾಡೇನು? ಆದರೂ ಮಹಾಕವಿ ಭಾಸನ

**ಸೋತ್ಸಾಹಾನಾಂ ನಾಸ್ತ್ಯಸಾಧ್ಯಂ ನರಾಣಾಂ**
**ಮಾರ್ಗಾರಬ್ಧಾಸ್ಸರ್ವಯತ್ನಾಃ ಫಲಂತಿ ॥**

ಎಂಬ ಮಾತಿನಿಂದ ಧೈರ್ಯಮಾಡಿ ಈ ಸಾಹಸಕ್ಕೆ ಕೈ ಹಾಕಿರುತ್ತೇವೆ.

ಈ ವಿಷಯದಲ್ಲಿ ನನ್ನದೊಂದು ಪ್ರಾರ್ಥನೆ :

**ನ ಚಾತ್ರಾತೀವ ಕರ್ತವ್ಯಂ ದೋಷದೃಷ್ಟಿಪರಂ ಮನಃ ।**
**ದೋಷೋ ಹ್ಯವಿದ್ಯಮಾನೋಽಪಿ ತಚ್ಚಿತ್ತಾನಾಂ ಪ್ರಕಾಶತೇ ॥**



ತಪ್ಪನ್ನೇ ಹುಡುಕುವವರಿಗೆ ತಪ್ಪಿಲ್ಲದಿದ್ದರೂ ತಪ್ಪಿರುವಂತೆಯೇ ತೋರುತ್ತದೆ. ಆದುದರಿಂದ ಕೇವಲ ತಪ್ಪುಗಳನ್ನೇ ಹುಡುಕುವ ಮನಸ್ಸು ಮಾಡಬೇಡಿ. ಇದು ಕುಮಾರಿಲಭಟ್ಟಪಾದರ ವಚನರತ್ನ.

ನಡೆಯುವವನು ಎಡಹುವುದು ಸ್ವಾಭಾವಿಕ. ಆದುದರಿಂದ ಭ್ರಮಪ್ರಮಾದಾದಿಗಳಿಂದ ಯಾವುದಾದರೂ ತಪ್ಪು ಉಂಟಾಗಿದ್ದರೆ ಸಹೃದಯರು ಅದನ್ನು ತಿಳಿಸಿದರೆ ತಿದ್ದಿಕೊಳ್ಳುತ್ತೇವೆ.

ಹತ್ತು ಸಂಪುಟಗಳಲ್ಲಿ ಕೃಷ್ಣಯಜುರ್ವೇದಭಾಷ್ಯದ ಅರ್ಥವನ್ನು ಕನ್ನಡ ನುಡಿಯಲ್ಲಿ ಕನ್ನಡಿಗರಿಗೆ ತಿಳಿಸಿಕೊಡಬೇಕೆಂದು ನಮ್ಮ ಆಶಯ. ದಯಾಮಯನಾದ ಪರಮಾತ್ಮನ ಕರುಣೆಯಿಂದಲೂ ಶ್ರೀಶ್ರೀ ಜಗದ್ಗುರುಗಳ ಅನುಗ್ರಹದಿಂದಲೂ, ಗುರುಹಿರಿಯರ ಆಶೀರ್ವಾದದಿಂದಲೂ, ಮಿತ್ರರ ಬೆಂಬಲದಿಂದಲೂ ಸಂಪಾದಕ ಮಂಡಲಿಯವರ ಸಹಕಾರದಿಂದಲೂ, ಸಹೃದಯರಾದ ಕನ್ನಡಿಗರ ಪ್ರೋತ್ಸಾಹದಿಂದಲೂ 'ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ' ದವರು ಕೈಗೊಂಡಿರುವ ಕಾರ್ಯವು ಸಫಲವಾಗುವುದರಲ್ಲಿ ಸಂಶಯವಿಲ್ಲ.

**ತೇನ ವಿನಾ ತೃಣಮಪಿ ನ ಚಲತಿ ।**

ಪರಮಾತ್ಮನ ಇಚ್ಛೆಯಿಲ್ಲದೆ ಹುಲ್ಲೂ ಚಲಿಸುವುದಿಲ್ಲ! ಪ್ರಪಂಚದ ಹಲವು ಘಟನೆಗಳನ್ನು ಗಮನಿಸಿದಾಗ ಈ ಮಾತಿನ ಯಥಾರ್ಥತೆ ಸ್ಪಷ್ಟವಾಗುತ್ತದೆ. ಅಂತಹ ಅಘಟಿತಘಟನಾಸಮರ್ಥನಾದ, ದಯಾಮಯನಾದ ಪರಮಾತ್ಮನನ್ನು 'ಈ ಮಹಾ ಕಾರ್ಯವು ನಿರ್ವಿಘ್ನವಾಗಿ ಸಫಲವಾಗಲಿ' ಎಂದು ಪ್ರಾರ್ಥಿಸಿ, ಈ ಬಿನ್ನಹವನ್ನು ಸಹೃದಯರಾದ ಕನ್ನಡಿಗರು ಮನಸ್ಸಿಗೆ ತಂದುಕೊಂಡು ನಮಗೆ ಬೆಂಬಲ ನೀಡಲಿ ಎಂದು ಕೇಳಿಕೊಂಡು ವಿರಮಿಸುತ್ತೇನೆ.

ಬೆಂಗಳೂರು
೪-೪-೧೯೮೮
ವಿಭವ ಸಂವತ್ಸರ ಚೈತ್ರ ಕೃಷ್ಣದ್ವಿತೀಯಾ ಸೋಮವಾರ

ತಮ್ಮವ,
ರಾಮೇಶ್ವರಾವಧಾನೀ
ಪ್ರಧಾನ ಸಂಪಾದಕ



# ಪ್ರಧಾನ ಸಂಪಾದಕರ ಪರಿಚಯ

## ವೇ|| ಬ್ರ|| ಶ್ರೀ|| ಪಿ.ಎಸ್. ರಾಮೇಶ್ವರಾವಧಾನಿಗಳು

ಹಾಸನ ಜಿಲ್ಲೆಯ ಪೂಮಗಾಮೆ ಶ್ರೀ ಅವಧಾನಿಗಳ ಜನ್ಮಸ್ಥಳ. ತಂದೆ ಶ್ರೀ ಶ್ರೀನಿವಾಸ ಅವಧಾನಿಗಳು. ತಾಯಿ ಶ್ರೀಮತಿ ಅನ್ನಪೂರ್ಣಮ್ಮನವರು. ರೌದ್ರಿ ಸಂವತ್ಸರದ ಮಾಘ ಶುದ್ಧ ಬಿದಿಗೆಯಂದು (1921) ಜನನ. ಹನ್ನೊಂದನೆಯ ವಯಸ್ಸಿನಲ್ಲಿ ಉಪನೀತರಾದ ಬಳಿಕ ದೊಡ್ಡಪ್ಪನವರಲ್ಲಿ ಕಾಲೋಚಿತಮಂತ್ರಗಳ ಅಧ್ಯಯನ. 1933ರಲ್ಲಿ ಭಾವ ವೇ|| ಬ್ರ|| ಶ್ರೀ|| ವೆಂಕಟಕೃಷ್ಣ ಅವಧಾನಿಗಳ ಮಾರ್ಗದರ್ಶನದಂತೆ ಬೆಂಗಳೂರಿನ ಮಾಗಡಿ ಕರಣಿಕರ ಪಾಠಶಾಲೆಗೂ ಅನಂತರ ಶ್ರೀ ಚಾಮರಾಜೇಂದ್ರ ವೇದಪಾಠಶಾಲೆಗೂ ಪ್ರವೇಶ. ಪ್ರತಿಭಾವಂತ ವಿದ್ಯಾರ್ಥಿ. ವೇದಮೂರ್ತಿಗಳಾದ ಚಂದ್ರಶೇಖರ ಭಟ್ಟರು, ಹರಿಕೆ ಕೃಷ್ಣಭಟ್ಟರು ಮತ್ತು ಮಧ್ವರಾಯಾಚಾರ್ಯರಲ್ಲಿ ಕೃಷ್ಣ ಯಜುರ್ವೇದದ ಸಮಗ್ರ ಪಾಠ. ಈ ಅವಧಿಯಲ್ಲಿ ಸಂಸ್ಕೃತ ವಿದ್ವಾಂಸರಾದ ವೆಂಕಟನಾರಾಯಣ ಶಾಸ್ತ್ರಿಗಳು, ಶ್ಯಾಮಶಾಸ್ತ್ರಿಗಳು, ಕೃಷ್ಣಮಾಚಾರ್ಯರು ಮತ್ತು ಮಲ್ಲಿಕಾರ್ಜುನ ಶಾಸ್ತ್ರಿಗಳವರಲ್ಲಿ ಸಂಸ್ಕೃತಾಭ್ಯಾಸ.

ಒಂದು ದಶಕದ ಅಧ್ಯಯನದಿಂದಲೂ ತೀರದ ವ್ಯಾಸಂಗದ ಹಂಬಲ. ಮುಂದಿನ ವ್ಯಾಸಂಗಕ್ಕಾಗಿ 1944ರಲ್ಲಿ ಬೆಂಗಳೂರಿನ ಶಂಕರಮಠದಲ್ಲಿ ಮತ್ತೆ ವಿದ್ಯಾರ್ಥಿ. ಆರು ವರ್ಷಗಳ ಕಾಲ ಪೂರ್ವಮೀಮಾಂಸಾಶಾಸ್ತ್ರದಲ್ಲಿ ಆಳವಾದ ಅಧ್ಯಯನ. ಕ್ರಮಾಂತ, ಘನಾಂತ, ಸ್ಮಾರ್ತ ವಿದ್ವತ್ ಮತ್ತು ಕನ್ನಡ ಪಂಡಿತಪರೀಕ್ಷೆಗಳ ಸಾಲುಗಳಲ್ಲಿ ಉತ್ತೀರ್ಣತೆಯ ಯಶಸ್ಸು. ಈ ಸಂದರ್ಭದಲ್ಲಿ ನ್ಯಾಯ ಮತ್ತು ವ್ಯಾಕರಣ ಶಾಸ್ತ್ರಗಳ ಪರಿಚಯ. ಇವೆಲ್ಲವೂ ವಿದ್ವಾಂಸರಾದ ತೀರ್ಥಹಳ್ಳಿ ಸುಬ್ಬಾಶಾಸ್ತ್ರಿಗಳು, ಬೋಳೂರು ರಾಮಭಟ್ಟರು, ಕೊಡೂರು ಕೃಷ್ಣ ಜೋಯಿಸರು, ಸಾಲಗಾಮೆ ಕೇಶವಶಾಸ್ತ್ರಿಗಳು, ಲಕ್ಷ್ಮೀನರಸಿಂಹ ಶಾಸ್ತ್ರಿಗಳು—ಈ ಐವರು ಗುರುಗಳ ಅಧ್ಯಾಪನದ ಅನುಗ್ರಹ.

ಒಂದೂವರೆ ದಶಕಕ್ಕೂ ಮೀರಿದ ಸಾರ್ಥಕ ವಿದ್ಯಾಭ್ಯಾಸ. ಅನಂತರ ಬೆಂಗಳೂರು ಪ್ರೌಢಶಾಲೆಯಲ್ಲಿ ಕಾಲು ಶತಮಾನ ಕನ್ನಡ ಶಿಕ್ಷಕರಾಗಿ ಸೇವೆ. ಭಾರತದರ್ಶನ ಪ್ರಕಾಶನ ಸಂಪಾದಕಮಂಡಳಿಯ ಹಿರಿಯ ವಿದ್ವಾಂಸರು, ಶ್ರೀ ಶಂಕರ ಪಾಠಶಾಲೆ, ರಾಗೀಗುಡ್ಡದ ದೇವಸ್ಥಾನ ಮತ್ತು ಮಾಗಡಿ ಕರಣಿಕರ ಪಾಠಶಾಲೆಯಲ್ಲಿ ಸಂಸ್ಕೃತಾಧ್ಯಾಪನದ ಕರ್ತವ್ಯನಿರ್ವಹಣೆ. ಸೌಜನ್ಯದ ಮೂರ್ತಿ ಶ್ರೀ ಅವಧಾನಿಗಳು ಶಾಸ್ತ್ರ ಮತ್ತು ಆಚಾರಗಳ ವಿಶ್ಲೇಷಣೆಯಲ್ಲಿ ಕೀರ್ತಿವೆತ್ತವರು. ಎಪ್ಪತ್ತರ ಹತ್ತಿರದಲ್ಲಿರುವ ಶ್ರೀ ಅವಧಾನಿಗಳು ಇಂದಿಗೂ ಹೊಸಪೇಟೆಯ ಶ್ರೀ ವಿದ್ಯಾರಣ್ಯ ಪಾಠಶಾಲೆಯಲ್ಲಿ ವೇದಭಾಷ್ಯಗಳ ಅಧ್ಯಾಪನದಲ್ಲಿ ನಿರತರು.

ಈ ಎಲ್ಲ ಕಾರ್ಯಗಳಿಗೂ ಪುಟವಿಟ್ಟಂತೆ ಕೃಷ್ಣಯಜುರ್ವೇದದ ಕನ್ನಡ ಆವೃತ್ತಿಯ ಸಂಪಾದಕತ್ವದ ಸಮರ್ಥ ಹೊಣೆಗಾರಿಕೆ ಶ್ರೀ ಅವಧಾನಿಗಳದ್ದಾಗಿದೆ.

---



## ಪ್ರಕಾಶನ ಸಮಿತಿ

ಶ್ರೀಯುತರಾದ

ಬಿ.ಎನ್.ವಿ. ಸುಬ್ರಹ್ಮಣ್ಯಂ ಅಧ್ಯಕ್ಷರು

ಕೆ.ಎನ್. ವೆಂಕಟನಾರಾಯಣ ಕಾರ್ಯದರ್ಶಿ

ಸೋ.ತಿ. ನಾಗರಾಜ ಸಹಾಯಕ ಸಂಪಾದಕ

ಎಚ್. ಸುಬ್ರಹ್ಮಣ್ಯ ಜೋಯಿಸ್

ಬಸವಾನಿ ರಾಮಶರ್ಮ

ಎಂ. ನರಸಿಂಹನ್

ಎಂ.ಪಿ. ಮೋಹನ್

## ಪ್ರತಿಷ್ಠಾನ ಮಂಡಳಿ

ಶ್ರೀಯುತರಾದ

ಬಿ.ಎನ್.ವಿ. ಸುಬ್ರಹ್ಮಣ್ಯಂ ನಿರ್ವಾಹಕ ವಿಶ್ವಸ್ತರು

ಕೆ.ಎನ್. ವೆಂಕಟನಾರಾಯಣ

ಎಂ. ನರಸಿಂಹನ್

ಬಿ.ಕೆ. ರಮೇಶ್

ಶ್ರೀಮತಿ ಬಿ.ವಿ. ಸೀತಾ

## ಗ್ರಂಥಾರ್ಪಣೆ

ವೇದಶಾಸ್ತ್ರಪಾರಂಗತರೂ, ಸದಾಚಾರಸಂಪನ್ನರೂ,
ಧಾರ್ಮಿಕಕಾರ್ಯಗಳಿಗೆ ಪ್ರೇರಕರೂ ಆಗಿದ್ದ ಪೂಜ್ಯ ಮಾವನವರಾದ
ದಿ|| ಮಲ್ಲಿಕಾರ್ಜುನ ಶಾಸ್ತ್ರಿಯವರ
ದಿವ್ಯಸ್ಮೃತಿಗೆ.

—ಬಿ.ಎನ್.ವಿ. ಸುಬ್ರಹ್ಮಣ್ಯಂ



# ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ—ಸಂಪುಟ ೧

## ಸಂಪಾದಕವರ್ಗ

## ಭಾಗ 1 : ವೇದಗಳ ಪರಿಚಯ

ವಿದ್ವಾನ್ ಪಿ.ಎಸ್. ರಾಮೇಶ್ವರ ಅವಧಾನಿಗಳು

ವಿದ್ವಾನ್ ಹೆಚ್.ಎಸ್. ವರದದೇಶಿಕಾಚಾರ್ಯರಂಗಪ್ರಿಯರು

ವಿದ್ವಾನ್ ಎಂ.ಎಸ್. ಅಶ್ವತ್ಥನಾರಾಯಣ ಅವಧಾನಿಗಳು

ವಿದ್ವಾನ್ ಬಸವಾನಿ ರಾಮಶರ್ಮರು

## ಭಾಗ ೨ : ಕೃಷ್ಣಯಜುರ್ವೇದ ಪರಿಚಯ

ವಿದ್ವಾನ್ ಪಿ.ಎಸ್. ರಾಮೇಶ್ವರ ಅವಧಾನಿಗಳು

## ಭಾಗ ೩ : ಯಜ್ಞಗಳ ಪರಿಚಯ

ವಿದ್ವಾನ್ ಶ್ರೌತಿ ರಾಮಚಂದ್ರ ಗಣೇಶ ಭಟ್ಟ ಕೊಡ್ಲಕೆರೆ



|| ಶ್ರೀಃ ||

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ |
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಮ್ ||

ಬ್ರಹ್ಮನೇ ಮೊದಲಾದ ದೇವತೆಗಳು ಎಲ್ಲ ಕಾರ್ಯಗಳ ಆರಂಭದಲ್ಲಿ ಯಾರನ್ನು ನಮಿಸಿ, ಕೃತಕೃತ್ಯರಾಗುವರೋ ಅಂತಹ ಗಣಪತಿಯನ್ನು ನಮಿಸುವೆ.

ಶರದಿಂದುವಿಕಾಸಮಂದಹಾಸಾಂ
ಸ್ಫುರದಿಂದೀವರಲೋಚನಾಭಿರಾಮಾಮ್ |
ಅರವಿಂದಸಮಾನಸುಂದರಾಸ್ಯಾಮ್
ಅರವಿಂದಾಸನಸುಂದರೀಮುಪಾಸೇ ||

ಶರತ್ಕಾಲದ ಚಂದ್ರನ ಬೆಳದಿಂಗಳಿನಂತಹ ಮಂದಹಾಸದಿಂದ ಕೂಡಿರುವ, ಅರಳಿದ ಕನ್ನೈದಿಲೆಯಂತಹ ಕಣ್ಣುಗಳಿಂದ ಸುಂದರಳಾಗಿರುವ, ಕಮಲದಂತಹ ಸುಂದರವಾದ ಮುಖದಿಂದ ಕೂಡಿರುವ, ಸರಸ್ವತಿಯನ್ನು ಉಪಾಸಿಸುತ್ತೇನೆ.



# ವೇದಗಳ ಪರಿಚಯ

ಸನಾತನವಾದ ನಮ್ಮ ಸಂಸ್ಕೃತಿಯ ಪ್ರಮಾಣಭೂತವಾದ ಗ್ರಂಥವೇ ವೇದಗಳು. ಭಾರತೀಯಶಾಸ್ತ್ರಗಳೆಲ್ಲವೂ ವೇದಗಳ ಮೂಲಕವಾಗಿಯೇ ಪ್ರವೃತ್ತವಾಗಿವೆ. ನಮ್ಮ ರಾಷ್ಟ್ರೀಯಜೀವನವಂತೂ ವೇದಗಳ ವಿಚಾರದಿಂದ ಅತ್ಯಂತ ಪ್ರಭಾವಿತವಾಗಿದೆ. ಆದುದರಿಂದ ವೇದಗಳ ಪರಿಚಯವನ್ನು ಕನ್ನಡದಲ್ಲಿ ಮಾಡಿಕೊಡಲು ನಮ್ಮ ಈ ನಮ್ರ ಯತ್ನ. ವೇದಗಳ ಬಗ್ಗೆ ಕೆಲವು ತಪ್ಪು ಕಲ್ಪನೆಗಳು ನಮ್ಮ ಸಮಾಜದಲ್ಲಿ ಇಲ್ಲದಿಲ್ಲ. ಈ ತಪ್ಪು ಕಲ್ಪನೆಗಳನ್ನು ದೂರ ಮಾಡಿಕೊಂಡು ವೇದಗಳ ಸರಿಯಾದ ಪರಿಚಯವನ್ನು ಪಡೆಯುವುದು ಸಾಮಯಿಕವಾಗಿದೆ. ವೇದಗಳ ಪರಿಚಯ ಏಕೆ? ಯಾರಿಗೆ? ಹೇಗೆ? ಇವುಗಳನ್ನು ಕ್ರಮವಾಗಿ ನೋಡೋಣ.

**ಏಕೆ? ಯಾರಿಗೆ?**

ಏಕೆ ಈ ವೇದಗಳ ಪರಿಚಯ? ಅದರಿಂದ ಏನು ಪ್ರಯೋಜನ? ಧರ್ಮವೇ? ಅರ್ಥವೇ? ಕಾಮವೇ? ಮೋಕ್ಷವೇ? ಯಾವ ಪುರುಷಾರ್ಥ ವೇದಗಳಿಂದ ಸಿದ್ಧಿಸುತ್ತದೆ? ಎಂದು ಕೆಲವರು ಕೇಳುತ್ತಾರೆ. ಅದಕ್ಕೆ ವೈದಿಕಸಂಪ್ರದಾಯದ ಮಹನೀಯರು "ನೀವು ಹೇಳಿದ ಎಲ್ಲ ಪುರುಷಾರ್ಥಗಳೂ ವೇದಗಳಿಂದ ಸಿದ್ಧಿಸುತ್ತವೆ. ಅವುಗಳ ಪರಿಚಯವನ್ನು ಅವಶ್ಯವಾಗಿ ಮಾಡಿಕೊಳ್ಳಬೇಕು ಮಹರಾಯರೇ" ಎಂದು ಸಲೀಸಾದ ಉತ್ತರ ಕೊಡುತ್ತಾರೆ. ಆ ಉತ್ತರಕ್ಕೆ ಅವರು ಪ್ರಮಾಣಸಹಿತವಾದ ವಿವರಣೆಯನ್ನು ಹೀಗೆ ನೀಡುತ್ತಾರೆ.

ವೇದಗಳು ಸತ್ಪುರುಷರ ಅಮರವಾದ ಸಂಪತ್ತು. ಸರ್ವಪುರುಷಾರ್ಥರೂಪವಾದ ಸಂಪತ್ತು. ಇದೇ ಅರ್ಥವನ್ನು ತಿಳಿಸುವ ಮಂತ್ರ ಹೀಗಿದೆ.

**ಋಚಸ್ಸಾಮಾನಿ ಯಜೂಗ್ಂಷಿ । ಸಾ ಹಿ ಶ್ರೀರಮೃತಾ ಸತಾಮ್ ।***

ಋಕ್, ಯಜುಸ್ ಮತ್ತು ಸಾಮಗಳು ಅಮರವಾದ ಸಂಪತ್ತು ಎಂದು ವೇದದ ಪ್ರತಿಜ್ಞಾವಾಣಿ.

ಪುರುಷಾರ್ಥಗಳನ್ನು ನಮಗೆ ಅನುಗ್ರಹಿಸುವ ಭಗವಂತನೂ, ಆತನ ವಿಭೂತಿಗಳೂ ವೇದಸ್ವರೂಪರೆಂದು ನಾನಾ ಉಪನಿಷತ್ತಿನ ಮಾತುಗಳಿಂದಲೂ

---

*ತೈ.ಬ್ರಾ. ೧-೨-೨೬



ಸಿದ್ಧಪುರುಷರ ಸ್ತೋತ್ರಗಳಿಂದಲೂ ನಾವು ತಿಳಿಯುತ್ತೇವೆ.

**ಋಗ್ಯಜುಃಸಾಮರೂಪಾಯ ವೇದಾಹರಣಕರ್ಮಣೇ ।**
**ಪ್ರಣವೋದ್ಗೀಥವಪುಷೇ ಮಹಾಶ್ವಶಿರಸೇ ನಮಃ ॥**

ಪ್ರಣವ ಮತ್ತು ಉದ್ಗೀಥವನ್ನು ಶರೀರವನ್ನಾಗಿ ಹೊಂದಿರುವ ಮತ್ತು ವೇದಗಳನ್ನು ಬ್ರಹ್ಮದೇವನಿಗೆ ತಂದುಕೊಟ್ಟ ಹಯವದನನಾದ ಸ್ವಾಮಿಗೆ ನಮಸ್ಕಾರ.

—ಹಯಗ್ರೀವ ಅಥರ್ವಶೀರ್ಷ ಉಪನಿಷತ್ತು.

**ಸ್ತುವಂತಿ ಯೇ ಸ್ತುತಿಭಿರಮೂಭಿರನ್ವಹಂ ತ್ರಯೀಮಯೀಂ ತ್ರಿಭುವನ ಮಾತರಂ ರಮಾಮ್ ।**

ಯಾರು ಈ ಸ್ತುತಿಗಳಿಂದ ನಿತ್ಯವೂ ವೇದಮಯಿಯಾದ ಮೂರು ಲೋಕಗಳ ತಾಯಿಯಾದ ಲಕ್ಷ್ಮಿಯನ್ನು ಸ್ತುತಿಸುತ್ತಾರೆಯೋ......

—ಕನಕಧಾರಾಸ್ತವ.

ವೇದಃ ಶಿವಃ ಶಿವೋ ವೇದಃ ವೇದಾಧ್ಯಾಯೀ ಸದಾ ಶಿವಃ ।

ಆದುದರಿಂದ ಭಗವಂತನ ಸ್ವರೂಪವಾದ ವೇದವು ಪುರುಷಾರ್ಥಗಳನ್ನು ನಮಗೆ ಅನುಗ್ರಹಿಸುತ್ತದೆ. ಧರ್ಮವೇ ಮೊದಲಾದ ನಾಲ್ಕು ಪುರುಷಾರ್ಥಗಳು ವೇದಗಳಿಂದ ಹೇಗೆ ಸಿದ್ಧಿಸುತ್ತವೆ?

## ಧರ್ಮವನ್ನು ಅರಿಯಲು

ಪುರುಷಾರ್ಥಗಳಲ್ಲಿ ಪ್ರಥಮ ಮತ್ತು ಸಾರಭೂತವಾದದ್ದು ಧರ್ಮ. ಅದು ಎಲ್ಲವನ್ನೂ ಧರಿಸಿರುವ ಶಾಶ್ವತವಾದ ನಿಯಮ. ಇಡೀ ಜಗತ್ತಿನ ಸ್ಥಿತಿಗೆ ಕಾರಣವಾದದ್ದು. ಅಭ್ಯುದಯ(ಲೌಕಿಕವಾದ ಏಳಿಗೆ) ಮತ್ತು ಶ್ರೇಯಸ್ಸು (ಮುಕ್ತಿ) ಎರಡಕ್ಕೂ ಪರಮಸಾಧನ.

**ಅನೇನ ಧರ್ಮಃ ಸವಿಶೇಷಮದ್ಯ ಮೇ ತ್ರಿವರ್ಗಸಾರಃ ಪ್ರತಿಭಾತಿ ಭಾಮಿನಿ।[1]**

**ಧಾರಣಾತ್ ಧರ್ಮ ಇತ್ಯಾಹುಃ ಧರ್ಮೇಣ ವಿಧೃತಾಃ ಪ್ರಜಾಃ ।[2]**

**ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ ।[3]**

---

1. ಕುಮಾರಸಂಭವ.
2. ಮಹಾಭಾರತ-ರಾಜಧರ್ಮಪರ್ವ.
3. ಮಹಾನಾರಾಯಣ ಉಪನಿಷತ್ತು.



**ಯತೋಽಭ್ಯುದಯನಿಃಶ್ರೇಯಸಸಿದ್ಧಿಃ ಸ ಧರ್ಮಃ ।**

ಇಂತಹ ಶ್ರೇಷ್ಠವಾದ ಪುರುಷಾರ್ಥವಾಗಿರುವ ಧರ್ಮದ ಜ್ಞಾನಕ್ಕೆ ಪ್ರಮಾಣವು ವೇದವೇ ಆಗಿದೆ. ಆದ್ದರಿಂದ ವೇದದ ಪರಿಚಯ ಅತ್ಯಂತ ಆವಶ್ಯಕ.

ಧರ್ಮದ ವಿಷಯದಲ್ಲಿ ವೇದವೇ ಏಕೆ ಪ್ರಮಾಣ? ಋಷಿಗಳ ಮಾತು ಹೀಗಿದೆ.

**ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।**[1]

**ವೇದೋ ಧರ್ಮಮೂಲಂ, ತದ್ವಿದಾಂ ಚ ಸ್ಮೃತಿಶೀಲೇ ।**[2]

**ವೇದಪ್ರಣಿಹಿತೋ ಧರ್ಮಸ್ತ್ವಧರ್ಮಸ್ತದ್ವಿಪರ್ಯಯಃ ।**[3]

ಜ್ಞಾನಿಗಳಾದ ಮಹರ್ಷಿಗಳಿಂದ ರಚಿತವಾದ ಧರ್ಮಶಾಸ್ತ್ರಗಳಿಂದಲೂ ಕಾವ್ಯ ಇತಿಹಾಸಗಳಿಂದಲೂ, ಪುರಾಣ ಆಗಮಗಳಿಂದಲೂ ಧರ್ಮವನ್ನು ಸುಲಭವಾಗಿಯೇ ಮನವರಿಕೆ ಮಾಡಿಕೊಳ್ಳಬಹುದು. ಹೀಗಿರುವಾಗ ಧರ್ಮಕ್ಕೆ ಪ್ರಮಾಣವೆಂದು ವೇದಕ್ಕೇ ಏಕೆ ಅಗ್ಗಳಿಕೆ? ಎಂದರೆ, ಧರ್ಮಶಾಸ್ತ್ರಗಳಿಂದಲೂ ನಾವು ಧರ್ಮವನ್ನು ತಿಳಿಯಬಹುದು. ಆದರೆ ಅವುಗಳಿಗೂ ವೇದವೇ ಪ್ರಮಾಣ. ವೇದಕ್ಕೆ ವಿರೋಧವಲ್ಲದ ಮಟ್ಟದಲ್ಲಿ ಮಾತ್ರವೇ ಅವು ಪ್ರಮಾಣಗಳಾಗುತ್ತವೆ. ವೇದವಾದರೋ ಧರ್ಮಕ್ಕೆ ಪರಮಪ್ರಮಾಣ. ಕೊನೆಯ ತೀರ್ಪು ನೀಡುವ ಪರಮೋಚ್ಚ ನ್ಯಾಯಾಲಯ ಎಂದು ಜ್ಞಾನಿಗಳೇ ಹೇಳುತ್ತಾರೆ.

**ಧರ್ಮಂ ಜಿಜ್ಞಾಸಮಾನಾನಾಂ ಪ್ರಮಾಣಂ ಪರಮಂ ಶ್ರುತಿಃ ।**[4]

**ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮ್ ।**[5]

ಆದುದರಿಂದ ವೇದಗಳ ಮೂಲಕವಾಗಿ ಧರ್ಮದ ಪರಿಚಯ ಮಾಡಿಕೊಂಡು ಅದನ್ನು ಪ್ರಾಮಾಣಿಕವಾಗಿ ಅನುಷ್ಠಾನ ಮಾಡಿದರೆ ಧರ್ಮವೆಂಬ ಪುರುಷಾರ್ಥವು ಸಿದ್ಧಿಸುತ್ತದೆ.

---

1. ಮನುಸ್ಮೃತಿ.
2. ಗೌತಮಧರ್ಮಸೂತ್ರ.
3. ಸ್ಮೃತಿಚಂದ್ರಿಕಾ.
4. ವೀರಮಿತ್ರೋದಯ.
5. ಜೈಮಿನಿಮಹರ್ಷಿಯ ಪೂರ್ವಮೀಮಾಂಸಾ ಸೂತ್ರಗಳು. ಸ್ಮೃತಿಗಳಿಗೂ ಪ್ರತ್ಯಕ್ಷ ಶ್ರುತಿಗಳಿಗೂ ವಿರೋಧ ಬಂದರೆ ಶ್ರುತಿಯೇ ಪ್ರಮಾಣ. ಏಕೆಂದರೆ ಸ್ಮೃತಿಗಳು ಪ್ರತ್ಯಕ್ಷ ಶ್ರುತಿಗಳಲ್ಲ.



**ಅರ್ಥ-ಕಾಮಗಳಿಗಾಗಿ**

ಧರ್ಮದ ಸರಿಯಾದ ಆಚರಣೆಯಿಂದ ಮುಂದಿನ ಎರಡು ಪುರುಷಾರ್ಥಗಳಾದ ಅರ್ಥ ಕಾಮಗಳೂ ತಾವಾಗಿಯೇ ಸಿದ್ಧಿಸುತ್ತವೆ. ಧರ್ಮದ ಅನುಷ್ಠಾನದಿಂದ ಅರ್ಥ ಕಾಮಗಳ ಸಿದ್ಧಿ ಹೇಗೆ? ಈ ವಿಷಯದಲ್ಲಿ ಆಪಸ್ತಂಬ ಮಹರ್ಷಿಗಳು, ವೇದವ್ಯಾಸರು ಹೇಳಿರುವ ಮಾತುಗಳನ್ನು ನೋಡೋಣ.

**ತದ್ಯಥಾಮ್ರೇ ಫಲಾರ್ಥೇ ನಿರ್ಮಿತೇ ಛಾಯಾವೃಕ್ಷಾವನೂತ್ಪದ್ಯೇತೇ ಏವಂ ಧರ್ಮಂ ಚರ್ಯಮಾಣಮರ್ಥಕಾಮಾವನೂತ್ಪದ್ಯೇತೇ ।**

—ಆಪಸ್ತಂಬ ಧರ್ಮಸೂತ್ರ

ಹಣ್ಣು ದೊರೆಯಲಿ ಎಂದು ಮಾವಿನ ಸಸಿಯನ್ನು ನೆಟ್ಟು, ಹದವರಿತು ನೀರು ಮತ್ತು ಗೊಬ್ಬರವನ್ನು ಹಾಕಿ ಬೆಳಸುತ್ತಿದ್ದರೆ ಆ ಮರದಿಂದ ತಂಪನ್ನೀಯುವ ನೆರಳು ಮತ್ತು ತಂಪನ್ನು ಬೀರುವ ಪೂತಳಿರುಗಳು ತಾವಾಗಿಯೇ ದೊರೆಯುವುದಿಲ್ಲವೇ? ಹೀಗೆಯೇ ಧರ್ಮವನ್ನು ಆಚರಿಸುತ್ತಿದ್ದರೆ ಅರ್ಥ ಮತ್ತು ಕಾಮಗಳು ಅನುಷಂಗಿಕವಾಗಿ ದೊರೆಯುತ್ತವೆ.

**ಯಥೇಕ್ಷುಹೇತೋಸ್ಸಲಿಲಂ ನಿಷೇಚಿತಂ ತೃಣಾನಿ ವಲ್ಲೀರಪಿ ಚ ಪ್ರಸಿಂಚತಿ । ತಥಾ ನರೋ ಧರ್ಮಪಥೇನ ವರ್ತಯನ್ ಯಶಶ್ಚ ಕಾಮಾಂಶ್ಚ ವಸೂನಿ ಸೋಽಶ್ನುತೇ ॥**

—ಮಹಾಭಾರತ-ಮೋಕ್ಷಧರ್ಮಪರ್ವ

ಕಬ್ಬಿಗಾಗಿ ಕಬ್ಬಿನ ಸಸಿಗಳನ್ನು ನೆಟ್ಟು, ಕಬ್ಬಿನ ಗದ್ದೆಗೆ ನೀರನ್ನು ಹಾಯಿಸುತ್ತಿದ್ದರೆ ಉಪಯುಕ್ತವಾದ ಹುಲ್ಲು ಮತ್ತು ಬಳ್ಳಿಗಳಿಗೂ ಅದರಿಂದ ನೀರು ಹರಿದು ಅವುಗಳ ಲಾಭವೂ ಆಗುವುದಿಲ್ಲವೇ? ಹೀಗೆಯೇ ಧರ್ಮವನ್ನು ಆಚರಿಸುತ್ತಿದ್ದರೆ ಅರ್ಥ ಮತ್ತು ಕಾಮಗಳು ಅನುಷಂಗಿಕವಾಗಿ ದೊರೆಯುತ್ತವೆ.

ಹೀಗೆಯೇ,

**ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ ।**

'ಧರ್ಮದಿಂದಲೇ ಅರ್ಥ ಕಾಮಗಳು ದೊರೆಯುವಾಗ, ಧರ್ಮವನ್ನು ಜನರು ಏಕೆ ಆಚರಿಸುವುದಿಲ್ಲವೋ ನಾನರಿಯೆ. ಎಂತಹ ಕಣ್ಣು ಕಾಣದ ಗಾಂಪರು, ಗಾವಿಲರು ಇವರು!' ಎಂದು ವೇದವ್ಯಾಸರು ಮರುಗುತ್ತಾರೆ. ಹೀಗೆ ಧರ್ಮವನ್ನು ಬೋಧಿಸುವುದರ ಮೂಲಕ ವೇದವು ಅರ್ಥ ಕಾಮಗಳಿಗೂ ಸಾಧನವಾಗುತ್ತದೆ.

ಧರ್ಮದ ಮೂಲಕವಾಗಿ ಮಾತ್ರವಲ್ಲದೆ ಕೆಲವು ವೈದಿಕಸೂಕ್ತ ಮತ್ತು



ಮಂತ್ರಗಳ ಪಾರಾಯಣದಿಂದಲೂ ವೈದಿಕಯಜ್ಞಗಳ ಅನುಷ್ಠಾನದಿಂದಲೂ ಅರ್ಥ ಕಾಮಗಳು ನೇರವಾಗಿ ವೇದದಿಂದ ಲಭಿಸುತ್ತವೆಯೆಂದು ಶ್ರುತಿಯು ಪ್ರತಿಜ್ಞೆ ಮಾಡುತ್ತದೆ.

**ಯಃ ಶುಚಿಃ ಪ್ರಯತೋ ಭೂತ್ವಾ ಜುಹುಯಾದಾಜ್ಯಮನ್ವಹಮ್ ।**
**ಶ್ರಿಯಃ ಪಂಚದಶರ್ಚಂ ಚ ಶ್ರೀಕಾಮಸ್ಸತತಂ ಜಪೇತ್ ॥**

—ಶ್ರೀಸೂಕ್ತ

ಸಂಪತ್ತನ್ನು ಬಯಸುವವನು ಶುಚಿಯಾಗಿಯೂ, ಸಂಯಮಿಯಾಗಿಯೂ ಇದ್ದು, ನಿತ್ಯವೂ ಲಕ್ಷ್ಮೀದೇವಿಯ ಹದಿನೈದು ಋಕ್‌ಗಳಿಂದ ಆಜ್ಯಹೋಮವನ್ನು ಮಾಡಬೇಕು ಮತ್ತು ಈ ಸೂಕ್ತವನ್ನು ನಿರಂತರ ಜಪಿಸಬೇಕು.

**ವಿಂದತೇ ಪ್ರಾಜಾಪತ್ಯಂ ರಾಯಸ್ಪೋಷಂ ಗೌಪತ್ಯಮ್ ।** [1]

—ನಾರಾಯಣ ಉಪನಿಷತ್ತು

**ತನ್ನಮ ಇತ್ಯುಪಾಸೀತ । ನಮ್ಯಂತೇಽಸ್ಮೈ ಕಾಮಾಃ ।** [2]

—ತೈತ್ತಿರೀಯ ಉಪನಿಷತ್ತು

ಹೀಗೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗಕ್ಕೆ ಸಾಧನವಾಗಿರುವ ವೇದಗಳ ಪರಿಚಯ ಬೇಕಿಲ್ಲವೆಂದು ಯಾವ ವಿವೇಕಿಯೂ ಹೇಳುವುದಿಲ್ಲ.

**ಮೋಕ್ಷಕ್ಕಾಗಿ**

ಪುರುಷಾರ್ಥಗಳಲ್ಲಿ ಕಡೆಯದು ಮೋಕ್ಷ. ಅಕ್ಷಯವೂ, ಪರಿಶುದ್ಧವೂ, ಪರಿಪೂರ್ಣವೂ ಆದ ಆನಂದ ಶಾಂತಿಗಳನ್ನು ಈಯುವ ಪರಮಪುರುಷಾರ್ಥ ಅದು. ಅದು ದೊರೆಯುವುದು ಬ್ರಹ್ಮಜ್ಞಾನದಿಂದಲೇ. ಆ ಬ್ರಹ್ಮಜ್ಞಾನಕ್ಕೆ ಪರಮಸಾಧನ ವಾದುದೂ ವೇದವೇ. ಆದುದರಿಂದ ಪರಮಪುರುಷಾರ್ಥವಾದ ಮೋಕ್ಷದ ಪ್ರಾಪ್ತಿಗೂ ವೇದದ ಪರಿಚಯವು ಅತ್ಯಾವಶ್ಯಕವೇ ಆಗಿದೆ.

**ಬ್ರಹ್ಮವಿದಾಪ್ನೋತಿ ಪರಮ್ ।** [3]

---

1. ಆಧಿಪತ್ಯವನ್ನೂ ಸಂಪತ್ತಿನ ಒಡೆತನವನ್ನೂ ಪಶುಸಂಪತ್ತಿನ ಸ್ವಾಮಿತ್ವವನ್ನೂ ಪಡೆಯುತ್ತಾನೆ.

2. ಆ ಪರವಸ್ತುವನ್ನು 'ನಮಃ' ಎಂದು ಉಪಾಸಿಸಿರಿ. ಆಗ ಎಲ್ಲ ಕಾಮನೆಗಳೂ ಈ ಉಪಾಸಕರಿಗೆ ವಶವಾಗುತ್ತವೆ.

3. ತೈ.ಉ. ೨-೧.



ತರತಿ ಶೋಕಮಾತ್ಮವಿತ್ । [1]

ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಃ ತೇಷಾಂ ಸುಖಂ ಶಾಶ್ವತಂ
ನೇತರೇಷಾಂ, ತಮಾತ್ಮಸ್ಥಂ ಯೇಽನುಪಶ್ಯನ್ತಿ ಧೀರಾಃ ತೇಷಾಂ ಶಾನ್ತಿಶ್ಶಾಶ್ವತೀ
ನೇತರೇಷಾಮ್ । [2]

ಯದಾ ಚರ್ಮವದಾಕಾಶಂ ವೇಷ್ಟಯಿಷ್ಯನ್ತಿ ಮಾನವಾಃ ।
ತದಾ ದೇವಮವಿಜ್ಞಾಯ ದುಃಖಸ್ಯಾನ್ತೋ ಭವಿಷ್ಯತಿ ॥ [3]

ನಾವೇದವಿನ್ಮನುತೇ ತಂ ಬೃಹನ್ತಮ್ । [4]

ತ್ರಿವೇದೀಮಧ್ಯದೀಪ್ತಾಯ ತ್ರಿವೇದೀದಿವ್ಯಚಕ್ಷುಷೇ । [5]

ಶಾಸ್ತ್ರಯೋನಿತ್ವಾತ್ । [6]

ಅಖಿಲಾಮ್ನಾಯೈಕವೇದ್ಯೋ ಹರಿಃ । [7]

ಒಟ್ಟಿನಲ್ಲಿ 'ಪುರುಷಾರ್ಥ ಶಾಸನ'ವು ಸಾರುವಂತೆ ಪುರುಷಾರ್ಥಮಣಿಗಳಾದ ಧರ್ಮ ಮತ್ತು ಬ್ರಹ್ಮಗಳನ್ನು ಪ್ರತ್ಯಕ್ಷದಿಂದ ತಿಳಿಯಲಾಗುವುದಿಲ್ಲ. ಅನುಮಾನ (ಊಹೆ) ದಿಂದಲೂ ಅರಿಯಲಾಗುವುದಿಲ್ಲ. ಅತೀಂದ್ರಿಯಜ್ಞಾನರಾಶಿಯಾದ ವೇದಗಳಿಂದಲೇ ತಿಳಿಯಬೇಕು

---

1. ಛಾ.ಉ.—ಆತ್ಮವನ್ನರಿತವನು ಶೋಕವನ್ನು ದಾಟುತ್ತಾನೆ.

2. ಕಠ—ಆತ್ಮದಲ್ಲಿರುವ ಆ ಪರಮಾತ್ಮನನ್ನು ಯಾವ ಧೀರರು ಸಾಕ್ಷಾತ್ಕರಿಸಿ ಕೊಳ್ಳುತ್ತಾರೆಯೋ, ಅವರಿಗೆ ತಾನೇ ಶಾಶ್ವತವಾದ ಸುಖ, ಅವರಿಗೆ ತಾನೇ ಶಾಶ್ವತವಾದ ಶಾಂತಿ, ಇತರರಿಗೆ ಇಲ್ಲ.

3. ಶ್ವೇ.ಉ.—ಮನುಷ್ಯರು ಆಕಾಶವನ್ನು ಚರ್ಮದಂತೆ ಜೋಡಿಸಿ ಕಟ್ಟುವುದು ಹೇಗೆ ಅಸಾಧ್ಯವೋ, ಹಾಗೆಯೇ ಪರಮಾತ್ಮನನ್ನು ಅರಿಯದೇ ತಾಪತ್ರಯ ನಾಶವಾಗುವುದು ಅಸಾಧ್ಯ.

4. ತೈ ಬ್ರಾ. ೩-೧೨-೫೫—ವೇದವನ್ನರಿಯದವನು ಆ ಮಹಾಂತನಾದ ಪರಮಾತ್ಮನನ್ನು ತಿಳಿಯಲಾರನು.

5. ಕುಮಾರಿಲ ಭಟ್ಟರ ತಂತ್ರವಾರ್ತಿಕ.—ವೇದತ್ರಯಗಳಿಂದ ದೀಪ್ತನಾಗಿರುವ, ವೇದತ್ರಯವನ್ನೇ ಕಣ್ಣಾಗಿ ಪಡೆದಿರುವ......

6. ಬ್ರಹ್ಮಸೂತ್ರ ೧-೧-೩-೩.

7. ಇಡೀ ವೇದಗಳಿಂದಲೂ ತಿಳಿಯಲ್ಪಡತಕ್ಕವನು ಹರಿಯೊಬ್ಬನೇ.



**ಧರ್ಮಬ್ರಹ್ಮಣೀ ವೇದೈಕವೇದ್ಯೇ ।**

ಧರ್ಮ ಮತ್ತು ಬ್ರಹ್ಮಗಳು ವೇದವೊಂದರಿಂದಲೇ ತಿಳಿಯಲ್ಪಡತಕ್ಕವುಗಳು. ವೇದವು ಎಲ್ಲ ಜ್ಞಾನಗಳಿಗೂ ಆಕರ. ಎಲ್ಲ ಶಾಸ್ತ್ರೀಯ ವಿಭಾಗ ವ್ಯವಸ್ಥೆಗೂ ಮೂಲವಾದುದು. ಅದರ ಅರಿವಿಲ್ಲದಿದ್ದರೆ ವಿಶ್ವವು ಅವ್ಯವಸ್ಥೆಯ ಮುದ್ದೆಯಾಗುತ್ತದೆ. ಇದನ್ನೇ ಶ್ರೀ ಶಂಕರಾಚಾರ್ಯರು ಹೀಗೆ ತಿಳಿಸಿದ್ದಾರೆ.

**ದೇವತಿರ್ಯಙ್ಮನುಷ್ಯವರ್ಣಾಶ್ರಮಾದಿಪ್ರವಿಭಾಗಹೇತೋಃ**
**ಋಗ್ವೇದಾದ್ಯಾಖ್ಯಸ್ಯ ಸರ್ವಜ್ಞಾನಾಕರಸ್ಯ.......।**

—ಬ್ರಹ್ಮಸೂತ್ರ ಭಾಷ್ಯ ೧-೧-೩-೩.

ಅದು ಅಪೌರುಷೇಯವಾಣಿ. ಆದ್ಯಂತರಹಿತವಾದ ನಿತ್ಯಶುದ್ಧವಾದ ಸರಸ್ವತಿ.

**ಅನಾದಿನಿಧನಾ ಹ್ಯೇಷಾ ವಾಗುತ್ಸೃಷ್ಟಾ ಸ್ವಯಂಭುವಾ ।** [1]

ಅದು ಪರಮಾತ್ಮನ ಉಸಿರು. ದೇವದೇವನ ದಿವ್ಯನಾದ. ಆತನ ಸೃಷ್ಟಿ ನಿರ್ಮಾಣಕ್ಕೂ ಸಾಧನವಾದ ಅಮೂಲ್ಯ ಪದಾರ್ಥ. ನಮ್ಮ ಅತ್ಯಂತ ಆಪ್ತ ಗೆಳೆಯ.

**ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದಃ........।** [2]
**ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।**
**ನಿರ್ಮಮೇ ತಮಹಂ ವನ್ದೇ ವಿದ್ಯಾತೀರ್ಥಮಹೇಶ್ವರಮ್ ॥** [3]
**ಅಭೂಮಿಸ್ತ್ವದ್ಭೂಮಾ ಜನನಿ ಜರತೀನಾಮಪಿ ಗಿರಾಮ್ ।** [4]
**ಸಮಾಹಾರಃ ಸಾಮ್ನಾಂ ಪ್ರತಿಪದಮೃಚಾಂ ಧಾಮ ಯಜುಷಾಂ..........**
**ಹಯವದನಹೇಷಾಹಲಹಲಃ ।** [5]

---

1. ಮನುಸ್ಮೃತಿ

2. ಬೃಹದಾರಣ್ಯಕೋಪನಿಷತ್ 2–4–10. ಪರಮಾತ್ಮನ ನಿಃಶ್ವಾಸದಂತೆ ಇರುವ ಋಗ್ವೇದವೇ ಮೊದಲಾದವುಗಳು.......

3. ವೇದಗಳು ಯಾರ ಉಸಿರಿನಂತೆ ಇವೆಯೋ, ಯಾರು ವೇದಗಳಿಂದಲೇ ಜಗತ್ತನ್ನು ಸೃಜಿಸಿದನೋ, ಅಂತಹ ವಿದ್ಯಾತೀರ್ಥಸ್ವರೂಪಿಯಾದ ಮಹೇಶ್ವರನನ್ನು ನಮಿಸುತ್ತೇನೆ.

—ಸಾಯಣಭಾಷ್ಯದ ಮಂಗಲಶ್ಲೋಕ

4. ಲಕ್ಷ್ಮೀಸಹಸ್ರ—ತಾಯಿ, ಅತ್ಯಂತ ಪುರಾತನವಾದ ಮಾತುಗಳಾದ ವೇದಗಳಿಗೂ ನಿನ್ನ ಮಹಿಮೆಯು ತಿಳಿಯದು.

5. ಹಯಾಸ್ಯಸ್ತುತಿ—ಹಯಗ್ರೀವದೇವನೇ..... ವೇದಗಳ ಸಾರವೇ ನೀನಾಗಿರುವೆ.



ಯಸ್ತಿತ್ಯಾಜ ಸಖಿವಿದಗ್ಂ ಸಖಾಯಮ

ನ ತಸ್ಯ ವಾಚ್ಯಪಿ ಭಾಗೋ ಅಸ್ತಿ । [1]

ಕರುಣಾಮೂರ್ತಿಯಾದ ಪರಮಾತ್ಮನನ್ನು ನಮ್ಮ ಬಳಿಗೆ ಬರಮಾಡುವ ಮತ್ತು ನಮ್ಮನ್ನು ಪರಮಾತ್ಮನ ಬಳಿಗೆ ಒಯ್ಯುವ ದಿವ್ಯರಥವು ವೇದವೇ. ಆದಕ್ಕೇ ಭಗವಂತನಿಗೆ ವಾಹನವಾಗಿರುವ ಗರುತ್ಮಂತನನ್ನೂ, ವೃಷಭರಾಜನನ್ನೂ ವೇದಮೂರ್ತಿ, ಧರ್ಮಮೂರ್ತಿಯೆಂದು ಕರೆಯುತ್ತಾರೆ.

ಸುಪರ್ಣೋಽಸಿ ಗರುತ್ಮಾನ್ ತ್ರಿವೃತ್ತೇ ಶಿರಃ । [2]

ಛಂದೋಮಯೇನ ಗರುಡೇನ ಸಮುಹ್ಯಮಾನಃ । [3]

ಶ್ರುತಿಮಯೋ ವಿಹಗಃ ಪರಿತಃ ಪ್ರಭುಂ ವ್ಯಚರದಾಶುವಿಧೂತನಿಶಾಚರಃ।[4]

ವೃಷಸ್ತು ಭಗವಾನ್ ಧರ್ಮಃ । [5]

ನಮ್ಮ ಸಂಸ್ಕೃತಿ, ನಾಗರಿಕತೆ, ಧರ್ಮ, ಆಚಾರ, ವ್ಯವಹಾರ, ವಿದ್ಯೆ, ಕಲೆ ಎಲ್ಲವೂ ವೇದಮೂಲವೇ ಆಗಿವೆ. ಆಯುರ್ವೇದ, ಧನುರ್ವೇದ, ಗಾಂಧರ್ವವೇದ [ಸಂಗೀತ], ಅರ್ಥಶಾಸ್ತ್ರಗಳು ಕ್ರಮವಾಗಿ ಋಕ್, ಯಜುಸ್, ಸಾಮ ಮತ್ತು ಅಥರ್ವವೇದಗಳನ್ನವಲಂಬಿಸಿ ಅವುಗಳಿಗೆ ಸಹಾಯಕವಾದ ಉಪವೇದಗಳೇ ಆಗಿವೆ. ಇಂತಹ ಅಮೂಲ್ಯಪದಾರ್ಥವಾದ ವೇದಗಳ ಪರಿಚಯ ಅತ್ಯಾವಶ್ಯಕ ವೆಂದು ಎಲ್ಲ ಪುರುಷಾರ್ಥಸಾಧಕರೂ ಹೇಳಲೇಬೇಕು" ಎನ್ನುತ್ತಾರೆ.

---

1. ತೈತ್ತಿರೀಯ ಆರಣ್ಯಕ ೧-೩-೧- ನಮಗೆ ಅತ್ಯಂತ ಆಪ್ತಗೆಳೆಯನಾಗಿ, ಗೆಳೆತನವನ್ನರಿತಿರುವ ವೇದವನ್ನು ತ್ಯಾಗ ಮಾಡಿದ ಕೃತಘ್ನನ ವಿಷಯವಾಗಿ ಮಾತನ್ನು ಕೂಡ ಆಡಬಾರದು.

2. ತೈತ್ತಿರೀಯ ಸಂಹಿತೆ ೪-೧-೪೨.

3. ಶ್ರೀಮದ್ಭಾಗವತ—ವೇದಮಯನಾದ ಗರುಡನಿಂದ ಒಯ್ಯಲ್ಪಡುವ........

4. ಯಾದವಾಭ್ಯುದಯ—ರಾಕ್ಷಸರನ್ನು ದೂರಮಾಡುತ್ತಾ ವೇದಮಯನಾದ ಗರುಡನು ಭಗವಂತನ ಸುತ್ತಲೂ ಸಂಚರಿಸಿದನು.

5.ಮನುಸ್ಮೃತಿ—ಭಗವಾನ್ ಧರ್ಮವು ವೃಷಭರೂಪಿಯಾಗಿದೆ.



## ಪುರುಷಾರ್ಥಸಿದ್ಧಿಯ ನೈಜ ದಾರಿ

"ನೀವು ಹೇರಳವಾಗಿ ಶಾಸ್ತ್ರವಾಕ್ಯಗಳನ್ನು ಉದ್ಧರಿಸಿದಿರಿ. ಇದರಿಂದ ನಿಮ್ಮ ಪುಸ್ತಕಜ್ಞಾನ ಪ್ರಕಟವಾಯಿತು. ಆದರೆ ನೀವು ಹೇಳಿದ ಶಾಸ್ತ್ರವಚನಗಳಿಂದ ಪುರುಷಾರ್ಥಸಿದ್ಧಿ ಉಂಟಾಗಲಿಲ್ಲವಲ್ಲಾ" ಎಂದರೆ, ವೇದಶಾಸ್ತ್ರವಚನಗಳನ್ನು ಉದ್ಧರಿಸಿದರೆ ಪುರುಷಾರ್ಥಸಿದ್ಧಿಯಾಗುತ್ತದೆಯೆಂದು ನಾವು ಹೇಳಿಲ್ಲ. ಶಾಸ್ತ್ರ ವಚನಗಳೂ ಅದನ್ನು ಹೇಳಿಲ್ಲ. ವೈದಿಕಕರ್ಮಗಳನ್ನು ವಿಧಿಪೂರ್ವಕವಾಗಿ ಅನುಷ್ಠಾನ ಮಾಡಬೇಕು, ಮಂತ್ರಾರ್ಥಜ್ಞಾನವಿರಬೇಕು. ಕರ್ಮಗಳ ಮರ್ಮವನ್ನರಿತು ಚಿತ್ತಶುದ್ಧಿಯಾಗುವಂತೆ, ಭಗವತ್ಪ್ರೀತಿ ಉಂಟಾಗುವಂತೆ ಅವುಗಳನ್ನು ಆಚರಿಸಿದರೆ ನಿಜವಾಗಿಯೂ ಯಥೋಕ್ತವಾದ ಫಲಸಿದ್ಧಿ ಉಂಟಾಗುತ್ತದೆ. ಕರ್ಮಗಳನ್ನು ಆಚರಿಸುವವನು 'ಯಃ ಶುಚಿಃ ಪ್ರಯತೋ ಭೂತ್ವಾ' ಎಂಬಂತೆ ಶುಚಿಯಾಗಿರಬೇಕು, ಸಂಯಮಿಯಾಗಿರಬೇಕು. ವಿಧಿಗೆ ಲೋಪ ಬರದಂತೆ ಕರ್ಮವನ್ನು ಆಚರಿಸಬೇಕು. ಇವುಗಳಲ್ಲಿ ಯಾವ ಒಂದು ಭಾಗ ಊನವಾದರೂ ಫಲಸಿದ್ಧಿಯಾಗುವುದಿಲ್ಲ. ಅವಿಧಿಪೂರ್ವಕವಾಗಿ, ಅಶುಚಿಯಾಗಿ, ಅಶ್ರದ್ಧೆಯಿಂದ ಕರ್ಮವನ್ನು ಡಂಭಾಚಾರವಾಗಿ ಆಚರಿಸಿ ಫಲಹಾನಿ ಮಾಡಿಕೊಂಡವರು ಶಾಸ್ತ್ರವಾಕ್ಯಗಳನ್ನು ದೂರಿದರೆ ಅದು ಅವರ ಅವಿವೇಕ. ಶಾಸ್ತ್ರಗಳು ಹೇಳಿರುವ ಫಲಗಳು ಮನಸ್ಸಿನ ಮೋದಕಗಳಲ್ಲ. ಅವುಗಳನ್ನು ಅನುಭವಿಸಿದವರು ಆ ವಾಕ್ಯಗಳನ್ನು ಹೇಳಿದ್ದಾರೆ. ನಿಯಮಪೂರ್ವಕವಾಗಿ, ಶಾಸ್ತ್ರೀಯವಾಗಿ ವೈದಿಕಕರ್ಮಗಳನ್ನು ಅವುಗಳಿಗೆ ಅಧಿಕಾರಿಗಳಾದವರು ಆಚರಿಸಿದರೆ ಫಲಸಿದ್ಧಿ ಆಗಿಯೇ ಆಗುತ್ತದೆ. ಕೆಲವರಿಗೆ ಫಲಸಿದ್ಧಿ ಶೀಘ್ರವಾಗಿ ಆಗಬಹುದು. ಕೆಲವರಿಗೆ (ಹೆಚ್ಚು ಪ್ರತಿಬಂಧಕ ಇರುವವರಿಗೆ) ನಿಧಾನವಾಗಿ ಆಗಬಹುದು.

ಎಲ್ಲ ಪುರುಷಾರ್ಥಗಳ ಫಲವು ಆನಂದ, ಶಾಂತಿ. ಅಂತಹ ಆನಂದ, ಶಾಂತಿಗಳನ್ನು ಅನುಭವಿಸಿದವರು ಹಿಂದೆ ಇದ್ದರು, ಇಂದೂ ಇದ್ದಾರೆ, ಮುಂದೆಯೂ ಇರುವರು. ಏಕೆಂದರೆ ಅದು ಸಾರ್ವಭೌಮಸತ್ಯ.

"ನಾನು ಪರಮಾನಂದಮಯನಾದ ಆ ಪರಮಪುರುಷನನ್ನು ಕಂಡಿದ್ದೇನೆ (ಅನುಭವದಿಂದ ತಿಳಿದಿದ್ದೇನೆ). ನಾನು ಧನ್ಯನಾದೆನು. ವರ್ಣಿಸಲು ಅಸದಳವಾದ ಪರಮಾನಂದ ನನ್ನದಾಗಿದೆ. ಅದು ಎಂದಿಗೋ ಉಂಟಾಗುವುದೆಂಬ ಕೇವಲ ಭರವಸೆಯ ವಿಷಯವಲ್ಲ. ಈಗಲೇ ನಾನು ಅನುಭವಿಸಿದ್ದೇನೆ. ನನ್ನ ಆತ್ಮನು ನಿತ್ಯನಾದುದರಿಂದ ಅವನ ಸಹಜಾನಂದದ ನಿತ್ಯಾನುಭವವೂ ನನಗೆ ಇರುತ್ತದೆ. ನಾನು ತಪ್ಪು ಕಲ್ಪನೆಯ ಸುರುಳಿಯನ್ನು ಹೇಳುತ್ತಿಲ್ಲ. ಸುಳ್ಳು ಹೇಳುತ್ತಿಲ್ಲ. ಸತ್ಯ, ಸತ್ಯ, ಮತ್ತೆ ಸತ್ಯ ಎಂದು ತೋಳುಗಳನ್ನು ಮೇಲೆತ್ತಿ ಘೋಷಿಸುತ್ತಿದ್ದೇನೆ" ಎಂಬ



ಜ್ಞಾನಿಗಳ ಅನುಭವದ ನುಡಿಗಳನ್ನು ಆ ಕ್ಷೇತ್ರದಲ್ಲಿ ಸಾಧನೆಯನ್ನೇ ಮಾಡದ ಜನ ಅಲ್ಲಗಳೆದರೆ ಅದು ಸತ್ಯಕ್ಕೆ ಅಪಚಾರ.

ನೋಡಿ! ಅನುಭವಿಗಳ ಅನುಭವದ ಸತ್ಯವಾಣಿಯನ್ನು!

ವೇದಾಹಮೇತಂ ಪುರುಷಂ ಮಹಾನ್ತಮ್ ।

ಆದಿತ್ಯವರ್ಣಂ ತಮಸಸ್ತು ಪಾರೇ ॥[1]

ಅಪಶ್ಯಮಹಮೇತಾನ್ ಸಪ್ತ ಸೂರ್ಯಾನಿತಿ । [2]

ಅಸ್ತಿ ಗಾರ್ಗಿ ಪರಮಾರ್ಥಮಿದಂ ತತ್ ಪಶ್ಯ ಪಶ್ಯ ಮನಸಾ ಶಿವರೂಪಮ್।[3]

ತಮೇವಂ ವಿದ್ವಾನಮೃತ ಇಹ ಭವತಿ । [4]

ಇಹ ಚೇದವೇದೀದಥ ಸತ್ಯಮಸ್ತಿ । [5]

ಇಂತಹ ಅನುಭವರಸಾಯನಕ್ಕೆ* ಪರಮಸಾಧನವಾಗಿರುವ ವೇದಗಳ ಪರಿಚಯ ಅತ್ಯಂತ ಆವಶ್ಯಕ ಎಂದು ವೈದಿಕಮಾರ್ಗದ ಸಾಧನೆಯಲ್ಲಿರುವವರು ಸ್ಪಷ್ಟವಾಗಿ ಸಾರುತ್ತಾರೆ.

---

*ಅನುಭವಿಗಳೂ ಎಂದೂ ಸುಳ್ಳಾಡರು.

"ಪುನ್ನೆಂದುರೈಯೇನ್ ಪೊಯ್ ಪುಹುಲೇನ್, ಸತ್ತಿಯುಂ ಶೊಲ್ಲುಹಿನ್ರೇನ್ ॥

ಜ್ಯೋತಿ ರಾಮಲಿಂಗ—ನಾನು ಕಲ್ಪಿಸಿ ಹೇಳುತ್ತಿಲ್ಲ. ಅಸತ್ಯವನ್ನು ಹೇಳುತ್ತಿಲ್ಲ. ಅನುಭವ ಸತ್ಯವನ್ನು ಸಾರುತ್ತಿದ್ದೇನೆ.

1. ತೈ-ಆ. ೩-೧೨-೩೯—ಈ ಮಹಾತ್ಮನಾದ ಪುರುಷನನ್ನು ನಾನು ಅನುಭವದಿಂದ ತಿಳಿದಿದ್ದೇನೆ. ಅವನು ಅಜ್ಞಾನವನ್ನು ಮೀರಿದ ಸ್ಥಾನದಲ್ಲಿ ಕಂಗೊಳಿಸುತ್ತಿದ್ದಾನೆ.

2. ತೈ .ಆ. ೧-೭-೨೧-ಈ ಸಪ್ತಸೂರ್ಯರನ್ನು ನಾನು ನೋಡಿದ್ದೇನೆ.

3. ಯೋಗಿ ಯಾಜ್ಞವಲ್ಕ್ಯ— ಓ ಗಾರ್ಗಿ! ಪರಮಾರ್ಥರೂಪ ಇದು! ನೋಡು ನೋಡು ಮಂಗಳವಾದ ರೂಪವನ್ನು!

4. ತೈ.ಆ. ೩-೧೩-೪೦— ಆ ಪರಮಾತ್ಮವಸ್ತುವನ್ನರಿತವನು ಇಲ್ಲಿಯೇ ಅಮೃತತ್ವ ವನ್ನು ಹೊಂದುತ್ತಾನೆ.

5. ಕೇನೋಪನಿಷತ್— ಆ ಪರಮಾತ್ಮವಸ್ತುವನ್ನು ಇಲ್ಲಿಯೇ ತಿಳಿದರೆ ಸತ್ಯವು ದೊರೆಯುವುದು.



ಹೀಗೆ ಅನುಭವಿಗಳ ಮಾತಿನಂತೆ ಕರ್ಮಗಳನ್ನನುಷ್ಠಿಸಿ ಚಿತ್ತಶುದ್ಧಿಯನ್ನು ಪಡೆದು ಎಲ್ಲ ಪುರುಷಾರ್ಥಗಳನ್ನು ಹೊಂದಲು ವೇದವು ನೈಜ ದಾರಿಯಾಗಿದೆ.

## ಲೌಕಿಕ ಜ್ಞಾನದ ಸ್ರೋತಕ್ಕಾಗಿ

"ಹಾಗಾದರೆ ವೈದಿಕಸಾಧನೆಯಲ್ಲಿರುವವರು ವೇದಗಳ ಪರಿಚಯ ಮಾಡಿಕೊಳ್ಳಲಿ. ಇತರ ವಿಚಾರವಂತರಿಗೆ ಅದರಿಂದ ಏನು ಪ್ರಯೋಜನ? ಅವರು ಅದನ್ನು ಏಕೆ ಪರಿಚಯ ಮಾಡಿಕೊಳ್ಳಬೇಕು?" ಎಂದರೆ, ಇತರ ದೃಷ್ಟಿಗಳಿಂದಲೂ ವೇದಗಳ ಪರಿಚಯ ಆವಶ್ಯಕ ಎಂದು ಆಧುನಿಕ ವಿಚಾರವಂತರು ಹೇಳುತ್ತಾರೆ.

"ವೇದಗಳಲ್ಲಿ ಪಂಚತಂತ್ರ, ದಶಕುಮಾರಚರಿತೆ ಮುಂತಾದವುಗಳಲ್ಲಿರುವಂತೆ ನೀತಿಕಥೆಗಳು, ಚಮತ್ಕಾರದ ಕಥೆಗಳು ಇವೆಯೇ? ಕಾಳಿದಾಸ, ಭವಭೂತಿ, ಭಾರವಿ, ಮಾಘ, ಬಾಣ ಮುಂತಾದ ಕವಿಪುಂಗವರ ಕಾವ್ಯಗಳಿಗೆ ಸತ್ತ್ವವನ್ನೂ, ಕಾಂತಿಯನ್ನೂ ತಂದಿರುವ ರಸ, ಅಲಂಕಾರ, ರೀತಿ, ವರ್ಣನೆ, ಚರಿತ್ರಚಿತ್ರಣ ಮುಂತಾದ ಕಾವ್ಯಯೋಗ್ಯತಾಸಂಪತ್ತು ಇದೆಯೇ? ಕಪಿಲ, ಕಣಾದ, ಗೌತಮ, ಜೈಮಿನಿ, ಪತಂಜಲಿ, ಬಾದರಾಯಣರೇ ಮುಂತಾದ ಮಹಾತ್ಮರ ಕೃತಿಗಳಿಗೆ ಜೀವಾತುವಾಗಿರುವ ದಾರ್ಶನಿಕ ವಿಚಾರಗಾಂಭೀರ್ಯ ಇದೆಯೇ? ಅರ್ಥಶಾಸ್ತ್ರ, ಇತಿಹಾಸವೇ ಮುಂತಾದ ಲೋಕವಿಜ್ಞಾನವಿದೆಯೇ?" ಎಂದರೆ ನೀವು ಅಪೇಕ್ಷಿಸುವ ಪ್ರಮಾಣದಲ್ಲಿ ಅವು ಇಲ್ಲದಿದ್ದರೂ ಅವೆಲ್ಲದರ ಮೂಲವು ವೇದದಲ್ಲಿದೆಯೆಂದು ಧಾರಾಳವಾಗಿ ಹೇಳಬಹುದು. ವೇದದಲ್ಲಿ ಅಶ್ವಿನೀದೇವತೆಗಳು, ಉಷೋದೇವತೆ ಮುಂತಾದವರ ಕಥೆಗಳಲ್ಲಿ ಸರಸ್ವತೀದೇವಿಯು ಹೆಮ್ಮೆಪಡುವಂತಹ ಕಾವ್ಯಾಂಶಗಳಿವೆ. ಭರದ್ವಾಜ, ನಚಿಕೇತ ಮುಂತಾದವರ ರಮಣೀಯ ತಮವಾದ ಕಥಾಮೃತ ರಸನಿಷ್ಯಂದವಿದೆ. ಪುರುಷಸೂಕ್ತ, ಸೃಷ್ಟಿಸೂಕ್ತ ಮುಂತಾದವುಗಳು ದಾರ್ಶನಿಕ ರಹಸ್ಯಗಳ ನಿಧಿಗಳಾಗಿವೆ. ವೇದಗಳೇ ಪ್ರಾಚೀನತಮವಾದುದರಿಂದ ನಂತರದ ಕಾವ್ಯ, ಕಥೆ, ದರ್ಶನ, ವಿದ್ಯಾಗ್ರಂಥಗಳೆಲ್ಲವೂ ತಮಗೆ ವೇದಗಳೇ ಮೂಲವೆಂದು ಸಾರಿಕೊಳ್ಳುತ್ತಿರುವಾಗ, ನಾವು ಆ ಬಗ್ಗೆ ಅಪಲಾಪ ಮಾಡಬಾರದು. ವೇದಗಳ ಗುರುತುಗಳು ಅವುಗಳಲ್ಲಿ ಇದ್ದೇ ಇವೆಯೆಂಬುದು ಸಂಶೋಧಕರಿಗೆ ಸ್ಪಷ್ಟವಾಗಿ ತಿಳಿಯುತ್ತದೆ. ಆಯಾ ವಿದ್ಯೆ ಮತ್ತು ಕಲಾಗ್ರಂಥಗಳಲ್ಲಿ ಅವುಗಳನ್ನು ಪರಿಶೀಲಿಸಿ ತಿಳಿಯಬೇಕು. ಉದಾಹರಣೆಗೆ ಸಂಗೀತವು ತನ್ನನ್ನು 'ಗಾಂಧರ್ವವೇದ' ಎಂದು ಕರೆದುಕೊಳ್ಳುತ್ತದೆ. ವೈದ್ಯಶಾಸ್ತ್ರವು 'ಆಯುರ್ವೇದ' ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿದೆ. 'ವೈದಿಕ ಗಣಿತ' [Vedic Mathematics] ಎಂಬ ಪ್ರಸಿದ್ಧವಾದ ಗ್ರಂಥವು ಪರಿಶೀಲನೆಗೆ ಯೋಗ್ಯವಾಗಿದೆ. ಹೀಗೆ ಕಥೆಗಳಿಂದ ಮೊದಲ್ಗೊಂಡು ದರ್ಶನದವರೆಗಿನ ಸರಳ-ಗಂಭೀರ ವಿಷಯಗಳು ವೇದದಲ್ಲಿದ್ದು ವೇದವು ಲೌಕಿಕ ಜ್ಞಾನದ ಸ್ರೋತವೂ ಆಗಿದೆ.



## ಸಂಪ್ರದಾಯದ ನೆಲೆ-ಆಧುನಿಕದ ಸೆಲೆ

ವೈದಿಕರು ಹೇಳುವ ಸ್ವರ್ಗ, ಮೋಕ್ಷ ಇತ್ಯಾದಿಗಳಿಗಾಗಿ ವೇದದ ಪರಿಚಯ ಆವಶ್ಯಕವಲ್ಲದಿದ್ದರೂ ಇತರ ಕೆಲವು ಕಾರಣಗಳಿಗಾಗಿ ಅದು ಅತ್ಯಂತ ಆವಶ್ಯಕವೆಂದು ಆಧುನಿಕರು ಒಪ್ಪುತ್ತಾರೆ. ಆ ಕಾರಣಗಳು ಹೀಗಿವೆ.

೧. ವೇದವು ಪ್ರಪಂಚದ ಪ್ರಾಚೀನತಮವಾದ ಸಾಹಿತ್ಯ. ನಮ್ಮ ಪೂರ್ವಜರಾದ ಹಿಂದೂ ಆರ್ಯರ ಬಗ್ಗೆ ದೊರೆತಿರುವ ಪ್ರಾಚೀನತಮವಾದ ದಾಖಲೆ. ಆ ಅತ್ಯಂತ ಪ್ರಾಚೀನಕಾಲದ ಬಗೆಗೆ ಶಿಲಾಶಾಸನ, ನಾಣ್ಯ, ಭೂಗರ್ಭದಲ್ಲಿ ಹುದುಗಿರುವ ಅವಶೇಷ ಮುಂತಾದ ಬೇರೆ ಯಾವ ಪ್ರಮಾಣವೂ ದೊರೆತಿಲ್ಲವಾಗಿ, ವೇದವನ್ನು ಬಿಟ್ಟರೆ ಬೇರಾವ ಗ್ರಂಥವೂ ಆ ವಿಷಯದಲ್ಲಿ ನಮಗೆ ಪ್ರಕಾಶ ನೀಡಲಾರದು.

"ಹಾಗಾದರೆ ಪುರಾತತ್ತ್ವ ಸಂಶೋಧಕರು [Archaeologists] ವೇದಗಳ ಪರಿಚಯ ಮಾಡಿಕೊಳ್ಳಲಿ. ಇಂದಿನ ಚರಿತ್ರೆಯ ಜ್ಞಾನಕ್ಕೆ ಅದರಿಂದ ಏನು ಉಪಯೋಗ? ಭಾರತೀಯವಾದ ಇತರ ವಿದ್ಯಾಶಾಖೆಗಳ ವಿದ್ಯಾರ್ಥಿಗಳು ಅದನ್ನು ಯಾಕೆ ವಿಚಾರ ಮಾಡಬೇಕು?" ಎಂದರೆ,

೨. "ಭಾರತೀಯರ ಮನೋಧರ್ಮವು ಈಗಲೂ ಮೌಲಿಕವಾಗಿ ಅನೇಕ ವಿಷಯಗಳಲ್ಲಿ ವೇದಗಳ ಕಾಲದಲ್ಲಿ ಇದ್ದಂತೆಯೇ ಇದೆ. ಭಾರತೀಯರ ಜೀವನ, ರುಚಿ ಮತ್ತು ಮನೋಧರ್ಮ ಇವೆಲ್ಲದರ ಒಳ ಧರ್ಮ ಯಾವುದು? ಎಂದರೆ ವೇದವೆಂದೇ ಹೇಳಬೇಕು. ನಮ್ಮ ಜೀವನದ ಪ್ರತಿಯೊಂದು ವಿಭಾಗದ ಮೇಲೂ ವೇದದ ಪ್ರಭಾವ ಇದ್ದೇ ಇದೆ. ನಮ್ಮ ಧರ್ಮ, ದರ್ಶನ, ರೀತಿ, ನೀತಿ, ನಡವಳಿಕೆ, ಆಚಾರ, ವಿಚಾರ, ಸಮಾಜ, ಸಾಹಿತ್ಯ ಎಲ್ಲವನ್ನೂ ಅದು ಒಳಹೊಕ್ಕಿದೆ. ಪಾರಮಾರ್ಥಿಕಜ್ಞಾನ ಮತ್ತು ಪ್ರಾಪಂಚಿಕಜ್ಞಾನ ಎಲ್ಲವೂ ವೇದಪ್ರಭಾವದಿಂದಲೇ ಹೊರಹೊಮ್ಮಿದೆ. ಆದುದರಿಂದ ಭಾರತೀಯ ಮನೋಧರ್ಮದ ಸಮಗ್ರ ಪರಿಚಯವು ಸಾಮಯಿಕವಾದುದರಿಂದ ಇತರ ವಿದ್ಯಾಶಾಖೆಗಳ ವಿದ್ಯಾರ್ಥಿಗಳೂ ವೇದವನ್ನು ಕುರಿತು ವಿಚಾರ ಮಾಡಬೇಕು."

೩. ಭಾರತೀಯರ ಪುರಾತನ ಮತ್ತು ಆಧುನಿಕ ಇತಿಹಾಸವನ್ನು ತಿಳಿಯುವುದಕ್ಕೆ ಮಾತ್ರವಲ್ಲದೆ, ಪ್ರಪಂಚದ ಇತಿಹಾಸವನ್ನು ತಿಳಿಯುವುದಕ್ಕೂ ವೇದದ ಪರಿಚಯವು ಅತ್ಯಾವಶ್ಯಕವಾಗಿದೆ. ಈ ವಿಷಯದಲ್ಲಿ ವಿದೇಶೀಯ ವಿದ್ವಾಂಸ ಮ್ಯಾಕ್ಸ್ ಮುಲ್ಲರ್ (Max Muller) ಅದರ ಪ್ರಾಮುಖ್ಯವನ್ನು ಹೀಗೆ ಕೊಂಡಾಡಿದ್ದಾನೆ:



## ಆಧುನಿಕ ವಿದ್ವಾಂಸರ ಮನ್ನಣೆ

In the history of the world, the Veda fills a gap which no literary work in any other language could fill. It carries us back to times of which we have no records anywhere, and gives us the very words of a generation of men of whom otherwise we could form but the vaguest estimate by means of conjectures and inferences. As long as man continues to take an interest in the history of his race, and as long as we collect in libraries & museums the relics of former ages, the first place of that long row of books - which contain the record of the Aryan branch of mankind, will belong for ever to the Rgveda.

ಪ್ರಪಂಚದ ಚರಿತ್ರೆಯಲ್ಲಿ ಯಾವ ಭಾಷೆಯ ಸಾಹಿತ್ಯದ ಕೃತಿಯೂ ತುಂಬಲಾಗದ ಶೂನ್ಯವನ್ನು ವೇದವು ತುಂಬಿಕೊಡುತ್ತದೆ. ಅದು ಬೇರೆ ಯಾವ ದಾಖಲೆಯೂ, ಎಲ್ಲಿಯೂ ದೊರೆಯಲಾರದಷ್ಟು ಪ್ರಾಚೀನಕಾಲಕ್ಕೆ ನಮ್ಮನ್ನು ಒಯ್ಯುತ್ತದೆ. ನಾವು ಯಾವ ವಿಷಯದಲ್ಲಿ ಕೇವಲ ಕಲ್ಪನೆ ಮತ್ತು ಊಹೆಗಳನ್ನು ಮಾಡಿಕೊಳ್ಳಬೇಕಾಗಿತ್ತೋ; ಅಂತಹ ಮಾನವಪೀಳಿಗೆಯು ಸಾಕ್ಷಾತ್ತಾಗಿ ಆಡುತ್ತಿದ್ದ ಶಬ್ದಗಳನ್ನೇ ನಮಗೆ ಕೊಡುತ್ತದೆ. ಎಲ್ಲಿಯವರೆಗೆ ಮಾನವನು ತನ್ನ ಜನಾಂಗದ ಚರಿತ್ರೆಯ ಬಗ್ಗೆ ಆಸಕ್ತಿಯನ್ನು ವಹಿಸುವನೋ ಮತ್ತು ಎಲ್ಲಿಯವರೆಗೆ ನಾವು ಗ್ರಂಥಾಗಾರಗಳಲ್ಲಿ ಮತ್ತು ವಸ್ತುಪ್ರದರ್ಶನಾಲಯಗಳಲ್ಲಿ ಪುರಾತನಕಾಲದ ದಾಖಲೆಗಳನ್ನು ಸಂಗ್ರಹಿಸುವೆವೋ, ಅಂತಹ ಪುಸ್ತಕಗಳ ಸಾಲಿನಲ್ಲಿ ಆರ್ಯಜನಾಂಗದ ದಾಖಲೆಗಳ ಪೈಕಿ ಋಗ್ವೇದಕ್ಕೆ ಮೊದಲ ಸ್ಥಾನವು ಯಾವಾಗಲೂ ಇರುತ್ತದೆ.

೪. ಭಾಷಾಶಾಸ್ತ್ರದ (ಫಿಲಾಲಜಿ) ದೃಷ್ಟಿಯಿಂದ ವೇದದ ಪರಿಚಯ ಇನ್ನೂ ಹೆಚ್ಚು ಆವಶ್ಯಕವಾಗಿದೆ. ಈ ಭಾಷಾಶಾಸ್ತ್ರದ ಅಧ್ಯಯನ ಪ್ರಪಂಚದಲ್ಲಿ ಸ್ಪಷ್ಟವಾಗಿ ಬೆಳೆದು ಬಂದಿರುವುದು ಹತ್ತೊಂಬತ್ತನೇ ಶತಮಾನದಿಂದಲೇ. ಅದಕ್ಕೆ ಹಿಂದೆ ಆ ಬಗ್ಗೆ ಮಾಡಿದ ಸಂಶೋಧನೆಯು ಅತ್ಯಲ್ಪ ಮತ್ತು ಆ ಸಂಶೋಧನೆಯು ಅಮುಖ್ಯವಾಗಿತ್ತು. ಅಲ್ಲದೆ ಕೇವಲ ಸಂಶಯಾತ್ಮಕಮತಗಳಿಂದ ಕೂಡಿತ್ತು. ಗಮನಕ್ಕೆ ಬಂದಿದ್ದ ವಿಷಯಗಳು ಅಲ್ಪವಾಗಿದ್ದುದು ಮಾತ್ರವಲ್ಲದೆ ಆಗ ವಿದ್ವಾಂಸರು ವಿಷಯವನ್ನು ಗಮನಿಸುವ ದೃಷ್ಟಿಯೂ ದೋಷಪೂರ್ಣವಾಗಿತ್ತು. ವಿಜ್ಞಾನದ ಬೆಳವಣಿಗೆಗೆ ಅತ್ಯಂತ ಆವಶ್ಯಕವಾದ ಶುದ್ಧವೂ, ಉದಾರವೂ ಆದ ವಿಚಾರಪ್ರವೃತ್ತಿಯನ್ನು ಸಂಕುಚಿತ ರಾಷ್ಟ್ರೀಯಭಾವನೆ ಆವರಿಸಿಬಿಟ್ಟಿತ್ತು.



ಪ್ರತಿಯೊಂದು ದೇಶದವರೂ ತಮ್ಮ ತಮ್ಮ ದೇಶಭಾಷೆಯೇ ಪ್ರಪಂಚದ ಮಾತೃ ಭಾಷೆಯೆಂದು ಭಾವಿಸಿ ಇತರ ಭಾಷೆ, ಉಪಭಾಷೆಗಳೊಡನೆ ಅದನ್ನು ಹೋಲಿಸಿ ನೋಡುತ್ತಿದ್ದರು. ಉದಾಹರಣೆಗೆ ಯೂರೋಪಿನ ಎಲ್ಲಾ ಭಾಷೆಗಳಿಗೂ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳೇ ಪ್ರಾಚೀನತಮವಾದ ಮೂಲಭಾಷೆ ಎಂದು ಇತ್ತೀಚಿನ ವರೆಗೂ ವಿದ್ವಾಂಸರು ನಂಬಿದ್ದರು. ಆದರೆ ಕಳೆದ ಶತಮಾನದಲ್ಲಿ ಧೀಮಂತರು ಯೂರೋಪಿನ ಪ್ರಧಾನಭಾಷೆಗಳನ್ನು ಪರಸ್ಪರ ತೋಲನೆ ಮಾಡಿದ್ದಲ್ಲದೇ, ನೈಋತ್ಯ ಏಷ್ಯಾದ ಭಾಷೆಗಳೊಡನೆಯೂ ಹೋಲಿಕೆ ಮಾಡಿ ನಿರಂತರ ಸಂಶೋಧನೆ ನಡೆಸಿದ್ದರ ಪರಿಣಾಮವಾಗಿ "ಇಂಡೋ ಯುರೋಪಿಯನ್" (Indo European) ಎಂಬ ಭಾಷಾಕುಟುಂಬ ಅವರ ಪರಿಚಯಕ್ಕೆ ಬಂದಿತು. ಆಗ ಸಂಸ್ಕೃತಭಾಷೆಯ ಅತಿ ಪ್ರಾಚೀನತೆಯನ್ನು ಅವರು ಮನಗಂಡಿದ್ದರಿಂದ ಅವರ ಭಾಷಾಶಾಸ್ತ್ರದ ಅಧ್ಯಯನದಲ್ಲಿ ಹೊಸ ಅಧ್ಯಾಯವೇ ಪ್ರಾರಂಭವಾದಂತಾಯಿತು. ವಿಟ್ನೆ(WHITNEY) ಎಂಬ ಆಧುನಿಕ ಪಾಶ್ಚಾತ್ಯವಿದ್ವಾಂಸ ಅದನ್ನು ಹೀಗೆ ಗಮನಿಸುತ್ತಾನೆ.

No Single circumstance more powerfully aided the onward movement than the introduction to the Western scholars of Sanskrit, the ancient and sacred dialcet of India. Its exceeding age, its remarkable conservation of primitive material and forms, its unequalled transparency of structure give it an indisputable right to the first place among the tongues of the Indo European family. Upon their comparison already fruitfully begun, it cast a new and welcome light displaying clearly their hitherto obscure relation rectifying their doubtful etymologies, illustrating the laws of research which must be followed in study, and in that of all other dialects.

ಸೇಸಿ (SASEY) ಎಂಬ ಪಂಡಿತನೂ ಇದೇ ಅಭಿಪ್ರಾಯ ಪಡುತ್ತಾನೆ. What had been termed the discovery of Sanskrit by Western scholars, put an end to all this fanciful playing with words and created the Science of language.

ಪಾಶ್ಚಾತ್ಯ ವಿದ್ವಾಂಸರು "ಸಂಸ್ಕೃತದ ಶೋಧನೆ" ಎಂಬುದನ್ನು ಮಾಡಿದ ನಂತರ ಆ ಶೋಧನೆಯು ಶಬ್ದಗಳೊಡನೆ ಪಾಶ್ಚಾತ್ಯ ವಿದ್ವಾಂಸರು ಮಾಡುತ್ತಿದ್ದ ಹಾಸ್ಯಾಸ್ಪದವಾದ ಆಟಗಳಿಗೆ ಮುಕ್ತಾಯ ಹಾಡಿತು ಮತ್ತು ಭಾಷೆಯ ವಿಜ್ಞಾನವನ್ನು ಆರಂಭಿಸಿತು.



ಪಾಶ್ಚಾತ್ಯ ವಿದ್ವಾಂಸರಿಗೆ ಭಾರತದ ಅತ್ಯಂತ ಪ್ರಾಚೀನ ಮತ್ತು ಪವಿತ್ರಭಾಷೆಯಾದ ಸಂಸ್ಕೃತದಲ್ಲಿ ಪ್ರವೇಶ ಉಂಟಾಗುವುದಕ್ಕಿಂತ ಹೆಚ್ಚು ಪ್ರಭಾವಪೂರ್ಣವಾಗಿ ಬೇರಾವ ಏಕಮಾತ್ರ ಸನ್ನಿವೇಶವೂ ಅವರ ಭಾಷಾವಿಜ್ಞಾನದ ಮುನ್ನಡೆಗೆ ಸಹಾಯ ಮಾಡಲಿಲ್ಲ. ಆ ಭಾಷೆಯ ಪ್ರಾಚೀನತಮವಾದ ಕಾಲ, ಅದರ ಅಸಮಾನವಾದ ಪಾರದರ್ಶಕತೆಯನ್ನು ಹೊಂದಿರುವಿಕೆ— ಇವುಗಳು ಅದಕ್ಕೆ ಹಿಂದೂ-ಐರೋಪ್ಯ ಭಾಷೆಗಳ ಕುಟುಂಬದಲ್ಲಿ ಯಾರೂ ಸವಾಲು ಹಾಕಲಾಗದ ಪ್ರಥಮಸ್ಥಾನವನ್ನು ಕೊಟ್ಟಿವೆ. ಅವುಗಳ ತುಲನಾತ್ಮಕಅಧ್ಯಯನವು ಸಫಲವಾಗಿ ಈಗಾಗಲೇ ಪ್ರಾರಂಭವಾದಾಗಿನಿಂದ ಅದು ಅವರ ಸಂಶೋಧನೆಯ ಮೇಲೆ ಒಂದು ಹೊಸದಾದ ಸ್ವಾಗತಕರವಾದ ಬೆಳಕನ್ನು ಚೆಲ್ಲಿತು. ಇಲ್ಲಿಯವರೆಗೂ ಅವರಿಗೆ ಮರೆಯಾಗಿದ್ದ ಭಾಷಾಸಂಬಂಧವನ್ನು ಪ್ರಕಾಶಪಡಿಸಿತು. ಅವರಿಗೆ ಸಂಶಯವಾಗಿ ಉಳಿದಿದ್ದ ಶಬ್ದನಿಷ್ಪತ್ತಿಗಳನ್ನು ಸರಿಪಡಿಸಿತು ಮತ್ತು ಮುಂದೆ ಮಾಡಬೇಕಾದ ಸಂಶೋಧನೆಯ ನಿಯಮಗಳಿಗೆ ಒಳ್ಳೆಯ ಉದಾಹರಣೆಗಳನ್ನು ನೀಡಿತು. ಉಳಿದ ಎಲ್ಲಾ ಉಪಭಾಷೆಗಳ ಅಧ್ಯಯನದ ಮೇಲೂ ಇದರ ಪರಿಣಾಮ ಬೀರಿತು.

ಹೀಗೆ ಸಂಸ್ಕೃತವು ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಿಗಿಂತಲೂ ಹೆಚ್ಚು ಪ್ರಾಚೀನವೆಂದೂ, ಶಕ್ತಿಸೌಂದರ್ಯಪೂರ್ಣವೆಂದೂ ಶೋಧಕರಾದ ವಿದ್ವಾಂಸರಿಗೆ ಮನವರಿಕೆಯಾಯಿತು. ಪಾಣಿನಿಯ ಸಂಸ್ಕೃತವೇ ಇಷ್ಟು ಪ್ರಾಚೀನವಾಗಿರುವಾಗ ಅಂತಹ ಸಂಸ್ಕೃತಕ್ಕೂ ಮೂಲವಾಗಿರುವ ವೈದಿಕಸಂಸ್ಕೃತ ಅದೆಷ್ಟು ಪುರಾತನ ವಾಗಿರಬೇಕು! ಅದರಿಂದ ತಾನೇ ಎಲ್ಲ ಭಾಷೆಗಳ ಉಗಮದ ವಿಚಾರವನ್ನು ಪ್ರಾರಂಭಿಸಬೇಕು! ಹೀಗೆ ಭಾಷಾಶಾಸ್ತ್ರದ ದೃಷ್ಟಿಯಿಂದಲೂ ವೇದಗಳ ಪರಿಚಯ ಅತ್ಯವಶ್ಯ.

೫. ಪ್ರಪಂಚದ ಪ್ರಾಚೀನ ಜನಾಂಗಗಳ ಪುರಾಣಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡುವುದಕ್ಕೂ ವೇದಗಳ ಪರಿಚಯ ಆವಶ್ಯಕವೇ ಆಗಿದೆ.

೬. ಇತ್ತೀಚೆಗೆ ಕೃತಕಮಸ್ತಿಷ್ಕವಿಜ್ಞಾನಕ್ಕೆ (Computer science) ಅತ್ಯಂತವಾಗಿ ಹೊಂದಿಕೆಯಾಗುವ ಭಾಷೆಯು ಸಂಸ್ಕೃತವೊಂದೇ ಆಗಿದೆಯೆಂದು ವಿಜ್ಞಾನದ ತಜ್ಞರು ಹೇಳುತ್ತಿದ್ದಾರೆ. ಇಂತಹ ಸಂಸ್ಕೃತಕ್ಕೂ ಮೂಲಭೂತವಾದ ವೈದಿಕಸಂಸ್ಕೃತಭಾಷೆಯಲ್ಲಿರುವ ವೇದಗಳ ಪರಿಚಯವು ಆ ವಿಜ್ಞಾನದ ದೃಷ್ಟಿಯಿಂದಲೂ ಆವಶ್ಯಕವೆಂದು ನಮಗೆ ತೋರುತ್ತದೆ.



## ಉದಾಸೀನ ಸಲ್ಲ

ಪುರುಷಾರ್ಥಪ್ರಾಪ್ತಿ, ಲೌಕಿಕಜ್ಞಾನ, ಸಾಹಿತ್ಯ, ಭಾಷೆ, ಇತಿಹಾಸ ಮುಂತಾದ ನಾನಾ ದೃಷ್ಟಿಗಳಿಂದ ವೇದಗಳ ಪರಿಚಯ ಸಂಪ್ರದಾಯನಿಷ್ಠರಿಗೂ, ಆಧುನಿಕ ವಿಚಾರಪರರಿಗೂ ಇಬ್ಬರಿಗೂ ಆವಶ್ಯಕವೆಂಬುದು ಸ್ಪಷ್ಟವಾಗಿದೆ. ಪಾಶ್ಚಾತ್ಯ ವಿದ್ವಾಂಸರೂ ಕೂಡ ವೇದಗಳ ಪರಿಚಯವನ್ನು ಪಡೆಯಲು ಪರಿಶ್ರಮವಹಿಸಿರುವಾಗ ವೈದಿಕಧರ್ಮಸಂಸ್ಕೃತಿಗಳಿಗೆ ನೆಲೆವೀಡಾದ ಭಾರತದವರಾದ ನಾವು ವೇದವನ್ನು ಉದಾಸೀನ ಮಾಡುವುದು ಅತ್ಯಂತ ನಾಚಿಕೆಗೇಡಿನ ವಿಷಯ.

ವೈದಿಕಸಾಹಿತ್ಯದಲ್ಲಿ ಬೇರೆಡೆ ಎಲ್ಲೂ ಇಲ್ಲದ ಒಂದಾನೊಂದು ಅದ್ಭುತವಾದ ವಿಶೇಷತೆ ಇದೆ. ಮಂತ್ರದ್ರಷ್ಟಾರರಾದ ಋಷಿಗಳು ಹಿಂದೆ ಯಾವ ಆನುಪೂರ್ವೀ,[1] (ಅಕ್ಷರಗಳು ಇರುವ ಕ್ರಮ) ಸ್ವರ, [2] (ಉದಾತ್ತ, ಅನುದಾತ್ತ, ಸ್ವರಿತ) ಮತ್ತು ಪದಪಾಠಗಳೊಡನೆ ವೇದವನ್ನು ಅಧ್ಯಯನ ಮಾಡುತ್ತಿದ್ದರೋ ಅದೇ ಆನುಪೂರ್ವೀ, ಸ್ವರ ಮತ್ತು ಪದಪಾಠಗಳೇ ನಮ್ಮ ಪರಂಪರೆಯಲ್ಲಿ ವಿಕೃತಗೊಳ್ಳದೇ ಈಗಲೂ ಮುಂದುವರೆದಿದೆ. ಪ್ರಸಿದ್ಧಮಂತ್ರವಾದ ಗಾಯತ್ರೀಮಂತ್ರವನ್ನು ಮಂತ್ರದ್ರಷ್ಟಾರರಾದ ವಿಶ್ವಾಮಿತ್ರಮಹರ್ಷಿಗಳು ಹೇಗೆ ಕಂಡರೋ ಹಾಗೆಯೇ ಇಂದೂ ಹೇಳಲ್ಪಡುವುದು ನಮಗೆ ತಿಳಿದ ವಿಷಯವೇ ಆಗಿದೆ. ಇಷ್ಟು ಪ್ರಾಮಾಣಿಕವೂ, ಅಪೂರ್ವವೂ ಆದ ವೇದವಾಙ್ಮಯದ ಪರಿಚಯದ ಬಗ್ಗೆ ಉದಾಸೀನ ಮಾಡಬಹುದೇ?

## ಏನು? ಹೇಗೆ?

ವೇದಗಳ ಪರಿಚಯವೆಂದರೇನು? ನಾವೆಲ್ಲರೂ ದೇವಸ್ಥಾನಗಳಲ್ಲಿಯೋ, ಮಠಗಳಲ್ಲಿಯೋ, ಪಾಠಶಾಲೆಗಳಲ್ಲಿಯೋ ಅಥವಾ ಪೂಜಾಸಮಾರಂಭಗಳಲ್ಲಿಯೋ ಮಂತ್ರಗಳನ್ನು ಕೇಳಿರುತ್ತೇವೆ. ಇದರಿಂದ ವೇದಗಳ ಪರಿಚಯವಾದಂತಾಯಿತೋ? ಖಂಡಿತಾ ಇಲ್ಲ. ವೇದಗಳ ಶಬ್ದವನ್ನು ನಾವು ಕಿವಿಯಿಂದ ಕೇಳಿದಂತಾಯಿತು. ವೇದದ ಶಬ್ದಗಳನ್ನು ಕೇಳುವಾಗ ಒಂದಾನೊಂದು ಅಪೂರ್ವ ಅನುಭವ ಆಗುತ್ತದೆ. ದಿವ್ಯತೆಯ ಅನುಭವ ಅದು. ಶಬ್ದದ ಶ್ರವಣವೇ ದಿವ್ಯತೆಯ ಪರಿಚಯವನ್ನು ಮಾಡಿಕೊಡುವುದಾದರೆ ಹತ್ತು ಹಲವು ಮುಖಗಳಿಂದ ವೇದಗಳನ್ನು ಚೆನ್ನಾಗಿ ಪರಿಚಯ ಮಾಡಿಕೊಂಡರೆ ಅದೆಷ್ಟು ಆನಂದವಾದೀತು!

---

1. ಅಗ್ನಿಮೀಳೇ ಎಂಬ ಮಂತ್ರವನ್ನು 'ಈಳೇ ಅಗ್ನಿಂ' ಎಂದಾಗಲೀ 'ವಹ್ನಿಂ ಈಳೇ' ಎಂದಾಗಲೀ ಹೇಳುವಂತಿಲ್ಲ.

2. ಮಂತ್ರವನ್ನು ಉಚ್ಚರಿಸುವಾಗ ಈ ಸ್ವರಗಳು ತಿಳಿದು ಬರುತ್ತವೆ. ಇದರ ವಿವರಣೆಯನ್ನು ಮುಂದೆ ನೀಡಲಾಗುವುದು.



ಆದ್ದರಿಂದ ಯಾವ ಯಾವ ಮುಖಗಳಿಂದ ವೇದಗಳನ್ನು ಪರಿಚಯ ಮಾಡಿಕೊಳ್ಳತಕ್ಕದ್ದಿದೆ? ವೇದ ಎಂದರೇನು? ವೇದಗಳಲ್ಲಿ ವಿಭಾಗಗಳೆಷ್ಟು? ವೇದಗಳಲ್ಲಿ ಎಷ್ಟು ಶಾಖೆಗಳಿವೆ? ಋಷಿ, ದೇವತಾ, ಛಂದಸ್ಸು ಎಂದರೇನು? ವೇದವನ್ನು ಏಕೆ ಅಪೌರುಷೇಯ (ಮನುಷ್ಯರು ಮಾಡಿದುದಲ್ಲ) ಎಂದು ಹೇಳುತ್ತೇವೆ? ಮಂತ್ರದ್ರಷ್ಟಾರರು ಎಂದರೇನು? ವೇದಕ್ಕೇ ಏಕೆ ಪ್ರಾಮಾಣ್ಯ? ಪ್ರಾಮಾಣ್ಯ ಎಂದರೇನು? ಈ ಬಗ್ಗೆ ಇರುವ ಆಕ್ಷೇಪ-ಸಮಾಧಾನಗಳೇನು? ವೇದಗಳ ಅಧ್ಯಯನಕ್ರಮ ಹೇಗೆ? ವೇದದ ಅರ್ಥಜ್ಞಾನ ಏಕೆ ಆವಶ್ಯಕ? ಈ ಅರ್ಥವನ್ನರಿಯಲು ಯಾವುದರ ಸಹಾಯ ಬೇಕು? ವೇದಾರ್ಥಗಳನ್ನು ತಿಳಿಯುವಾಗ ಪೂರ್ವಸಿದ್ಧತೆಗಳೇನು? ವೇದದ ಶಬ್ದ-ಅರ್ಥಗಳಿಗೂ, ಮಿಕ್ಕ ಶಬ್ದ-ಅರ್ಥಗಳಿಗೂ ವ್ಯತ್ಯಾಸವಿದೆಯೇ? ವೇದದ ಅರ್ಥವನ್ನು ತಿಳಿಸಲು ರಚಿತವಾದ ಭಾಷ್ಯಗಳು ಯಾವುವು? ವೇದಾಧಿಕಾರದ ರಹಸ್ಯವೇನು? ವೇದಕ್ಕೇ ನಮ್ಮ ರಾಷ್ಟ್ರಜೀವನದಲ್ಲಿ ಸಾರ್ವಭೌಮಸ್ಥಾನ ಏಕೆ? ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ನಾವು ನಿರ್ವಿಕಾರ ಮನಸ್ಸಿನಿಂದ ಚೆನ್ನಾಗಿ ಪರಿಶೀಲಿಸಿದರೆ ವೇದಗಳ ಪರಿಚಯ ಮಾಡಿಕೊಂಡಂತಾಗುತ್ತದೆ. ಈ ಎಲ್ಲಾ ಅಂಶಗಳನ್ನೂ ನಮ್ಮ ಪೂರ್ವಿಕರು ಚೆನ್ನಾಗಿ ಅರಿತಿದ್ದರಿಂದಲೇ ಇಷ್ಟು ದೀರ್ಘಕಾಲ ಅದನ್ನು ಶ್ರದ್ಧೆಯಿಂದ ರಕ್ಷಿಸಿಕೊಂಡು ಬಂದಿದ್ದಾರೆ. ಈ ಸಂಗತಿಗಳಲ್ಲಿ ಯಾವ ಒಂದನ್ನು ತಿಳಿಯದಿದ್ದರೂ, ತಪ್ಪಾಗಿ ತಿಳಿದರೂ, ನಾವು ವೇದದ ಪರಿಚಯವನ್ನು ಸರಿಯಾಗಿ ಮಾಡಿಕೊಂಡಂತಾಗುವುದಿಲ್ಲ. ಆದುದರಿಂದ ಈ ಅಂಶಗಳನ್ನು ಎಚ್ಚರದಿಂದ ಪರಿಶೀಲಿಸಬೇಕು.

## ವೇದವೆಂದರೇನು?

ವೇದವೆಂದರೆ ಜ್ಞಾನ ಎಂದರ್ಥ. ಪರಮಾತ್ಮ, ಜೀವ, ದೇವತೆಗಳು, ಪ್ರಕೃತಿ, ಧರ್ಮ ಮುಂತಾದ ಆಳವಾದ ವಿಷಯಗಳನ್ನು ಕುರಿತ ಜ್ಞಾನ; ವಿದ್ಯೆ. ಇಂತಹ ಜ್ಞಾನವನ್ನು (ವೇದ) ಕುರಿತ ಗ್ರಂಥಕ್ಕೂ (ಗೌಣವಾದ ಅರ್ಥದಲ್ಲಿ)[1] 'ವೇದ' ಎಂದು ಹೆಸರು. ಅತಿಪವಿತ್ರವಾಗಿ ಅತ್ಯಂತ ಪ್ರಾಮಾಣಿಕವಾಗಿ ನಮ್ಮ ಧರ್ಮ, ದರ್ಶನ, ಸಮಾಜ ಮುಂತಾದ ವಿಷಯಗಳಲ್ಲಿ ಅಂತಿಮ ನಿರ್ಣಯವನ್ನು ಹೇಳುವ ಅಧಿಕಾರವುಳ್ಳ ಗ್ರಂಥವೇ ವೇದ. ಅದು ಅತೀಂದ್ರಿಯಸತ್ಯಗಳನ್ನು ತಿಳಿಯಲು ಬಯಸುವ ಎಲ್ಲ ಸುಕೃತಿಗಳ ಪವಿತ್ರಗ್ರಂಥ.

---

1. ಮೊಸರನ್ನು ಹೊರುವ ಮಹಿಳೆಯನ್ನು 'ಮೊಸರು, ಬಾ ಇಲ್ಲಿ' ಎಂದು ಕರೆಯುತ್ತೇವೆ. ಮೊಸರನ್ನು ಹೊತ್ತಿದ್ದರಿಂದ ಆಕೆಗೇ 'ಮೊಸರು' ಎಂಬ ಹೆಸರು ಬಂದಿತು. ಹೀಗೆ ವೇದವನ್ನು(ಜ್ಞಾನ) ಬೋಧಿಸುವ ಗ್ರಂಥಕ್ಕೂ ವೇದ ಎಂಬ ಹೆಸರು ಬಂದಿತು.



'ವೇದ' ಎಂಬ ಶಬ್ದವು ಹೇಗೆ ಬಂದಿದೆ? ವೇದದ ಲಕ್ಷಣವೇನು? ಎಂಬುದನ್ನು ವಿದ್ವಾಂಸರು ಹೀಗೆ ವಿವರಿಸುತ್ತಾರೆ. "ಅದು ಜ್ಞಾನ ಅಥವಾ ಪಡೆಯುವಿಕೆ ಎಂಬ ಅರ್ಥವನ್ನು ಹೇಳುವ ವಿದ್[1] ಎಂಬ ಧಾತುವಿನಿಂದ ಆಗಿರುವ ಶಬ್ದ.

ಆತ್ಮನನ್ನು ಇಂದ್ರಿಯಗಳು ಅರಿಯಲಾರವು. ಊಹೆಯಿಂದಲೂ ಆತ್ಮನನ್ನು ತಿಳಿಯಲಾಗುವುದಿಲ್ಲ. ವೇದಗಳಿಂದ ಮಾತ್ರವೇ ಅವನನ್ನು ತಿಳಿಯಲು ಸಾಧ್ಯ. ಆದುದರಿಂದ ವೇದವು "ವೇದ" ಎನ್ನಿಸಿತು ಎಂಬ ಅಭಿಪ್ರಾಯವನ್ನು ಶ್ರೀಮಧ್ವಾಚಾರ್ಯರು ಹೇಳಿರುತ್ತಾರೆ.

**ನೇಂದ್ರಿಯಾಣಿ ನಾನುಮಾನಂ ವೇದಾಹ್ಯೇವೈನಂ ವೇದಯನ್ತಿ ತಸ್ಮಾದಾಹುರ್ವೇದಾ ಇತಿ ಪಿಪ್ಪಲಾದಶ್ರುತಿಃ**

—ವಿಷ್ಣುತತ್ತ್ವನಿರ್ಣಯ

**ವಿದನ್ತಿ ಧರ್ಮಾದಿಕಮ್ ಅನೇನ ಇತಿ ವೇದಃ**

ಯಾವುದರಿಂದ ಧರ್ಮ ಮುಂತಾದವನ್ನು ತಿಳಿಯುತ್ತಾರೆಯೋ ಅದು ವೇದ.

—ಸರ್ವಾನಂದ

**ವಿದನ್ತ್ಯನನ್ಯಪ್ರಮಾಣವೇದ್ಯಂ ಧರ್ಮಲಕ್ಷಣಂ ಅಸ್ಮಾದಿತಿ ವೇದಃ**

ಬೇರೆ ಪ್ರಮಾಣಗಳಿಂದ ತಿಳಿಯಲಾಗದ ಧರ್ಮ ಎಂಬ ಅರ್ಥವನ್ನು ಯಾವುದರಿಂದ ತಿಳಿಯುತ್ತಾರೋ ಅದು ವೇದ.

—ಮೇಧಾತಿಥಿ

**ಸರ್ವೇ ಮನುಷ್ಯಾಃ ಸರ್ವಾಃ ಸತ್ಯವಿದ್ಯಾಃ**
**ಯೈರ್ಯೇಷು ವಾ ತಥಾ ವಿದ್ವಾಂಸಶ್ಚ ಭವನ್ತಿ ತೇ ವೇದಾಃ**

ಎಲ್ಲ ಮಾನವರೂ ಎಲ್ಲ ವಿದ್ಯೆಗಳನ್ನು ಯಾವುದರಿಂದ ಅಥವಾ ಯಾವುದರಲ್ಲಿ ತಿಳಿದು ಜ್ಞಾನಿಗಳಾಗುತ್ತಾರೋ ಅದು ವೇದ.

—ದಯಾನಂದೀಯ ಋಗ್ಭಾಷ್ಯ

"ವಿದನ್ತಿ[1] = ಜಾನನ್ತಿ; ವಿದ್ಯನ್ತೇ[2] = ಭವನ್ತಿ; ವಿನ್ದನ್ತಿ ಅಥವಾ ವಿನ್ದನ್ತೇ[3]=

---

1. ವಿದ - ಜ್ಞಾನೇ ಅದಾದಿ ಪರಸ್ಮೈಪದೀ;
2. ವಿದ-ಸತ್ತಾಯಾಂ-ದಿವಾದಿ-ಆತ್ಮನೇಪದೀ
3. ವಿದ್ಲೃ - ಲಾಭೇ ತುದಾದಿ ಉಭಯಪದೀ.



ಲಭನ್ತೇ; ವಿನ್ದತೇ[1] = ವಿಚಾರಯಂತಿ

**ನಿಃಶ್ರೇಯಸಕರಾಣಿ ಕರ್ಮಾಣಿ ಆವೇದಯನ್ತಿ ಇತಿ ವೇದಾಃ**

ಪಾರಮಾರ್ಥಿಕ ಅಥವಾ ಮುಕ್ತಿಸುಖಕ್ಕೆ ಸಾಧಕವಾಗುವ ಕರ್ಮಗಳನ್ನು ಹೇಳುವುದೇ ವೇದ. —ಕಪರ್ದಿಸ್ವಾಮೀ

ವೇದ ಎಂಬ ಶಬ್ದಕ್ಕೆ ಮೇಲಿನ ವಿವರಣೆಗಳನ್ನು ನೀಡಬಹುದು.

ವೇದವೆಂದರೆ ಜ್ಞಾನ ಮಾತ್ರ ಅಲ್ಲ. ಅದು ಮಾನವನು ಬಯಸುವ ಅನೇಕ ಸಂಗತಿಗಳನ್ನು ತಂದುಕೊಡಬಲ್ಲ ಸಾಮರ್ಥ್ಯ ಉಳ್ಳದ್ದು ಎಂಬ ಹಿನ್ನೆಲೆಯಲ್ಲಿ ವೇದವೆಂದರೆ ಉಪಾಯವನ್ನು ತಿಳಿಸುವ ಗ್ರಂಥರಾಶಿಯೆಂದು ಶ್ರೀ ಶಂಕರಾಚಾರ್ಯರು ಹೇಳುತ್ತಾರೆ. ಬೃಹದಾರಣ್ಯಕ ಉಪನಿಷತ್ತಿಗೆ ವಿಸ್ತಾರವಾದ ಭಾಷ್ಯವನ್ನು ಬರೆಯುವ ಮೊದಲು ಪ್ರಾಸಂಗಿಕವಾಗಿ ವೇದದ ಪ್ರಮುಖ ಪ್ರಯೋಜನವನ್ನು ಅವರು ಈ ರೀತಿಯಾಗಿ ತಿಳಿಸುತ್ತಾರೆ.

**ಸರ್ವೋಽಪ್ಯಯಂ ವೇದಃ ಪ್ರತ್ಯಕ್ಷಾನುಮಾನಾಭ್ಯಾಂ ಅನವಗತೇಷ್ಟಾನಿಷ್ಟಪ್ರಾಪ್ತಿಪರಿಹಾರೋಪಾಯಪ್ರಕಾಶನಪರಃ ।**

—ಬೃಹದಾರಣ್ಯಕೋಪನಿಷತ್ತಿನ ಶಾಂಕರಭಾಷ್ಯದ ಅವತರಣಿಕೆ.

ಈ ಎಲ್ಲ ವೇದವೂ ಸಹ ಪ್ರತ್ಯಕ್ಷ[2] ಮತ್ತು ಅನುಮಾನಗಳಿಂದ[3] ಗೊತ್ತಾಗದ ಇಷ್ಟಪ್ರಾಪ್ತಿ ಮತ್ತು ಅನಿಷ್ಟಪರಿಹಾರಗಳ ಉಪಾಯವನ್ನು ತಿಳಿಸಿಕೊಡುವುದರಲ್ಲಿಯೇ ತಾತ್ಪರ್ಯವುಳ್ಳದ್ದು.

ಪ್ರತ್ಯಕ್ಷವಾಗಿ ನಮಗೆ ತಿಳಿಯುವ ಇಷ್ಟಪ್ರಾಪ್ತಿಗಳು ಅನೇಕ ಉಂಟು. ಪ್ರಪಂಚದಲ್ಲಿ ನಿತ್ಯವೂ ಎಲ್ಲರೂ ಯಾವ ವಸ್ತುಗಳನ್ನು ಪಡೆಯಲು ಯಾರ ಪ್ರೇರಣೆಯೂ ಇಲ್ಲದೇ ಯತ್ನಿಸುತ್ತಾ ಇದ್ದಾರೆಯೋ ಅವೇ ಪ್ರತ್ಯಕ್ಷ ಇಷ್ಟ

---

1. ವಿದ-ವಿಚಾರಣೇ-ರುಧಾದಿ-ಆತ್ಮನೇಪದೀ

2. ನಮ್ಮ ಕಣ್ಣು ಮೊದಲಾದ ಇಂದ್ರಿಯಗಳಿಗೆ ನೇರವಾಗಿ ಉಂಟಾಗುವ ತಿಳುವಳಿಕೆ.

3. ಊಹೆ ಮಾಡುವುದರಿಂದ ಉಂಟಾಗುವ ತಿಳುವಳಿಕೆ. ಪರ್ವತದಲ್ಲಿ ಏಳುತ್ತಿರುವ ಹೊಗೆಯನ್ನು ನೋಡಿ ಎಲ್ಲಿ ಹೊಗೆಯಿದೆಯೋ ಅಲ್ಲಿ ಬೆಂಕಿಯಿರಬೇಕೆಂಬ ಊಹೆಯಿಂದ ಪರ್ವತವು ಬೆಂಕಿಯುಳ್ಳದ್ದು ಎಂಬುದಾಗಿ ಬರುವ ತಿಳುವಳಿಕೆ.



ಪ್ರಾಪ್ತಿಗಳು[1]. ಇನ್ನೊಬ್ಬರಿಗೆ ಇಷ್ಟಪ್ರಾಪ್ತಿಯಾದುದರಿಂದ ತನಗೂ ಆದೀತೆಂಬ ಊಹೆಯಿಂದ ಯಾವ ಇಷ್ಟಗಳನ್ನು ಪಡೆಯಲು ಯತ್ನಿಸುವೆವೋ ಅವು ಅನುಮಾನ ಇಷ್ಟಪ್ರಾಪ್ತಿಗಳು[2]. ತಾನಾಗಿಯೇ ತಿಳಿದು ಯಾವಲ ಅನಿಷ್ಟಪರಿಹಾರಕ್ಕಾಗಿ ಯತ್ನಿಸುವೆವೋ ಅದು ಪ್ರತ್ಯಕ್ಷಪರಿಹಾರೋಪಾಯ[3]. ಊಹೆಯಿಂದ ತಿಳಿದದ್ದು 'ಅನುಮಾನ' ದಿಂದ ತಿಳಿದ ಅನಿಷ್ಟಪರಿಹಾರೋಪಾಯ[4]. ವೇದವಾದರೋ ಪ್ರತ್ಯಕ್ಷ ಮತ್ತು ಅನುಮಾನಗಳೆಂಬ[5] ಎರಡು ಪ್ರಮಾಣಗಳಿಂದಲೂ ತಿಳಿಯಲಾಗದ ಇಷ್ಟ ಪ್ರಾಪ್ತಿ ಮತ್ತು ಎರಡ್ಡರಿಂದಲೂ ಅರಿಯಲಾಗದ ಅನಿಷ್ಟಪರಿಹಾರದ ಉಪಾಯ ವನ್ನು ತಿಳಿಸಿಕೊಡುತ್ತದೆ. ಇದೇ ಅಭಿಪ್ರಾಯವನ್ನೇ ಶ್ರೀ ಸಾಯಣಾಚಾರ್ಯರು ತಮ್ಮ ಯಜುರ್ವೇದಭಾಷ್ಯಭೂಮಿಕೆಯಲ್ಲಿ ಹೇಳಿರುತ್ತಾರೆ.

**ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋಃ ಅಲೌಕಿಕಂ ಉಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ ।**

—ಕೃಷ್ಣ ಯಜುರ್ವೇದಸಂಹಿತಾ ಸಾಯಣಭಾಷ್ಯ 1-1-1

ಬಯಸಿದ್ದನ್ನು ಪಡೆಯುವುದು ಮತ್ತು ಕೇಡಾಗುವುದನ್ನು ತಪ್ಪಿಸಿಕೊಳ್ಳುವುದು ಈ ವಿಷಯದಲ್ಲಿ ಲೋಕದಿಂದ ತಿಳಿದುಬರದ ಉಪಾಯವನ್ನು ತಿಳಿಸುವ ಗ್ರಂಥವೇ ವೇದ.[6]

---

1. ಊಟ, ತಿಂಡಿ, ನಿದ್ರೆ ಮುಂತಾದ ಸಹಜಪ್ರವೃತ್ತಿಗಳು.

2. ಹಣ ಸಂಪಾದನೆಯ ಉಪಾಯಗಳು. ಉದ್ಯೋಗ, ವ್ಯಾಪಾರ ಮುಂತಾದ ಅನುಕರಣೆಯಿಂದ ಕೂಡಿದ ಪ್ರವೃತ್ತಿಗಳು.

3. ಶೀತ ಮತ್ತು ಉಷ್ಣಗಳಿಂದ ರಕ್ಷಣೆ, ಔಷಧಿಸೇವನೆ ಮುಂತಾದ ಸಹಜ ನಿವಾರಣೋಪಾಯಗಳು.

4. ಕಳ್ಳಕಾಕರಿಂದ ರಕ್ಷಣೆ ಮುಂತಾದ ಅನುಕರಣೆಯಿಂದ ಕೂಡಿದ ನಿವಾರಣೋಪಾಯಗಳು.

5. ಅನುಮಾನ ಎಂಬ ಶಬ್ದಕ್ಕೆ ಕನ್ನಡದಲ್ಲಿ ಸಂಶಯ ಎಂದರ್ಥವಿದೆ. ಶಾಸ್ತ್ರವಿಚಾರದಲ್ಲಿ ಆ ಅರ್ಥವನ್ನು ಮರೆತುಬಿಡಬೇಕು.

6. ಈ ಶ್ಲೋಕವೂ ಇದೇ ಅರ್ಥವನ್ನು ಕೊಡುತ್ತದೆ.

**ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।**

**ಏನಂ ವಿದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥**

ಪ್ರತ್ಯಕ್ಷದಿಂದಾಗಲೀ, ಅನುಮಾನದಿಂದಾಗಲೀ ಯಾವ ಉಪಾಯವು ನಮಗೆ ತಿಳಿಯುವುದಿಲ್ಲವೋ ಅದನ್ನು ವೇದದಿಂದ ಬಲ್ಲವರು ತಿಳಿಯುತ್ತಾರೆ. ಅದೇ ವೇದದ ವೇದತ್ವ.



ಹೀಗೆ ನಮಗೆ ಅಗತ್ಯವಾದ ಇಷ್ಟಪ್ರಾಪ್ತಿ ಮತ್ತು ನಿವಾರಣೀಯವಾದ ಅನಿಷ್ಟಪರಿಹಾರಗಳ ಅಲೌಕಿಕ ಉಪಾಯಗಳನ್ನು[1] ವೇದವು ತಿಳಿಸಿಕೊಡುತ್ತದೆ. ನಮಗೆ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ತಿಳಿಯಲಾಗದ ಇಷ್ಟಪ್ರಾಪ್ತಿ ಮತ್ತು ಅನಿಷ್ಟಪರಿಹಾರಗಳಿಗೆ ಉದಾಹರಣೆ ಏನು?

## ಇಷ್ಟಪ್ರಾಪ್ತಿ - ಅನಿಷ್ಟಪರಿಹಾರ

'ಅಗ್ನಿಹೋತ್ರಂ ಜುಹುಯಾತ್ ಸ್ವರ್ಗಕಾಮಃ' ಎಂಬ ಮಾತು ಸ್ವರ್ಗವನ್ನು ಬಯಸುವವನು ಅಗ್ನಿಹೋತ್ರವನ್ನು ಅನುಷ್ಠಿಸಬೇಕೆಂದು ತಿಳಿಸುತ್ತದೆ. ಸ್ವರ್ಗ ವೆಂಬುದು ಪ್ರತ್ಯಕ್ಷ ಅಥವಾ ಅನುಮಾನಗಳಿಂದ ತಿಳಿಯಲಾಗದ ಇಷ್ಟವಷ್ಟೇ. ಇಂತಹ ಸ್ವರ್ಗವನ್ನು ಪಡೆಯಲು ವೇದವು ತಿಳಿಸುವ ಅಗ್ನಿಹೋತ್ರವೆಂಬ ಉಪಾಯವೂ ಅಲೌಕಿಕ[2]. ಅಗ್ನಿಹೋತ್ರವನ್ನು ಅನುಷ್ಠಿಸುತ್ತಿರುವುದನ್ನು ಕಾಣಬಲ್ಲೆವು. ಅದರ ಫಲಸಾಧನತೆಯನ್ನು ಕಾಣಲಾರೆವಷ್ಟೇ. ಹೀಗೆಯೇ 'ಸರ್ವಂ ಪಾಪ್ಮಾನಂ ತರತಿ, ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ, ಯ ಉ ಚೈನಮೇವಂ ವೇದ[3]' ಎಂಬ ಮಾತು ಪಾಪಗಳ ಪರಿಹಾರಕ್ಕಾಗಿಯೂ, ಬ್ರಹ್ಮಹತ್ಯೆಯ ಪರಿಹಾರಕ್ಕಾಗಿಯೂ ಅಶ್ವಮೇಧಯಾಗವನ್ನು ಅನುಷ್ಠಿಸಬೇಕೆಂದು ತಿಳಿಸುತ್ತದೆ. ಪಾಪವೆಂಬುದು ಪ್ರತ್ಯಕ್ಷ ಅಥವಾ ಅನುಮಾನಗಳಿಂದ ತಿಳಿಯಲಾಗದ ಅನಿಷ್ಟವಷ್ಟೇ. ಇಂತಹ ಅನಿಷ್ಟಪರಿಹಾರಕ್ಕಾಗಿಯೂ ವೇದವು ತಿಳಿಸುವ ಅಶ್ವಮೇಧಯಾಗದ ಅನುಷ್ಠಾನವೆಂಬ ಉಪಾಯವು ಅಲೌಕಿಕ.

ಮೇಲೆ ತಿಳಿಸಿದಂತಹ ಇಷ್ಟಪ್ರಾಪ್ತಿ ಮತ್ತು ಅನಿಷ್ಟಪರಿಹಾರಗಳು ವೇದೋಕ್ತ ವಾದ ಕರ್ಮಗಳಿಂದ ಉಂಟಾಗುತ್ತವೆ. ಇದಲ್ಲದೇ ಮೋಕ್ಷಕ್ಕೆ ಸಂಬಂಧಿಸಿದಂತಹ ಇಷ್ಟಪ್ರಾಪ್ತಿ, ಅನಿಷ್ಟಪರಿಹಾರವನ್ನೂ ವೇದಗಳೇ ತಿಳಿಸಿಕೊಡುತ್ತಿವೆ.

---

1. ಆಧುನಿಕ ಭೌತವಿಜ್ಞಾನವೆಲ್ಲವೂ ಪ್ರತ್ಯಕ್ಷಪ್ರಮಾಣಕ್ಕೆ ಒಳಪಡುವುದರಿಂದ ವೇದವು ಹೇಳುವ ವಿಷಯವು ವೈಜ್ಞಾನಿಕವಾಗಿರಬೇಕೆಂದು ಹೇಳುವವರು ಈ ಅಂಶವನ್ನು ಗಮನಿಸಬೇಕು. ಭೌತವಿಜ್ಞಾನದಿಂದ ಭೌತಿಕಜೀವನಕ್ಕೆ ತುಂಬ ಉಪಕಾರವಾಗಿದೆಯೆಂಬುದು ನಿರ್ವಿವಾದ. ಭೌತವಿಜ್ಞಾನವು ಅವಲಂಬಿಸಿರುವ ಪ್ರಮಾಣದಿಂದ ತಿಳಿಯದ ಉಪಾಯವೇ ವೇದೋಕ್ತವಾಗಿರುವುದರಿಂದ ಎರಡನ್ನೂ ಒಂದೇ ತಕ್ಕಡಿಯಲ್ಲಿ ತೂಗುವುದು ಯುಕ್ತವಲ್ಲ.

2. ಲೌಕಿಕವಾದ ಉಪಾಯವೂ ಅದರ ಫಲವೂ ಪ್ರತ್ಯಕ್ಷ. ಅಲೌಕಿಕವಾದ ಉಪಾಯದಲ್ಲಿ ಉಪಾಯ ಪ್ರತ್ಯಕ್ಷ, ಆದರೆ ಫಲವು ಅಪ್ರತ್ಯಕ್ಷ.

3. ತೈತ್ತಿರೀಯ ಸಂಹಿತೆ, ೫-೩-೧೨-೨— ಅಶ್ವಮೇಧವನ್ನು ಮಾಡುವವನೂ, ತಿಳಿಯುವವನೂ ಎಲ್ಲ ಪಾಪಗಳಿಂದಲೂ, ಬ್ರಹ್ಮಹತ್ಯಾಪಾಪದಿಂದಲೂ ಮುಕ್ತನಾಗುತ್ತಾನೆ.



ವೇದವನ್ನು ಕರ್ಮಕಾಂಡ, ಉಪಾಸನಾಕಾಂಡ ಮತ್ತು ಜ್ಞಾನಕಾಂಡ ವೆಂಬುದಾಗಿ ವಿಭಾಗಿಸಲಾಗಿದೆ. ಉಪನಿಷತ್ತುಗಳು ಜ್ಞಾನಕಾಂಡಕ್ಕೆ ಸಂಬಂಧಿಸಿದವು ಗಳು. ಆ ಕಾಂಡದಲ್ಲಿಯೂ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ತಿಳಿಯಲಾಗದ ಇಷ್ಟ ಪ್ರಾಪ್ತಿಯ ಉಪಾಯವನ್ನೂ, ಅನಿಷ್ಟಪರಿಹಾರದ ಉಪಾಯವನ್ನೂ ವೇದವೇ ತಿಳಿಸಿಕೊಡುತ್ತದೆ. ಜ್ಞಾನಕಾಂಡದಲ್ಲಿ ಇಷ್ಟಪ್ರಾಪ್ತಿ ಎಂದರೆ ಸತ್ಯವಸ್ತುವಾದ ಬ್ರಹ್ಮಪ್ರಾಪ್ತಿ ಅಥವಾ ಮೋಕ್ಷ. ಅನಿಷ್ಟ ಎಂದರೆ ಸತ್ಯವಸ್ತುವನ್ನು ತಪ್ಪಾಗಿ ತಿಳಿದುಕೊಳ್ಳುವುದು[1] ಇಲ್ಲಿಯೂ ಇಷ್ಟಪ್ರಾಪ್ತಿಯ ಉಪಾಯಗಳನ್ನೂ[2] ವೇದವೇ ತಿಳಿಸಿಕೊಡುತ್ತದೆ. ಅನಿಷ್ಟಪರಿಹಾರದ ಅಲೌಕಿಕಉಪಾಯವನ್ನೂ[3] ವೇದವೇ ತಿಳಿಸಿಕೊಡುತ್ತದೆ. ಸಾರಾಂಶ ಇಷ್ಟು : ವೇದವು ಧರ್ಮ ಮತ್ತು ಬ್ರಹ್ಮ ಎರಡನ್ನೂ ಬೋಧಿಸುತ್ತದೆ. ಧರ್ಮವು ಕರ್ಮಗಳಿಂದ ಉಂಟಾಗುವುದು. ಅದನ್ನು ಕರ್ಮಕಾಂಡದ ಮೂಲಕವಾಗಿ ವೇದವು ತಿಳಿಸುತ್ತದೆ. ಬ್ರಹ್ಮವು ಜ್ಞಾನಕಾಂಡದ ಮೂಲಕ ಪ್ರತಿಪಾದ್ಯವಾದದ್ದು. ಇವೆರಡರ ವಿಷಯದಲ್ಲಿಯೂ ಲೋಕದಲ್ಲಿ ಗೊತ್ತಿರದ ಉಪಾಯವನ್ನು ತಿಳಿಸುವುದೇ ವೇದ.

## ವೇದದ ಲಕ್ಷಣ

ವೇದದ ಲಕ್ಷಣವೇನು? ಎಂಬ ವಿಚಾರದಲ್ಲಿ ಶ್ರೀಸಾಯಣಾಚಾರ್ಯರು ವೇದಭಾಷ್ಯದಲ್ಲಿ ವಿಪುಲವಾಗಿ ವಿಚಾರ ಮಾಡಿದ್ದಾರೆ. ಅದರ ಸಾರಾಂಶ ಹೀಗಿದೆ:

"ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಎಂಬ ಮೂರು ಪ್ರಮಾಣಗಳಲ್ಲಿ ಕಡೆಯದೇ ವೇದ" ಎಂದು ವೇದದ ಲಕ್ಷಣಗಳನ್ನು ಹೇಳೋಣವೆಂದರೆ ಸ್ಮೃತಿಗಳು[4] ಆಗಮಗಳೇ ಆದುದರಿಂದ ಅವುಗಳೂ ವೇದಗಳಾಗಿಬಿಡುತ್ತವೆ. ಹಾಗಾದರೆ ಅಪೌರುಷೇಯವಾದ ಆಗಮವನ್ನು ವೇದವೆಂದು ಹೇಳೋಣವೆಂದರೆ ವೇದವು

---

1. ದೇಹ, ಇಂದ್ರಿಯ, ಬುದ್ಧಿ ಮೊದಲಾದವುಗಳಲ್ಲಿ ನಮಗೆ ಇರುವ 'ಅಹಂ' ಎಂಬ ತಿಳುವಳಿಕೆ. ದೇಹವೇ ನಾನು ಎಂಬ ತಿಳುವಳಿಕೆ.

2. ನಿತ್ಯಾನಿತ್ಯವಸ್ತು ವಿವೇಕ. ಶಮಾದಿಷಟ್ಕಸಂಪತ್ತಿ, ಇಹಾಮುತ್ರಫಲಭೋಗವಿರಾಗ, ಮುಮುಕ್ಷುತ್ವ, ಎಂಬ ಸಾಧನಚತುಷ್ಟಯ.

3. ನೇತಿ, ನೇತಿ ಎಂಬ ವಚನಗಳಿಂದ ನಾವು ಯಾವುದನ್ನು ಆತ್ಮನೆಂದುಕೊಂಡಿರುವೆವೋ ಅದು ಅಲ್ಲ ಎಂಬ ಬೋಧನೆ.

4. ಸ್ಮೃತಿಗಳೆಂದರೆ ಮಾನವನ ನಡವಳಿಕೆಗಳನ್ನು ರೂಪಿಸುವ ಪುರುಷನಿರ್ಮಿತವಾದ ಗ್ರಂಥಗಳು. ಮನು, ಯಾಜ್ಞವಲ್ಕ್ಯ, ಪರಾಶರ ಮುಂತಾದ ಮಹರ್ಷಿಗಳು ಸ್ಮೃತಿಗಳನ್ನು ರಚಿಸಿದ್ದಾರೆ. ವೇದದ ಲುಪ್ತವಾದ ಶಾಖೆಗಳನ್ನೇ ಸ್ಮೃತಿಗಳು ಮೂಲವಾಗಿ ಇಟ್ಟುಕೊಂಡಿರುತ್ತವೆ. "ಉತ್ಸನ್ನಶ್ರುತಿಮೂಲತ್ವಾತ್ ಸ್ಮೃತೀನಾಂ ಧರ್ಮೇ ಪ್ರಾಮಾಣ್ಯಮ್."



ಪರಮೇಶ್ವರನಿರ್ಮಿತವಲ್ಲವೇ? ಎಂಬ ಪ್ರಶ್ನೆಯು ಬರುತ್ತದೆ. ಶರೀರವಿರುವ ಪುರುಷನಿಂದ ನಿರ್ಮಿತವಲ್ಲದ ಆಗಮವು ವೇದ ಎಂದು ಲಕ್ಷಣವನ್ನು ಹೇಳಿದರೆ ಅದೂ ಸರಿಯಲ್ಲ. ಏಕೆಂದರೆ 'ಸಹಸ್ರಶೀರ್ಷಾ ಪುರುಷಃ' ಎಂದು ಶ್ರುತಿಯೇ ಹೇಳುವಂತೆ ಪರಮೇಶ್ವರನಿಗೂ ಸಾವಿರಾರು ತಲೆ, ಕಣ್ಣು, ಕಾಲು ಇರುವುದರಿಂದ ಅವನೂ ಶರೀರವುಳ್ಳ ಪುರುಷನೇ ಆಗುತ್ತಾನೆ. ಹಾಗಾದರೆ "ಜನ್ಮಾಂತರ ಕರ್ಮಗಳಿಂದ ನಿರ್ಮಿತವಾದ[1] ಶರೀರವುಳ್ಳವನು ರಚಿಸದ ಆಗಮವೇ ವೇದ ಎಂದು ಹೇಳಬಹುದಲ್ಲವೇ? ಏಕೆಂದರೆ ಪರಮಾತ್ಮನ ಶರೀರವು ಕರ್ಮನಿರ್ಮಿತ ವಾದುದ್ದಲ್ಲ. ಸ್ವೇಚ್ಛೆಯಿಂದ ಧರಿಸಲ್ಪಟ್ಟದ್ದು" ಎಂದರೆ ಅದೂ ಸರಿಯಲ್ಲ. ಏಕೆಂದರೆ ಋಗ್ವೇದವು ಅಗ್ನಿಯಿಂದಲೂ, ಯಜುರ್ವೇದವು ವಾಯುವಿನಿಂದಲೂ, ಸಾಮವೇದವು ಆದಿತ್ಯನಿಂದಲೂ ಸೃಷ್ಟಿಯಾಯಿತೆಂದು ಶ್ರುತಿಯು ಹೇಳುತ್ತದೆ. ಅಗ್ನಿ ಮುಂತಾದವರ ನಿಯಾಮಕನು ಈಶ್ವರನೇ ಆದುದರಿಂದ ಈಶ್ವರನೇ ವೇದಗಳ ಕರ್ತೃ ಎಂದು ಹೇಳಬೇಕಾಗುತ್ತದೆ. ಆದುದರಿಂದ ವೇದಕ್ಕೆ ನಿರ್ದಿಷ್ಟವಾದ, ಲಕ್ಷಣವೇನು? ಎಂದರೆ 'ಮಂತ್ರ ಮತ್ತು ಬ್ರಾಹ್ಮಣಗಳ[2] ಸಮುದಾಯವೇ ವೇದ' ಎಂದು ಹೇಳಬೇಕಾಗುತ್ತದೆ. ಈ ರೀತಿ ಒಂದು ಲಕ್ಷಣವನ್ನು ಹೇಳಿದರೂ ಅದೂ ಅಷ್ಟು ಸರಿಯಲ್ಲ. ಮಂತ್ರ ಯಾವುದು? ಬ್ರಾಹ್ಮಣ ಯಾವುದು? ಎಂಬ ನಿರ್ಣಯ ಕಷ್ಟ. ಆದರೂ ಆಪಸ್ತಂಬರು ಯಜ್ಞಪರಿಭಾಷೆಯಲ್ಲಿ ಹೇಳುವಂತೆ '**ಮಂತ್ರ ಬ್ರಾಹ್ಮಣಯೋಃ ವೇದನಾಮಧೇಯಮ್**' ಎಂಬುದೇ ವೇದದ ಲಕ್ಷಣ ಎಂದು ಸಾಯಣರು ಹೇಳುತ್ತಾರೆ. ಮಂತ್ರಬ್ರಾಹ್ಮಣಗಳ ಸಮುಚ್ಚಯವೇ ವೇದ ಎಂಬುದು ಹೆಚ್ಚು ಮಂದಿ ವಿದ್ವಾಂಸರ ಅಭಿಪ್ರಾಯ.

## ಶ್ರುತಿ – ತ್ರಯೀ

ವೇದಗಳನ್ನು ಶ್ರುತಿಯೆಂದೂ ತ್ರಯೀ[3] ಎಂದೂ ಹೇಳುತ್ತೇವೆ. ಶ್ರುತಿ ಯೆಂದರೆ ಕಿವಿಗೆ ವಿಷಯವಾದದ್ದು. ವೇದವನ್ನು ಲೇಖನಕ್ಕೆ ಇಳಿಸದೇ ಗುರು-ಶಿಷ್ಯ ಪರಂಪರೆಯಲ್ಲಿ ಕಿವಿಯಿಂದ ಕೇಳಿಯೇ ಕಲಿಯುವ ಪದ್ಧತಿಯಿದೆ. ಆದ್ದರಿಂದ ಅದು ಶ್ರುತಿಯೆನಿಸಿತು ಎಂದು 'ಶ್ರುತಿ' ಶಬ್ದಕ್ಕೆ ವಿವರಣೆ ನೀಡುತ್ತಾರೆ. ಯಾವುದು ಕೇಳಲು ಅತ್ಯಂತ ಶ್ರೇಷ್ಠ ವಿಷಯವಾಗಿದೆಯೋ ಅಥವಾ ಯಾವುದು ಜ್ಞಾನಿಗಳ ಒಳಗಿವಿಗೆ

---

1. ಜೀವಿಗಳ ಕರ್ಮ, ಫಲ, ಸೃಷ್ಟಿ-ಇವುಗಳ ಬಗ್ಗೆ ಮುಂದೆ ವಿವರಿಸಲಾಗುವುದು.

2. ಇವುಗಳನ್ನು ವೇದವಿಭಾಗಗಳ ಪ್ರಕರಣದಲ್ಲಿ ವಿವರಿಸಲಾಗುವುದು.

3. "ಶ್ರುತಿಃ ಸ್ತ್ರೀ ವೇದ ಆಮ್ನಾಯಸ್ತ್ರಯೀ......"

—ಅಮರಕೋಶಃ, ವಾಗ್ವರ್ಗ.



ಕೇಳಿಸಿತೋ[1] ಆ ಪವಿತ್ರವಾಙ್ಮಯವೇ ಶ್ರುತಿ ಎಂಬ ವಿವರಣೆಯೂ ಸಂಗತವಾಗುತ್ತದೆ.

ವೇದಗಳಿಗೆ ತ್ರಯೀ ಎಂಬ ಹೆಸರು ಪ್ರಸಿದ್ಧವಾಗಿದೆ. ತ್ರಯೀ ಎಂದರೆ ಮೂರು ಅವಯವಗಳುಳ್ಳ ಸಮುದಾಯ[2] ಎಂದರ್ಥ. ಋಗ್ವೇದ, ಯಜುರ್ವೇದ ಮತ್ತು ಸಾಮವೇದ ಎಂಬ ಮೂರು ಅವಯವಗಳಿಂದ ಕೂಡಿರುವುದರಿಂದ ವೇದವು ತ್ರಯೀ ಎನಿಸಿತು. ಹಾಗಾದರೆ ಅಥರ್ವವೇದದ ಗತಿ ಏನು? ಅದು ವೇದವಲ್ಲವೇ? ಎಂದರೆ ಕೆಲವರು "ಅಥರ್ವವೇದಕ್ಕೆ ವೇದವೆಂಬ ಮಾನ್ಯತೆ ಹಿಂದೆ ಇರಲಿಲ್ಲ. ಅನಂತರಕಾಲದಲ್ಲಿ ಅದು ವೇದವೆಂದು ಪರಿಗಣಿಸಲ್ಪಟ್ಟಿತು" ಎಂದು ವಿವರಣೆ ನೀಡುತ್ತಾರೆ. ಇದು ಸರಿಯಲ್ಲ. ಏಕೆಂದರೆ **'ಅಗ್ನಿಹೋತ್ರಫಲಾಃ ವೇದಾಃ'**[3] **'ಯಜ್ಞೋ ಹಿ ಶ್ರೇಷ್ಠತಮಂ ಕರ್ಮ'** ಎಂಬ ಮಾತುಗಳು ತಿಳಿಸುವಂತೆ ವೇದಮಂತ್ರಗಳಿಗೆ ಯಜ್ಞಗಳಲ್ಲಿಯೇ ವಿನಿಯೋಗ. ಅಥರ್ವವೇದವನ್ನು ಅರಿತ'ಬ್ರಹ್ಮಾ' ಎಂಬ ಋತ್ವಿಜನು ಇಲ್ಲದಿದ್ದರೆ ಯಜ್ಞವು ಪೂರ್ಣವಾಗುವುದೇ ಇಲ್ಲ. ಆದುದರಿಂದ ಅಥರ್ವ ವೇದವು ಉಳಿದ ವೇದಗಳ ಜೊತೆಯಲ್ಲಿಯೇ ಎಂದಿನಿಂದಲೂ ಇದೆಯೇ ಹೊರತು ಅನಂತರ ಬಂದದ್ದಲ್ಲ. ಇದಲ್ಲದೆ ಬ್ರಾಹ್ಮಣಗ್ರಂಥಗಳಲ್ಲಿಯೂ, ಉಪನಿಷತ್ತುಗಳಲ್ಲಿಯೂ ಅಥರ್ವವೇದದ ಹೆಸರು ಬರುತ್ತದೆ ಎಂಬುದನ್ನು ಗಮನಿಸಬೇಕು.

**ಋಚೋ ಯಜೂಗ್ಂಷಿ ಸಾಮಾನಿ । ಅಥರ್ವಾಂಗಿರಸಶ್ಚ ಯೇ ।**

—ತೈತ್ತಿರೀಯ ಬ್ರಾಹ್ಮಣ ೩-೧೨

**ಯದಥರ್ವಾಂಗಿರಸೋ ಮಧ್ವಾಹುತಯಃ ।**

—ತೈತ್ತಿರೀಯ ಆರಣ್ಯಕ ೨-೯

**ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ ।**

—ತೈತ್ತಿರೀಯ ಉಪನಿಷತ್ತು, ಬ್ರಹ್ಮಾನಂದವಲ್ಲಿ.

---

1. ಶ್ರೂಯತೇ ಇತಿ ಶ್ರುತಿಃ ।
2. ಸಂಖ್ಯಾಯಾ ಅವಯವೇ ತಯಪ್। ದ್ವಿತ್ರಿಭ್ಯಾಂ ತಯಸ್ಯಾಯಚ್ವಾ।

—ಪಾಣಿನಿಸೂತ್ರಗಳು.

3. ವೇದಗಳಿಗೆ ಫಲ ಅಗ್ನಿಹೋತ್ರ ಮೊದಲಾದವುಗಳನ್ನು ಅನುಷ್ಠಿಸುವುದೇ ಆಗಿದೆ. ಅಗ್ನಿಹೋತ್ರವೆಂಬುದು ಗೃಹಸ್ಥನಾದವನು ನಿತ್ಯವೂ ಬೆಳಗ್ಗೆ ಮತ್ತು ಸಾಯಂಕಾಲ ಅಗ್ನಿಯಲ್ಲಿ ಮಾಡಬೇಕಾದ ಹವಿಸ್ಸಿನ ಅರ್ಪಣೆ.



ಆದ್ದರಿಂದ ಉಳಿದ ವೇದಗಳಂತೆಯೇ ಅಥರ್ವವೇದವೂ ಪ್ರಾಚೀನವೇ. ವಸಿಷ್ಠ[1], ಋಷ್ಯಶೃಂಗ ಮುಂತಾದವರನ್ನು ಅಥರ್ವವನ್ನು ಬಲ್ಲ ಮಹಾತ್ಮರೆಂದು ಪ್ರಾಚೀನ ವಾಙ್ಮಯಗಳು ಉಲ್ಲೇಖಿಸುತ್ತವೆ.

'ಹಾಗಾದರೆ ವೇದಗಳಿಗೆ ಮೂರು ಅವಯವಗಳುಳ್ಳದ್ದು ಎಂಬ ಅರ್ಥದ 'ತ್ರಯೀ' ಎಂಬ ಹೆಸರು ಏಕೆ ಬಂದಿತು?" ಎಂದರೆ ಅದಕ್ಕೆ "ಮಂತ್ರ, ಬ್ರಾಹ್ಮಣ, ಉಪನಿಷತ್ತು ಎಂಬ ಮೂರು ಅವಯವಗಳುಳ್ಳದ್ದು ಎಂದರ್ಥ. ಈ ಮೂರು ಅವಯವಗಳು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಈ ನಾಲ್ಕು ವೇದಗಳಲ್ಲಿಯೂ ಕಂಡುಬರುತ್ತವೆ. ಆದುದರಿಂದ ಅಥರ್ವವೇದಕ್ಕೂ ವೇದತ್ವ ಉಂಟು" ಎಂದು ವಿದ್ವಾಂಸರು ಸಮಾಧಾನ ಹೇಳುತ್ತಾರೆ.

ಇದು ಸರಿಯೇ ಆದರೂ, ವೇದಗಳಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ ಈ ಮೂರೇ ಒಂದು ಗುಂಪು. ಅಥರ್ವವೇದವೇ ಮತ್ತೊಂದು ಗುಂಪು ಎಂದು ಹೇಳಬಹುದು. ಯಜ್ಞಕ್ಕೆ ನೇರವಾಗಿ ಕರ್ಮಗಳ ಅನುಷ್ಠಾನದಲ್ಲಿ ಬಳಸಲ್ಪಡುವುದು ಮೊದಲ ಮೂರು ವೇದಗಳೇ. ಅದಕ್ಕಾಗಿಯೇ ಆಪಸ್ತಂಬರು:

**ಯಜ್ಞಂ ವ್ಯಾಖ್ಯಾಸ್ಯಾಮಃ । ಸ ತ್ರಯ್ಯಾ ವಿಧೀಯತೇ ।** [2]

ಯಜ್ಞವನ್ನು ವ್ಯಾಖ್ಯಾನಿಸುತ್ತೇವೆ. ಆ ಯಜ್ಞವು ಮೂರು ವೇದಗಳಿಂದ ವಿಧಿಸಲ್ಪಡುತ್ತದೆ.

ಎಂದು ಹೇಳುತ್ತಾರೆ. ಹೀಗೆ ಅಥರ್ವವೇದಕ್ಕೆ ಯಜ್ಞದ ಪ್ರಧಾನಕರ್ಮಗಳಲ್ಲಿ ವಿನಿಯೋಗ ಇಲ್ಲದಿದ್ದರೂ ತುಲಾಪುರುಷಶಾಂತಿ, ರಾಜ್ಯಾಭಿಷೇಕ[3] ಮುಂತಾದ ಕರ್ಮಗಳಲ್ಲಿ ಆ ವೇದದ ಮಂತ್ರಗಳೇ ಬಳಸಲ್ಪಡುವುದರಿಂದ ಅದೂ ಮುಖ್ಯ ವೇದವೇ ಆಗಿದೆ ಎಂದು'ವೀರಮಿತ್ರೋದಯ' ಎಂಬ ಗ್ರಂಥದಲ್ಲಿ ಕೃಷ್ಣಮಿಶ್ರ ಎಂಬ ವಿದ್ವಾಂಸರು ಹೇಳುತ್ತಾರೆ. ಯಜ್ಞಗಳಲ್ಲಿಯಂತೂ ಅಥರ್ವವೇದವನ್ನು ಬಲ್ಲ ಬ್ರಹ್ಮಾ ಎಂಬ ಋತ್ವಿಜನು ಅಧ್ಯಕ್ಷಸ್ಥಾನದಲ್ಲಿ ಇದ್ದೇ ಇರುತ್ತಾನೆಂಬುದನ್ನು ಹಿಂದೆಯೇ ಗಮನಿಸಿದ್ದೇವೆ.

---

1. '..... ಗುರುಣಾಥರ್ವವಿದಾ ಕೃತಕ್ರಿಯಃ' ರಘುಮಹಾರಾಜನ ಮಗನಾದ ಅಜನ ಪಟ್ಟಾಭಿಷೇಕಸಮಯದಲ್ಲಿ ಅಥರ್ವವೇದವನ್ನು ಬಲ್ಲ ವಸಿಷ್ಠರು ಆಶೀರ್ವಚನ ಹೇಳುತ್ತಾರೆ.

—ರಘುವಂಶ ೮-೪

2. ಆಪಸ್ತಂಬ ಶ್ರೌತಸೂತ್ರಗಳು.

3. ರಾಜ್ಯಾಭಿಷೇಕೇ ಉಪಾಧ್ಯಾಯಃ ಆಥರ್ವಣೀಯಾನಿ ಆಶೀರ್ವಚಾಂಸಿ ವದೇತ್।

—ನೀಲಕಂಠಭಟ್ಟೀಯ ರಾಜ್ಯಾಭಿಷೇಕಪ್ರಯೋಗ.



ಆದ್ದರಿಂದ 'ತ್ರಯೀ' ಎಂಬ ಶಬ್ದಕ್ಕೆ ಋಕ್, ಯಜುಸ್, ಸಾಮ ಎಂಬ ಮೂರು ವೇದಗಳ ಸಮುದಾಯವೆಂಬುದಾಗಿಯೂ, ಮಂತ್ರ, ಬ್ರಾಹ್ಮಣ, ಉಪನಿಷತ್ ಎಂಬ ಮೂರು ಅವಯವಗಳನ್ನೊಳಗೊಂಡ ಚತುರ್ವೇದಗಳು ಎಂಬುದಾಗಿಯೂ ಎರಡು ಅರ್ಥಗಳನ್ನೂ ಹೇಳಬಹುದು. ಪ್ರಸಂಗಕ್ಕೆ ಅನುಗುಣವಾಗಿ ಆಯಾ ಅರ್ಥವನ್ನು ಗ್ರಹಿಸಬೇಕಾಗುತ್ತದೆ.

**"ಶ್ರುತಿ" ಏಕೆ?**

ವೇದವನ್ನು "ಶ್ರುತಿ" ಎಂದು ಕರೆಯಲು ಒಂದು ಕಾರಣ ಅದು ಗುರು-ಶಿಷ್ಯ ಪರಂಪರೆಯಲ್ಲಿ ಕಿವಿಯಿಂದ ಕೇಳಿಯೇ ಉಪದೇಶ ಮಾಡಲ್ಪಟ್ಟಿರುವ ವಾಙ್ಮಯ ಎಂದು ಹಿಂದೆ ಹೇಳಿದೆವು. ಅದು ಬರವಣಿಗೆಗೆ ಬರದೆ ಕಿವಿಯ ವಿಷಯವಾಗಿಯೇ ಉಳಿಯಲು ಏನು ಕಾರಣ? ಎಂದರೆ ವೇದಗಳು ಹೊರ ಬಂದುದು ಇತಿಹಾಸದ ಅರಿವಿಗೇ ಬರದಿರುವ ಅತ್ಯಂತಪ್ರಾಚೀನಕಾಲದಲ್ಲಿ. ಆಗ ಲೇಖನಕಲೆಯು ಇರಲೇ ಇಲ್ಲ. ಆದ್ದರಿಂದ ಅನಿವಾರ್ಯವಾಗಿ ಅದು ಶ್ರವಣೇಂದ್ರಿಯಕ್ಕೆ ಮಾತ್ರ ವಿಷಯವಾಗಬೇಕಾಯಿತು ಎಂದು ಕೆಲವರು ಹೇಳುತ್ತಾರೆ. ಇದು ಹೇಗಾದರೂ ಇರಲಿ, ಆದರೆ ಲೇಖನಕಲೆಯು ತಿಳಿದುಬಂದ ನಂತರವೂ ವೇದವನ್ನು ಬರವಣಿಗೆಗೆ ಇಳಿಸದೇ ಬಾಯಿಪಾಠದ ಮೂಲಕವೇ ಕಲಿಯುವ ಪದ್ಧತಿ ಮುಂದುವರಿಯಿತು. ಇದಕ್ಕೆ ಏನು ಕಾರಣ? ಎಂದರೆ 'ಬರವಣಿಗೆಗೆ ಇಳಿಸಿದರೆ ಆ ದಿವ್ಯಸಾಹಿತ್ಯದ ಪಾವಿತ್ರ್ಯ ಕಡಿಮೆಯಾಗುತ್ತದೆ. ವೇದಕ್ಕೆ ಅಪಾತ್ರರಾದವರು ಅದನ್ನು ಕಲಿಯಲು ಪ್ರಯತ್ನಿಸಿ ಅದಕ್ಕೆ ಅಪಾರ್ಥ ಮಾಡುತ್ತಾರೆ. ಅದನ್ನು ತಪ್ಪು ತಪ್ಪಾಗಿ ಉಚ್ಚರಿಸುತ್ತಾ ವೇದಕ್ಕೆ ದೂಷಣೆಯನ್ನು ತರುತ್ತಾರೆ. ಇದರಿಂದ ಅವರಿಗೂ ಹಾನಿ, ಲೋಕಕ್ಕೂ ಹಾನಿ. ಆದುದರಿಂದ ಅಸೂಯೆಯುಳ್ಳವರು, ಕುಟಿಲಬುದ್ಧಿಯುಳ್ಳವರು ಮುಂತಾದವರಿಗೆ ಅದನ್ನು ಕೊಡದೇ ಪರೀಕ್ಷೆಯಿಂದ ಶುದ್ಧರಾದ ಸತ್ಪಾತ್ರರಿಗೆ ಮಾತ್ರ ಅದು ದೊರೆತು ಮುಂದುವರಿಯುವಂತೆ ಮಾಡಲು ಅದನ್ನು ಬರವಣಿಗೆಗೆ ಇಳಿಸಲಿಲ್ಲ' ಎಂದು ವಿದ್ವಾಂಸರು ಹೇಳುತ್ತಾರೆ. "ನಾಸೂಯಕಾಯಾನೃಜವೇ ಶಠಾಯ"[1] ಎಂಬ ವಚನವನ್ನೂ, "ಶಾಸ್ತ್ರ ಮತ್ತು ಶಸ್ತ್ರಗಳನ್ನು ಅಪಾತ್ರನಿಗೆ ಕೊಡಬೇಡ" ಎಂಬ ಕೌಟಿಲ್ಯನ ವಚನವನ್ನೂ ಇಲ್ಲಿ ಸ್ಮರಿಸಬಹುದು.

---

1. ನಿರುಕ್ತ –ಗುಣಗಳಲ್ಲಿಯೂ ದೋಷವನ್ನು ಆರೋಪಿಸುವವನಿಗೂ, ವಕ್ರನಿಗೂ, ಸೋಮಾರಿಯಾದವನಿಗೂ, ವಿದ್ಯೆಯನ್ನು ನೀಡತಕ್ಕದ್ದಲ್ಲ.



**ವೇದಗಳೆಷ್ಟು?**

ವೇದವೆಂಬುದು ಅಪಾರವಾದ ಜ್ಞಾನರಾಶಿ. ಯಾರೂ ಅದನ್ನು ಸಂಪೂರ್ಣವಾಗಿ ತಿಳಿಯಲಾರರು. ಆದರೂ ಅದನ್ನು ಯಥಾಶಕ್ತಿ ತಿಳಿಯಲು ಪ್ರಯತ್ನಿಸಬೇಕು. ಸಾರತಮವಾದ ಭಾಗವನ್ನಾದರೂ ಗ್ರಹಿಸಬೇಕು. ಈ ಬಗೆಗೆ ತೈತ್ತಿರೀಯ ಬ್ರಾಹ್ಮಣದಲ್ಲಿ ಒಂದು ಅರ್ಥಪೂರ್ಣವಾದ ಕಥೆಯು ಬರುತ್ತದೆ. "ಮಹರ್ಷಿ ಭರದ್ವಾಜರು ಪುರುಷಾಯುಸ್ಸಿನ ಮೂರು ಭಾಗಗಳವರೆವಿಗೂ ಗುರುಕುಲದಲ್ಲಿದ್ದು ವೇದಾಧ್ಯಯನ ಮಾಡಿ ಹಣ್ಣು ಹಣ್ಣು ಮುದುಕರಾದರು. ಮುಪ್ಪಿನಿಂದ ಬಳಲಿ ಬಿದ್ದಿದ್ದ ಅವರ ಬಳಿಗೆ ಇಂದ್ರನು ಬಂದು "ಓ! ಭರದ್ವಾಜರೇ, ನಾನು ನಿಮಗೆ ಆಯುಸ್ಸಿನ ನಾಲ್ಕನೇ ಭಾಗವನ್ನು ಕೊಡುವೆನು. ಆಗ ನೀವು ಏನು ಮಾಡುವಿರಿ?" ಎಂದು ಕೇಳಿದ. "ಆಗಲೂ ನಾನು ವೇದಾಧ್ಯಯನವನ್ನು ಮುಂದುವರಿಸುವೆನು. ಸಂಪೂರ್ಣವೇದಗಳನ್ನು ಅಧ್ಯಯನ ಮಾಡಿ ಮುಗಿಸುವವರೆಗೂ ಗುರುಕುಲದಲ್ಲಿ ಇರುವೆನು. ಬ್ರಹ್ಮಚರ್ಯವನ್ನು ಬಿಡುವುದಿಲ್ಲ" ಎಂದು ವಿದ್ಯಾನಿಷ್ಠರಾದ ಋಷಿ ವಿಜ್ಞಾಪಿಸಿದರು. ಆದರೆ ವೇದವು ಅನಂತ, ಅದನ್ನು ಪೂರ್ಣವಾಗಿ ತಿಳಿಯಲು ಯಾರಿಗೂ ಶಕ್ಯವಿಲ್ಲ ಎಂಬುದು ಅವರಿಗೆ ಮನವರಿಕೆ ಮಾಡಿಕೊಡುವುದಕ್ಕಾಗಿ ಇಂದ್ರದೇವನು ಅವರಿಗೆ ಪರಿಚಯಕ್ಕೆ ಬರದೇ ಇದ್ದ ಮೂರು ವೇದಮಯಗಳಾದ ಪರ್ವತಗಳನ್ನು ಅವರಿಗೆ ಕಾಣುವಂತೆ ಮಾಡಿದ. ಅವುಗಳಲ್ಲಿ ಒಂದೊಂದರಿಂದಲೂ ಒಂದೊಂದು ಮುಷ್ಟಿಯನ್ನು ತೆಗೆದುಕೊಂಡು "ನೋಡಿ, ಭರದ್ವಾಜರೇ! ವೇದಗಳು ಅನಂತ! ಪರ್ವತಗಳಂತಿರುವ ಮಹಾ ರಾಶಿಗಳು. ನೀವು ಇಲ್ಲಿಯವ ರೆವಿಗೂ ಅಧ್ಯಯನ ಮಾಡಿರುವುದು ಅವುಗಳಲ್ಲಿ ಮೂರು ಮುಷ್ಟಿಗಳಷ್ಟು ಮಾತ್ರ. ಅಧ್ಯಯನ ಮಾಡಲಾಗದೇ ಉಳಿದಿರುವುದು ಎಷ್ಟಿರಬಹುದು? ಊಹಿಸಿಕೊಳ್ಳಿ. ಎಲ್ಲಾ ವೇದಗಳನ್ನು ತಿಳಿದುಕೊಳ್ಳಲು ಯಾರಿಗೆ ತಾನೇ ಸಾಧ್ಯ? ಸುಮ್ಮನೆ ಶ್ರಮ ಪಡಬೇಡಿ. ಸರ್ವವೇದಗಳ ಸಾರವಾದ ಈ ಸಾವಿತ್ರಮಂತ್ರವನ್ನು ಗ್ರಹಿಸಿ" ಎಂದು ಹೇಳಿ ಅವರಿಗೆ ಸಾವಿತ್ರಮಂತ್ರವನ್ನು ಉಪದೇಶ ಮಾಡಿದ. ಅದನ್ನು ತಿಳಿದು ಭರದ್ವಾಜರು ಮರಣರಹಿತರಾಗಿ ಸ್ವರ್ಗವನ್ನು ಹೊಂದಿ ಆದಿತ್ಯಸಾಯುಜ್ಯವನ್ನು ಪಡೆದರು."

**ಭರದ್ವಾಜೋ ಹ ತ್ರಿಭಿರಾಯುರ್ಭಿರ್ಬ್ರಹ್ಮಚರ್ಯಮುವಾಸ । ತಗ್ಂ ಹ**

**ಜೀರ್ಣಿಗ್ಗ್ಂ ಸ್ಥವಿರಗ್ಂ ಶಯಾನಮ್ । ಇಂದ್ರ ಉಪವ್ರಜ್ಯೋವಾಚ ।**

**ಭರದ್ವಾಜ । ಯತ್ತೇ ಚತುರ್ಥಮಾಯುರ್ದದ್ಯಾಮ್ ।**



ಕಿಮೇನೇನ ಕುರ್ಯಾ ಇತಿ । ಬ್ರಹ್ಮಚರ್ಯಮೇವೈನೇನ ಚರೇಯಮಿತಿ

ಹೋವಾಚ । ತಗ್ಂ ಹ ತ್ರೀನ್ಗಿರಿರೂಪಾನವಿಜ್ಞಾತಾನಿವ ದರ್ಶಯಾಂಚಕಾರ।

ತೇಷಾಗ್ಂ ಹೈಕೈಕಸ್ಮಾನ್ಮುಷ್ಟಿನಾऽऽದದೇ । ಸ ಹೋವಾಚ । ಭರದ್ವಾಜೇ

ತ್ಯಾಮಂತ್ರ್ಯ । ವೇದಾ ವಾ ಏತೇ । ಅನಂತಾ ವೈ ವೇದಾಃ । ಏತದ್ವಾ ಏತೈ

ಸ್ತ್ರಿಭಿರಾಯುರ್ಭಿರನ್ವವೋಚಥಾಃ। ಅಥ ತ ಇತರದನನೂಕ್ತಮೇವ। ಏಹೀಮಂ

ವಿದ್ಧಿ । ಅಯಂ ವೈ ಸರ್ವವಿದ್ಯೇತಿ । ತಸ್ಮೈ ಹೈತಮಗ್ನಿಗ್ಂ ಸಾವಿತ್ರಮುವಾಚ।

ತಗ್ಂ ಸ ವಿದಿತ್ವಾ । ಅಮೃತೋ ಭೂತ್ವಾ । ಸ್ವರ್ಗಂ ಲೋಕಮಿಯಾಯ।

—ತೈತ್ತಿರೀಯ ಬ್ರಾಹ್ಮಣ—೩-೧೦-೪೩,೪೪.

## ವೇದ ವಿಭಾಗ

ಹೀಗೆ ತಾತ್ತ್ವಿಕವಾಗಿ ವೇದವು (ಜ್ಞಾನವು) ಅನಂತವಾಗಿರುವಂತೆಯೇ ಅಂತಹ ದಿವ್ಯಜ್ಞಾನಕ್ಕೆ ಶಬ್ದರೂಪವಾದ ಶರೀರದಂತಿರುವ ವೇದರಾಶಿಯೂ ಅಪಾರವೇ. ಆ ಅಪಾರವಾದ ಗ್ರಂಥರಾಶಿಯನ್ನು ಹೇಗೂ ಅಧ್ಯಯನ ಮಾಡುವುದಕ್ಕೆ ಆಗುವುದಿಲ್ಲ ಎಂದು ನಿರಾಶೆಗೊಂಡು ಅಲ್ಪಬುದ್ಧಿಯುಳ್ಳ ಮನುಷ್ಯರು ವೇದಾಧ್ಯಯನವನ್ನೇ ನಿಲ್ಲಿಸಿಬಿಟ್ಟಾರು, ವೇದಗಳೇ ಕಣ್ಮರೆಯಾದಾವು ಎಂಬ ಶಂಕೆಯಿಂದ ಮಹಾತ್ಮರಾದ ಕೃಷ್ಣದ್ವೈಪಾಯನರು ಆ ವೇದವನ್ನು ವಿಭಾಗ ಮಾಡಿದರು. ಅಖಂಡವಾಗಿದ್ದ ವೈದಿಕವಾಙ್ಮಯವನ್ನು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದವೆಂದು ನಾಲ್ಕಾಗಿ ವಿಭಾಗಮಾಡಿ ಒಬ್ಬೊಬ್ಬ ಶಿಷ್ಯರ* ಮೂಲಕ ಒಂದೊಂದು ವೇದದ ಪರಂಪರೆ ಮುಂದುವರೆಯುವಂತೆ ಮಾಡಿದರು.

---

*ನಾಲ್ವರು ಶಿಷ್ಯರೂ ಎಲ್ಲ ವೇದಗಳಲ್ಲಿ ಪಾರಂಗತರಾಗಿದ್ದರು. ಋಗ್ವೇದಾದಿ ವಿಭಾಗಗಳು ಅವರಿಗೆ ತಿಳಿದಿರಲಿಲ್ಲ. ಮಹರ್ಷಿ ವ್ಯಾಸರು ವಿಭಾಗ ಮಾಡಿ ಆಯಾ ವಿಭಾಗವನ್ನು ಒಬ್ಬೊಬ್ಬರೂ ತಮ್ಮ ತಮ್ಮ ಶಿಷ್ಯರಿಗೆ ಕಲಿಸಿ ಬೆಳೆಸಬೇಕೆಂದು ಗೊತ್ತುಮಾಡಿದರು.



ಬ್ರಹ್ಮಣಾ ಚೋದಿತೋ ವ್ಯಾಸೋ ವೇದಾನ್ವ್ಯಸ್ತುಂ ಪ್ರಚಕ್ರಮೇ ।
ಅಥ ಶಿಷ್ಯಾನ್ ಸ ಜಗ್ರಾಹ ಚತುರೋ ವೇದಪಾರಗಾನ್ ॥[1]

ಋಗ್ವೇದಗ್ರಾಹಕಂ ಪೈಲಂ ಜಗ್ರಾಹ ಸುಮಹಾಮತಿಃ ।
ವೈಶಂಪಾಯನನಾಮಾನಂ ಯಜುರ್ವೇದಸ್ಯ ಚಾಗ್ರಹೀತ್ ॥ [2]

ಜೈಮಿನಿಂ ಸಾಮವೇದಸ್ಯ ತಥೈವಾಥರ್ವವೇದವಿತ್ ।
ಸುಮನ್ತುಸ್ತಸ್ಯ ಶಿಷ್ಯೋಽಭೂದ್ವೇದವ್ಯಾಸಸ್ಯ ಧೀಮತಃ ॥ [3]

ಸೋಽಯಮೇಕೋ ಮಹಾವೇದತರುಸ್ತೇನ ಪೃಥಕ್ಕೃತಃ ।
ಚತುರ್ಧಾ ಚ ತತೋ ಜಾತಂ ವೇದಪಾದಪಕಾನನಮ್ ॥ [4]

—ವಿಷ್ಣುಪುರಾಣ ೩-೪-೭, ೮, ೯, ೧೫

ಪೂರ್ವಂ ಭಗವತಾ ವೇದವ್ಯಾಸೇನ ಜಗದುಪಕಾರಾರ್ಥಂ ಏಕೀಭೂಯ ಸ್ಥಿತಾಃ ವೇದಾಃ ವ್ಯಸ್ತಾಃ । ಶಾಖಾಶ್ಚ ಪರಿಚ್ಛಿನ್ನಾಃ । ಸಕಲವೇದಪರಿಪಾಲನಂತ್ವಶಕ್ಯಮೇಕೇನ ಪುರುಷೇಣೇತಿ ಶಾಖಾಭೇದಪ್ರವೃತ್ತಿಃ । [5]

—ಭಟ್ಟಭಾಸ್ಕರಭಾಷ್ಯ ಮತ್ತು ಚರಣವ್ಯೂಹ

ಹೀಗೆ ವೇದಗಳನ್ನು ವಿಭಾಗ ಮಾಡಿದ್ದರಿಂದ ಕೃಷ್ಣದ್ವೈಪಾಯನಮಹರ್ಷಿಗಳು ವೇದವ್ಯಾಸರೆನಿಸಿದರು ಎಂದು ಇತಿಹಾಸ, ಪುರಾಣಗಳು ಹೇಳುತ್ತವೆ.

ವೇದವ್ಯಾಸರಿಗೆ ಮೊದಲು ವೇದಗಳಿಗೆ ಋಕ್, ಯಜುಸ್ಸು, ಸಾಮ ಇತ್ಯಾದಿ ಹೆಸರುಗಳು ಇರಲಿಲ್ಲ. ಆ ಮಹರ್ಷಿಯೇ ಆ ಹೆಸರುಗಳನ್ನು ಸೃಷ್ಟಿಸಿದರು ಎಂಬ

---

1. ಬ್ರಹ್ಮನಿಂದ ಪ್ರೇರಿತರಾದ ವ್ಯಾಸರು ವೇದಗಳನ್ನು ವಿಭಾಗಿಸಲು ಪ್ರಾರಂಭಿಸಿ, ಬಳಿಕ ವೇದಪ್ರಚಾರಕ್ಕಾಗಿ ವೇದವನ್ನು ಚೆನ್ನಾಗಿ ಬಲ್ಲ ನಾಲ್ವರು ಶಿಷ್ಯರನ್ನು ಪರಿಗ್ರಹಿಸಿದರು.

2. ಮಹಾಮೇಧಾವಿಗಳಾದ ಆ ವ್ಯಾಸರು ಪೈಲರನ್ನು ಋಗ್ವೇದಕ್ಕೂ, ವೈಶಂಪಾಯನರನ್ನು ಯಜುರ್ವೇದಕ್ಕೂ ಸ್ವೀಕರಿಸಿದರು.

3. ಜೈಮಿನಿಗಳನ್ನು ಸಾಮವೇದಕ್ಕೂ, ಸುಮನ್ತುಗಳನ್ನು ಅಥರ್ವವೇದಕ್ಕೂ ಸ್ವೀಕರಿಸಿ ಶಿಷ್ಯರನ್ನಾಗಿಸಿಕೊಂಡರು.

4. ಹೀಗೆ ಒಂದು ವೇದವೃಕ್ಷವನ್ನು ವ್ಯಾಸರು ಬೇರೆಮಾಡಿ, ನಾಲ್ಕು ವೇದವೃಕ್ಷಗಳನ್ನಾಗಿ ಮಾಡಿದರು. ಅಲ್ಲಿಂದ ಮುಂದೆ ವೇದವೃಕ್ಷಗಳ ಒಂದು ಅರಣ್ಯವೇ ನಿರ್ಮಿತವಾಯಿತು.

5. ಹಿಂದೆ ಭಗವಾನ್ ವೇದವ್ಯಾಸರು ಜಗತ್ತಿನ ಉಪಕಾರಕ್ಕಾಗಿ ಒಂದಾಗಿದ್ದ ವೇದಗಳನ್ನು ವಿಂಗಡಿಸಿದರು. ಆಗ ಶಾಖೆಗಳು ವ್ಯವಸ್ಥಿತವಾದವು. ಎಲ್ಲ ವೇದಗಳನ್ನೂ ಒಬ್ಬನೇ ಕಾಪಾಡುವುದು ಅಸಾಧ್ಯವೆಂದೂ, ಇದರಿಂದ ಒಂದೇ ಶಾಖೆಯ ಅಧ್ಯಯನದಿಂದಲೂ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿಯು ಪೂರ್ಣವಾಗುವುದೆಂದೂ ಈ ವಿಂಗಡನೆಯಾಗಿದೆ.



ತಪ್ಪು ಅರ್ಥವನ್ನು ಇಲ್ಲಿ ಗ್ರಹಿಸಬಾರದು. ವೇದಗಳಲ್ಲಿಯೇ ಆ ಹೆಸರುಗಳು ಕಂಡುಬರುತ್ತವೆ.

**ಋಚಃ ಸಾಮಾನಿ ಜಜ್ಞಿರೇ । ಛನ್ದಾಗ್ಂಸಿ ಜಜ್ಞಿರೇ ತಸ್ಮಾತ್ । ಯಜುಸ್ತಸ್ಮಾದಜಾಯತ ।**[1]

ಇಡೀ ವೇದರಾಶಿಯಲ್ಲಿ ಆಯಾ ಹೆಸರುಗಳಿಗೆ ಹೊಂದಿಕೆಯಾಗುವ ವೇದವಾಕ್ಯಗಳನ್ನು ಬೇರೆಬೇರೆಯಾಗಿ ಆಳವಡಿಸಿ ಮಹರ್ಷಿ ವೇದವ್ಯಾಸರು ವೇದಗ್ರಂಥದ ವಿಭಾಗವನ್ನು ಮಾಡಿದರು.

**ತತಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಮುನಿಃ ।**
**ಯಜೂಂಷಿ ಚ ಯಜುರ್ವೇದಂ ಸಾಮವೇದಂ ಚ ಸಾಮಭಿಃ ॥**
**ರಾಜ್ಞಾಂತ್ವಥರ್ವವೇದೇನ ಸರ್ವಕರ್ಮಾಣಿ ಸ ಪ್ರಭುಃ ।**
**ಕಾರಯಾಮಾಸ ಮೈತ್ರೇಯ ಬ್ರಹ್ಮತ್ವಂ ಚ ಯಥಾಸ್ಥಿತಿ ॥**

—ವಿಷ್ಣುಪುರಾಣ

ವೇದಗಳಲ್ಲಿ ಋಕ್ಕುಗಳನ್ನು ಅಂದರೆ ಛಂದೋಬದ್ಧವಾದ[2] (Metrical) ವಾಕ್ಯಗಳನ್ನು ಪ್ರಧಾನವಾಗಿ[3] ಆಳವಡಿಸಿದ್ದ ವೇದಭಾಗಕ್ಕೆ 'ಋಗ್ವೇದ' ಎಂಬ ಹೆಸರು ಕೊಟ್ಟರು. ಛಂದೋನಿಯಮಕ್ಕೆ ಒಳಪಡದೇ ಇದ್ದ ಗದ್ಯಾತ್ಮಕವಾದ ಯಜುಸ್ಸು[4]ಗಳನ್ನು ಮುಖ್ಯವಾಗಿ ಆಳವಡಿಸಿದ್ದ ವೇದಭಾಗವನ್ನು "ಯಜುರ್ವೇದ" ಎಂದು ಹೆಸರಿಸಿದರು.

---

1. ಆ ಪುರುಷನಿಂದಲೇ ಋಕ್, ಸಾಮ, ಛಂದಸ್ಸು ಮತ್ತು ಯಜುಸ್ಸುಗಳು ಹುಟ್ಟಿದವು.

2. ಪಾದೇನ ಅರ್ಧರ್ಚೇನ ಚ ಉಪೇತಾಃ ವೃತ್ತಬದ್ಧಾಃ ಮಂತ್ರಾಃ ಋಚಃ ।

ಗಾಯತ್ರಿ ಮೊದಲಾದ ಛಂದಸ್ಸಿನಿಂದ ಕೂಡಿ, ನಿಯಮಿತ ಅಕ್ಷರಗಳಿಂದ ಕೂಡಿದ ಪಾದದ ವ್ಯವಸ್ಥೆಗಳು ಇರುವ ಮಂತ್ರಗಳು ಋಕ್.

3. ಋಕ್ಕುಗಳು ಹೆಚ್ಚಾಗಿರುವುದರಿಂದ ಋಗ್ವೇದ, ಯಜುಸ್ಸುಗಳು ಹೆಚ್ಚಾಗಿರುವುದರಿಂದ ಯಜುರ್ವೇದ, ಸಾಮವೇ ಹೆಚ್ಚಾಗಿರುವುದರಿಂದ ಸಾಮವೇದ. ಆದುದರಿಂದ ಯಜುಸ್ಸುಗಳ ಮಧ್ಯದಲ್ಲಿ ಋಕ್ಕೂ ಬರುತ್ತದೆ, ಸಾಮವೂ ಬರುತ್ತದೆ. ಸಾಮವೇದ ಬ್ರಾಹ್ಮಣರಲ್ಲಿ ಯಜುಸ್ಸುಗಳಿವೆ. ಆದುದರಿಂದ ಯಜುರ್ವೇದವೆಂಬುದು ಅವುಗಳೇ ಹೆಚ್ಚಾಗಿರುವುದರಿಂದ ಬಂದಿರುವ ಹೆಸರು. ಅವುಗಳೇ ಇವೆ ಎಂದು ಅಲ್ಲ.

4. ವೃತ್ತಗೀತಿವರ್ಜಿತತ್ವೇನ ಪ್ರಶ್ಲಿಷ್ಟಪಠಿತಾಃ ಮಂತ್ರಾಃ ಯಜೂಗ್ಂಷಿ ।
ಛಂದಸ್ಸು ಮತ್ತು ಗಾನವು ಇಲ್ಲದೇ ಬಿಡಿಸಿ ಹೇಳಿದ ಮಂತ್ರಗಳು ಯಜುಸ್ಸುಗಳು.



ಗಾನಕ್ಕೆ[1] ಅಳವಡಿಸಿದ್ದ ಛಂದೋಬದ್ಧವಾದ ವೇದಭಾಗಕ್ಕೆ 'ಸಾಮವೇದ' ವೆಂದು ನಾಮಕರಣವಾಯಿತು. ರಾಜ್ಯಾಭಿಷೇಕಕ್ಕೆ ಮುಖ್ಯವಾಗಿ ಬಳಸಲ್ಪಡುತ್ತಿದ್ದ ಮತ್ತು ಪೀಡಾಪರಿಹಾರಕರವಾದ ಹಾಗೂ ಪುಷ್ಟಿಕರವಾದ ವಾಕ್ಯಗಳನ್ನು ಅಳವಡಿಸಿದ ವೇದವಿಭಾಗವನ್ನು ಅಥರ್ವವೇದ[2] ಎಂದು ಕರೆದರು.

**ನಿಯತಾಕ್ಷರಾವಸಾನಾ ಛಂದೋನಿಬದ್ಧಾ ಋಕ್,**
**ಅನಿಯತಾಕ್ಷರಾವಸಾನೋ ಯಜುಃ, ಗದ್ಯಾತ್ಮಕೋ ಯಜುಃ,**
**ಗಾನಾರ್ಥಂ ಗೃಹೀತಾ ಋಕ್ ಸಾಮ, ರಾಜಾಭಿಷೇಕಾದಿಕರ್ಮವಿನಿಯೋಜ್ಯಂ ಶಾನ್ತಿಪೌಷ್ಟಿಕಾದಿಪ್ರಧಾನಂ ಅಥರ್ವವಚನಮ್**

### ವಿಭಾಗ ಏಕೆ?

ವೇದರಾಶಿಯಲ್ಲಿ ನಮಗೆ ದೊರೆತಿರುವುದು ಅತ್ಯಲ್ಪ ಭಾಗ. ಕೇವಲ ಋಗ್ವೇದ ಸಂಹಿತೆಯ ನೂರನೆಯ ಒಂದು ಭಾಗವಾದರೂ ನಮಗೆ ಸಿಕ್ಕಿದೆಯೆಂದು ಪ್ರಮಾಣ ಬದ್ಧವಾಗಿ ಹೇಳಲು ಸಾಧ್ಯವಿಲ್ಲ ಎಂದು ಆಧುನಿಕ ವಿಮರ್ಶಕರೂ ಅಭಿಪ್ರಾಯ ಪಡುತ್ತಾರೆ. ಇಡೀ ವೇದವನ್ನು ಅಧ್ಯಯನ ಮಾಡುವುದಾಗಲೀ, ಪರಂಪರೆಯನ್ನು ಮುಂದುವರಿಸುವುದಾಗಲೀ ಕಷ್ಟವೆಂದು ಹೆದರಿ ಅಧ್ಯಯನವನ್ನೇ ಜನರು ಕೈಬಿಡಬಾರದೆಂದು ವ್ಯಾಸರು ವೇದವಿಭಾಗವನ್ನು ಮಾಡಿಕೊಟ್ಟಿದ್ದಾರೆ. ಈ ರೀತಿ ನಾಲ್ಕು ವಿಭಾಗಗಳನ್ನೊಳಗೊಂಡ ವೇದದಲ್ಲಿ ಒಂದು ಭಾಗವನ್ನು ಪ್ರಧಾನವಾಗಿ ಅಧ್ಯಯನ ಮಾಡಿ ಉಳಿದ ಭಾಗಗಳ ಸಾಮಾನ್ಯ ಪರಿಚಯವಿದ್ದರೂ ಸಾಕು. ಒಂದೊಂದು ವಿಭಾಗದಲ್ಲಿಯೂ ಪರಿಣತಿ ಪಡೆದವರು ಒಟ್ಟಿಗೆ ಕಲೆತು ಮುಖ್ಯವಾದ ಕರ್ಮಗಳನ್ನಾಚರಿಸಿದಾಗ ಎಲ್ಲರ ವಿಶೇಷಾಧ್ಯಯನದ ಪರಿಚಯ ಮತ್ತು ಲಾಭ ಎಲ್ಲರಿಗೂ ಆಗಲಿ ಎಂದು ಕುಶಲಮತಿಗಳಾದ ಮಹರ್ಷಿ ವೇದವ್ಯಾಸರು ಈ ವಿಭಾಗದ ಯೋಜನೆಯನ್ನು ಮಾಡಿದರು. ಇದನ್ನು ಹೀಗೂ ಗಮನಿಸಬಹುದು. ಆಯಾ ವೇದವನ್ನು ಮಾತ್ರ ವಿಶೇಷವಾಗಿ ಅಧ್ಯಯನ ಮಾಡಿ ವಿಶೇಷಯೋಗ್ಯತೆ ಪಡೆದವರಿಗೆ ಪ್ರಕೃತಿದೋಷದಿಂದ ತಮ್ಮ ವೇದವೇ ಹೆಚ್ಚು

---

1. ಗೀತಿರೂಪಾಃ ಮಂತ್ರಾಃ ಸಾಮಾನಿ । ಋಙ್ಮಂತ್ರದಲ್ಲಿ ಹಾಡುವಂತಹ ಗಾನಗಳು ಸಾಮ.

2. ಅಥರ್ವಣವೇದದಲ್ಲಿ ಋಕ್ಕುಗಳು ಅಧಿಕವಾಗಿರುವುದರಿಂದ ಅದಕ್ಕೆ ಪ್ರತ್ಯೇಕವಾದ ಲಕ್ಷಣ ಹೇಳಿಲ್ಲ. ಅಧ್ಯಯನಪರಂಪರೆಯಲ್ಲಿ ಯಾವುದನ್ನು ಅಥರ್ವಣವೆಂದು ಕರೆಯುತ್ತಾರೋ ಅದೇ ಅಥರ್ವಣವೇದವೆಂಬ ಲಕ್ಷಣವನ್ನು ಹೇಳಬಹುದು.



ಉಳಿದವುಗಳು ನಿಕೃಷ್ಟ[1] ಎಂಬ ತಪ್ಪುಭಾವನೆ ಉಂಟಾಗಬಹುದು. ಅದು ಉಂಟಾಗದಿರಬೇಕಾದರೆ ಪ್ರತಿಯೊಂದು ವೇದದ ವಿದ್ವಾಂಸರೂ ಒಟ್ಟಿಗೆ ಸೇರಿ ತಮ್ಮ ತಮ್ಮ ಪ್ರಾವೀಣ್ಯವನ್ನು ಪ್ರಕಟಿಸುತ್ತಾ, ಎಲ್ಲರೂ ಒಟ್ಟಿಗೆ ಸೇರಿ ಒಂದು ಕರ್ಮವನ್ನು ನೆರವೇರಿಸಿದಾಗ ಎಲ್ಲರ ಪ್ರಾವೀಣ್ಯದ ಪರಿಚಯವು ಎಲ್ಲರಿಗೂ ಆಗುವುದಲ್ಲದೇ ತಾವೆಲ್ಲರೂ ಒಂದೇ ವೇದೋಪವನದ ವೃಕ್ಷಗಳನ್ನು ಆಶ್ರಯಿಸಿದವರು ಎಂಬ ಅರಿವು ಎಲ್ಲರಿಗೂ ಉಂಟಾಗುವುದು. ಹೀಗೆ ಎಲ್ಲ ವೇದಗಳ ವಿದ್ವಾಂಸರೂ ಸೇರಿ ನೆರವೇರಿಸುವ ಮಂಗಲಕಾರ್ಯವೇ 'ಯಜ್ಞ'.[2]

## ಯಜ್ಞ

ನಾಲ್ಕು ವೇದಗಳಲ್ಲಿ ಯಾವ ಒಂದು ವೇದದ ವಿದ್ವಾಂಸ ಇಲ್ಲದಿದ್ದರೂ ಆ ಯಜ್ಞವು ನಡೆಯಲಾರದು. ಎಲ್ಲ ವೇದಗಳ ಸಹಕಾರದಿಂದಲೇ ಯಜ್ಞವು ಸಂಪನ್ನವಾಗುವುದು. ಯಜ್ಞದಲ್ಲಿ ಭಾಗವಹಿಸುವ ಋಗ್ವೇದದ ಋತ್ವಿಜನಿಗೆ 'ಹೋತಾ' ಎಂದು ಹೆಸರು. ಯಜುರ್ವೇದದ ಋತ್ವಿಜನು 'ಅಧ್ವರ್ಯು' ಎನಿಸಿಕೊಳ್ಳುತ್ತಾನೆ. ಸಾಮವೇದದ ಋತ್ವಿಜನಿಗೆ 'ಉದ್ಗಾತಾ' ಎಂದು ಹೆಸರು. ಅಥರ್ವವೇದದ ಋತ್ವಿಜನಿಗೆ 'ಬ್ರಹ್ಮಾ'[3] ಎಂದು ಹೆಸರು. ಈ ಕಾರಣಗಳಿಂದ ಋಗ್ವೇದವನ್ನು 'ಹೋತೃವೇದ' ವೆಂದೂ, ಯಜುರ್ವೇದವನ್ನು 'ಅಧ್ವರ್ಯುವೇದ' ವೆಂದೂ, ಸಾಮವೇದವನ್ನು 'ಉದ್ಗಾತೃವೇದ' ವೆಂದೂ, ಅಥರ್ವವೇದವನ್ನು 'ಬ್ರಹ್ಮವೇದ' ವೆಂದೂ ಕರೆಯುತ್ತಾರೆ.

---

1. ಸಮಕಾಲೀನ ಉದಾಹರಣೆಯೊಂದರಿಂದ ಈ ವಿಷಯವನ್ನು ಮನವರಿಕೆ ಮಾಡಿಕೊಡಬಹುದು. ಭಾಷಾವಾರುಪ್ರಾಂತವಿಭಾಗವನ್ನು ನಮ್ಮ ದೇಶದಲ್ಲಿ ಮಾಡಿದುದರ ಉದ್ದೇಶ ಪ್ರತಿಯೊಂದು ಭಾಷಾಸಂಸ್ಕೃತಿಯೂ ವಿಶೇಷವಾಗಿ ಬೆಳೆಯಲೆಂಬ ಶುಭನಿರೀಕ್ಷೆಯಿಂದಲೇ. ಆದರೆ ಇತ್ತೀಚೆಗೆ ಮನುಷ್ಯರ ದೋಷದಿಂದ ಕನ್ನಡವೇ ಶ್ರೇಷ್ಠ, ಮರಾಠಿಯೇ ಶ್ರೇಷ್ಠ, ತಮಿಳೇ ಶ್ರೇಷ್ಠ ಇತ್ಯಾದಿ ದುರಭಿಮಾನಗಳು ಬೆಳೆದು ನಾವೆಲ್ಲಾ ಭಾರತರಾಷ್ಟ್ರಕ್ಕೆ ಸೇರಿದವರು ಎಂಬ ಭಾವನೆ ಮರೆಯಾಗುತ್ತಿದೆ. ಇದನ್ನು ಹೋಗಲಾಡಿಸಿ, ಈ ಎಲ್ಲಾ ಭಾಷೆಗಳೂ ಭಾರತೀಯ ಮಹಾಭಾಷೆಯ ರೂಪಗಳು. ಒಂದೇ ಸಂಸ್ಕೃತಿಯ ವಿಶ್ವರೂಪಗಳು ಎಂಬ ಸತ್ಯಸ್ಫೂರ್ತಿ ಉಂಟಾಗುವ ಉತ್ಸವಗಳನ್ನು ಮಹಾಜನರು ಏರ್ಪಡಿಸಬಹುದು.

2. ಈ ಸಂಪುಟದ ಮೂರನೆಯ ಭಾಗದಲ್ಲಿ ಯಜ್ಞಗಳ ಪರಿಚಯವನ್ನು ವಿಸ್ತಾರವಾಗಿ ನೀಡಲಾಗುವುದು.

3. ಋಗ್ವೇದೇನ ಹೋತಾ ಕರೋತಿ । ಯಜುರ್ವೇದೇನಾಧ್ವರ್ಯುಃ । ಸಾಮವೇದೇನೋದ್ಗಾತಾ । ಸರ್ವೈರ್ಬ್ರಹ್ಮಾ ।

—ಆಪಸ್ತಂಬ ಶ್ರೌತಸೂತ್ರ.



ಯಜ್ಞದಲ್ಲಿ ಹೋತೃವು ದೇವತೆಗಳನ್ನು ಆಹ್ವಾನಿಸುತ್ತಾನೆ. ಅಧ್ವರ್ಯುವು ಯಜ್ಞವೇದಿಕೆಯನ್ನು ರಚಿಸಿ ಹೋಮಾದಿಗಳನ್ನು ಮಾಡುತ್ತಾನೆ. ಉದ್ಗಾತೃವು ಋಕ್ಕುಗಳನ್ನು ಸಾಮದಿಂದ ಗಾನಮಾಡಿ ದೇವತೆಗಳನ್ನು ಸಂತೋಷಪಡಿಸುತ್ತಾನೆ. ಮತ್ತು ಬ್ರಹ್ಮನು ಯಜ್ಞಗಳನ್ನು ರಾಕ್ಷಸರ ಉಪದ್ರವದಿಂದ ಕಾಪಾಡುತ್ತಾನೆ. ಅಲ್ಲದೇ ಇಡೀ ಯಜ್ಞ ಕಾರ್ಯಕ್ಕೆ ಅಧ್ಯಕ್ಷನಾಗಿರುತ್ತಾನೆ. ಆವನಿಗೆ ಅಥರ್ವವೇದದ ಜೊತೆಗೆ ಇತರ ವೇದಗಳ ಪರಿಜ್ಞಾನವೂ ಇರಬೇಕೆಂದು ಶಾಸ್ತ್ರಗಳು ಹೇಳುತ್ತವೆ.

**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।**

**ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ।**

—ನಿರುಕ್ತ

ಹೀಗೆ ಯಜ್ಞವೆಂಬ ವ್ಯವಸ್ಥೆಯ ಮೂಲಕ ಎಲ್ಲ ವೇದಗಳೂ ಎಲ್ಲ ವೈದಿಕರಿಗೂ ಸೇರಿದವುಗಳು, ಅವು ಒಂದೇ ವೇದಮಹಾರಾಶಿಯ ವಿಭಾಗಗಳು, ಎಲ್ಲಾ ವೇದಗಳ ಕರ್ಮಾಚರಣೆಯ ಫಲವು ಎಲ್ಲರಿಗೂ ಸೇರುತ್ತದೆ ಎಂಬ ಸತ್ಯಸ್ಫೂರ್ತಿ ಉಂಟಾಗುವಂತೆ ವೇದವ್ಯಾಸರು ಮಾಡಿದರು. ನಿತ್ಯವೂ ಬ್ರಹ್ಮಯಜ್ಞದಲ್ಲಿ ಪ್ರತಿಯೊಂದು ವೇದದವರೂ ನಾಲ್ಕೂ ವೇದಗಳ ಮೊದಲ ಮಂತ್ರವನ್ನು ಹೇಳಬೇಕೆಂಬ ವಿಧಿಯನ್ನು ಮಹರ್ಷಿಗಳು ಏರ್ಪಡಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಹೀಗೆ ನಾಲ್ಕೂ ವೇದಗಳು ಒಬ್ಬನೇ ವೇದಪುರುಷನ ಮುಖ್ಯವಾದ ಅಂಗಗಳು ಎಂಬ ಸತ್ಯಾರ್ಥದ ಸ್ಮರಣೆಯಿಂದ ವೇದವಿಭಾಗವನ್ನು ನಾವು ಅಧ್ಯಯನ ಮಾಡಬೇಕು.

## ಯಾವುದಕ್ಕೆ ಪ್ರಾಧಾನ್ಯ?

ಮೇಲೆ ಹೇಳಿದ ಹಿನ್ನೆಲೆಯನ್ನು ನೋಡಿದಾಗ ನಾಲ್ಕು ವೇದಗಳಿಗೂ ಸಮಾನವಾದ ಪ್ರಾಮುಖ್ಯ. ಪರಮಾತ್ಮನು ಚತುರ್ವೇದಮಯನಾದ ಮಹಾಪುರುಷ. ಎಲ್ಲ ವೇದಗಳೂ ಆತನ ದಿವ್ಯಮಂಗಳವಿಗ್ರಹದ ದಿವ್ಯಾಂಗಗಳೇ. ಅವುಗಳಲ್ಲಿ ಮುಖ್ಯ, ಗೌಣ ಎಂಬ ವಿಭಾಗವೇ ಸಲ್ಲುವುದಿಲ್ಲ. ಪುರುಷನ ದೇಹದಲ್ಲಿ ಕಣ್ಣು, ಕಿವಿ, ಮೂಗು, ನಾಲಿಗೆ ಎಲ್ಲಕ್ಕೂ ಸಮಾನವಾದ ಪ್ರಾಮುಖ್ಯ ಅಲ್ಲವೇ? "ಋಗ್ಯಜುಃಸಾಮರೂಪಾಯ....." ಎಂಬುದೇ ಭಗವಂತನ ಸ್ತೋತ್ರ.

ವಿವೇಕದೃಷ್ಟಿಯು ಹೀಗಿದ್ದರೂ ಇತ್ತೀಚಿನವರು ವೇದಗಳಲ್ಲಿ ಇದು ಮುಖ್ಯ, ಆದು ಮುಖ್ಯ, ಇದು ಮೊದಲನೆಯದು, ಅದು ಅನಂತರಕಾಲದ್ದು ಇತ್ಯಾದಿ ವಾದಗಳನ್ನು ಮಾಡುತ್ತಾ ಬಂದಿದ್ದಾರೆ. ಆ ವಾದಗಳನ್ನು ಮತ್ತೆ ಮತ್ತೆ ಓದುತ್ತಾ,



ಚಿಂತಿಸುತ್ತಾ, ಮೂಲವನ್ನೇ ಮರೆಯುವವರಿಗೆ ಆ ವಾದವೇ ನಿಜ ಎಂಬ ಅಭಿಪ್ರಾಯ ಬರುವಂತಾಗಿದೆ. "ಒಂದು ಸುಳ್ಳನ್ನು ನೂರಾರು ಬಾರಿ ಹೇಳುತ್ತಾ ಬಂದರೆ ಅದೇ ನಿಜವಾಗಿಬಿಡುತ್ತದೆ" ಎಂದು ರಾಜಕೀಯ ನಾಯಕರು ಹೇಳುವುದುಂಟು. ಮೇಲ್ಕಂಡ ವಾದವು ಅದಕ್ಕೆ ಉದಾಹರಣೆಯಾಗಿದೆ.

## ಋಗ್ವೇದ ಪ್ರಧಾನವೇ?

ವೇದಗಳಲ್ಲಿ ಋಗ್ವೇದವೇ ಅತ್ಯಂತ ಮುಖ್ಯವಾದುದು ಎಂದು ಕೆಲವರ ವಾದ. ಅವರು ಇದಕ್ಕೆ ಕೆಲವು ಕಾರಣಗಳನ್ನು ಕೊಡುತ್ತಾರೆ.

೧. ವೇದಗಳ ಹೆಸರನ್ನು ಹೇಳುವಾಗ ಋಕ್, ಯಜುಸ್, ಸಾಮ ಎಂಬ ಕ್ರಮದಲ್ಲಿಯೇ ಹೇಳುವುದರಿಂದ ಋಗ್ವೇದವೇ ಮೊದಲನೆಯದು.

೨. ಋಗ್ವೇದದ ಪುರುಷಸೂಕ್ತದಲ್ಲಿ "ಋಚಃ ಸಾಮಾನಿ ಜಜ್ಞಿರೇ...... ಯಜುಸ್ತಸ್ಮಾದಜಾಯತ" ಎಂದು ಹೇಳಿರುವಂತೆ ಮೊದಲು ಋಕ್ಕುಗಳು, ಸಾಮಗಳು ಆವಿರ್ಭವಿಸಿದ ನಂತರ ಯಜುರ್ವೇದವು ಹುಟ್ಟಿತು. ಇಲ್ಲೂ ಋಗ್ವೇದವೇ ಮೊದಲ ಸ್ಥಾನದಲ್ಲಿದೆ.

೩. ಛಾಂದೋಗ್ಯೋಪನಿಷತ್ತಿನಲ್ಲಿ "ಋಗ್ವೇದಂ ಭಗವೋಽಧ್ಯೇಮಿ, ಯಜುರ್ವೇದಂ ಸಾಮವೇದಮಾಥರ್ವಣಮ್" ಎಂದು ಋಗ್ವೇದವನ್ನೇ ಪ್ರಾರಂಭದಲ್ಲಿ ಪಠಿಸಿದೆ.

೪. ಭಾಷಾಶಾಸ್ತ್ರದ ದೃಷ್ಟಿಯಿಂದಲೂ ಋಗ್ವೇದದ ಭಾಷೆಯು ಉಳಿದ ವೇದಗಳ ಭಾಷೆಗಿಂತ ಪ್ರಾಚೀನವೆಂದು ಕಂಡುಬರುತ್ತದೆ.

೫. ಯಜುರ್ವೇದಸಂಹಿತೆಯಲ್ಲಿ ಸಾಮ ಮತ್ತು ಯಜುರ್ವೇದಗಳಿಗೆ ಅನುಸಾರವಾಗಿ ಮಾಡಿದ ಯಜ್ಞಕ್ಕಿಂತಲೂ ಋಗ್ವೇದ, ಸಾಮ ಮತ್ತು ಯಜುಸ್ಸುಗಳಿಂದ ಮಾಡಿದುದು ದೃಢವಾಗುತ್ತದೆ ಎಂದು ಹೇಳಿದೆ.

**ಯದ್ವೈ ಯಜ್ಞಸ್ಯ ಸಾಮ್ನಾ ಯಜುಷಾ ಕ್ರಿಯತೇ ಶಿಥಿಲಂ ತದ್ಯದೃಚಾ ತದ್ದೃಢಮ್**

೬. ಋಗ್ವೇದವು ಉಳಿದ ವೇದಗಳಿಂದ ಎರವಲು ತೆಗೆದುಕೊಂಡಿಲ್ಲ. ಉಳಿದ ಎಲ್ಲಾ ವೇದಗಳೂ ಋಗ್ವೇದದಿಂದ ಮಂತ್ರಗಳನ್ನು ಎರವಲು ಪಡೆದಿವೆ.

ಈ ಮೇಲಿನ ಕಾರಣಗಳನ್ನು ಪರಿಶೀಲಿಸಿ ನಾವು ಹೀಗೆ ನಿರ್ಣಯವನ್ನು ಹೇಳುತ್ತೇವೆ. ಯಜ್ಞಕರ್ಮದಲ್ಲಿ ಋಗ್ವೇದದಿಂದ ಆಗಬೇಕಾದ ಕರ್ಮಭಾಗದಲ್ಲಿ



ಋಗ್ವೇದವು ಶ್ರೇಷ್ಠ ಎಂಬುದರಲ್ಲಿ ಸಂಶಯವಿಲ್ಲ. ಐದನೆಯ ಕಾರಣವು ಇದನ್ನೇ ಪ್ರತಿಪಾದಿಸುತ್ತದೆ. ಆದರೆ ಎಲ್ಲ ವಿಷಯಗಳಲ್ಲೂ ಋಗ್ವೇದವು ಉಳಿದ ವೇದಗಳಿಗಿಂತ ಶ್ರೇಷ್ಠ, ಉಳಿದ ವೇದಗಳು ಅದಕ್ಕಿಂತಲೂ ಕಳಪೆ ಎಂದು ಅದಕ್ಕೆ ಅರ್ಥವಾಗುವುದಿಲ್ಲ.

೧. ಋಗ್ವೇದದ ಹೆಸರನ್ನು ಮೊದಲು ಪಠಿಸಲು ಕಾರಣ ಋಕ್ ಎಂಬ ಪದದಲ್ಲಿ 'ಯಜುಸ್' 'ಸಾಮ' 'ಅಥರ್ವ' ಎಂಬ ಪದಗಳಲ್ಲಿರುವುದಕ್ಕಿಂತ ಕಡಿಮೆ ಸಂಖ್ಯೆಯ ಸ್ವರ (ಒಂದೇ ಸ್ವರ) ಇರುವುದೇ ಆಗಿದೆ. ಯಾವ ಪದದಲ್ಲಿ ಕಡಿಮೆ ಸಂಖ್ಯೆಯ ಸ್ವರ ಇದೆಯೋ ಅದನ್ನು ಮೊದಲು ಪಠಿಸುವುದು ಉಚ್ಚಾರಣೆಯ ದೃಷ್ಟಿಯಿಂದ ಸುಲಭ. ಉದಾಹರಣೆಗೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂಬ ಪದಗಳಲ್ಲಿ ಮೊದಲನೆಯದರಲ್ಲಿ ಕಡಿಮೆ ಸ್ವರಗಳಿವೆ. ಆದ್ದರಿಂದ ಅದನ್ನು ಮೊದಲು[1] ಉಚ್ಚರಿಸುವುದು ಸುಲಭ. ದ್ವೈತವು ಹುಟ್ಟಿದ ನಂತರ ಉಳಿದ ಎರಡು ಸಿದ್ಧಾಂತಗಳು ಹುಟ್ಟಿದವು ಎಂದು ಅದಕ್ಕೆ ಅರ್ಥವಾಗುವುದಿಲ್ಲ.

೨. ಭಾಷಾಶಾಸ್ತ್ರದ ದೃಷ್ಟಿಯಿಂದ ಋಗ್ವೇದವು ಮೊದಲು ಎಂಬ ವಾದವು ಪ್ರಬಲವಾಗಿಲ್ಲ. ಏಕೆಂದರೆ ಸಂಸ್ಕೃತಿ, ನಾಗರಿಕತೆಯ ಶಾಸ್ತ್ರಗಳ ದೃಷ್ಟಿಯಿಂದ ಅಥರ್ವವೇದವೇ ಋಗ್ವೇದಕ್ಕಿಂತ ಮೊದಲನೆಯದು ಎಂದು ಹೇಳಬೇಕಾಗುತ್ತದೆ. ಏಕೆಂದರೆ ಅಥರ್ವವೇದದಲ್ಲಿ ಚಿತ್ರಿತವಾಗಿರುವ ಸಂಸ್ಕೃತಿ ಮತ್ತು ನಾಗರಿಕತೆಗಳು ಋಗ್ವೇದದಲ್ಲಿ ಕಂಡುಬರುವ ಸಂಸ್ಕೃತಿ, ನಾಗರಿಕತೆಗಳಿಗಿಂತಲೂ ಹಿಂದಿನವು ಎಂದು ವಿದ್ವಾಂಸರು[2] ಅಭಿಪ್ರಾಯಪಡುತ್ತಾರೆ. ಭಾಷಾಶಾಸ್ತ್ರದ ವಾದಗಳನ್ನು ಅಂತಿಮ ತೀರ್ಮಾನ ಎಂದು ವಿದ್ವಾಂಸರು ಒಪ್ಪುವುದಿಲ್ಲ. ಯಜುರ್ವೇದದ ಕೆಲವು ಮಂತ್ರಗಳು ಋಗ್ವೇದದ ಕೆಲವು ಮಂತ್ರಗಳಿಗಿಂತಲೂ ಭಾಷೆಯಲ್ಲಿ ಪ್ರಾಚೀನ ಎಂಬ ವಾದವೂ ಭಾಷಾಶಾಸ್ತ್ರಗಳಲ್ಲಿದೆ.

೩. ವೇದಗಳಲ್ಲಿ ಒಂದರಿಂದ ಒಂದು ಎರವಲು ಪಡೆಯುವ ಪ್ರಶ್ನೆಯೇ ಏಳುವುದಿಲ್ಲ. ಏಕೆಂದರೆ ನಾವು ಹಿಂದೆಯೇ ಗಮನಿಸಿರುವಂತೆ ಋಕ್, ಯಜುಸ್, ಸಾಮ ಮತ್ತು ಅಥರ್ವ ಎಂಬ ವೇದವಿಭಾಗ ಇರುವುದು ವಿವಿಧವಾಗಿರುವ ವೇದವಾಕ್ಯಗಳ ಒಂದು ಅಳವಡಿಕೆಯಿಂದಲೇ ಹೊರತು ಒಂದರಿಂದ ಒಂದು ತೆಗೆದು

---

1. ಸಮಾಸವನ್ನು ಮಾಡಿದಾಗ ಕಡಿಮೆ ಸ್ವರವುಳ್ಳ ಪದವನ್ನೇ ಮೊದಲು ಬಳಸಬೇಕು ಎಂದು ಪಾಣಿನಿಯ ನಿಯಮವೂ ಇದೆ. "ಅಲ್ಪಾಚ್ತರಮ್"

—ಪಾಣಿನಿಸೂತ್ರ ೨-೨-೩೪

2. ಭಾರತೀಯ ಸಂಸ್ಕೃತಿ - ಡಾ|| ಶ್ರೀಕಂಠ ಶಾಸ್ತ್ರಿ.



ಕೊಳ್ಳುವುದರಿಂದಲ್ಲ. ಇಡೀ ವೇದಮಂತ್ರರಾಶಿಯಲ್ಲಿ ಕೆಲವು ಋಕ್ಕುಗಳನ್ನು ಯಜುರ್ವೇದದಲ್ಲಿ ವೇದವ್ಯಾಸರು ಅಳವಡಿಸಿದ ಮಾತ್ರದಿಂದ ಯಜುರ್ವೇದವು ಋಗ್ವೇದದಿಂದ ಏನನ್ನೂ ತೆಗೆದುಕೊಂಡಂತಾಗಲಿಲ್ಲ. ಕೆಲವು ಋಕ್ಕುಗಳು ಋಗ್ವೇದ, ಯಜುರ್ವೇದ ಎರಡರಲ್ಲೂ ಅಳವಡಿಸಲ್ಪಟ್ಟಿವೆ ಎಂದೇ ಅರ್ಥವಾಗುತ್ತದೆ.

೪. ಋಗ್ವೇದವು ಯಜುರ್ವೇದಕ್ಕಿಂತಲೂ ಪ್ರಾಚೀನವಾಗಿದ್ದ ಪಕ್ಷದಲ್ಲಿ ಋಗ್ವೇದದ ಪುರುಷಸೂಕ್ತದಲ್ಲಿ "ಯಜುಸ್ತಸ್ಮಾದಜಾಯತ" ಎಂದು ಯಜುಸ್ಸಿನ ಹೆಸರು ಹೇಗೆ ಬರುತ್ತಿತ್ತು? ಎಂಬ ಪ್ರಶ್ನೆ ಏಳುತ್ತದೆ. ಆ ಮಂತ್ರದಲ್ಲಿ 'ಯಜುಃ ಎಂದರೆ ಯಜುರ್ವೇದವಲ್ಲ, ಗದ್ಯರೂಪವಾದ ವಾಕ್ಯಗಳು' ಎಂದರೆ, ಅದೇ ಮಂತ್ರದಲ್ಲಿ 'ಋಚಃ' ಎಂದರೆ ಋಗ್ವೇದವಲ್ಲ, ಛಂದೋಬದ್ಧವಾದ ಮಂತ್ರಗಳು ಎಂದೂ ಅರ್ಥವಾಗಬೇಕಲ್ಲವೆ? ಆದುದರಿಂದ ಋಕ್, ಯಜುಸ್, ಸಾಮ ಈ ಮೂರೂ ವೇದರಾಶಿಯಲ್ಲಿದ್ದವು. ಅವುಗಳಲ್ಲಿ ಕೆಲಕೆಲವು ಭಾಗಗಳನ್ನು ಕೆಲವು ಭಾಗಗಳಲ್ಲಿ ಅಳವಡಿಸಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ಹೆಸರುಕೊಟ್ಟರು ಎಂಬ ತಾತ್ಪರ್ಯವನ್ನೇ ಹೇಳಬೇಕಾಗುತ್ತದೆ.

೫. ಯಜುರ್ವೇದದಲ್ಲಿ "ಋಗ್ವೇದದಿಂದ ವೈಶ್ಯರು ಜನಿಸಿದರು. ಯಜುರ್ವೇದದಿಂದ ಕ್ಷತ್ರಿಯರು ಹುಟ್ಟಿದರು. ಸಾಮವೇದವು ಬ್ರಾಹ್ಮಣರಿಗೆ ಉತ್ಪತ್ತಿಸ್ಥಾನ" ಎಂದು ಹೇಳಿದೆ.

**ಋಗ್ಭ್ಯೋ ಜಾತಂ ವೈಶ್ಯಂ ವರ್ಣಮಾಹುಃ । ಯಜುರ್ವೇದಂ**
**ಕ್ಷತ್ರಿಯಸ್ಯಾಹುರ್ಯೋನಿಮ್ । ಸಾಮವೇದೋ ಬ್ರಾಹ್ಮಣಾನಾಂ ಪ್ರಸೂತಿಃ।**

—ತೈ. ಬ್ರಾ. ೩-೧೨-೫೦

ಇದರ ನೇರವಾದ ಅರ್ಥವನ್ನು ತೆಗೆದುಕೊಂಡರೆ :

ಋಗ್ವೇದವು ಉಳಿದ ವೇದಗಳಿಗಿಂತ ಕೆಳಗಿನ ಸ್ಥಾನದಲ್ಲಿಯೇ ಇರಬೇಕಾಗುತ್ತದೆ. ಸಾಮವೇದವು ಅಗ್ರವರ್ಣದ ಉತ್ಪತ್ತಿಸ್ಥಾನವಾದುದರಿಂದ ಅದಕ್ಕೇ ಪ್ರಾಥಮ್ಯವನ್ನೂ ಪ್ರಾಶಸ್ತ್ಯವನ್ನೂ ಹೇಳಬೇಕಾಗುತ್ತದೆ. ಭಗವಂತನು ಗೀತೆಯ ವಿಭೂತಿಯೋಗದಲ್ಲಿ "ವೇದಾನಾಂ ಸಾಮವೇದೋಽಸ್ಮಿ" ಎಂದು ಸಾಮವೇದವನ್ನೇ ಉಳಿದ ವೇದಗಳಿಗಿಂತ ಶ್ರೇಷ್ಠ ಎಂದು ಸೂಚಿಸುತ್ತಾನೆ.

೬. ತೈತ್ತಿರೀಯೋಪನಿಷತ್ತಿನಲ್ಲಿ ಪ್ರಾಣಮಯಕೋಶವನ್ನು ವಿವರಿಸುವಾಗ



ಆ ಪುರುಷನಿಗೆ ಯಜುಸ್ಸೇ ಶಿರಸ್ಸು, ಋಕ್ಕು ದಕ್ಷಿಣಪಕ್ಷ, ಸಾಮವು ಉತ್ತರಪಕ್ಷ ಎಂಬ ಮಾತನ್ನು ನೋಡುತ್ತೇವೆ.

ತಸ್ಯ ಯಜುರೇವ ಶಿರಃ । ಋಗ್ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ ।

—ತೈ.ಉ. ಬ್ರಹ್ಮಾನಂದವಲ್ಲೀ

ಅವಯವಗಳಲ್ಲಿ ಶಿರಸ್ಸು ಉತ್ತಮವಾದ ಅಂಗವಾದುದರಿಂದ ಆದರ ಸ್ಥಾನಕ್ಕಾಗಿ ರೂಪಿಸಲ್ಪಟ್ಟ ಯಜುರ್ವೇದವು ಉಳಿದೆರಡು ವೇದಗಳಿಗಿಂತ ಶ್ರೇಷ್ಠ ಎಂದು ಅರ್ಥವಾಗುತ್ತದೆ.

೭. ವೇದಗಳ ವಿನಿಯೋಗ ಅಗ್ನಿಹೋತ್ರ ಮತ್ತು ಯಜ್ಞಗಳಿಗಾಗಿ. ಆ ಯಜ್ಞದಲ್ಲಿ ಅಧ್ವರ್ಯುವೇ ಮುಖ್ಯ ಕಾರ್ಯಕರ್ತ. ಆದುದರಿಂದ ಅಧ್ವರ್ಯು ವೇದವಾದ ಯಜುರ್ವೇದಕ್ಕೆ ಒಂದು ದೃಷ್ಟಿಯಿಂದ ಹೆಚ್ಚು ಪ್ರಾಮುಖ್ಯ ಎಂದೂ ಹೇಳಬಹುದು.

ಹೀಗೆ ಎಲ್ಲಾ ವೇದಗಳಿಗೂ ಆಯಾ ಸ್ಥಾನದಲ್ಲಿ ಪಾರಮ್ಯವಿದ್ದೇ ಇರುತ್ತದೆ. ಋಗ್ವೇದವೊಂದೇ ಶ್ರೇಷ್ಠ ಎನ್ನುವುದು ಅತಿವಾದವಾಗುತ್ತದೆ.

೮. ಸೂರ್ಯದೇವನು ಪ್ರಾತಃಕಾಲದಲ್ಲಿ ಋಗ್ವೇದದ ಬಲದಿಂದಲೂ, ಮಧ್ಯಾಹ್ನಕಾಲದಲ್ಲಿ ಯಜುರ್ವೇದದ ಬಲದಿಂದಲೂ, ಸಾಯಂಕಾಲದಲ್ಲಿ ಸಾಮವೇದದ ಬಲದಿಂದಲೂ ಇರುತ್ತಾನೆಂದೂ ಮೂರು ವೇದಗಳ ಸಾಮರ್ಥ್ಯದಿಂದಲೇ ಅವನು ಇರುವನೆಂದೂ ಶ್ರುತಿಯು ಸಾರುತ್ತದೆ.

ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ ।

ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ ।

ಸಾಮವೇದೇನಾಸ್ತಮಯೇ ಮಹೀಯತೇ ।

—ತೈ.ಬ್ರಾ. ೩-೧೨-೪೯

ಈ ಮೂರು ಸಂಧ್ಯಾಕಾಲಗಳೂ ಆಯಾ ಕರ್ಮಕ್ಕೆ ಸಮಾನವಾಗಿ ಪ್ರಶಸ್ತಗಳಾಗಿರುವುದರಿಂದ ಅವುಗಳೊಡನೆ ಸಂಬಂಧಪಟ್ಟಿರುವ ಮೂರು ವೇದಗಳೂ ಆಯಾ ಸ್ಥಾನದಲ್ಲಿ ಸಮಾನಪ್ರಾಶಸ್ತ್ಯವನ್ನು ಹೊಂದಿವೆಯೆಂದೇ ಹೇಳಬೇಕಾಗುತ್ತದೆ.



೬. ಯೋಗಶಾಸ್ತ್ರದ ದೃಷ್ಟಿಯಿಂದಲೂ ಮೂರು ವೇದಗಳಿಗೂ ಸಮನಾದ ಶ್ರೇಷ್ಠತೆಯನ್ನು ಹೇಳಬೇಕಾಗುತ್ತದೆ. ಅದರ ಪ್ರಕಾರ ಋಗ್ವೇದಕ್ಕೆ ಮೂಲಾಧಾರವೂ, ಯಜುರ್ವೇದಕ್ಕೆ ಹೃದಯವೂ, ಸಾಮವೇದಕ್ಕೆ ಭ್ರೂಮಧ್ಯವೂ ಸ್ಥಾನಗಳಾಗುತ್ತವೆ. ಆ ಮೂರು ಸ್ಥಾನಗಳಲ್ಲಿರುವ ಗ್ರಂಥಿಗಳ ಮೂಲಕವೂ ಪರಮಾತ್ಮನ ಸಾಕ್ಷಾತ್ಕಾರಸ್ಥಾನವಾದ ಸುಷುಮ್ನಾನಾಡಿಯೊಳಗೆ ಪ್ರವೇಶ ಮಾಡಬಹುದು. ಆದುದರಿಂದ ಮೂರು ವೇದಗಳಿಗೂ ಏಕರೀತಿಯ ಪ್ರಾಶಸ್ತ್ಯವನ್ನೇ ನಾವು ಹೇಳಬೇಕಾಗುತ್ತದೆ.

## ಸಂಹಿತೆ ಮೊದಲಾದ ವಿಭಾಗ

ವೇದಗಳನ್ನು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಎಂದು ನಾಲ್ಕಾಗಿ ವಿಂಗಡಿಸುವಂತೆಯೇ ಸಂಹಿತಾ, ಬ್ರಾಹ್ಮಣ ಮತ್ತು ಆರಣ್ಯಕೋಪನಿಷತ್ತು ಎಂದು ಮೂರು ಭಾಗಗಳಾಗಿ ವಿಂಗಡಿಸುವುದೂ ಉಂಟು.[1] ಈ ವಿಭಾಗಗಳು ಎಲ್ಲ ವೇದಗಳಿಗೂ ಅನ್ವಯಿಸುತ್ತವೆ. ವೇದಗಳಿಗೆ "ತ್ರಯೀ" ಎಂಬ ಹೆಸರು ಬರಲು ಈ ಮುಬ್ಭಾಗವೂ ಒಂದು ಕಾರಣ ಎಂದು ಹಿಂದೆಯೇ ಗಮನಿಸಿದ್ದೇವೆ.

ಇವುಗಳಲ್ಲಿ ಸಂಹಿತಾ ಎಂದರೆ ಒಟ್ಟುಗೂಡಿಸಿರುವ ಭಾಗ. ಬೇರೆ ಬೇರೆ ಋಷಿಗಳು ಕಂಡುಹಿಡಿದ ಮಂತ್ರಗಳನ್ನು ಒಂದು ಕ್ರಮದಲ್ಲಿ ಸೇರಿಸಿ ಒಂದೇ ಕಡೆ ಒಟ್ಟಾಗಿ ಕೂಡಿಸಿರುವ ಭಾಗ; ಅಥವಾ ಪದಪಾಠವನ್ನು ಸ್ವರ, ಸಂಧಿ, ಇತ್ಯಾದಿ ನಿಯಮಾನುಸಾರ ಕೂಡಿಸಿ ಒಟ್ಟಾಗಿ ದಂಡಾಕಾರವಾಗಿ ಪಾರಾಯಣ ಮಾಡುವಂತೆ ಅಳವಡಿಸಿರುವ ವೇದಮಂತ್ರಗಳು. ಐತರೇಯಸಂಹಿತಾ, ತೈತ್ತಿರೀಯಸಂಹಿತಾ, ವಾಜಸನೇಯಸಂಹಿತಾ, ಕೌಥುಮೀಯಸಂಹಿತಾ, ಶೌನಕೀಯಸಂಹಿತಾ ಇತ್ಯಾದಿಗಳು ಇದಕ್ಕೆ ಉದಾಹರಣೆಗಳು.

ಸಂಹಿತೆ ಎಂಬುದನ್ನು ಇನ್ನೊಂದು ಬಗೆಯಾಗಿಯೂ ವಿವರಿಸಬಹುದು. "ಪರಸ್ಸನ್ನಿಕರ್ಷಸ್ಸಂಹಿತಾ"[2] ಎಂದು ವ್ಯಾಕರಣದಲ್ಲಿ ಸಂಹಿತೆಯ ಲಕ್ಷಣವನ್ನು ಹೇಳಿರುತ್ತಾರೆ. ಪ್ರಕೃತಿ ಪ್ರತ್ಯಯಗಳು ಅಥವಾ ಪದಗಳು ಪರಸ್ಪರವಾಗಿ ಮಧ್ಯದಲ್ಲಿ ವಿರಾಮವಿಲ್ಲದೇ ಸೇರುವುದು 'ಸಂಹಿತೆ' ಎನಿಸಿಕೊಳ್ಳುತ್ತದೆ.

---

1. ಹೀಗೆ ವಿಭಾಗ ಮಾಡಿದ್ದರೂ ಆರಣ್ಯಕೋಪನಿಷತ್ತುಗಳು ಬ್ರಾಹ್ಮಣಗಳೇ ಆಗುತ್ತವೆ. ಆದ್ದರಿಂದಲೇ 'ಮಂತ್ರಬ್ರಾಹ್ಮಣಯೋಃವೇದನಾಮಧೇಯಮ್" ಎಂದು ಶಾಸ್ತ್ರದಲ್ಲಿ ಹೇಳಿದೆ.

2. ಪಾಣಿನೀಯ ಸೂತ್ರ ೧-೪-೧೦೯.



ಆದರೆ ವೇದಗಳಲ್ಲಿ 'ಸಂಹಿತೆ' ಎಂಬ ಪದವು ಮಂತ್ರಗಳ ಸಮೂಹದಿಂದ ಕೂಡಿದ ಭಾಗಕ್ಕೆ ಅನ್ವಯಿಸುತ್ತದೆ. 'ಋಗ್ವೇದ ಸಂಹಿತೆ', 'ಶುಕ್ಲಯಜುರ್ವೇದ ಸಂಹಿತೆ' ಮೊದಲಾದವುಗಳಲ್ಲಿ ಮಂತ್ರಭಾಗವು ಮಾತ್ರ ಇದೆ. ಕೃಷ್ಣ ಯಜುರ್ವೇದದ ಸಂಹಿತಾಭಾಗದಲ್ಲಿ ಬ್ರಾಹ್ಮಣಭಾಗವೂ, ಬ್ರಾಹ್ಮಣಭಾಗದಲ್ಲಿ ಮಂತ್ರಭಾಗವೂ ಸೇರಿರುತ್ತದೆ. ತೈತ್ತಿರೀಯಸಂಹಿತೆಯ ನಾಲ್ಕನೆಯ ಕಾಂಡವು ಚಯನದ ಮಂತ್ರಭಾಗದಿಂದ ಕೂಡಿದೆ. ಐದನೆಯ ಕಾಂಡವು ಚಯನಬ್ರಾಹ್ಮಣವನ್ನು ತಿಳಿಸುತ್ತದೆ. ತೈತ್ತಿರೀಯ ಬ್ರಾಹ್ಮಣದ

**ಸತ್ಯಂ ಪ್ರಪದ್ಯೇ ।**

— ತೈ.ಬ್ರಾ. ೩-೫-೧

ಎಂಬ ಪ್ರಶ್ನವು ಇಷ್ಟಿಹೌತ್ರಮಂತ್ರಗಳಿಂದ ಕೂಡಿದೆ. ಇದರ ಬ್ರಾಹ್ಮಣಭಾಗವು ತೈತ್ತಿರೀಯ ಸಂಹಿತೆಯ ಎರಡನೆಯ ಕಾಂಡದಲ್ಲಿ

**ಅಗ್ನೇ ಮಹಾಗ್ಂ ಅಸೀತ್ಯಾಹ.....।**

—ತೈ. ಸಂ. ೨-೫-೫೧

ಮೊದಲಾದ ಅನುವಾಕಗಳಲ್ಲಿ ಬರುತ್ತದೆ. ಹೀಗೆ ಸಂಹಿತೆಯಲ್ಲಿ ಬ್ರಾಹ್ಮಣವೂ, ಬ್ರಾಹ್ಮಣಗಳಲ್ಲಿ ಮಂತ್ರಭಾಗವೂ ಸೇರಿರುವುದರಿಂದ ಸಾಮಾನ್ಯವಾಗಿ 'ಸಂಹಿತಾ' ಎಂಬ ಪದವನ್ನು'ಮಂತ್ರಗಳ ಸಮೂಹ' ಎಂಬ ಅರ್ಥದಲ್ಲಿ ಪ್ರಯೋಗಿಸುತ್ತಾರೆ.

## ಬ್ರಾಹ್ಮಣಗಳು

ಬ್ರಾಹ್ಮಣಗಳು ಎಂದರೆ ಸಂಹಿತೆಯ ಮಂತ್ರಗಳ ವ್ಯಾಖ್ಯಾನರೂಪವಾದ ಗದ್ಯಗ್ರಂಥ. ಬ್ರಹ್ಮವನ್ನು (ಮಂತ್ರ) ವಿವರಿಸುವುದರಿಂದ ಇವುಗಳಿಗೆ ಬ್ರಾಹ್ಮಣ ಎಂದು ಹೆಸರು. ಸಂಹಿತಾಮಂತ್ರಗಳನ್ನು ಯಜ್ಞಗಳಲ್ಲಿ ಹೇಗೆ ವಿನಿಯೋಗಿಸಬೇಕು? ಯಾವ ಕಾಲದಲ್ಲಿ ಯಾವ ಕರ್ಮವನ್ನು ಹೇಗೆ ಮಾಡಬೇಕು? ಎಂಬುದನ್ನೂ ಅದಕ್ಕೆ ಸಂಬಂಧಿಸಿದ ಉಪಾಖ್ಯಾನವನ್ನೂ ಹೇಳುವ ವೇದಭಾಗ.

ಐತರೇಯಬ್ರಾಹ್ಮಣ, ಕೌಷೀತಕೀಬ್ರಾಹ್ಮಣ—ಇವು ಋಗ್ವೇದದ ಬ್ರಾಹ್ಮಣಗಳು. ತೈತ್ತಿರೀಯಬ್ರಾಹ್ಮಣ, ಶತಪಥಬ್ರಾಹ್ಮಣ ಇವು ಯಜುರ್ವೇದದ ಬ್ರಾಹ್ಮಣಗಳು. ತಾಂಡ್ಯಬ್ರಾಹ್ಮಣ, ಜೈಮಿನೀಯಬ್ರಾಹ್ಮಣ, ಷಡ್ವಿಂಶಬ್ರಾಹ್ಮಣ ಇವು ಸಾಮವೇದದ ಬ್ರಾಹ್ಮಣಗಳು. ಗೋಪಥಬ್ರಾಹ್ಮಣವು ಅಥರ್ವವೇದದ ಬ್ರಾಹ್ಮಣ.



ಬ್ರಾಹ್ಮಣಗಳನ್ನು ಇನ್ನೊಂದು ರೀತಿ ವಿವರಿಸಬಹುದು. ವೇದದಲ್ಲಿಯೇ ಬರುವ ಇತಿಹಾಸಗಳು, ಪುರಾಣಗಳೂ ಕೆಲವಿವೆ. ಅವುಗಳನ್ನು ಬ್ರಾಹ್ಮಣಗಳೆಂದೇ ತಿಳಿಯಬೇಕು. ಆದುದರಿಂದ ಮಂತ್ರ ಮತ್ತು ಬ್ರಾಹ್ಮಣಗಳನ್ನು ವಿವರಿಸುವಾಗ ಮಂತ್ರವೆಂದರೆ "ಯಾಜ್ಞಿಕನಿಷ್ಠಮಂತ್ರತ್ವಪ್ರಕಾರಕಪ್ರಸಿದ್ಧಿವಿಷಯತ್ವಮ್" ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಯಜ್ಞಮಾಡುವವರು ಯಾವುದನ್ನು ಮಂತ್ರವೆಂದು ಗುರುತಿಸಿ ಹೇಳುವರೋ ಅದೇ ಮಂತ್ರ ಎಂಬುದು ಆ ವಾಕ್ಯದ ಅರ್ಥ. "ಶೇಷೇ ಬ್ರಾಹ್ಮಣಶಬ್ದಃ" ಎಂಬ ಮಾತು ಮಂತ್ರಗಳನ್ನು ಬಿಟ್ಟು ಉಳಿದೆಲ್ಲ ಭಾಗಗಳೂ ಬ್ರಾಹ್ಮಣ ಎಂದೇ ತಿಳಿಸುತ್ತದೆ. ಆದುದರಿಂದ ಮಂತ್ರವನ್ನು ಬಿಟ್ಟು ಉಳಿದ ಭಾಗಗಳಾದ ಇತಿಹಾಸ, ವೇದದಲ್ಲಿರುವ ಪುರಾಣ, ಕಲ್ಪ, (ಸಿದ್ಧವಾದ ಪ್ರಯೋಗ ವನ್ನು ಹೇಳುವ ಭಾಗ) ಗಾಥಾ, ನಾರಾಶಂಸೀ ಇವುಗಳೂ ಬ್ರಾಹ್ಮಣದಲ್ಲಿಯೇ ಅಂತರ್ಗತವಾಗಿವೆ. ವೇದದಲ್ಲಿ ಈ ಎಲ್ಲ ಭಾಗಗಳೂ ಇವೆ ಎಂಬುದನ್ನು ಈ ಮಂತ್ರದಿಂದ ತಿಳಿಯಬಹುದು.

**ಬ್ರಾಹ್ಮಣಾನೀತಿಹಾಸಾನ್ಪುರಾಣಾನಿ ಕಲ್ಪಾನ್ಗಾಥಾನಾರಾಶಗ್ಂಸೀಃ ಪ್ರೀಣಾತಿ।**

(ಬ್ರಹ್ಮಯಜ್ಞವನ್ನು ಮಾಡುವವನು) ಬ್ರಾಹ್ಮಣಗಳನ್ನೂ, ಇತಿಹಾಸಗಳನ್ನೂ, ಪುರಾಣಗಳನ್ನೂ, ಕಲ್ಪಗಳನ್ನೂ, ಗಾಥೆಗಳನ್ನೂ, ನಾರಾಶಂಸಿಗಳನ್ನೂ ತೃಪ್ತಿಪಡಿಸುತ್ತಾನೆ.

ಇತಿಹಾಸಕ್ಕೆ ಉದಾಹರಣೆ :

**ದೇವಾಸುರಾಸ್ಸಂಯತ್ತಾ ಆಸನ್ತೇ ದೇವಾ ವಿಜಯಮುಪಯನ್ತಃ ।**

ದೇವತೆಗಳು ಮತ್ತು ಅಸುರರು ಯುದ್ಧಮಾಡಿದರು. ದೇವತೆಗಳು ಗೆಲುವನ್ನು ಪಡೆದರು.

ಪುರಾಣದ ಉದಾಹರಣೆ :

**ಇದಂ ವಾ ಅಗ್ರೇ ನೈವ ಕಿಂಚನಾಸೀತ್ । ನ ದ್ಯೌರಾಸೀತ್ ।**

**ನ ಪೃಥಿವೀ ।**

ಸೃಷ್ಟಿಯ ಆರಂಭದಲ್ಲಿ ಏನೂ ಸ್ವಲ್ಪವೂ ಇರಲಿಲ್ಲ. ಆಕಾಶವೂ ಇರಲಿಲ್ಲ. ಪೃಥಿವಿಯೂ ಇರಲಿಲ್ಲ.



ಕಲ್ಪದ ಉದಾಹರಣೆ :

**ಇತಿ ಮಂತ್ರಾಃ । ಕಲ್ಪೋಽತ ಊರ್ಧ್ವಮ್ । ಯದಿ ಬಲಿಗ್ಂ ಹರೇತ್ ।**

**ಹಿರಣ್ಯನಾಭಯೇ ವಿತುದಯೇ ಕೌಬೇರಾಯಾಯಂ ಬಲಿಃ ।**

**ಸರ್ವಭೂತಾಧಿಪತಯೇ ನಮ ಇತಿ ।**

ಹೀಗೆ ಮಂತ್ರಗಳಿವೆ. ನಂತರ ಕಲ್ಪ. ಬಲಿಯನ್ನು ನೀಡುವಾಗ 'ಹಿರಣ್ಯ ನಾಭಯೇ' ಎಂಬ ಮಂತ್ರದಿಂದ ಬಲಿಹರಣ ಮಾಡಬೇಕು.

ಗಾಥೆಗೆ ಉದಾಹರಣೆ :

**ಯಮಗಾಥಾಭಿಃ ಪರಿಗಾಯತಿ ।**[1]

ನಾರಾಶಂಸಿಯೆಂದರೆ ಮನುಷ್ಯರ ಕಥೆಗಳನ್ನು ಹೇಳುವ ಭಾಗ.

ನಾರಾಶಂಸಿಗೆ ಉದಾಹರಣೆ :

**ನಾರಾಶಗ್ಂಸ್ಯರ್ಚಾಭಿಷಿಂಚತಿ । ಮನುಷ್ಯಾ ವೈ ನರಾಶಗ್ಂಸಃ ।**

ಬ್ರಾಹ್ಮಣವನ್ನು ವಿಧಿ, ಅರ್ಥವಾದವೆಂದು ಎರಡು ವಿಧವಾಗಿ ವಿಂಗಡಿಸಬಹುದು.

**ಯತ್ಪರ್ಣಶಾಖಯಾ ವತ್ಸಾನಪಾಕರೋತಿ ।**

ಮುತ್ತುಗದ ಶಾಖೆಯಿಂದ ಕರುಗಳನ್ನು ತಾಯಿ ಹಸುಗಳಿಂದ ದೂರಮಾಡಬೇಕು ಎನ್ನುವುದು 'ವಿಧಿ'.

**ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ ।**[2]

**ತಂ ಗಾಯತ್ರ್ಯಾಽಽಹರತ್ ।**

**ತಸ್ಯ ಪರ್ಣಮಚ್ಛಿದ್ಯತ । ತತ್ಪರ್ಣೋಽಭವತ್ ।**

---

೧. ಯಮಗಾಥೆಗಳೆಂದೂ ನಾರಾಶಂಸಿಗಳೆಂದೂ ಕೆಲವು ಮಂತ್ರಗಳು ವೇದದಲ್ಲಿವೆ.

೨. ಸೋಮಲತೆಯು ಭೂಮಿಯ ಮೇಲೆ ಮೂರನೆಯ ಲೋಕದಲ್ಲಿ ಇದ್ದಿತೆಂದೂ, ಅದನ್ನು ಗಾಯತ್ರಿಯಿಂದ ತರಲಾಯಿತೆಂದೂ ವೇದದಲ್ಲಿ ಆಖ್ಯಾನವಿದೆ.



—ಇತ್ಯಾದಿಯಾಗಿ ಮುತ್ತುಗಮರದ ಪ್ರಾಶಸ್ತ್ಯವನ್ನು ಹೇಳಿ ವಿಧಿಯನ್ನು ಸ್ತುತಿಸುವ ಭಾಗವು ಅರ್ಥವಾದ.

**ಬ್ರಾಹ್ಮಣಶೇಷೋಽರ್ಥವಾದಃ । ನಿಂದಾ ಪ್ರಶಂಸಾ ಪರಕೃತಿಃ ಪುರಾಕಲ್ಪಶ್ಚ।**

—ಆಪಸ್ತಂಬ ಪರಿಭಾಷೆ, ೧-೩೫-೩೮

**ಯಥಾತಿಥಯೇ ಪ್ರದ್ರುತಾಯ ಶೂನ್ಯಾಯಾವಸಥಾಯಾಹಾರ್ಯಗ್ಂ ಹರಂತಿ। ತಾದೃಗೇವ ತತ್ ।**

ಉದಿತಹೋಮ ಮಾಡುವುದಾದರೆ ಸೂರ್ಯೋದಯವಾಗಿರುವುದರಿಂದ ಸೂರ್ಯನಿಗೆ ಕೊಡುವ ಹೋಮವು ಅತಿಥಿಯು ಹೊರಟುಹೋದಮೇಲೆ ಶೂನ್ಯವಾದ ಮನೆಗೆ ಅತಿಥಿಭೋಜನವನ್ನು ತಂದಂತೆ—ಇದು 'ನಿಂದೆ.'

**ಉಪರೀವ ನಿದಧಾತಿ । (ವಿಧಿ). ಉಪರೀವ ಹಿ ಸುವರ್ಗೋ ಲೋಕಃ ।**

**ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ ।**

ವತ್ಸಾಪಾಕರಣ ಶಾಖೆಯನ್ನು ಮೇಲಿಡಬೇಕು—ವಿಧಿ. ಸುವರ್ಗಲೋಕವು ಮೇಲೆ ತಾನೇ ಇದೆ. ಹೀಗೆ ಶಾಖೆಯನ್ನು ಮೇಲಿಡುವುದರಿಂದ ಸುವರ್ಗಲೋಕವು ಪ್ರಾಪ್ತಿಯಾಗುತ್ತದೆ. ಇದು 'ಪ್ರಶಂಸೆ.'

**ಅಗ್ನಿರ್ವಾ ಅಕಾಮಯತ । ಅನ್ನಾದೋ ದೇವಾನಾಗ್ಂ ಸ್ಯಾಮಿತಿ ।**

ದೇವತೆಗಳಿಗೆ ತಾನು ಅನ್ನವನ್ನು ಕೊಡುವವನಾಗಬೇಕೆಂದು ಅಗ್ನಿಯು ಅಪೇಕ್ಷಿಸಿದನು. ಇದು'ಪರಕೃತಿ.'

**ಆಪೋ ವಾ ಇದಮಗ್ರೇ ಸಲಿಲಮಾಸೀತ್ ।**

ಮೊದಲು ನೀರು ಮಾತ್ರವೇ ಇದ್ದಿತು—ಇದು 'ಪುರಾಕಲ್ಪ.' ಬಹುಪುರುಷ ಕರ್ತೃಕವು ಪುರಾಕಲ್ಪವೆಂದು ಕೆಲವರ ಮತ.

ಅರ್ಥವಾದವನ್ನು ಮತ್ತೊಂದು ರೀತಿಯಲ್ಲಿಯೂ ವಿಭಾಗ ಮಾಡುತ್ತಾರೆ. ವೇದಾಂತಮತಾನುಸಾರವಾಗಿ ಅರ್ಥವಾದಗಳು ಮೂರು ವಿಧ.



ವಿರೋಧೇ ಗುಣವಾದಃ ಸ್ಯಾದನುವಾದೋಽವಧಾರಿತೇ ।
ಭೂತಾರ್ಥವಾದಸ್ತದ್ಧಾನಾದರ್ಥವಾದಸ್ತ್ರಿಧಾ ಮತಃ ॥[1]
ಗ್ರಾವಾಣಃ ಪ್ಲವಂತೇ ।

ಮೊದಲಾದ ಅರ್ಥವಾದಗಳು ಗುಣವಾದಗಳು ; ಎಂದರೆ ಪ್ರಶಂಸಾಪರಗಳು.

ದ್ವಿಸ್ಸಂವತ್ಸರಸ್ಯ ಸಸ್ಯಂ ಪಚ್ಯತೇ ।

ಮೊದಲಾದವು ಅನುವಾದಾರ್ಥವಾದಗಳು. ಎಂದರೆ ಪ್ರತ್ಯಕ್ಷಾದಿಗಳಿಂದ ತಿಳಿದುದನ್ನು ಹೇಳತಕ್ಕವುಗಳು.

ಯ ಏವಂ ವಿದ್ವಾನಮಾವಾಸ್ಯಾಂ ಯಜತೇ ಯಾವದತಿರಾತ್ರೇಣೋ
ಪಾಪ್ನೋತಿ ತಾವದುಪಾಪ್ನೋತಿ ।

ಮೊದಲಾದವು ಯಾಗವನ್ನು ತಿಳಿದರೆ ಆ ಜ್ಞಾನದ ಫಲಗಳನ್ನು ತಿಳಿಸುವ ಅರ್ಥವಾದಗಳು. ಭೂತಾರ್ಥವಾದಗಳು. ಇವುಗಳಿಗೆ ಸ್ವಾರ್ಥದಲ್ಲಿಯೂ ಪ್ರಾಮಾಣ್ಯವುಂಟು. ತಾತ್ಪರ್ಯಾರ್ಥ ಎಂದರೆ ಪ್ರಶಂಸೆಯಲ್ಲಿಯೂ ಪ್ರಾಮಾಣ್ಯ ಉಂಟು.

## ಅರಣ್ಯಕಗಳು

ಕರ್ಮವನ್ನು ಹೇಳುವ ಸಂಹಿತೆ, ಬ್ರಾಹ್ಮಣಗಳಿಗೂ ಮತ್ತು ಶುದ್ಧಜ್ಞಾನವನ್ನು ಉಪದೇಶಿಸುವ ಉಪನಿಷತ್ತುಗಳಿಗೂ ಸೇತುವೆಯಂತಿರುವ ಗದ್ಯರೂಪವಾದ ವೇದಭಾಗಗಳು ಆರಣ್ಯಕಗಳು. ಆರಣ್ಯಕದ ಕೊನೆಯ ಭಾಗವೇ ಉಪನಿಷತ್ತಾಗಿರುವುದರಿಂದ 'ಆರಣ್ಯಕೋಪನಿಷತ್' ಎಂದು ಒಂದಾಗಿ ಸೇರಿಸಿ ಹೇಳುವುದುಂಟು. ಆರಣ್ಯಕಗಳು 'ಅರಣ್ಯೇಽಧೀಯೀತ' ಎಂಬ ವೇದವಾಕ್ಯದಂತೆ ಕಾಡಿನಲ್ಲಿ ಅಧ್ಯಯನ ಮಾಡಬೇಕೆಂಬ ನಿಯಮಕ್ಕೆ ಒಳಗಾದ ಭಾಗಗಳು. ಆರಣ್ಯಕ ಮತ್ತು ಉಪನಿಷತ್ತುಗಳು ಕೆಲವೆಡೆ ಕರ್ಮಕಾಂಡ, ಉಪಾಸನಾಕಾಂಡ ಮತ್ತು ಜ್ಞಾನಕಾಂಡಕ್ಕೂ ಸಂಬಂಧಿಸಿವೆ. ಆರಣ್ಯಕದಲ್ಲಿಯೇ ಯಜ್ಞದಲ್ಲಿ ಮಾಡಬೇಕಾದ ಪ್ರವರ್ಗ್ಯವಿಧಿಯನ್ನು ಹೇಳುವ— ಕರ್ಮಕಾಂಡವೂ, 'ಪ್ರತಿಷ್ಠೇತ್ಯುಪಾಸೀತ' ಮೊದಲಾದ ಮಾತಿನಿಂದ ಉಪಾಸನಾಕಾಂಡವೂ 'ಅಣೋರಣೀಯಾನ್ ಮಹತೋ ಮಹೀಯಾನಾತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ' ಎಂಬ ಮಾತಿನಿಂದ ಜ್ಞಾನಕಾಂಡವೂ—ಇದೆಯೆಂದು ಹೇಳಬಹುದು.

---

1. ಅರ್ಥವಾದವನ್ನು ಮುಂದೆ ಇನ್ನೂ ವಿವರಿಸಲಾಗುವುದು.



ಆರಣ್ಯಕೋಪನಿಷತ್ತುಗಳು ಯಜ್ಞಗಳಿಗೆ ತಾತ್ತ್ವಿಕವಾದ ಅರ್ಥವನ್ನು ಕೊಟ್ಟು ಜ್ಞಾನದೆಡೆಗೆ ನಮ್ಮನ್ನು ಒಯ್ಯುತ್ತವೆ. ಆರಣರು (ನಿವೃತ್ತಿಧರ್ಮದಲ್ಲಿರುವ ನೈಷ್ಠಿಕರು, ಸನ್ಯಾಸಿಗಳು) ಅಧ್ಯಯನ ಮಾಡಲು ಯೋಗ್ಯವಾದ ಅತಿಪವಿತ್ರವೂ, ರಹಸ್ಯವೂ ಆದ ವಿದ್ಯೆಯ ಗ್ರಂಥಗಳಾಗಿದ್ದರಿಂದಲೂ ಇವುಗಳಿಗೆ 'ಆರಣ್ಯಕ' ಎಂದು ಹೆಸರು.

**ಅರಣ್ಯಾಧ್ಯಯನಾದೇತದಾರಣ್ಯಕಮಿತೀರ್ಯತೇ ।**
**ಅರಣ್ಯೇ ತದಧೀಯೀತೇತ್ಯೇವಂ ವಾಕ್ಯಂ ಪ್ರಚಕ್ಷತೇ ॥**
**ಅರಣಾಧ್ಯಾಯಯೋಗ್ಯತ್ವಾದಪ್ಯಾರಣ್ಯಕಮಿಷ್ಯತೇ ।**

—ಸಾಯಣಭಾಷ್ಯ

ತೈತ್ತಿರೀಯಆರಣ್ಯಕ, ಐತರೇಯಆರಣ್ಯಕ, ಬೃಹದಾರಣ್ಯಕ, ತಲವಕಾರಾರಣ್ಯಕ ಇವು ಆರಣ್ಯಕಗಳಿಗೆ ಉದಾಹರಣೆಗಳು.

ಉಪನಿಷತ್ತುಗಳು :

**ಉಪನಿಷದಿತಿ ವಿದ್ಯೋಚ್ಯತೇ । ತತ್ಸೇವಿನಾಂ ಗರ್ಭಜನ್ಮಜರಾದಿನಿಶಾತನಾತ್, ತದವಸಾದನಾದ್ವಾ ಬ್ರಹ್ಮಣೋ ವಾ ಉಪಗಮಯಿತೃತ್ವಾತ್, ಉಪನಿಷಣ್ಣಂ ವಾ ಅಸ್ಯಾಂ ಶ್ರೇಯಃ ಇತಿ. ತದರ್ಥತ್ವಾತ್ ಗ್ರಂಥೋಽಪ್ಯುಪನಿಷತ್ ।**

ಶಾಂಕರಭಾಷ್ಯ ತೈ.ಉ. 1–1

ಉಪನಿಷತ್ತುಗಳು ಜೀವ, ಬ್ರಹ್ಮ, ಜಗತ್ತು ಮುಂತಾದ ರಹಸ್ಯಗಳನ್ನೂ, ದಿವ್ಯಜ್ಞಾನವನ್ನೂ ಹೇಳುವ ವೇದಭಾಗಗಳು. ಇವುಗಳಿಗೆ ವೇದಾಂತ ಎಂದು ಹೆಸರು. ವೇದದ ಮುಖ್ಯವಾದ ಗುರಿಯಾದ ಮೋಕ್ಷವನ್ನೂ, ವೇದದ ಸಿದ್ಧಾಂತವನ್ನು ಹೇಳುವುದರಿಂದಲೂ, ವೇದದ ಕಡೆಯಲ್ಲಿ ಬಂದಿರುವುದರಿಂದಲೂ ವೇದಾಂತ ಎಂಬ ಹೆಸರು ಇವುಗಳಿಗೆ ಹೊಂದಿಕೆಯಾಗುತ್ತದೆ. 'ಉಪನಿಷತ್' ಎಂಬ ಪದಕ್ಕೆ ರಹಸ್ಯವಿದ್ಯೆ, ಆಚಾರ್ಯನ ಹತ್ತಿರವೇ ಕುಳಿತು ಕಲಿಯಬೇಕಾದ ವಿದ್ಯೆ, ಉಪಾಸನಾ ವಿದ್ಯೆ, ಪರಮಾತ್ಮನ ಹತ್ತಿರಕ್ಕೆ ಒಯ್ಯುವ ವಿದ್ಯೆ, ಪರಮಶ್ರೇಯಸ್ಸಿಗೆ ಸ್ಥಾನವಾಗಿರುವ ವಿದ್ಯೆ, ಸಂಸಾರಬಂಧವನ್ನು ಸಡಿಲಿಸುವ—ಪರಮಾತ್ಮನನ್ನು ಹೊಂದಿಸುವ—ಅವಿದ್ಯೆಯನ್ನು ನಾಶಪಡಿಸುವ ವಿದ್ಯೆ—ಇತ್ಯಾದಿ ಅರ್ಥವನ್ನು ಹೇಳುತ್ತಾರೆ. ಈ ಎಲ್ಲ ಲಕ್ಷಣಗಳೂ ಉಪನಿಷತ್ತಿಗೆ ಅನ್ವಯಿಸುತ್ತವೆ.

ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕಗಳೆಂಬ ಹತ್ತು ಉಪನಿಷತ್ತುಗಳು ಮುಖ್ಯವಾದವುಗಳು.



ಹೀಗೆ ವೇದವು 'ವೇದೇ ವಿಶ್ವಪುಮರ್ಥಸಾಧನವಿಧೌ ಬದ್ಧಾದರೇ ಜಾಗ್ರತಿ' ಎಂದು ವಿಶ್ವಗುಣಾದರ್ಶಕಾರನು ಹೇಳಿರುವಂತೆ ಮಾನವನ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಿಗೂ ಸಾಧನವಾದ ಸಂಹಿತಾದಿ ಭಾಗಗಳಿಂದ ಕೂಡಿದೆ.

## ವೇದದ ಶಾಖೆಗಳು ಎಷ್ಟು?

ಪ್ರತಿಯೊಂದು ವೇದದಲ್ಲಿಯೂ ಅನೇಕ ಶಾಖಾಭೇದಗಳನ್ನು ನೋಡುತ್ತೇವೆ. ಆದರೆ ಶಾಖಾಭೇದದಿಂದ ಮಂತ್ರಗಳ ಸಾಹಿತ್ಯದಲ್ಲಿ ಹೆಚ್ಚು ಭೇದವಾಗುವುದಿಲ್ಲ. ತಾತ್ಪರ್ಯಭೇದವಂತೂ ಇಲ್ಲವೇ ಇಲ್ಲ ಎನ್ನಬಹುದು. ಉದಾಹರಣೆಗೆ ಋಗ್ವೇದಿಗಳು ಶಾಕಲಶಾಖಾಪಾಠವನ್ನಾಗಲೀ ಬಾಷ್ಕಲಶಾಖಾಪಾಠವನ್ನಾಗಲೀ ಅನುಸರಿಸುವರು. ಅವುಗಳಿಗೆ ಹೆಚ್ಚು ವ್ಯತ್ಯಾಸವಿಲ್ಲ. ಶಾಖೆಗಳಿಗೆ ಪಾಠಕ್ರಮದಲ್ಲಿ ವ್ಯತ್ಯಾಸವಿರುವುದೇ ಹೊರತು ತಾತ್ಪರ್ಯದಲ್ಲಿ ವ್ಯತ್ಯಾಸವಿಲ್ಲ.

ಭಗವಾನ್ ಪತಂಜಲಿ ಮಹರ್ಷಿಯು ತನ್ನ ಮಹಾಭಾಷ್ಯದಲ್ಲಿ ಅಂದು ಪ್ರಚಲಿತವಿದ್ದ ವೇದದ ಶಾಖೆಗಳ ಬಗ್ಗೆ ಹೀಗೆ ಹೇಳಿರುತ್ತಾನೆ :

**"...........ಏಕಶತಮಧ್ವರ್ಯುಶಾಖಾಃ, ಸಹಸ್ರವರ್ತ್ಮಾ ಸಾಮವೇದಃ, ಏಕವಿಂಶತಿಧಾ ಬಾಹ್ವೃಚ್ಯಂ, ನವಧಾಥರ್ವಣೋವೇದಃ............"**

—ಮಹಾಭಾಷ್ಯದ ಪಸ್ಪಶಾಹ್ನಿಕ

ಯಜುರ್ವೇದದ ಶಾಖೆಗಳ ಸಂಖ್ಯೆ ನೂರೊಂದು. ಸಾಮವೇದವು ಸಾವಿರ ಶಾಖೆಯುಳ್ಳದ್ದು. ಋಗ್ವೇದದಲ್ಲಿ ಇಪ್ಪತ್ತೊಂದು ಶಾಖೆಗಳಿವೆ. ಅಥರ್ವವೇದದ ಶಾಖೆಗಳು ಒಂಬತ್ತು.

ಇದೇ ಅಭಿಪ್ರಾಯದಿಂದ ಶ್ರೀಷಡ್ಗುರುಶಿಷ್ಯರೂ ಹೀಗೆ ಹೇಳಿರುತ್ತಾರೆ :

**ಏಕವಿಂಶಾಧ್ವಸಂಯುಕ್ತಮೃಗ್ವೇದಮೃಷಯೋ ವಿದುಃ ।**
**ಸಹಸ್ರಾಧ್ವಾ ಸಾಮವೇದೋ ಯಜುರೇಕಶತಾಧಿಕಮ್ ॥**
**ನವಧಾಥರ್ವಣೋऽನ್ಯೇ ತು ಪ್ರಾಹುಃ ಪಂಚದಶಾಧ್ವಕಮ್ ॥**[1]

---

1. ಋಷಿಗಳು ಋಗ್ವೇದವನ್ನು ಇಪ್ಪತ್ತೊಂದು ಶಾಖೆಗಳನ್ನುಳ್ಳದ್ದು ಎಂಬುದಾಗಿಯೂ, ಸಾಮವೇದವು ಸಾವಿರ ಶಾಖೆಗಳುಳ್ಳದ್ದು ಎಂಬುದಾಗಿಯೂ, ಯಜುರ್ವೇದವು ನೂರೊಂದು ಶಾಖೆಗಳುಳ್ಳದ್ದು ಎಂಬುದಾಗಿಯೂ, ಅಥರ್ವವೇದವು ಒಂಬತ್ತು ಶಾಖೆಗಳುಳ್ಳದ್ದು ಎಂಬುದಾಗಿಯೂ ಹೇಳುತ್ತಾರೆ. ಕೆಲವರು ಅಥರ್ವವೇದದಲ್ಲಿ ಹದಿನೈದು ಶಾಖೆಗಳಿವೆ ಎಂದು ಹೇಳುತ್ತಾರೆ.

ಇದೇ ಅಭಿಪ್ರಾಯವನ್ನು ನೀಡುವ ಶ್ಲೋಕವು ಚರಣವ್ಯೂಹ ಗ್ರಂಥದಲ್ಲಿಯೂ ದೊರೆಯುತ್ತದೆ.



ಇವುಗಳಲ್ಲಿ ಬಹುಸಂಖ್ಯಾಕ ಶಾಖೆಗಳು ಈಗ ಲುಪ್ತವಾಗಿವೆ. ಆಪಸ್ತಂಬ, ಬೋಧಾಯನ ಮೊದಲಾದವರ ಸೂತ್ರಗಳಲ್ಲಿ ಅನೇಕ ಮಂತ್ರಗಳಿವೆ. ಅವುಗಳನ್ನು ಸೌತ್ರಮಂತ್ರಗಳೆನ್ನುತ್ತಾರೆ. ಅವುಗಳು ಯಾವ ಶಾಖೆಗಳಿಗೆ ಸೇರಿದವುಗಳೆಂಬುದು ಈಗ ತಿಳಿಯುವುದಿಲ್ಲ.

ಈಗ ಋಗ್ವೇದದಲ್ಲಿ ರೂಢಿಯಲ್ಲಿರುವ ಶಾಖೆಗಳು ಮೂರು[1] ಅವು, ಶಾಕಲ, ಬಾಷ್ಕಲ, ಸಾಂಖ್ಯಾಯನ ಎಂಬ ಶಾಖೆಗಳು. ಇವುಗಳಲ್ಲಿ ಅಲ್ಪಭೇದಗಳಿವೆ.

ಕೃಷ್ಣಯಜುರ್ವೇದದಲ್ಲಿ ತೈತ್ತಿರೀಯ, ಮೈತ್ರಾಯಣೀಯ ಎಂಬ ಶಾಖೆಗಳಿವೆ. ಮೈತ್ರಾಯಣೀಯ ಶಾಖೆಯು ಉತ್ತರಭಾರತದಲ್ಲಿದೆ. ಅದನ್ನು ಅನುಸರಿಸಿ ಮಾನವಶ್ರೌತಸೂತ್ರವಿದೆ. ತೈತ್ತಿರೀಯಶಾಖೆಯು ದಕ್ಷಿಣ ಭಾರತದಲ್ಲೆಲ್ಲಾ ಪ್ರಚಾರದಲ್ಲಿದೆ. ಈ ಶಾಖೆಯನ್ನು ಅನುಸರಿಸಿ ಆಪಸ್ತಂಬ, ಬೋಧಾಯನ, ಸತ್ಯಾಷಾಢ, ವೈಖಾನಸ ಶ್ರೌತಸೂತ್ರಗಳಿವೆ. ಕಾಠಕ ಶಾಖೆಯೂ ಇದೆಯೆಂದು ಕೇಳಿರುತ್ತೇವೆ.

ಶುಕ್ಲಯಜುರ್ವೇದದಲ್ಲಿ ಕಾಣ್ವ-ಮಾಧ್ಯಂದಿನ ಶಾಖೆಗಳಿವೆ. ದಕ್ಷಿಣ ಭಾರತದಲ್ಲಿ ಕಾಣ್ವ ಶಾಖೆ, ಉತ್ತರಭಾರತದಲ್ಲಿ ಮಾಧ್ಯಂದಿನಶಾಖೆ ಇವುಗಳು ಬಳಕೆಯಲ್ಲಿವೆ. ಕಾತ್ಯಾಯನಶ್ರೌತಸೂತ್ರವು ಇವುಗಳನ್ನು ಅನುಸರಿಸಿದೆ.

ಸಾಮವೇದದ ಸಾವಿರ ಶಾಖೆಗಳಲ್ಲಿ ರಾಣಾಯನೀಯ, ಕೌಥುಮ, ಪೈಂಗಿ ಎಂಬ ಶಾಖೆಗಳು ಉಳಿದಿವೆ. ಜೈಮಿನಿಶಾಖೆಯೂ ಕೆಲವು ಕಡೆಗಳಲ್ಲಿದೆಯೆಂದು ತಿಳಿದುಬರುತ್ತದೆ. ಅಥರ್ವವೇದದ ಶಾಖೆಗಳಲ್ಲಿ ಶೌನಕ, ಪೈಪ್ಪಲಾದಶಾಖೆಗಳು ಭಾರತದಲ್ಲಿವೆ.

ಹೀಗೆ ವೇದವು ಅನೇಕ ಬಗೆಯ ವಿಭಾಗಗಳನ್ನೂ ಅನೇಕ ಶಾಖೆಗಳನ್ನೂ ಒಳಗೊಂಡಿದೆ. ಪಾಠದ ಕ್ರಮವನ್ನನುಸರಿಸಿ ಮತ್ತು ಮಂತ್ರಗಳ ಲಕ್ಷಣವನ್ನನುಸರಿಸಿ ಈ ವಿಭಾಗಗಳನ್ನು ಮಾಡಲಾಗಿದೆ. ಈ ವಿಭಾಗವನ್ನೂ ಈಗಿರುವ ಶಾಖೆಗಳನ್ನೂ ಮುಂದಿನ ಕೋಷ್ಟಕದಿಂದ ತಿಳಿಯೋಣ.

---

1. ಋಗ್ವೇದ. 'ಸ್ವಾಧ್ಯಾಯಮಂಡಲ' ಪುಣೆ.





**ವೇದಗಳು**

- ಋಗ್ವೇದ
  - ಶಾಕಲ
  - ಬಾಷ್ಕಲ
  - ಸಾಂಖ್ಯಾಯನ
- ಯಜುರ್ವೇದ
  - ಶುಕ್ಲ
    - ಕಾಣ್ವ
    - ಮಾಧ್ಯಂದಿನ
  - ಕೃಷ್ಣ
    - ತೈತ್ತಿರೀಯ
    - ಕಾಠಕ
    - ಮೈತ್ರಾಯಣೀಯ
- ಸಾಮವೇದ
  - ಜೈಮಿನಿ
  - ರಾಣಾಯನೀಯ
  - ಕೌಥುಮ
  - ಪೈಂಗಿ
- ಅಥರ್ವವೇದ
  - ಶೌನಕ
  - ಪೈಪ್ಪಲಾದ
- 1 ಕರ್ಮಕಾಂಡ
- ಉಪಾಸನಾಕಾಂಡ
- 2 ಜ್ಞಾನಕಾಂಡ
- ಸಂಹಿತೆ
- ಬ್ರಾಹ್ಮಣ
  - ವಿಧಿ
    - ನಿಂದಾ, ಪ್ರಶಂಸಾ ಪರಕೃತಿ, ಪುರಾಕಲ್ಪ (ಮೀಮಾಂಸಕರ ಮತ)
  - ಅರ್ಥವಾದ
    - ಅನುವಾದ, ಗುಣವಾದ ಭೂತಾರ್ಥವಾದ (ವೇದಾಂತಿಗಳ ಮತ)
- ಆರಣ್ಯಕ
- ಉಪನಿಷತ್ತು

1. ವೇದಗಳಲ್ಲಿ ಕರ್ಮವನ್ನು ಬೋಧಿಸುವ ಭಾಗ. ಕರ್ಮವು ಎರಡು ಬಗೆ. ಶ್ರೌತ ಮತ್ತು ಸ್ಮಾರ್ತ. ನೇರವಾಗಿ ವೇದದಿಂದಲೇ ಹೇಳಲ್ಪಟ್ಟು ಶ್ರೌತ ಸೂತ್ರಗಳಂತೆ ನಡೆಸುವ ಕರ್ಮ 'ಶ್ರೌತಕರ್ಮ'. ಸ್ಮೃತಿಗಳಲ್ಲಿ ಹೇಳಲ್ಪಟ್ಟ ಕರ್ಮ ಸ್ಮಾರ್ತಕರ್ಮ. ಅಗ್ನಿಹೋತ್ರ, ಚಾತುರ್ಮಾಸ್ಯಯಾಗ ಮುಂತಾದವುಗಳು ಶ್ರೌತಕರ್ಮಗಳು. ನವಗ್ರಹ ಹೋಮ, ರುದ್ರಹೋಮ ಮುಂತಾದವುಗಳು ಸ್ಮಾರ್ತಕರ್ಮ. ಈಚೆಗೆ ಸ್ಮಾರ್ತಕರ್ಮಗಳೇ ಹೆಚ್ಚಾಗಿ ನಡೆಯುತ್ತಿವೆ. ಶ್ರೌತ ಕರ್ಮಗಳ ಪರಿಚಯವು ದುರ್ಲಭವಾಗಿದೆ.

2. ಉಪಾಸನೆಯೆಂಬುದು ತನ್ನ ಇಷ್ಟದೇವತೆಯ ಬಗ್ಗೆ ಉಂಟಾಗುವ ಅರಿವಿನ ಧಾರೆ. ಈ ಧಾರೆಯು ಬೇರೆ ತಿಳುವಳಿಕೆಗಳಿಂದ ಮಿಶ್ರವಾಗಿರಕೂಡದು. ಇಷ್ಟದೇವತೆಯನ್ನು ಚಿಂತಿಸುವಾಗಲೂ ಶಾಸ್ತ್ರೀಯ ಕ್ರಮದಲ್ಲಿಯೇ ಚಿಂತಿಸಬೇಕು. ಹೀಗೆ ಶಾಸ್ತ್ರವು ತಿಳಿಸುವ ರೀತಿಯಲ್ಲಿ ಇಷ್ಟದೈವದ ಬಗೆಗಿನ ನಿರಂತರ ಚಿಂತನೆಯೇ ಉಪಾಸನೆ.

ಉಪಾಸನಂ ಚ ಯಥಾಶಾಸ್ತ್ರಂ ತುಲ್ಯಪ್ರತ್ಯಯಸಂತತಿರಸಂಕೀರ್ಣಾ ಚಾತತ್ಪ್ರತ್ಯಯೈಃ ಶಾಸ್ತ್ರೋಕ್ತಾಲಂಬನವಿಷಯಾ ಚ ।

ಶ್ರೀ ಶಂಕರಭಗವತ್ಪಾದರು–ತೈ.ಉ. ಭಾಷ್ಯ-1-3.

## ಋಷಿ ದೇವತಾ ಛಂದಸ್ಸುಗಳು

ವೈದಿಕಮಂತ್ರಗಳನ್ನು ಅನುಸಂಧಾನ ಮಾಡುವುದಕ್ಕೆ ಮೊದಲು ಅದರ ಋಷಿಗಳನ್ನೂ, ಛಂದಸ್ಸನ್ನೂ, ದೇವತೆಯನ್ನೂ ಸ್ಮರಿಸಬೇಕು. ಹಾಗೆ ಸ್ಮರಿಸದೇ ಇದ್ದರೆ ಉದ್ದಿಷ್ಟವಾದ ಫಲವು ಲಭಿಸುವುದಿಲ್ಲ. ಅಷ್ಟೇ ಅಲ್ಲ, ಅನಿಷ್ಟವಾದ ಫಲವೂ ಉಂಟಾಗುತ್ತದೆ. ಅವನು ಪಾಪಿಷ್ಠನೂ ಆಗುತ್ತಾನೆಂದು ಶ್ರೀಸಾಯಣಾಚಾರ್ಯರು ತಮ್ಮ ವೇದಭಾಷ್ಯದ ಪೀಠಿಕೆಯಲ್ಲಿ ಹೇಳುತ್ತಾರೆ;

**ಅವಿದಿತ್ವಾ ಋಷಿಂ ಛಂದೋ ದೈವತಂ ಯೋಗಮೇವ ಚ ।**
**ಯೋಽಧ್ಯಾಪಯೇಜ್ಜಪೇದ್ವಾಪಿ ಪಾಪೀಯಾನ್ ಜಾಯತೇ ತು ಸಃ ॥**

ಋಷಿ, ದೇವತೆ, ಛಂದಸ್ಸು ಎಂದರೇನು? ಎಂಬುದನ್ನು ಕಾತ್ಯಾಯನರು ತಮ್ಮ 'ಸರ್ವಾನುಕ್ರಮಣಿಕಾ' ಎಂಬ ಗ್ರಂಥದಲ್ಲಿ ಹೀಗೆ ಸಂಕ್ಷೇಪವಾಗಿ ಲಕ್ಷಿಸುತ್ತಾರೆ– ಮಂತ್ರಗಳನ್ನು ಗೋಚರ ಮಾಡಿಕೊಂಡವರು ಋಷಿಗಳು. ಮಂತ್ರಗಳು ಯಾರನ್ನು ಉದ್ದೇಶಿಸಿವೆಯೋ ಅವರು ದೇವತೆಗಳು ಮತ್ತು ಮಂತ್ರಾಕ್ಷರಗಳ ಕ್ರಮಬದ್ಧವಾದ ಅಳವಡಿಕೆಗೆ 'ಛಂದಸ್ಸು' ಎಂದು ಹೆಸರು.

**ಯಸ್ಯ ವಾಕ್ಯಂ ಸ ಋಷಿಃ, ಯಾ ತೇನೋಚ್ಯತೇ ಸಾ ದೇವತಾ, ಯದಕ್ಷರ ಪರಿಮಾಣಂ ತಚ್ಛಂದಃ, ಅರ್ಥೇಪ್ಸವಃ ಋಷಯಃ ದೇವತಾಃ ಛಂದೋಭಿರುಪಾಧಾವನ್ ॥**

—ಸರ್ವಾನುಕ್ರಮಣಿಕಾ

## ಋಷಿ–ಮಂತ್ರದ್ರಷ್ಟಾ

ಋಷಿಗಳು ಮಂತ್ರಗಳನ್ನು ರಚಿಸಿದವರು ಎಂದು ವೈದಿಕಸಂಪ್ರದಾಯ ಒಪ್ಪುವುದಿಲ್ಲ. ಅವರು ದೇವರ ಅನುಗ್ರಹದಿಂದ ಮಂತ್ರಗಳನ್ನು ಕಂಡುಕೊಂಡವರು. ಋಷಿ ಎಂಬ ಶಬ್ದಕ್ಕೆ ಜ್ಞಾನಿ ಎಂದರ್ಥ. 'ಋಷ-ಜ್ಞಾನೇ' ಎಂಬ ಧಾತುವಿನಿಂದ ಋಷಿ ಎಂಬ ಶಬ್ದವು ಹುಟ್ಟಿದೆ. ಋಷಿ ಶಬ್ದಕ್ಕೆ ಮಂತ್ರಗಳನ್ನು ದರ್ಶನ ಮಾಡಿದವನು ಎಂಬುದು ವೇದದಲ್ಲಿ ಪಾರಿಭಾಷಿಕವಾದ ಅರ್ಥ.

**ಯಃ ಪಶ್ಯತಿ ಸ್ವಯಂ ವಾಕ್ಯಂ ಸ ಋಷಿಸ್ತಸ್ಯ ಕೀರ್ತಿತಃ ।**
**ಯಥಾ ಯಃ ಸ್ವಯಂ = ಅಧ್ಯಯನಂ ವಿನೈವ ಯದ್ವಾಕ್ಯಂ ಪಶ್ಯತಿ ಸ ತಸ್ಯ ವಾಕ್ಯಸ್ಯರ್ಷಿಃ**

—ಆನಂದತೀರ್ಥೀಯ

ವೇದವನ್ನು ಅಧ್ಯಯನ ಮಾಡದೇ ಭಗವಂತನ ಅನುಗ್ರಹದಿಂದ ಯಾರು ಗೋಚರಪಡಿಸಿಕೊಳ್ಳುತ್ತಾರೆಯೋ, ಯಾರಿಗೆ ಆ ಮಂತ್ರಗಳು ಹೊಳೆಯು



ತ್ತವೆಯೋ, ಅವರು ಋಷಿಗಳು. ಮಂತ್ರಗಳನ್ನು ಮೊಟ್ಟಮೊದಲಿಗೆ ದರ್ಶನ ಮಾಡಿದವರು ಋಷಿಗಳು. ಇದಲ್ಲದೇ ಮಂತ್ರಗಳನ್ನು ಹನ್ನೆರಡುಬಾರಿಗಿಂತಲೂ ಕಡಿಮೆ ಬಾರಿ ಅಧ್ಯಯನ ಮಾಡುವುದರಿಂದಲೇ ಸ್ವಾಧೀನಪಡಿಸಿಕೊಂಡವರೂ ಋಷಿಗಳೆಂದು ಪರಿಗಣಿಸಲ್ಪಡುತ್ತಾರೆ.

**ಏವಂ ಯೋ ದ್ವಾದಶಾವೃತ್ತೇರರ್ವಾಗಧೀತ್ಯಾಪಿ ಪ್ರತಿಪದ್ಯತೇ ಸೋಽಪಿ ಋಷಿರೇವ ॥**

—ಆನಂದಋಗ್ಭಾಷ್ಯಟೀಕಾ

ಮಂತ್ರವನ್ನು ಪಡೆಯಬೇಕೆಂಬ ಉದ್ದೇಶದಿಂದಲೂ, ಅಸಂತೋಷ, ಭಯ, ಶೋಕ,[1] ಸುಖ, ದುಃಖ, ಮುಂತಾದ ಕಾರಣಗಳಿಂದಲೂ ಹಿಂದಿನಕಾಲದಲ್ಲಿ ಋಷಿಗಳು ಉಗ್ರವಾದ ತಪಸ್ಸನ್ನು ಆಚರಿಸಿದರು. ಆಗ ಅವರಿಗೆ ಮಂತ್ರಗಳ ದರ್ಶನವಾಯಿತು. ಅವರು ಋಷಿಗಳೆನಿಸಿದರು.

**ಋಷೀಣಾಂ ತಪ್ಯತಾಮುಗ್ರಂ ತಪಃ ಪರಮದುಷ್ಕರಮ್ ।**
**ಮಂತ್ರಾಃ ಪ್ರಾದುರ್ಬಭೂವುರ್ಹಿ ಪೂರ್ವಮನ್ವಂತರೇಷ್ವಿಹ ॥**
**ಅಸಂತೋಷಾದ್ಭಯಾದ್ದುಃಖಾತ್ಸುಖಾಚ್ಛೋಕಾಚ್ಚ ಪಂಚಧಾ ॥**

ಈ ಋಷಿಗಳಲ್ಲಿ ಮಹರ್ಷಿ, ಋಷಿ, ಋಷೀಕ, ಋಷಿಪುತ್ರ, ಶ್ರುತರ್ಷಿ ಎಂಬ ಪ್ರಭೇದಗಳಿವೆ.

ಋಷಿಗಳಲ್ಲಿ ಅತ್ಯುತ್ತಮರಾದವರು- ಪ್ರಥಮವರ್ಗದವರು-ಮಹರ್ಷಿಗಳು. ಇವರಿಗೆ 'ಈಶ್ವರರು' ಎಂದೂ ಹೆಸರು. ಬ್ರಹ್ಮದೇವನ ಮಾನಸಪುತ್ರರಾದ ಹತ್ತು ಮಂದಿಗೆ ಈ ಹೆಸರಿದೆ.

**ಭೃಗುರ್ಮರೀಚಿರತ್ರಿಶ್ಚಹ್ಯಂಗಿರಾಃ ಪುಲಹಃ ಕ್ರತುಃ ।**
**ಮನುರ್ದಕ್ಷೋ ವಸಿಷ್ಠಶ್ಚ ಪುಲಸ್ತ್ಯಶ್ಚೇತಿ ತೇ ದಶ ॥**
**ಬ್ರಹ್ಮಣೋ ಮಾನಸಾಹ್ಯೇತೇ ಉದ್ಭೂತಾಃ ಸ್ವಯಮೀಶ್ವರಾಃ ।**
**ಪರತ್ವೇನರ್ಷಯೋ ಯಸ್ಮಾತ್ ಸ್ಮೃತಾಸ್ತಸ್ಮಾನ್ಮಹರ್ಷಯಃ ॥**

ಎರಡನೇ ವರ್ಗದವರು ಋಷಿ ಎಂಬ ಹೆಸರಿನಿಂದ ಕರೆಯಲ್ಪಡುತ್ತಾರೆ. ಇವರು ತಪಸ್ಸು ಮಾಡಿ ಋಷಿಪದವಿಯನ್ನು ಗಳಿಸಿಕೊಂಡವರು. ಭೃಗು, ಚ್ಯುವನ

---

1. ಶೋಕದಿಂದಲೂ ಕೆಲವೊಮ್ಮೆ ಉತ್ತಮ ವಿಷಯಗಳು ಹೊರಬರುತ್ತವೆ. ಕ್ರೌಂಚಪಕ್ಷಿಗಳ ದ್ವಂದ್ವದಲ್ಲಿ ಬೇಡನು ಗಂಡು ಹಕ್ಕಿಯನ್ನು ಕೊಂದು ಕೆಡಹಿದುದನ್ನು ಕಂಡು ಮಮ್ಮಲ ಮರುಗಿದ ವಾಲ್ಮೀಕಿಮಹರ್ಷಿಯ ಶೋಕವು ಶ್ಲೋಕರೂಪವನ್ನು ತಳೆದು ರಾಮಾಯಣಮಹಾಕಾವ್ಯವಾಗಿದೆ. 'ಶೋಕಃ ಶ್ಲೋಕತ್ವಮಾಗತಃ'



ಮುಂತಾದ ಮಹರ್ಷಿಗಳ ಸುಪುತ್ರರು. ಕಾವ್ಯ (ಶುಕ್ರ), ಬೃಹಸ್ಪತಿ, ಕಶ್ಯಪ, ಚ್ಯವನ, ಉತಥ್ಯ, ವಾಮದೇವ, ಅಗಸ್ತ್ಯ, ಔಶಿಕ, ಕರ್ದಮ, ವಿಶ್ರವಸ್, ಶಕ್ತಿ, ವಾಲಖಿಲ್ಯ ಮತ್ತು ಅರ್ವತ ಇವರೇ ಆ ಋಷಿಗಳು.

**ಈಶ್ವರಾಣಾಂ ಸುತಾಹ್ಯೇತೇ ಋಷಯಸ್ತಾನ್ನಿಬೋಧತ ।**
**ಕಾವ್ಯೋ ಬೃಹಸ್ಪತಿಶ್ಚೈವ ಕಶ್ಯಪಶ್ಚ್ಯವನಸ್ತಥಾ ॥**
**ಉತಥ್ಯೋ ವಾಮದೇವಶ್ಚ ಅಗಸ್ತ್ಯಶ್ಚೌಶಿಕಸ್ತಥಾ ।**
**ಕರ್ದಮೋ ವಿಶ್ರವಾಃ ಶಕ್ತಿರ್ವಾಲಖಿಲ್ಯಸ್ತಥಾರ್ವತಃ ।**
**ಇತ್ಯೇತೇ ಋಷಯಃ ಪ್ರೋಕ್ತಾಸ್ತಪಸಾ ಚರ್ಷಿತಾಂ ಗತಾಃ ॥**

ಋಷಿಗಳ ಔರಸಪುತ್ರರಿಗೆ ಋಷೀಕರೆಂದು ಹೆಸರು. ಋಷಿಪುತ್ರರು ಮತ್ತು ಋಷೀಕರು ಬೇರೆಬೇರೆ[1]. ಋಷೀಕರು ಸತ್ಯದಿಂದ ಋಷಿತ್ವವನ್ನು ಪಡೆದವರು.

**ಋಷಿಪುತ್ರಾನೃಷೀಕಾಂಸ್ತು ದರ್ಭೋತ್ಪನ್ನಾನ್ನಿಬೋಧತ ।**
**ವತ್ಸರೋ ನಗ್ನಹೂಶ್ಚೈವ ಭರದ್ವಾಜಸ್ತಥೈವ ಚ ॥**
**ಋಷಿರ್ದೀರ್ಘತಮಾಶ್ಚೈವ ಬೃಹದುಕ್ಥಃ ಶರದ್ವತಃ ।**
**ವಾಜಶ್ರವಾಃ ಸುವಿತ್ತಶ್ಚ ವಶ್ಯಾಶ್ವಶ್ಚ ಪರಾಶರಃ ॥**
**ದಧೀಚಃ ಶಂಶಪಾಶ್ಚೈವ ರಾಜಾ ವೈಶ್ರವಣಸ್ತಥಾ ।**
**ಇತ್ಯೇತೇ ಋಷಿಕಾಃ ಪ್ರೋಕ್ತಾಃ ತೇ ಸತ್ಯಾದೃಷಿತಾಂ ಗತಾಃ ॥**

—ಬ್ರಹ್ಮಾಂಡಪುರಾಣ

ವತ್ಸರ, ನಗ್ನಹೂ, ಭರದ್ವಾಜ, ದೀರ್ಘತಮಾ, ಬೃಹದುಕ್ಥ, ಶರದ್ವತ, ವಾಜಶ್ರವ, ಸುವಿತ್ತ, ವಶ್ಯಾಶ್ವ, ಪರಾಶರ, ದಧೀಚ, ಶಂಶಪಾ, ವೈಶ್ರವಣ—ಇವರೇ ಆ ಋಷಿಪುತ್ರರು.

ಋಷೀಕರು ಮತ್ತು ಶ್ರುತರ್ಷಿಗಳು ಋಷಿಗಳಿಗಿಂತ ಕೆಳಮಟ್ಟದವರು. ಋಷಿಗಳಿಗೆ ಹತ್ತಿರವಾದವರು. ಋಷಿಗಳಿಂದ ನೇರವಾಗಿ ವಿಷಯಗಳನ್ನು ಕೇಳಿ ತಿಳಿದವರು. ಇವರ ಹೆಸರಿನ ಪರಿಗಣನೆ ಸಿಕ್ಕಿಲ್ಲ. ಆದರೆ ಋಷಿಜಾತಿಗೆ ಇವರು ಸೇರಿದವರೆಂಬುದರಲ್ಲಿ ಸಂಶಯವಿಲ್ಲ.

**ಇತ್ಯೇತಾ ಋಷಿಜಾತೀಸ್ತಾ ನಾಮಭಿಃ ಪಂಚ ವೈ ಶೃಣು ।**

ಐದು ಹೆಸರುಗಳಿಂದ ಕೂಡಿರುವ ಆ ಋಷಿಜಾತಿಗಳನ್ನು ಕೇಳು.

ಇದಲ್ಲದೇ ವೇದಗಳನ್ನೂ ಋಷಿಗಳೆಂದು ಕರೆದಿರುವುದುಂಟು.

---

1. ಕೆಲವರು ಋಷಿಪುತ್ರರೂ ಮತ್ತು ಋಷೀಕರೂ ಒಂದೇ ಎಂದು ಹೇಳುತ್ತಾರೆ.



**ಋಷಿರ್ವೇದಃ, 'ತದುಕ್ತಮೃಷಿಣಾ' ಇತ್ಯಾದೌ ತದ್ದರ್ಶನಾತ್ ।**

—ಪದಮಂಜರಿ

ವೇದಗಳನ್ನು ರಚಿಸಿ ಪ್ರಚಾರ ಮಾಡಿದವರು ಪುರಾತನಮಹರ್ಷಿಗಳೆಂದು ಭಗವಾನ್ ಬುದ್ಧನು ಹೇಳಿದನೆಂದು ಶಾಂತರಕ್ಷಿತನ ವಚನ.

**ಯಥೋಕ್ತಂ ಭಗವತಾ—ಇತ್ಯೇತೇ ಆನಂದ, ಪೌರಾಣಾಃ ಮಹರ್ಷಯೋ ವೇದಾನಾಂ ಕರ್ತಾರೋ ಮಂತ್ರಾಣಾಂ ಪ್ರವರ್ತಯಿತಾರಃ ।**

## ದೇವತೆ

ಮಂತ್ರಗಳು ಯಾವುದನ್ನು ಪ್ರತಿಪಾದಿಸುತ್ತವೆಯೋ ಆ ವಿಷಯವೇ ಆ ಮಂತ್ರಕ್ಕೆ ದೇವತೆ. ಉದಾಹರಣೆಗೆ ಯಾವುದಾದರೂ ಮಂತ್ರದಲ್ಲಿ ಇಂದ್ರ ಸಂಬಂಧವಾದ ವಿಷಯಗಳ ಪ್ರತಿಪಾದನೆಯಿದ್ದರೆ ಇಂದ್ರನೇ ಆ ಮಂತ್ರಕ್ಕೆ ದೇವತೆ. ಹೀಗೆಯೇ ಅಗ್ನಿ, ಅಶ್ವಿನೀದೇವತೆಗಳು, ವಿಷ್ಣು, ಸೂರ್ಯ ಇತ್ಯಾದಿಗಳು. ಇಂದ್ರ, ಅಗ್ನಿ, ವರುಣ, ಅಶ್ವಿನೌ, ಮರುತ್, ವಾಯು, ಆದಿತ್ಯ, ಸವಿತೃ, ವಿಷ್ಣು, ರುದ್ರ, ಸೋಮ, ಆಪಃ, ಉಷಸ್, ರಾತ್ರಿ ಮುಂತಾದವರು ಸಂಹಿತೆಯ ದೇವತೆಗಳಲ್ಲಿ ಮುಖ್ಯರು. ಒಂದು ಋಕ್ಕಿಗೆ ಅಥವಾ ಸೂಕ್ತಕ್ಕೆ[1] ಒಂದೇ ದೇವತೆ ಇರಬಹುದು. ಅಥವಾ ಒಂದೇ ಸೂಕ್ತದಲ್ಲಿರುವ ಬೇರೆ ಬೇರೆ ಋಕ್ಕುಗಳಿಗೆ ಬೇರೆ ಬೇರೆ ದೇವತೆಗಳಿರಬಹುದು. ಒಂದೇ ಋಕ್ಕಿನಲ್ಲೇ ಪೂರ್ವಾರ್ಧಕ್ಕೆ ಒಂದು ದೇವತೆ, ಉತ್ತರಾರ್ಧಕ್ಕೆ ಮತ್ತೊಂದು ದೇವತೆ ಇರಬಹುದು. ಒಂದೇ ಋಕ್ಕಿನಲ್ಲೇ ಅನೇಕ ದೇವತೆಗಳ ಪ್ರತಿಪಾದನೆಯೂ ಇರಬಹುದು. ಆದರೆ ಸಾಮಾನ್ಯವಾಗಿ ಒಂದು ಮಂತ್ರಕ್ಕೆ ಅಥವಾ ಒಂದು ಸೂಕ್ತಕ್ಕೆ ಒಂದೇ ದೇವತೆ[2] ಇರುವುದು.

---

1. ಋಕ್ಕುಗಳ ಸಮುದಾಯವನ್ನು ಸೂಕ್ತ ಎನ್ನುತ್ತಾರೆ.

2. 'ಅಗ್ನ ಆಯಾಹಿ ವೀತಯೇ (ಅಗ್ನಿಯೇ! ಬಾ) ಎಂಬಲ್ಲಿ ಅಗ್ನಿಯನ್ನು ಸಂಬೋಧಿಸುವುದರಿಂದ ಅಗ್ನಿಯೇ ದೇವತೆ. —ತೈ.ಬ್ರಾ. ೩-೫-೨-೧

**'ಅಗ್ನಿಮೀಳೇ ಪುರೋಹಿತಂ'** (ಅಗ್ನಿಯನ್ನು ಸ್ತುತಿಸುವೆ) ಎಂಬಲ್ಲಿ ಅಗ್ನಿಯನ್ನು ಸ್ತುತಿಸಿದ್ದರಿಂದ ಅಗ್ನಿಯೇ ದೇವತೆ. —ಋ.ಸಂ. ೧-೧-೧.

**'ಯೋ ಜಾತ ಏವ....'** ಎಂಬ ಮಂತ್ರದಲ್ಲಿ ಇಂದ್ರನ ವರ್ಣನೆಯಿದೆ. ಆದ್ದರಿಂದ ಇಂದ್ರನೇ ದೇವತೆ. —ತೈ.ಸಂ. ೧-೭-೧೩-೫.

**'ಕರ್ಮಣೇ ವಾಂ'** ಈ ಮಂತ್ರದಲ್ಲಿ "ನಿಮ್ಮಿಬ್ಬರಿಂದ (ಹಸ್ತಗಳಿಂದ) ದೇವತೆಗಳ ಕರ್ಮಕ್ಕೆ ನಾನು ಸಮರ್ಥನಾಗಲಿ" ಎಂದು ಹಸ್ತಗಳನ್ನು ಬೇಡಿದ್ದರಿಂದ ಹಸ್ತವೇ ದೇವತೆ.

—ತೈ.ಸಂ. ೧-೧-೪-೧



ಮಂತ್ರಗಳಿಗೆ ದೇವತೆಯನ್ನು ನಿಶ್ಚಯಿಸುವಾಗ ಮಂತ್ರಾರ್ಥವನ್ನು ಗಮನಿಸಬೇಕು. ಮಂತ್ರವು ದೇವತೆಯನ್ನು ಸಂಬೋಧಿಸುವಂತೆ ಇರಬಹುದು, ಸ್ತುತಿಸುವಂತೆ ಇರಬಹುದು, ವರ್ಣಿಸುವಂತೆ ಇರಬಹುದು, ಆಶೀರ್ವಾದರೂಪ ವಾಗಿರಬಹುದು. ಮೇಲೆ ಹೇಳಿದ ದೇವತೆಗಳಲ್ಲದೆ ವೇದಗಳಲ್ಲಿ ಕೆಲವೊಮ್ಮೆ ನದಿ, ಸಮುದ್ರ, ಬಾಣ, ಬತ್ತಳಿಕೆ, ಒನಕೆ, ಒರಳು, ಮುಂತಾದವುಗಳನ್ನೂ ದೇವತೆಗಳೆಂದು ಕರೆದು, ಅದಕ್ಕೆ ಸಂಬಂಧಿಸಿದ ಸ್ತೋತ್ರಗಳೂ ಬರಬಹುದು. ಆಗ ಆ ಜಡವಸ್ತುವನ್ನೇ ದೇವತೆಯೆಂದು ಭಾವಿಸಿ ಸ್ತೋತ್ರಮಾಡಿದ್ದಲ್ಲ. ಜಡವಸ್ತುಗಳ ಅಭಿಮಾನಿಗಳಾದ ದೇವತೆಗಳನ್ನು ಕುರಿತ ಸ್ತೋತ್ರ ಅದು. ಇದನ್ನೇ ವೇದವ್ಯಾಸರು ತಮ್ಮ ಬ್ರಹ್ಮಸೂತ್ರಗಳಲ್ಲಿ ಹೇಳಿದ್ದಾರೆ.

**ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ ।**[1]

—ಬ್ರಹ್ಮಸೂತ್ರ, ೨-೧-೫

ಈ ರೀತಿ ಜಡವಸ್ತುಗಳ ಅಭಿಮಾನಿಗಳಾದ ದೇವತೆಗಳ ಪೂಜೆಯು ವಿಶೇಷವಾಗಿ ಯಜ್ಞ ಮತ್ತು ಪ್ರಾರ್ಥನೆಯ ರೂಪದಲ್ಲಿ ನಡೆಯುತ್ತಿತ್ತೆಂದು ವೈದಿಕಸಂಹಿತೆಗಳಲ್ಲಿ ಚಿತ್ರಿತವಾಗಿದೆ.

**ದೇವತೆಗಳು—ಯಾರು? ಹೇಗೆ? ಎಷ್ಟು?**

ವೈದಿಕದೇವತೆಗಳ ಬಗ್ಗೆ ವಿವರವಾಗಿ ತಿಳಿಯತಕ್ಕದ್ದಿದೆ. ವೇದಗಳು ಋಷಿಗಳಿಗೆ ಗೋಚರವಾದದ್ದು ದೇವತೆಗಳ ಅನುಗ್ರಹದಿಂದ. ವೇದಗಳಿಂದ ಸ್ತುತಿಸಲ್ಪಡುವವರೂ ದೇವತೆಗಳೇ. ಆದುದರಿಂದ ವೇದಗಳಲ್ಲಿ ಬರುವ ಅಗ್ನಿ, ಇಂದ್ರ, ವರುಣ, ವಿಷ್ಣು ಮುಂತಾದವರ ಸ್ವರೂಪವೇನು? ಇವರು ಕಲ್ಪನೆಯ ಕುಸುಮಗಳೇ? ಅಥವಾ ವಾಸ್ತವಿಕವಾದ ಪದಾರ್ಥಗಳೇ? ಐತಿಹಾಸಿಕ ವ್ಯಕ್ತಿಗಳೇ? ಎಂದೆಂದಿಗೂ ಇರುವ ಶಕ್ತಿಗಳೇ? ಇವರಿಗೆ ಆಕಾರ ಉಂಟೇ? ಇಲ್ಲವೇ?

---

1. **'ಅನುಗತಾಶ್ಚ ಸರ್ವತ್ರ ಅಭಿಮಾನಿನ್ಯಃ ಚೇತನಾದೇವತಾ ಮಂತ್ರಾರ್ಥ ವಾದೇತಿಹಾಸಪುರಾಣಾದಿಭ್ಯೋ ಅವಗಮ್ಯಂತೇ ।**

ಎಲ್ಲಾ ಕಡೆಯಲ್ಲಿಯೂ ಚೇತನರಾದ ಅಭಿಮಾನಿದೇವತೆಗಳು ವ್ಯಾಪಿಸಿದ್ದಾರೆಂದು ಮಂತ್ರ, ಅರ್ಥವಾದ, ಇತಿಹಾಸ, ಪುರಾಣಗಳಿಂದ ತಿಳಿದು ಬರುತ್ತದೆ. ಶರೀರವನ್ನೇ ನಾನೆಂದು ಅಭಿಮಾನಪಟ್ಟುಕೊಂಡು ನಾನು ನೀನು ಎಂದು ವ್ಯವಹರಿಸುವಂತೆಯೇ ಎಲ್ಲ ವಸ್ತುಗಳಲ್ಲೂ ಆಯಾ ವಸ್ತುವಿನ ಅಭಿಮಾನಿಯಾದ ಚೇತನವು ಇರುತ್ತದೆ. ಅಂತಹ ಚೇತನವಾದ ದೇವತೆಯನ್ನೇ ಮಂತ್ರಗಳು ಸಂಬೋಧಿಸುತ್ತವೆ. ಸೂರ್ಯಮಂಡಲದ ಅಭಿಮಾನಿಯಾದ ದೇವತೆಯನ್ನೇ ಮಿತ್ರ, ಸವಿತೃ ಎಂದು ಮಂತ್ರವು ಹೇಳುತ್ತದೆಯೇ ಹೊರತು ಕೇವಲ ಮಂಡಲವನ್ನು ಅಲ್ಲ.



ಇವರು ಅನೇಕರೇ? ಅಥವಾ ಒಂದು ವಸ್ತುವೇ? ಇವರ ಮಹಿಮೆ ಏನು? ಈ ವಿಚಾರಗಳು ಪ್ರಸ್ತುತವಾಗುತ್ತವೆ. ಇವುಗಳನ್ನು ಕ್ರಮವಾಗಿ ಆಲೋಚಿಸೋಣ.

**ಪ್ರತಿಭೆಯ ಮೂಸೆ; ಅಮಲಿನ ದೆಸೆ**

ಅನೇಕ ಆಧುನಿಕವಿಮರ್ಶಕರು ದೇವತೆಗಳೆಂದರೆ ಕಲ್ಪನೆಯ ಕುಸುಮ ಗಳೆಂದೂ, ವಾಸ್ತವವಾದ ಪದಾರ್ಥಗಳಲ್ಲವೆಂದೂ ಅಭಿಪ್ರಾಯಪಡುತ್ತಾರೆ.

"After we have the outpourings of poetic minds who were struck by the immensity of the universe and the inexhaustible mystery of life, the reactions of simple yet unsophisticated minds to the wonder of existance one portrayed in these joyous hymns which attribute divinity to the striking aspects of nature.

*—Dr. Radhakrishnan*
*The Principal Upanishads*

"The Gods were conceived as human in appearance. Their bodily parts, which are frequently mentioned, are in many instances simply figurative illustrations of the phenomena of nature represented by them. Thus, the arms of the Sun are nothing more than his rays, and the tongue and limbs of Agni merely denote his flames.

—Macdonal

ಪ್ರಾಚೀನಋಷಿಗಳು ಗಾಳಿ, ಬೆಳಕು, ಮಳೆ, ಗುಡುಗು ಮುಂತಾದ ಪ್ರಕೃತಿಯ ಶಕ್ತಿಗಳನ್ನು ಕಂಡು ಆಶ್ಚರ್ಯ, ಭಯಗಳಿಂದ ತುಂಬಿದವರಾಗಿ ಅವುಗಳನ್ನು ದೇವತೆ ಗಳೆಂದು ಭಾವಿಸಿ, ಸ್ತುತಿಸತೊಡಗಿದರು. ಅವುಗಳ ಸ್ವಭಾವ ಮತ್ತು ಕ್ರಿಯೆಗಳನ್ನು ಗಮನಿಸಿ ಕವಿತಾಪ್ರತಿಭೆಯಿಂದ ಅವುಗಳಿಗೆ ಮಾನುಷರೂಪ, ಗುಣಗಳನ್ನು ಆರೋಪಿಸಿದರು. ಪ್ರತಿಯೊಂದು ದೇವತೆಯೂ ಪ್ರಕೃತಿಯ ಯಾವುದಾದರೂ ಸನ್ನಿವೇಶ, ಅಥವಾ ಕ್ರಿಯೆಯ ರೂಪಕಗಳು. ಉದಾಹರಣೆಗೆ ಸೂರ್ಯದೇವತೆಯ ಹಸ್ತಗಳೆಂದರೆ ನಾವು ಹೊರಗೆ ಕಾಣುವ ಸೂರ್ಯ ಎಂಬ ಬೆಳಕಿನ ಗೋಳದ ಕಿರಣಗಳು. ಅಗ್ನಿದೇವತೆಯ ನಾಲಿಗೆ ಮತ್ತು ಇತರ ಅವಯವಗಳೆಂದರೆ ಬೆಂಕಿಯ ಜ್ವಾಲೆಗಳು. ಇಂದ್ರದೇವತೆಯ ವಜ್ರಾಯುಧವೆಂಬುದು ಸಿಡಿಲಿನ ಪ್ರತಿಮೆ.

ಶ್ರೀ ರಾಧಾಕೃಷ್ಣನ್‌ರವರು ಮತ್ತೂ ಮುಂದುವರೆದು "ಋಷಿಗಳ ಮನಸ್ಸು ಎಂಬ ಕಾರ್ಖಾನೆಯಲ್ಲಿ ಈ ನೂರಾರು ದೇವತೆಗಳು ತಯಾರಿಸಲ್ಪಟ್ಟರು" ಎಂದು



ತಮ್ಮ ಆಶಯವನ್ನು ಸ್ಪಷ್ಟಪಡಿಸುತ್ತಾರೆ. ಹೀಗೆ "ಈ ದೇವತೆಗಳು ಕಾವ್ಯಪ್ರತಿಭೆಯ ವಿಲಾಸಗಳು" ಎಂದು ಕೆಲವು ವಿದ್ವಾಂಸರ ಅಭಿಪ್ರಾಯ.

ಇನ್ನು ಕೆಲವರು "ಈ ಋಷಿಗಳು ಮಿತಿ ಮೀರಿ ಸೋಮಪಾನ ಮಾಡಿದರು. ಆ ಮದ್ಯಪಾನದ ಅಮಲಿನಲ್ಲಿ 'ಇಂದ್ರನನ್ನು ಕಂಡೆ, ರುದ್ರನನ್ನು ನೋಡಿದೆ, ವಿಷ್ಣು ಕಾಣಿಸಿದ' ಎಂದು ಮೊದಲಾಗಿ ಕೂಗಾಡಿದರು. ಆದ್ದರಿಂದ ಈ ದೇವತೆಗಳು ಪಾನಮತ್ತರ ಅನುಭವದ ಶಿಶುಗಳು" ಎಂದು ನಿರ್ಣಯ ಕೊಡುತ್ತಾರೆ.

## ಅನುಭವ ಒಂದೇ

ಈ ಅಭಿಪ್ರಾಯಗಳು ಪಾಮರರ ದೃಷ್ಟಿಗೆ ಸರಿ ಎನ್ನಿಸಿದರೂ ಆಳವಾಗಿ ಮತ್ತು ವ್ಯಾಪಕವಾಗಿ ಜ್ಞಾನಿಗಳ ಸಾಹಿತ್ಯವನ್ನೂ, ಪ್ರಯೋಗವಿಜ್ಞಾನದ ವಿಶೇಷತೆಯನ್ನೂ ಗಮನಿಸಿದಾಗ ಮೇಲಿನ ಮಾತುಗಳು ನಿಸ್ಸಾರವೆಂದು ಸಿದ್ಧವಾಗುತ್ತದೆ. ವೈದಿಕದೇವತೆಗಳಿಗೆ ನಿರ್ದಿಷ್ಟವಾದ ಆಕಾರ, ಅಭಿವ್ಯಕ್ತವಾಗುವ ಸ್ಥಾನ – ಇವುಗಳು ಇವೆ. ಅಂತರ್ಮುಖವಾದ ದೃಷ್ಟಿಯಿಂದ ನೋಡಿದಾಗ ಎಲ್ಲರಿಗೂ ಆಯಾ ದೇವತೆಗಳು ಅದೇ ಆಕಾರದಲ್ಲಿಯೇ ಕಾಣುತ್ತಾರೆ. ವಿಶ್ವೇ ದೇವತೆಗಳು ಆಯುಧಹಸ್ತರಾಗಿಯೇ, ಪಿತೃದೇವತೆಗಳು ಜ್ಞಾನಮುದ್ರೆಯಿಂದ ಕೂಡಿದ ಕೈಗಳುಳ್ಳವರಾಗಿಯೇ ಗೋಚರವಾಗುತ್ತಾರೆ. ದೇವತೆಗಳು ಕಲ್ಪನೆಯ ಕುಸುಮಗಳಾಗಿದ್ದರೆ ಒಬ್ಬೊಬ್ಬರಿಗೆ ಒಂದೊಂದು ರೀತಿ ಕಾಣಿಸಬೇಕಾಗಿತ್ತು. ಆದರೆ ಆ ವಿಷಯದಲ್ಲಿ ಯೋಗಿಗಳ ಅನುಭವವು ಒಂದೇ ರೀತಿಯಾಗಿದೆ.

## ಹುಸಿಯಾಡರು

"ಈ ಋಷಿಗಳದ್ದೂ ಮತ್ತು ಯೋಗಿಗಳದ್ದೂ ಕಳ್ಳಕಳ್ಳರ ಸಂತೆ. ಎಲ್ಲರೂ ಮಾತನಾಡಿಕೊಂಡು ಒಂದೇ ತರಹದ ಮಾತುಗಳನ್ನಾಡುತ್ತಾರೆ. ಅವರು ಹೇಳಿದ್ದೆಲ್ಲಾ ಸುಳ್ಳು" ಎಂದು ಕೆಲವರು ವಾದಿಸಬಹುದು. ಈ ವಾದವೂ ಸರಿಯಲ್ಲ. ಮನುಷ್ಯರು ಸ್ವಾರ್ಥಕ್ಕಾಗಿ ರಾಗ-ದ್ವೇಷಗಳಿಂದ ಅಥವಾ ಅಜ್ಞಾನದಿಂದ ಸುಳ್ಳನ್ನು ಹೇಳುತ್ತಾರೆ. ಆದರೆ ಲೌಕಿಕವಾದ ಭೋಗಗಳೆಲ್ಲವನ್ನೂ ತೊರೆದು ಲೋಕದ ಸ್ಪರ್ಧೆಯಿಂದ ದೂರವಾಗಿ ಅರಣ್ಯದಲ್ಲಿ ಗೆಡ್ಡೆಗೆಣಸು ತಿಂದು ತಪಸ್ಸು ಮಾಡುತ್ತಿದ್ದ ಋಷಿಗಳು "ರಜಸ್ತಮೋಭ್ಯಾಂ ನಿರ್ಮುಕ್ತಾಃ ತಪೋಜ್ಞಾನಸಮಾಧಿಭಿಃ" ಎಂಬಂತೆ ರಜೋಗುಣ, ತಮೋಗುಣಗಳ ಸ್ಪರ್ಶ ಇಲ್ಲದವರು ಯಾವ ಪ್ರಯೋಜನಕ್ಕಾಗಿ ಸುಳ್ಳು ಹೇಳಿಯಾರು?

ಋಷಿಗಳು ನಿಃಸ್ವಾರ್ಥಿಗಳಾಗಿದ್ದರೂ ದೇವತೆಗಳು ಇದ್ದಾರೆಂದು ಅಜ್ಞಾನ ದಿಂದ ಏಕೆ ಹೇಳಿರಬಾರದು? ಎಂಬ ಸಂಶಯ ಬರದಿರದು. ಆದರೆ ಜ್ಞಾನ, ಅಜ್ಞಾನ,



ಅರೆಜ್ಞಾನ, ಸಂಶಯಜ್ಞಾನ, ವಿಪರೀತಜ್ಞಾನಗಳೂ,[1] ಮನಸ್ಸಿನ ಅವಸ್ಥೆಗಳೂ ಯಾವುವು? ಎಂಬುದನ್ನು ವಿಶ್ಲೇಷಣೆ ಮಾಡಿರುವವರು ಋಷಿಗಳೇ. ಆಧುನಿಕ ಮನಃಶಾಸ್ತ್ರವೂ ಕೂಡಾ ಈ ವಿಷಯದಲ್ಲಿ ಇಷ್ಟು ಆಳವಾಗಿ ವಿಚಾರ ಮಾಡಿಲ್ಲವೆಂದ ಮೇಲೆ ಋಷಿಗಳು ಅಜ್ಞಾನದಿಂದ ದೇವತೆಗಳಿದ್ದಾರೆಂಬುದನ್ನು ಸಾರುತ್ತಾರೆ ಎಂಬ ಮಾತೇ ಅಜ್ಞಾನದ ಮಾತಾಗುತ್ತದೆ. ದೇವತೆಗಳು ಅತೀಂದ್ರಿಯಕ್ಷೇತ್ರಕ್ಕೆ ಸೇರಿದವರು. ಆ ಕ್ಷೇತ್ರದ ಪರಿಚಯವೇ ಇಲ್ಲದವರು ದೇವತೆಗಳು ಕಾಲ್ಪನಿಕರು ಎಂದು ಹೇಳುವುದು ಅಪ್ರಾಮಾಣಿಕವಾಗುತ್ತದೆ.

### ಚಟವಲ್ಲ

"ಸೋಮಪಾನದ ಮತ್ತಿನಲ್ಲಿ ದೇವತೆಗಳನ್ನು ಕಂಡೆವೆಂದು ಋಷಿಗಳು ಒದರಿದರು" ಎಂಬುದೂ ಸರಿಯಾದ ಮಾತಲ್ಲ. ಋಷಿಗಳು ಸೋಮಪಾನ ಮಾಡುತ್ತಿದ್ದರೆಂಬುದು ನಿಜವಾದರೂ ಮದ್ಯಪಾನದ ಚಟದವರು ಕಂಡಕಂಡ ಜಾಗಗಳಲ್ಲಿ, ಕಂಡಕಂಡ ರೀತಿಯಲ್ಲಿ ಮಿತಿಮೀರಿ ಮದ್ಯಪಾನ ಮಾಡುವಂತೆ ಋಷಿಗಳು ಪಾನ ಮಾಡುತ್ತಿರಲಿಲ್ಲ. ಅಲ್ಲದೇ ಅವರು ಯಜ್ಞಸಂದರ್ಭದಲ್ಲಿ ಅನೇಕ ದಿವಸಗಳವರೆಗೆ ವ್ರತ, ಉಪವಾಸಗಳನ್ನು ಮಾಡಿ ಯಜ್ಞವಿಧಿಯ ಅಂಗವಾಗಿ ದೇವತಾಪ್ರಸಾದವೆಂಬ ಭಾವನೆಯಿಂದ ಸೋಮರಸವನ್ನು ತೆಗೆದುಕೊಳ್ಳು ತ್ತಿದ್ದರೆಂಬ ಹಿನ್ನೆಲೆಯನ್ನು ನಾವು ಮರೆಯಬಾರದು. ವ್ರತೋಪವಾಸಗಳನ್ನೇ ಕಾಣದವರು, ಸೋಮರಸವನ್ನೇ ನೋಡದವರು, ಇಂದ್ರಿಯಗಳ ಕ್ಷೇತ್ರದಲ್ಲಿ ಮಾತ್ರ ಪರಿಚಯಪಡೆದವರು ಋಷಿಗಳ ಮಾತನ್ನು ಅಮಲಿನ ಮಾತೆಂದು ಹೇಳುವುದೇ ಅಮಲಿನ ಮಾತಲ್ಲದೇ ಇನ್ನೇನು?

### ದೇವತೆಗಳ ಆಕಾರ-ಆಚಾರ್ಯರ ಆಕರ

ವೈದಿಕದೇವತೆಗಳು ಇರುವರೆಂಬುದನ್ನು ನಾವು ಒಪ್ಪಿಕೊಳ್ಳಬಹುದಾದರೂ ಅವರಿಗೆ ಆಕಾರವಿದೆಯೇ? ದೇವತೆಗೆ ನಿಜವಾಗಿಯೂ ಆಕಾರವಿದ್ದಿದ್ದರೆ ಒಂದೇ ದೇವತೆ ಏಕಕಾಲದಲ್ಲಿ ಅನೇಕ ಯಜ್ಞಗಳಲ್ಲಿ ಒಟ್ಟಿಗೇ ಹವಿಸ್ಸನ್ನು ಹೇಗೆ ಸ್ವೀಕರಿಸ ಬಲ್ಲ? ಅಲ್ಲದೇ ಅಲ್ಪಪ್ರಮಾಣದ ಹವಿಸ್ಸು ಆ ದೇವತೆಗೆ ತೃಪ್ತಿ ತಂದೀತೆ? ತೃಪ್ತಿಯಾಗದಿದ್ದರೆ ಆ ದೇವತೆಯು ಹೇಗೆ ಅನುಗ್ರಹ ಮಾಡಬಲ್ಲ?—ಈ ಕಾರಣ

---

1. ಒಂದು ವಸ್ತುವಿನ ಬಗ್ಗೆ ಅದು ಇರುವಂತೆಯೇ ತಿಳಿದುಕೊಳ್ಳುವುದು ಜ್ಞಾನ. ಅದರ ಬಗ್ಗೆ ಏನೂ ತಿಳಿಯದೇ ಇರುವುದು ಅಜ್ಞಾನ. ಅದರ ಕೆಲವು ಅಂಶವನ್ನು ಮಾತ್ರ ಸರಿಯಾಗಿ ತಿಳಿದಿರುವುದು ಅರೆಜ್ಞಾನ. ಆ ವಸ್ತುವು ಅದೇ ವಸ್ತುವೋ? ಅಥವಾ ಬೇರೆಯೋ? ಎಂಬ ಸಂಶಯವಿದ್ದರೆ ಅದು ಸಂಶಯಜ್ಞಾನ. ಆ ವಸ್ತುವನ್ನು ಬೇರೆ ವಸ್ತುವನ್ನಾಗಿಯೇ ತಿಳಿದಿದ್ದರೆ ಅದು ವಿಪರೀತಜ್ಞಾನ.



ಗಳಿಂದ ದೇವತೆಗಳಿಗೆ ಪ್ರತ್ಯೇಕವಾದ ವಿಗ್ರಹ (ಶರೀರ, ಆಕಾರ) ವಿಲ್ಲ. ಮಂತ್ರಗಳೇ ದೇವತೆಗಳು. ಮಂತ್ರೋಚ್ಚಾರಣೆಯೇ ಕರ್ಮದ ಫಲವನ್ನು ನೀಡುತ್ತದೆ ಎಂಬುದು ಮೀಮಾಂಸಕರಲ್ಲಿಯೇ ಕೆಲವರ ವಾದ.

**ವಿಗ್ರಹೋ ಹವಿರಾದಾನಂ ಯುಗಪತ್ಕರ್ಮಸು ಸ್ಥಿತಿಃ ।**
**ತೃಪ್ತಿಃ ಫಲಪ್ರದಾನಂ ಚ ದೇವತಾನಾಂ ನ ವಿದ್ಯತೇ ॥**

ದೇವತೆಗಳಿಗೆ ವಿಗ್ರಹವಿಲ್ಲ. ಆದ್ದರಿಂದಲೇ ಹವಿಸ್ಸನ್ನು ಸ್ವೀಕರಿಸಲಾರರು. ಅನೇಕಕರ್ಮಗಳಲ್ಲಿ ಒಟ್ಟಿಗೇ ಅವರು ಇರಲಾರರು. ಅಲ್ಪ ಹವಿಸ್ಸಿನಿಂದ ಅವರಿಗೆ ತೃಪ್ತಿಯಾಗದು. ಆದ್ದರಿಂದ ಕರ್ಮದ ಫಲವನ್ನು ಅವರು ನೀಡುತ್ತಾರೆಂಬುದು ಸರಿಯಲ್ಲ.

ಇದು ಸರಿಯಾದ ವಿಚಾರವಲ್ಲ. ಮಂತ್ರಗಳ ಶಬ್ದವೇ ದೇವತೆಯಲ್ಲ. ಆ ಶಬ್ದಗಳು ಹೇಳುವ ದೇವತೆ ಬೇರೆಯುಂಟು. ಅದಕ್ಕೆ ರೂಪವಿದೆ. ಗುಣ, ವೈಭವ, ಮಹಿಮಾತಿಶಯಗಳುಂಟು. ಒಟ್ಟಿಗೆ ಅನೇಕ ದೇಹಗಳನ್ನು ಧರಿಸಿ ಬೇರೆ ಬೇರೆ ಕಡೆ ಮಾಡುವ ಯಜ್ಞಗಳಲ್ಲಿ ಬಂದು ಹವಿಸ್ಸನ್ನು ಸ್ವೀಕರಿಸಿ, ಫಲವನ್ನು ಕೊಡುವ ವಿಶೇಷಶಕ್ತಿ ದೇವತೆಗಳಿಗೆ ಇದೆ. ಅಲ್ಪಪ್ರಮಾಣದ ಹವಿಸ್ಸನ್ನು ದೇವತೆಯು ಹಾಗೇ ಸೇವಿಸುವುದಿಲ್ಲ. ಆ ಹವಿಸ್ಸು ಮಂತ್ರಬಲದಿಂದಲೂ ಭಕ್ತಿಶ್ರದ್ಧೆಯಿಂದಲೂ ಅಮೃತವಾಗಿ ಪರಿಣಮಿಸಿ ದೇವತಾಭೋಗ್ಯವಾಗುತ್ತದೆ. ಅಲ್ಲದೇ ವೇದವು

**ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ ತಾಂ ಧ್ಯಾಯೇತ್ ವಷಟ್ ಕರಿಷ್ಯನ್**

—ಐತರೇಯ ಬ್ರಾಹ್ಮಣ 3-8-1

ಯಾವ ದೇವತೆಗೆ ಹವಿಸ್ಸನ್ನು ಸಮರ್ಪಿಸಬೇಕಾಗಿದೆಯೋ, ಆ ದೇವತೆಯನ್ನು ಧ್ಯಾನಮಾಡಬೇಕು.

ದೇವತೆಗಳಿಗೆ ಆಕಾರವೇ ಇಲ್ಲದಿದ್ದರೆ ಅವರನ್ನು ಮನಸ್ಸಿನಲ್ಲಿ ಹೇಗೆ ಧ್ಯಾನ ಮಾಡಲು ಸಾಧ್ಯ? ಧ್ಯಾನ ಮಾಡದೇ ಹವಿಸ್ಸನ್ನು ಸಮರ್ಪಿಸಲು ಸಾಧ್ಯವಿಲ್ಲ. ಆದುದರಿಂದ ದೇವತೆಗಳಿಗೆ ಆಕಾರವು ಉಂಟೇ ಉಂಟು. ಶ್ರುತಿ, ಸ್ಮೃತಿಗಳಲ್ಲೂ ಅವರಿಗೆ ಆಕಾರವಿರುವುದು ನಿಚ್ಚಳವಾಗಿ ತಿಳಿದುಬರುತ್ತದೆ.

ಈ ವಿಷಯದಲ್ಲಿ ಬ್ರಹ್ಮಸೂತ್ರಗಳ ದೇವತಾಧಿಕರಣದ ಆಚಾರ್ಯತ್ರಯರ ಭಾಷ್ಯದಲ್ಲಿ ನ್ಯಾಯಸಂಗತವಾದ ವಿಚಾರವಿದೆ.

ನ ಹಿ ಸ್ವರೂಪರಹಿತಾ ಇಂದ್ರಾದಯಶ್ಚೇತಸ್ಯಾರೋಪಯಿತುಂ ಶಕ್ಯನ್ತೇ । ನ ಚ



ಚೇತಸ್ಯನಾರೂಢಾಯ್ಯೆ ತಸ್ಯೈ ತಸ್ಯೈ ದೇವತಾಯ್ಯೆ ಹವಿಃ ಪ್ರದಾತುಂ ಶಕ್ಯತೇ........ ನ ಚ ಶಬ್ದಮಾತ್ರಮರ್ಥಸ್ಯರೂಪಂ ಸಂಭವತಿ; ಶಬ್ದಾರ್ಥಯೋರ್ಭೇದಾತ್, ಇತಿಹಾಸಪುರಾಣಮಪಿ ಸಂಭವನ್ಮಂತ್ರಾರ್ಥವಾದಮೂಲತ್ವಾತ್ ಪ್ರಭವತಿ ದೇವತಾವಿಗ್ರಹಾದಿ ಸಾಧಯಿತುಮ್ ।

ಆಕಾರವಿಲ್ಲದ ಇಂದ್ರನೇ ಮೊದಲಾದ ದೇವತೆಗಳನ್ನು ಮನಸ್ಸಿನಲ್ಲಿ ಧ್ಯಾನಿಸಿ, ಹವಿಸ್ಸನ್ನು ಅರ್ಪಿಸಲಾರೆವು. ಶಬ್ದವು ದೇವತೆಯಲ್ಲ. ಶಬ್ದ ಮತ್ತು ಅರ್ಥಗಳು ಬೇರೆ. (ಅರ್ಥವೆಂದರೆ ವಸ್ತು.) ಇತಿಹಾಸ ಪುರಾಣಗಳು ವೇದಮೂಲಕವಾದುದರಿಂದ ಅವುಗಳ ಆಧಾರದಿಂದಲೂ ದೇವತೆಗಳಿಗೆ ಆಕಾರವಿದೆಯೆಂದು ಸಾಧಿಸಬಹುದು.

—ಬ್ರಹ್ಮಸೂತ್ರ 1-33

**ವಜ್ರಹಸ್ತಃ ಪುರಂದರಃ, ತೇನೇನ್ದ್ರೋ ವಜ್ರಮುದಯಚ್ಛತ್, ಇತ್ಯಾದಿಭಿಃ ಪ್ರತೀಯಮಾನಂ ವಿಗ್ರಹಾದಿಮತ್ತ್ವಂ ಪ್ರಮಾಣಾನ್ತರಾವಿರುದ್ಧಂ ತತ್ಪ್ರಮೇಯಮೇವ" "ದೇವತಾಯಾಃ ಕರ್ಮಣಿ ಆರಾಧಿತಾಯಾಃ ಫಲದಾಯಿತ್ವಂ ತದನುಗುಣಂಚೈಶ್ವರ್ಯಂ ಪ್ರತೀಯಮಾನಮಪೇಕ್ಷಿತತ್ವೇನ ವಾಕ್ಯಾರ್ಥೇ ಸಮನ್ವೀಯತೇ।**

**ಧರ್ಮಶಾಸ್ತ್ರೇತಿಹಾಸಪುರಾಣೇಷು ಬ್ರಹ್ಮಾದೀನಾಂ ದೇವಾಸುರಪ್ರಭೃತೀನಾಂ ಚ ದೇಹೇನ್ದ್ರಿಯಾದಯಃ, ಸ್ವಭಾವಭೇದಾಃ, ಸ್ಥಾನಾನಿ, ಭೋಗಾಃ, ಕೃತ್ಯಾನಿ ಚೇತ್ಯೇವಮಾದಯಃ ಸುವ್ಯಕ್ತಾಃ ಪ್ರತಿಪಾದ್ಯಂತೇ । ವಿಗ್ರಹಾದಿಮತ್ವೇ ಕರ್ಮಣಿ ವಿರೋಧಃ ಪ್ರಸಜ್ಯತೇ ಇತಿ ಚೇತ್, ತನ್ನ, ಅನೇಕಪ್ರತಿಪತ್ತೇರ್ದರ್ಶನಾತ್। ದೃಶ್ಯತೇ ಹಿ ಸೌಭರಿಪ್ರಭೃತೀನಾಂ ಶಕ್ತಿಮತಾಂ ಯುಗಪದನೇಕ ಶರೀರಪ್ರತಿಪತ್ತಿಃ ।**

—ಬ್ರಹ್ಮಸೂತ್ರ-ಶ್ರೀರಾಮಾನುಜಾಚಾರ್ಯರ ಶ್ರೀಭಾಷ್ಯ.

'ಇಂದ್ರನು ವಜ್ರವನ್ನು ಧರಿಸಿದವನು', 'ಇಂದ್ರನ ವಜ್ರಾಯುಧವನ್ನು ಎತ್ತಿಕೊಂಡನು' ಮುಂತಾದ ಮಾತುಗಳಿಂದ ದೇವತೆಗಳಿಗೆ ವಿಗ್ರಹವಿದೆಯೆಂಬುದು ಸರಿಯಾದುದೇ. ಕರ್ಮಗಳಲ್ಲಿ ದೇವತೆಗಳನ್ನು ಆರಾಧಿಸುವುದರಿಂದ ಕರ್ಮಕ್ಕನುಗುಣವಾದ ಫಲವನ್ನು ನೀಡಬೇಕಾದುದರಿಂದ ದೇವತೆಗಳು ಫಲ ನೀಡಬಲ್ಲರು, ಅದಕ್ಕೆ ಬೇಕಾದ ಸಾಮರ್ಥ್ಯವುಳ್ಳವರು ಎಂಬುದು ತಾತ್ಪರ್ಯಾರ್ಥದೊಡನೆ ಸೇರಿಕೊಳ್ಳುತ್ತದೆ. ಧರ್ಮಶಾಸ್ತ್ರ, ಇತಿಹಾಸ ಮೊದಲಾದವುಗಳಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳಿಗೂ ರಾಕ್ಷಸರಿಗೂ ಸಹ ದೇಹ, ಇಂದ್ರಿಯಗಳು, ಬೇರೆ



ಬೇರೆ ಸ್ವಭಾವಗಳು, ಸ್ಥಾನಗಳು, ಕಾರ್ಯಗಳು ಹೇಳಲ್ಪಟ್ಟಿವೆ. ಶರೀರವಿದ್ದರೆ ಅನೇಕ ಕರ್ಮಗಳಲ್ಲಿ ಒಟ್ಟಿಗೆ ಹೇಗೆ ಬಂದಾರು? ಎಂಬ ಸಂಶಯಕ್ಕೆ ಅವಕಾಶವಿಲ್ಲ. ಸೌಭರಿ ಮುಂತಾದವರು ಅನೇಕ ಶರೀರಗಳನ್ನು ಒಟ್ಟಿಗೆ ಧರಿಸಬಲ್ಲರೆಂದು ತಿಳಿದಿದ್ದೇವೆ.

**ವೇದಪ್ರಮಾಣಾದೇವ ದೇವತಾತದ್ದೇಹದೇಶಭೇದಸಂವೇದನಸ್ಯ ಸೌಲಭ್ಯ ಸಂಪಾದನಾತ್ ।**

ತತ್ತ್ವದೀಪಿಕಾ; ತ್ರಿವಿಕ್ರಮ ಪಂಡಿತಾಚಾರ್ಯ. ಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯದ ಟೀಕಾ.

ಅನೇಕ ದೇವತೆಗಳಿರುವರೆಂದೂ, ಅವರಿಗೆ ದೇಹವಿದೆಯೆಂಬುದೂ, ಬೇರೆ ಬೇರೆ ಸ್ಥಾನಗಳಿವೆ ಎಂಬುದೂ ಪ್ರಮಾಣಗ್ರಂಥವಾದ ವೇದದಿಂದಲೇ ಸುಲಭವಾಗಿ ತಿಳಿಯುತ್ತದೆ. ಆದುದರಿಂದ ವೈದಿಕದೇವತೆಗಳಿಗೆ ಆಕಾರವಿದೆಯೆಂದೂ ನಾವು ನಿಷ್ಕರ್ಷೆ ಮಾಡಿಕೊಳ್ಳಬಹುದಾಗಿದೆ.

### ಏಕೆ ಕಾಣಲೊಲ್ಲರು?

ದೇವತೆಗಳಿಗೆ ಆಕಾರವಿರುವುದಾದರೆ ಅವರು ಗಿಡ, ಮರ, ಬಳ್ಳಿ, ಗಿರಿ, ನದಿಗಳಂತೆ ಎಲ್ಲರಿಗೂ ಏಕೆ ಕಾಣಬಾರದು? ನಮ್ಮಗಳ ಸ್ಥೂಲವಾದ ದೃಷ್ಟಿಗೆ ದೇವತೆಗಳು ಕಾಣದ ಮಾತ್ರಕ್ಕೆ ದೇವತೆಗಳೇ ಇಲ್ಲ ಎಂದು ತೀರ್ಮಾನಿಸಿಬಿಡಬಾರದು. ಲೋಕದ ಒಂದು ಉದಾಹರಣೆಯನ್ನು ನೋಡೋಣ. ಬ್ಯಾಕ್ಟೀರಿಯಾ (Bacteria) ಗಳು ನಮ್ಮ ಸ್ಥೂಲದೃಷ್ಟಿಗೆ ಕಾಣುವುದಿಲ್ಲ. ಆದರೆ ಸೂಕ್ಷ್ಮದರ್ಶಕ (Microscope)ದ ಮೂಲಕವಾಗಿ ಅವುಗಳನ್ನು ಕಾಣಬಲ್ಲೆವು. ಸ್ಥೂಲ ದೃಷ್ಟಿ, ಯಂತ್ರದಿಂದುಟಾಗುವ ಸೂಕ್ಷ್ಮದೃಷ್ಟಿ—ಇವುಗಳಲ್ಲದೇ ದಿವ್ಯದೃಷ್ಟಿ ಎಂಬುದೂ ಉಂಟು. ಅಂತಹ ದಿವ್ಯದೃಷ್ಟಿಯಿಂದ ನೋಡಿದರೆ ದೇವತೆಗಳು ಗೋಚರಿಸುತ್ತಾರೆಂಬುದು ಜ್ಞಾನಿಗಳ ಅನುಭವ. ಅಧ್ಯಯನ, ತಪಸ್ಸು ಮುಂತಾದವುಗಳಿಂದ ಆ ದೃಷ್ಟಿಯು ದೊರೆಯುವುದು. ನಮ್ಮಗಳ ಅಲ್ಪಸಾಮರ್ಥ್ಯವನ್ನು[1] ಯೋಗಿಗಳ ಸಾಮರ್ಥ್ಯದೊಂದಿಗೆ ಹೋಲಿಸಲಾಗದು.

ದೇವತೆಗಳ ಇರುವಿಕೆಗೆ ಜ್ಞಾನಿಗಳ ಪ್ರತ್ಯಕ್ಷ (ಅನುಭವ)ವೂ ಪ್ರಮಾಣ.

---

1. ಮನುಷ್ಯನಿಗೆ ಅಮಿತಸಾಮರ್ಥ್ಯವಿರುವುದು ನಿಜ. ಇಂದ್ರಿಯಗಳ ಬಲದಿಂದ ಬರುವ ಎಂತಹ ಅಮಿತಸಾಮರ್ಥ್ಯವೂ ಯೋಗದ ಸಾಮರ್ಥ್ಯಕ್ಕೆ ಎಣೆಯಲ್ಲ. ವಿಶ್ವಾಮಿತ್ರನು ವಸಿಷ್ಠರೊಡನೆ ಯುದ್ಧ ನಡೆಸಲು ಹೋದಾಗ ಸೋತು "ಧಿಕ್ ಬಲಂ ಕ್ಷತ್ರಿಯಬಲಂ, ಬ್ರಹ್ಮತೇಜೋಬಲಂ ಬಲಮ್" ಎಂದು ಉದ್ಗರಿಸಿದ. ಬ್ರಹ್ಮತೇಜೋಬಲವೆಂದರೆ ವೇದದ ಅಧ್ಯಯನದಿಂದ ಮತ್ತು ತಪಸ್ಸಿನಿಂದ ಬರುವ ಒಂದಾನೊಂದು ಅಪೂರ್ವಶಕ್ತಿ.



ಪ್ರತ್ಯಕ್ಷಾದಿಮೂಲಮಪಿ ಸಂಭವತಿ, ಭವತಿಹ್ಯಸ್ಮಾಕಮಪ್ರತ್ಯಕ್ಷಮಪಿ ಚಿರಂತನಾನಾಂ ಪ್ರತ್ಯಕ್ಷಂ, ತಥಾ ಚ ವ್ಯಾಸಾದಯೋ ದೇವಾದಿಭಿಃ ಪ್ರತ್ಯಕ್ಷಂ ವ್ಯವಹರಂತೀತಿ ಸ್ಮರ್ಯತೇ......ಧರ್ಮೋತ್ಕರ್ಷವಶಾತ್ ಋಷೀಣಾಮಪಿ ಮಂತ್ರಬ್ರಾಹ್ಮಣದರ್ಶಿನಾಂ ಸಾಮರ್ಥ್ಯಂ ನಾಸ್ಮದೀಯೇನ ಸಾಮರ್ಥ್ಯೇ-ನೋಪಮಾತುಂ ಯುಕ್ತಮ್ ।

—ಶಂಕರಭಗವತ್ಪಾದರ ಬ್ರಹ್ಮಸೂತ್ರಭಾಷ್ಯ

(ಇತಿಹಾಸ ಪುರಾಣಗಳು ಮಾತ್ರವಲ್ಲದೆ) ಋಷಿಗಳ ಪ್ರತ್ಯಕ್ಷವೂ ಒಂದು ಪ್ರಮಾಣವಾಗುವುದು. ನಮಗೆ ದೇವತೆಗಳು ಪ್ರತ್ಯಕ್ಷವಾಗಿ ಕಾಣದಿದ್ದರೂ ಪ್ರಾಚೀನರಿಗೆ ಅವರು ಪ್ರತ್ಯಕ್ಷರಾಗಿದ್ದರು. ವ್ಯಾಸರೇ ಮೊದಲಾದ ಮಹರ್ಷಿಗಳು ದೇವತೆಗಳೊಡನೆ ನೇರವಾಗಿ ಮಾತನಾಡುತ್ತಿದ್ದರೆಂದು ತಿಳಿಯುತ್ತೇವೆ...... ಧರ್ಮದ ಉತ್ಕರ್ಷೆಯಿಂದ ಮಂತ್ರ, ಬ್ರಾಹ್ಮಣಗಳನ್ನು ದರ್ಶನ ಮಾಡುವ ಸ್ವಭಾವವುಳ್ಳ ಋಷಿಗಳ ಸಾಮರ್ಥ್ಯವನ್ನು ನಮ್ಮ ಸಾಮರ್ಥ್ಯದೊಡನೆ ಹೋಲಿಸುವುದು ಕೂಡ ಯುಕ್ತವಲ್ಲ ಎಂಬ ಆಚಾರ್ಯರ ವಾಕ್ಯವನ್ನು ಗಮನಿಸಬೇಕು. ಯೋಗಧರ್ಮ ವುಳ್ಳ ಋಷಿಗಳು ದೇವತೆಗಳನ್ನು ಸಾಕ್ಷಾತ್ಕರಿಸಿ ವೇದಮಂತ್ರಗಳ ಮೂಲಕ ಆ ಅನುಭವವನ್ನು ನಮಗೆ ಉಪದೇಶಮಾಡಿದ್ದಾರೆ. ಅಂತಹ ಯೋಗಧರ್ಮವನ್ನು ಪಡೆಯದ ಬಡಜೀವಿಗಳು ದೇವತೆಗಳ ಬಗೆಗೆ ಮಾಡುವ ಆಲೋಚನೆ, ಊಹೆ, ವಿಮರ್ಶೆ—ಇದಾವುದೂ ದೇವತೆಗಳ ಬಗ್ಗೆ ಪ್ರಾಮಾಣಿಕ ಅಭಿಪ್ರಾಯವಾಗುವುದಿಲ್ಲ. ಸತ್ಯದೃಷ್ಟಿ, ಶುದ್ಧದೃಷ್ಟಿ, ಅನುಭವದೃಷ್ಟಿಯುಳ್ಳವರು ಕಂಡ, ಕಾಣುತ್ತಿರುವ ಮತ್ತು ಎಂದೆಂದೂ ಸ್ಪಷ್ಟವಾಗಿ ಕಾಣಬಹುದಾದ ಭಗವಂತನ ವಿಭೂತಿಗಳು ದೇವತೆಗಳು.

## ವ್ಯಕ್ತಿಯಲ್ಲ ಶಕ್ತಿ

ವೈದಿಕದೇವತೆಗಳು ಇದ್ದಾರೆ, ಅವರಿಗೆ ಆಕಾರವಿದೆ ಎನ್ನುವುದನ್ನು ಒಪ್ಪಿದರೂ ಅವರು ಭಗೀರಥ, ಮಾಂಧಾತ ಮುಂತಾದವರಂತೆ ಹಿಂದಿನ ಕಾಲದ ಐತಿಹಾಸಿಕ ಮಹಾಪುರುಷರೇ? ಎಂದು ಕೆಲವರು ಕೇಳುತ್ತಾರೆ. ಇದಕ್ಕೆ ಹೀಗೆ ಉತ್ತರಿಸಬಹುದು: ಇಂದ್ರಪದವಿ, ವರುಣಪದವಿ ಮೊದಲಾದವುಗಳು ದೇವತೆಗಳ ಅಧಿಕಾರ ಸ್ಥಾನಗಳು. ಆ ಸ್ಥಾನಗಳನ್ನು ಪಡೆದವರು ಹಿಂದಿನ ಕಾಲದಲ್ಲಿ ಇದ್ದರು. ಈಗಲೂ ಇರಬಹುದು. ಮುಂದೆಯೂ ಉಂಟಾಗಬಹುದು. ಆದುದರಿಂದ ಆ ಸ್ಥಾನಗಳನ್ನು ಇಂದ್ರಪದ, ವರುಣಪದ, ಆದಿತ್ಯಪದ ಎಂಬ ಶಬ್ದಗಳಿಂದ ಶಾಸ್ತ್ರಗಳು ಹೇಳುತ್ತವೆ. ಪದ ಎಂದರೆ ಸ್ಥಾನ ಎಂದರ್ಥ. ಆ ಸ್ಥಾನ, ಅಧಿಕಾರಗಳನ್ನು ಯಾವ ಕಾಲದಲ್ಲಿ ಬೇಕಾದರೂ ತಪಸ್ಸು ಅಧ್ಯಯನಗಳಿಂದ ಪಡೆಯಲು ಸಾಧ್ಯ. ಇಂದ್ರನೇ



ಮೊದಲಾದವರು ಕೇವಲ ಐತಿಹಾಸಿಕ ವ್ಯಕ್ತಿಗಳಾಗಿದ್ದರೆ ಅವರನ್ನು ಸ್ತುತಿಸುವುದರಿಂದ ಮತ್ತು ಅವರನ್ನು ಕುರಿತು ಯಜ್ಞಗಳನ್ನು ಮಾಡುವುದರಿಂದ ನಮಗೆ ಏನೂ ಲಾಭವಿಲ್ಲ.

ಆದುದರಿಂದ ದೇವತೆಗಳು ಶಕ್ತಿಗಳೇ ಹೊರತು ವ್ಯಕ್ತಿಗಳಲ್ಲ. ಆ ಶಕ್ತಿಗಳು ಆಕಾರ, ಗುಣ, ವೈಭವಗಳೊಂದಿಗೆ ಭಕ್ತರಿಗೆ ವ್ಯಕ್ತವಾದಾಗ ವ್ಯಕ್ತಿಗಳಂತೆ[1] ಕಂಡುಬಂದರೂ ಸ್ವರೂಪದಿಂದ ಅವು ಶಕ್ತಿಗಳೇ. ಶಕ್ತಿಯೇ ದೇವತೆಗಳಾದರೆ ಗಾಳಿ, ಬೆಳಕು, ಮಳೆ, ನೆಲ ಇವೇ ದೇವತೆಗಳೇ? ಅಥವಾ ಅವುಗಳ ಅಲಂಕಾರಿಕ ಕಲ್ಪನೆ (Poetic Imagination) ಗಳೇ? ಎಂದರೆ ಅಲ್ಲ, ಮೇಲಿನ ಪ್ರಾಕೃತಿಕ ವಸ್ತುಗಳ ಹಿನ್ನೆಲೆಯಲ್ಲಿದ್ದು ಅವುಗಳನ್ನು ನಿಯಮಿಸುತ್ತಿರುವ ದಿವ್ಯಾಕಾರವುಳ್ಳ ಭಗವಂತನ ವಿಭೂತಿಗಳು ಆ ದೇವತೆಗಳು.

ಉದಾಹರಣೆಗೆ : ಗಾಳಿಗೆ ನಿಯಾಮಕನಾಗಿ ಅಧಿದೇವತೆಯಾದವನು ವಾಯು ದೇವನೇ. ಬೆಳಕಿಗೆ ಸೂರ್ಯ, ಅಗ್ನಿಗಳು. ಈ ದೇವತೆಗಳು ಪ್ರಾಕೃತಿಕವ ಸ್ತು-ವ್ಯಾಪಾರವನ್ನು ನಿಯಮಿಸುತ್ತಿರುವ ವಿಭೂತಿಗಳು. ಹೊರಗೆ ಕಾಣುವ ಸೂರ್ಯನ ಗೋಳ ಮತ್ತು ಭೂಮಂಡಲಗಳು ಆ ದೇವತಾಶಕ್ತಿಗಳ ಕಾರ್ಯಕ್ಷೇತ್ರ, ಮಾಧ್ಯಮ, ಪ್ರತೀಕ, ಮತ್ತು ಪ್ರತಿಮೆಗಳು. ಈ ಪ್ರತಿಮೆಗಳ ಮೂಲಕವಾಗಿ ನಾವು ಇವುಗಳ ಅಧಿದೇವತೆಯಾದ ಸೂರ್ಯನೇ ಮೊದಲಾದವರನ್ನು ಆರಾಧಿಸುತ್ತೇವೆ. ಆದರೆ ಪ್ರತಿಮೆಗಳೇ ಮೂಲಪದಾರ್ಥವಲ್ಲ ಎಂಬ ಸತ್ಯವನ್ನು ನಾವು ಮರೆಯಬಾರದು.

**ಅಂತರ್ದರ್ಶನಕ್ಕಾಗಿ**

ವೈದಿಕಮಂತ್ರಗಳು ಅಗ್ನಿ ಮುಂತಾದ ಶಕ್ತಿಗಳ ಹೊರಗಡೆಯ ರೂಪವನ್ನು ಕಾವ್ಯದ ರೀತಿಯಲ್ಲಿ ಸುಂದರವಾಗಿ ವರ್ಣನೆ ಮಾಡಿ ಅದರ ಮೂಲಕ ಅವುಗಳ ಒಳತತ್ತ್ವವಾದ ಶಕ್ತಿಗಳ ಬಳಿಗೆ ನಮ್ಮನ್ನು ಒಯ್ಯುತ್ತವೆ.

ಉದಾಹರಣೆಗೆ : "ಸವಿತೃದೇವನನ್ನು ವರ್ಣಿಸುವ ಸಂದರ್ಭದಲ್ಲಿ ಋಗ್ವೇದದ ಒಂದು ಮಂತ್ರ ಹೀಗಿದೆ........

1. ಶಕ್ತಿಯು ವ್ಯಕ್ತವಾಗಲು ಒಂದು ಮಾಧ್ಯಮ ಬೇಕು. ವಿದ್ಯುತ್ತು ಮೂಲತಃ ಶಕ್ತಿಯಾದರೂ ಅದು ಸ್ವರೂಪದಲ್ಲಿ ಕಾರ್ಯ ಮಾಡಲಾರದು. ಉಷ್ಣತೆ, ಬೆಳಕು ಮುಂತಾದವುಗಳಿಂದಲೂ ಜಡವಾದ ಯಂತ್ರಗಳಿಂದಲೂ ವಿದ್ಯುತ್ತು ಕಾರ್ಯಕಾರಿಯಾಗುತ್ತದೆ. ಅಂತೆಯೇ ಚೈತನ್ಯಶಕ್ತಿಯು ದೇವತೆಗಳ ಮೂಲಕ ಆಕಾರ, ಗುಣವೈಭವಗಳನ್ನು ಹೊಂದಿದಂತೆ ಇದ್ದು ಪುರುಷಾರ್ಥವನ್ನು ನೀಡುತ್ತದೆ.



ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।

ಹಿರಣ್ಯಯೇನ ಸವಿತಾ ರಥೇನಾದೇವೋಯಾತಿ ಭುವನಾನಿ ಪಶ್ಯನ್ ॥

—ಋಗ್ವೇದ. ೧-೩೫-೨

ಇದೋ! ಬರುತ್ತಿದ್ದಾನೆ ಸವಿತೃದೇವ ! ಕತ್ತಲೆಯ ಮುಸುಕಿನಿಂದ ಕೂಡಿದ ಆಗಸದ ಮೂಲಕ. ಮರ್ತ್ಯ ಮತ್ತು ಅಮರ್ತ್ಯ ಜೀವಿಗಳನ್ನು (ಚೇತನ ಮತ್ತು ಜಡ) ನಡೆಸುತ್ತಾ, ತನ್ನ ಸ್ವರ್ಣರಥದಲ್ಲಿ ಎಲ್ಲ ಲೋಕಗಳನ್ನೂ ನೋಡುತ್ತಾ ದಯಮಾಡಿಸುತ್ತಿದ್ದಾನೆ.

ಇಲ್ಲಿ ಕತ್ತಲೆಯನ್ನು ಕಳೆಯುತ್ತಾ ಎಲ್ಲಾ ಜೀವಿಗಳಿಗೂ ಚೈತನ್ಯವನ್ನು ತುಂಬುತ್ತಾ, ಎಲ್ಲವನ್ನೂ ತುಂಬಿಕೊಡುವ ಹೊಂಬಣ್ಣದ ಸೂರ್ಯಬಿಂಬವಿರುವ ಉದಯವು ವರ್ಣಿತವಾಗಿದೆ. ಆದರೆ ಅದರ ಧ್ವನಿತಾರ್ಥ ಹೇಗಿದೆ ನೋಡಿ! ಪರಮಾತ್ಮನೆಂಬ ಸೂರ್ಯನು ಅಜ್ಞಾನವೆಂಬ ಕತ್ತಲೆಯನ್ನು ಧ್ವಂಸಮಾಡುತ್ತಾ, ಜ್ಞಾನಿಗಳ ಜ್ಞಾನಾಕಾಶದಲ್ಲಿ ಪ್ರಕಾಶಕ್ಕೆ ಬರುತ್ತಿದ್ದಾನೆ. ಆದಿತ್ಯವರ್ಣದ ಪರಂಜ್ಯೋತಿ ಅವನು. ಎಲ್ಲಕ್ಕೂ ಚೈತನ್ಯವಾಗಿ ಸರ್ವಸಾಕ್ಷಿಯಾಗಿರುವ ಪರಮಾತ್ಮ ಎಂಬ ಅಭಿಪ್ರಾಯವು ಋಷಿದೃಷ್ಟಿ ಇರುವವರಿಗೆ ಹೊಳೆಯುತ್ತದೆ. ಉಳಿದವರಿಗೆ ಹೊರಗಿನ ಸೂರ್ಯಗೋಳದ ಕಾವ್ಯಮಯವರ್ಣನೆ ಮಾತ್ರ. ವೈದಿಕಮಂತ್ರಗಳಲ್ಲಿ ಇಂತಹ ಆಧ್ಯಾತ್ಮಿಕಧ್ವನಿಯು ಸಾವಿರಾರು ಮಂತ್ರಗಳಲ್ಲಿ ಅಡಗಿಕೊಂಡಿದೆ.

ಆದುದರಿಂದ ವೈದಿಕಮಂತ್ರಗಳು ಕೇವಲ ಪ್ರಾಕೃತಸನ್ನಿವೇಶ, ಘಟನೆಗಳ ವರ್ಣನೆಯಲ್ಲ. ಆ ವರ್ಣನೆಗಳನ್ನು ಮುಂದಿಟ್ಟು ಅವುಗಳ ಮೂಲಕ ಅಪ್ರಾಕೃತವಾದ ಆಧ್ಯಾತ್ಮಿಕಪ್ರಪಂಚಕ್ಕೆ ನಮ್ಮನ್ನೊಯ್ಯುವ ಆರ್ಷಸಾಹಿತ್ಯ; ಆ ಅಧ್ಯಾತ್ಮಭಾವವನ್ನೇ ಉಪನಿಷತ್ತುಗಳು ನೇರವಾಗಿ ಹೇಳುತ್ತವೆ. ಪ್ರಕೃತಿಯ ಮೂಲಕವಾಗಿ ಒಯ್ಯುವುದು ಸಂಹಿತೆ, ಬ್ರಾಹ್ಮಣಗಳ ತೋರಣೆ. ಅಂತೂ ಎಲ್ಲಕ್ಕೂ ತಾತ್ಪರ್ಯ ಒಂದೇ: ಸತ್ಯ, ಶಿವ, ಸುಂದರವಾದ ತತ್ತ್ವ.

ಋಗ್ವೇದದ ಮೊದಲ ಮಂತ್ರವು ಇದಕ್ಕೆ ಇನ್ನೊಂದು ಉದಾಹರಣೆ.

ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಮ್ ॥

ಹೋತಾರಂ ರತ್ನಧಾತಮಮ್ ॥

—ಋ. ೧-೧-೧



ಯಜ್ಞಕ್ಕೆ ಪುರೋಹಿತನೂ, ಸ್ವಾಮಿಯೂ, ಋತ್ವಿಜನೂ, ಹೋತೃವೂ ಮತ್ತು ಶ್ರೇಷ್ಠ ಸಂಪತ್ತಿನ ಫಲವನ್ನು ಕೊಡುವವನೂ ಆದ ಅಗ್ನಿಯನ್ನು ಸ್ತುತಿಸುತ್ತೇನೆ.

ಇಲ್ಲಿ ಯಜ್ಞಕ್ಕೆ ಸಾಧಕವಾಗುವ ಹೊರಗಿನ ಅಗ್ನಿಯನ್ನು ಹೊಗಳುವಂತೆ ಕಂಡರೂ ಉಪನಿಷತ್ತು ಕೊಂಡಾಡುವ ಪರಮಾತ್ಮನೆಂಬ ಅಗ್ನಿಯೇ ಇವನು. ಏಕೆಂದರೆ ಯಜ್ಞದಲ್ಲಿ ಪುರೋಹಿತನೇ ಮೊದಲಾದವರು ಬೇರೆ ಬೇರೆ ಇರುತ್ತಾರೆಯೇ ಹೊರತು ಒಬ್ಬನೇ ಎಲ್ಲವೂ ಅಲ್ಲ. ಹೀಗಿರುವಾಗ ಒಬ್ಬನೇ ಅಗ್ನಿಯನ್ನು ಈ ಎಲ್ಲಾ ರೀತಿಯಲ್ಲಿಯೂ ಸ್ತುತಿಸುತ್ತಿರುವಾಗ ಅದು "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಉಪನಿಷತ್ತು ಹೇಳುವ ಸರ್ವವ್ಯಾಪಕನಾದ ಪರಮಾತ್ಮನನ್ನೇ ತಿಳಿಸುತ್ತಿದೆ ತಾನೇ!

**ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ ಹೋತಾ ನಿಷಸಾದಾ ಪಿತಾನಃ।**

—ತೈ.ಸಂ. ೪-೬-೨

ಎಂಬ ವಿಶ್ವಕರ್ಮಸೂಕ್ತವು ಹೇಳುವಂತೆ ಇಡೀ ಭುವನಗಳನ್ನು ಹೋಮ ಮಾಡುವ(ಸಂಹರಿಸುವ) ಪರಮಋಷಿಯು ಪ್ರಪಂಚಕ್ಕೇ ಒಡೆಯನಾದ ಆ ಒಬ್ಬನೇ ಪರಮಾತ್ಮ ತಾನೇ!

ಈ ವಿಶೇಷದೃಷ್ಟಿಕೋನದೊಂದಿಗೆ ಮಹರ್ಷಿಗಳ ಮಂತ್ರಗಳನ್ನು ಅನುಸಂಧಾನ ಮಾಡಿದಾಗ ನಾವು ಪರಮಾನಂದಭರಿತರಾಗುತ್ತೇವೆ. ವೇದಗಳಲ್ಲಿರುವ ಆದಿಭೌತಿಕ, ಆಧ್ಯಾತ್ಮಿಕ, ಆಧಿದೈವಿಕ ವಿಷಯಗಳಿಗೂ, ಜೀವ-ಜಗತ್ತುಗಳ ವಿಷಯಗಳಿಗೂ ತಾತ್ಪರ್ಯವು ಜ್ಞಾನಸ್ವರೂಪಿಯಾದ ಪರಮಾತ್ಮನೇ.

### ಏಕವೇ? ಅನೇಕವೇ?

ವೇದದಲ್ಲಿ ಅಗ್ನಿ, ಇಂದ್ರ, ವರುಣ ಮುಂತಾದ ನಾನಾ ದೇವತೆಗಳ ವರ್ಣನೆಯನ್ನೂ, ಅವರ ರೂಪ, ಗುಣವೈಭವಗಳ ಪ್ರಶಂಸೆಯನ್ನೂ ನೋಡುತ್ತೇವೆ. ಪ್ರಾರ್ಥನೆ ಮತ್ತು ಯಜ್ಞಗಳ ಮೂಲಕ ಆ ದೇವತೆಗಳನ್ನು ಪ್ರಸನ್ನಗೊಳಿಸಿಕೊಂಡು ಪುರುಷಾರ್ಥಗಳನ್ನು ಪಡೆಯುವ ವಿಧಾನವನ್ನು ವೇದಮಂತ್ರಗಳು ತೋರಿಸುತ್ತವೆ. ಇದನ್ನು ಗಮನಿಸಿ, 'ವೇದದ ಋಷಿಗಳು ನಾನಾ ದೇವತೆಗಳಿವೆಯೆಂದು ಹೇಳುವರು; ಆ ದೇವತೆಗಳನ್ನೆಲ್ಲಾ ಒಂದುಗೂಡಿಸುವ ಪರತತ್ತ್ವದ ಭಾವನೆ ಅವರಿಗೆ ಮೊದಲಿರಲಿಲ್ಲ; ಅನಂತರ ಕಾಲದಲ್ಲಿ ಅದು ಉಂಟಾಯಿತು', ಎಂದು ಕೆಲವರು ವಿಮರ್ಶಕರು ಹೇಳುತ್ತಾರೆ. ಇದು ಸರಿಯಲ್ಲ. ಇರುವುದು ಒಂದೇ ಒಂದು ವಸ್ತು. ಅದನ್ನೇ ಜ್ಞಾನಿಗಳು ಇಂದ್ರ, ಮಿತ್ರ, ವರುಣ,



ದಿವ್ಯನಾದ ಸುಪರ್ಣ, ಗರುತ್ಮಂತ, ಅಗ್ನಿ, ಯಮ, ವಾಯು ಎಂದು ಕರೆಯುತ್ತಾರೆ ಎಂದು ವೇದವು ಸಾರುತ್ತದೆ.

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಸ್ಸಸುಪರ್ಣೋ ಗರುತ್ಮಾನ್ ।**

**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥**

—ಋ. ೧-೧೬೪-೪೬

ಹೀಗೆಯೇ

**ಯೋ ದೇವಾನಾಂ ನಾಮಧಾ ಏಕ ಏವ**

ಎಂಬ ವೇದಮಂತ್ರವು ಎಲ್ಲಾ ದೇವತೆಗಳ ಹೆಸರೂ ವಿಶ್ವಕರ್ಮನೊಬ್ಬನದೇ ಎಂದು ಹೇಳುತ್ತದೆ.

**ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ**

ಎಂಬ ಸೌರಮಂತ್ರವು ಸೂರ್ಯನೇ ಜಗತ್ತಿನ ಆತ್ಮನೆಂದು ಘೋಷಿಸುತ್ತದೆ. ಆದುದರಿಂದ ಈ ನಾನಾ ದೇವತೆಗಳು ಪರಮಾತ್ಮನ ವಿಭೂತಿಗಳು. ಎಲ್ಲ ದೇವತೆಗಳಲ್ಲೂ ಏಕಸೂತ್ರತೆ ಇದೆ ಎಂಬ ಸಿದ್ಧಾಂತವು ಋಷಿಗಳ ಮನಸ್ಸಿನಲ್ಲಿ ಬೇರೂರಿತ್ತು ಎಂದು ನಾವು ತಿಳಿಯಬೇಕು. ಯಾಸ್ಕರೂ ಕೂಡ "ಏಕೈವ ದೇವತಾ ಮಹಾಭಾಗ್ಯಾತ್ ಬಹುಧಾ ಸ್ತೂಯತೇ"—ಒಂದೇ ದೇವತೆಯೇ ತನ್ನ ಮಹಾಭಾಗ್ಯತೆಯಿಂದ ಬಹು ಪ್ರಕಾರವಾಗಿ ಸ್ತುತಿಸಲ್ಪಡುತ್ತದೆ ಎನ್ನುತ್ತಾರೆ.

**ತತ್ತ್ವದೃಷ್ಟಿ ಅಗತ್ಯ.**

ಆಯಾ ಪ್ರಕರಣದಲ್ಲಿ ಆಯಾ ದೇವತೆಯನ್ನೇ ಸರ್ವೋತ್ತಮ ಎಂದು ವೈದಿಕಮಂತ್ರಗಳು ಪ್ರಶಂಸಿಸುತ್ತವೆ.

**ನಕಿರಿಂದ್ರತ್ವದುತ್ತರಃ ।**

ಇಂದ್ರನೇ! ನಿನಗಿಂತ ದೊಡ್ಡವರು ಯಾರೂ ಇಲ್ಲ.



**ವಿಶ್ವಸ್ಮಾದ್ರುದ್ರ ಉತ್ತರಃ ।**
ರುದ್ರನೇ ಸರ್ವಶ್ರೇಷ್ಠ.

**ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ**

**ಪರಮಂತಮಾಪ ।**

ಓ! ವಿಷ್ಣುವೇ! ನಿನ್ನ ಮಹಿಮೆಯನ್ನು ಈಗಿರುವವರು, ಹಿಂದಿದ್ದವರು, ಮುಂದೆ ಬರುವವರು ಯಾರೂ ಅರಿಯರು.

ಈ ಮಂತ್ರಗಳು ತಾತ್ತ್ವಿಕವಾಗಿ ಒಬ್ಬನನ್ನೇ ಸ್ತುತಿಸುತ್ತವೆ.[1] ದೇವತೆಗಳು ಒಬ್ಬನೇ ಪರಮಾತ್ಮನ ವಿಭೂತಿಗಳು ಎಂಬ ತತ್ತ್ವವನ್ನು ಮರೆಯತಕ್ಕದ್ದಲ್ಲ.

ವೈದಿಕ ದೇವತೆಗಳಲ್ಲಿ ಒಮ್ಮೆ ಇಂದ್ರನಿಗೆ ಅಧಿಪತಿಯೆಂದೂ, ವರುಣನಿಗೆ ಋತ-ಸತ್ಯಗಳ ದೇವತೆಯೆಂದೂ ಸ್ಥಾನವಿತ್ತು. ಪುರಾಣಗಳ ಕಾಲದಲ್ಲಿ ಶಿವ, ವಿಷ್ಣುಗಳು ಈ ಸ್ಥಾನವನ್ನು ಆಕ್ರಮಿಸಿಬಿಟ್ಟರು. ಇಂದ್ರನು ಆಗಾಗ ರಾಕ್ಷಸರಿಂದ ಸೋಲಿಸಲ್ಪಟ್ಟು ಎಲ್ಲರ ಕರುಣೆಗೆ ಪಾತ್ರನಾದ, ವರುಣನು ಕೇವಲ ಜಲದೇವತೆಯಾಗಿ ಉಳಿದ ಎಂದು ಇಂದ್ರ, ವರುಣರ ಮೇಲೆ'ಅಯ್ಯೋ! ಪಾಪ' ಎಂದು ಕರುಣೆ ತೋರಿಸುತ್ತಾರೆ. ಕೇನೋಪನಿಷತ್ತಿನಲ್ಲಿ ಬರುವ"ಯಕ್ಷರೂಪಿಯಾದ ಬ್ರಹ್ಮದ ಮಹಿಮೆಯನ್ನು ಅರಿಯಲಾಗದೆ ಅಗ್ನಿ, ವಾಯು ಮತ್ತು ಇಂದ್ರರು ಸೋತರು" ಎಂಬ ಕಥೆಯನ್ನು ನೋಡಿ, "These three Gods were supplanted" ಈ ಮೂವರ ಅಧಿಕಾರವನ್ನು ರೈತರು ಕಳೆ ಕೀಳುವಂತೆ ಪರಬ್ರಹ್ಮವು ಕಿತ್ತುಕೊಂಡಿತು ಎಂದು ಟೀಕಿಸುತ್ತಾರೆ. ಆದರೆ ವಾಸ್ತವವಾಗಿ ನೋಡಿದರೆ ಯಾರ ಸ್ಥಾನವನ್ನು ಯಾರೂ ಕಿತ್ತುಕೊಂಡಿಲ್ಲ.[2]

**ತಸ್ಮಾದಿನ್ದ್ರಃ ಅತಿತರಾಮಿವ ಅನ್ಯಾನ್ದೇವಾನ್.....।**

---

1. ಕೆಲವು ಪಾಶ್ಚಾತ್ಯವಿಮರ್ಶಕರು ಈ ವೇದಮಂತ್ರಗಳನ್ನು ವಿಮರ್ಶಿಸುತ್ತಾ ಇದೊಂದು Henotheism (ಆಯಾಕಾಲದಲ್ಲಿ ಆಯಾಕಾಲಕ್ಕೆ ಅನುಗುಣವಾಗಿ ಬಂದ ದೇವತೆಗಳನ್ನು ಹೊಗಳುವ ರೀತಿ) ಎಂದರೆ ತತ್ತತ್ಕಾಲಾನುಗುಣದೇವತೋತ್ಕರ್ಷವಾದ ಎನ್ನುತ್ತಾರೆ. ಇದು ಎಷ್ಟಕ್ಕೂ ಸರಿಯಲ್ಲ.

2. ಕೆಲವು ವಿಮರ್ಶಕರು ಮೊದಲು ಸಂಹಿತೆ, ಅನಂತರ ಬ್ರಾಹ್ಮಣ, ಅನಂತರ ಆರಣ್ಯಕೋಪನಿಷತ್ ರಚಿತವಾಯಿತು ಎನ್ನುತ್ತಾರೆ. ಕರ್ಮಕಾಂಡದಲ್ಲಿ ಉನ್ನತಸ್ಥಾನ ಪಡೆದಿದ್ದ ಇಂದ್ರನ ಅಧಿಕಾರವನ್ನು ಬ್ರಹ್ಮವು ಕಿತ್ತುಕೊಳ್ಳುವುದಾದರೆ ಬ್ರಹ್ಮವನ್ನೇ ಪ್ರತಿಪಾದಿಸುವ ಉಪನಿಷತ್ತಿನಲ್ಲಿ ಇಂದ್ರ, ವರುಣರ ಸ್ತುತಿಯು ಹೇಗೆ ಸಂಗತವಾಗುತ್ತದೆ?



ಇಂದ್ರನು ಎಲ್ಲ ದೇವತೆಗಳಿಗಿಂತಲೂ ಅತಿಶಯ ಹೊಂದಿರುವವನು ಎಂದು ಉಪನಿಷತ್ತೇ ಹೇಳುತ್ತದೆ. ತೈತ್ತಿರೀಯ ಉಪನಿಷತ್ತಿನ ಶಾಂತಿಮಂತ್ರವು ಮಿತ್ರ ಮತ್ತು ವರುಣರ ಸ್ತುತಿಯಿಂದಲೇ ಪ್ರಾರಂಭವಾಗುತ್ತದೆ. ಆದ ಕಾರಣ ಸ್ಥಾನಗಳನ್ನು ಆಕ್ರಮಿಸಲು ದೇವತೆಗಳೂ ಯತ್ನಿಸುತ್ತಾರೆ ಎಂಬುದು ನಮ್ಮ ಪ್ರವೃತ್ತಿಗಳನ್ನು ಅವರ ಪ್ರವೃತ್ತಿಗಳೊಡನೆ ಹೋಲಿಸಿದಂತೆ. "ಸನ್ಮೂಲಾಃ ಖಲು ಸೌಮ್ಯ ಇಮಾಃ ಪ್ರಜಾಃ" ಎಂಬಂತೆ ಎಲ್ಲಕ್ಕೂ ಪರಮಾತ್ಮನೇ ಮೂಲ ಎಂಬ ತತ್ತ್ವದೃಷ್ಟಿ ಇಟ್ಟವರು ಆಯಾ ಸಂದರ್ಭದಲ್ಲಿ ಆಯಾ ದೇವತೆಗಳನ್ನು ಸ್ತುತಿಸುತ್ತಾರೆ.

ಮತ್ತೆ ಕೆಲವರು 'ವೇದದಲ್ಲಿ ಅಗ್ನಿಯ ಸ್ತೋತ್ರವಿರುವ ಇನ್ನೂರು ಸೂಕ್ತಗಳೂ, ರುದ್ರನಿಗೆ ಕೇವಲ ಮೂರೂವರೆ ಸೂಕ್ತಗಳೂ, ವಿಷ್ಣುವಿಗೆ ಕೇವಲ ಐದಾರು ಸೂಕ್ತಗಳೂ ಇವೆ. ಆದುದರಿಂದ ಪುರಾಣಗಳಲ್ಲಿ ಪರಮದೇವತೆಗಳಾದ ಇವರು ವೇದಗಳಲ್ಲಿ ಏಕೆ ಗೌಣದೇವತೆಗಳಾದರು?' ಎಂದು ಪ್ರಶ್ನಿಸುತ್ತಾರೆ. ದೇವತೆಗಳಲ್ಲಿ ಗೌಣ ಮುಖ್ಯವೆಂಬ ವಿಭಾಗವೇ ಸಲ್ಲದು. ಸೂಕ್ತಗಳ ಸಂಖ್ಯೆಯಿಂದ ದೇವತೆಗಳ ಪ್ರಾಧಾನ್ಯ ಮತ್ತು ಅಪ್ರಾಧಾನ್ಯವನ್ನು ನಿರ್ಣಯಿಸುವುದು ಉಚಿತವೇ? ಒಂದೇ ಒಂದು ಪರವಸ್ತುವಿನ ವಿಭೂತಿಗಳನ್ನು ಸಂದರ್ಭವಶಾತ್ ಸ್ತುತಿಸಿರುತ್ತಾರೆ. ವೇದಗಳಿಗೆಲ್ಲ ಯಜ್ಞದಲ್ಲಿಯೇ ತಾತ್ಪರ್ಯವಿರುವುದರಿಂದ ಅಗ್ನಿಯೆಂಬ ವಿಭೂತಿ ಯಿಂದಲೇ ಎಲ್ಲ ದೇವತೆಗಳೂ ತೃಪ್ತಿ ಹೊಂದುತ್ತಾರೆಂದು

**ಅಗ್ನಿಮುಖಾ ಏವ ದೇವತಾಃ ಪ್ರೀಣಾತಿ ।**

ಎಂಬ ಶ್ರುತಿವಚನದಂತೆ ಅಗ್ನಿಯ ಸ್ತೋತ್ರದ ಪ್ರಸಂಗಗಳು ಸ್ವಾಭಾವಿಕವಾಗಿಯೇ ಹೆಚ್ಚು.

**ದೇವತೆಗಳೆಷ್ಟು?**

ಪರಮಾತ್ಮನು "ಪರಾ ದೇವತಾ" ಎಂದು ಕರೆಯಲ್ಪಡುವುದರಿಂದ ಅದನ್ನು ಲಕ್ಷಿಸಿ ದೇವತೆ ಒಂದೇ ಎಂದು ವೇದಗಳು ಕೆಲವೆಡೆ ಹೇಳುತ್ತವೆ. ಇಂತಹ ವಚನಗಳನ್ನು ನೋಡಿದಾಗ ದೇವತೆ ಒಂದೇ ಎಂದು ನಮಗೆ ಅನ್ನಿಸುತ್ತದೆ.

**ತದ್ವಿಷ್ಣೋಃ ಪರಮಂ ಪದಗ್ಂ ಸದಾ ಪಶ್ಯನ್ತಿ ಸೂರಯಃ ।**

—ತೈ.ಸಂ. ೧-೨-೧೩-೨

ಜ್ಞಾನಿಗಳು ಅವನನ್ನೇ ಸದಾ ಕಾಣುತ್ತಾರೆ.

**ಶುದ್ಧೋ ದೇವ ಏಕೋ ನಾರಾಯಣಃ ।**



ನಾರಾಯಣನೆಂಬ ದೇವನು ಒಬ್ಬನೇ. —ನಾರಾಯಣೋಪನಿಷತ್

ಮೂರು ದೇವತೆಗಳು ಇರುವರು ಎಂಬ ಹೇಳಿಕೆಯನ್ನೂ ನೋಡುತ್ತೇವೆ. ಭೂಮಿಯಲ್ಲಿ ಅಗ್ನಿ, ಅಂತರಿಕ್ಷದಲ್ಲಿ ವಾಯು ಅಥವಾ ಇಂದ್ರ ಮತ್ತು ಸ್ವರ್ಗದಲ್ಲಿ ಸೂರ್ಯ ಎಂಬ ಈ ಮೂರೇ ದೇವತೆಗಳು ಎಂದು ನಿರುಕ್ತಕಾರರು ಹೇಳುತ್ತಾರೆ. ವೇದದ ಅಭಿಪ್ರಾಯವನ್ನು ವಿಸ್ತರಿಸಲು ರಚಿಸಲ್ಪಟ್ಟಿರುವ ಪುರಾಣ–ಇತಿಹಾಸಗಳಲ್ಲಿ ಬ್ರಹ್ಮ, ವಿಷ್ಣು, ರುದ್ರರೆಂಬ ಮೂರು ದೇವತೆಗಳೆಂದು ಕೇಳುತ್ತೇವೆ. ದೇವತೆಗಳ ಸಂಖ್ಯೆ ಮೂವತ್ತೂರು. 'ತ್ರಯಸ್ತ್ರಿಗ್ಂಶದ್ವೈ ದೇವತಾಃ' ಎಂದು ವೇದವು ಹೇಳುತ್ತದೆ.

ಯೇ ದೇವಾ ದಿವ್ಯೇಕಾದಶ ಸ್ಥ ಪೃಥಿವ್ಯಾಮಧ್ಯೇಕಾದಶಸ್ಥಾಪ್ಸುಷದೋ ಮಹಿ
ನೈಕಾದಶ ಸ್ಥ.....। —ತೈ.ಸಂ. ೧೪-೧೦

ಎಂಬ ಮಂತ್ರದಿಂದ ದಿವಿಯಲ್ಲಿ ಹನ್ನೊಂದು, ಭುವಿಯಲ್ಲಿ ಹನ್ನೊಂದು, ಅಂತರಿಕ್ಷದಲ್ಲಿ ಹನ್ನೊಂದು ಹೀಗೆ ಮೂವತ್ತೂರು ದೇವತೆಗಳು ಇರುವರೆಂದು ತಿಳಿಯುತ್ತದೆ. ಇದಲ್ಲದೆ ವೇದದಲ್ಲಿ ಎಂಟು ಮಂದಿ ವಸುಗಳು (8) ಹನ್ನೊಂದು ಮಂದಿ ರುದ್ರರು (11) ಹನ್ನೆರಡು ಮಂದಿ ಆದಿತ್ಯರು (12) ದ್ಯಾವಾಪೃಥಿವಿಗಳು ಅಥವಾ ಅಶ್ವಿನಿಗಳು (2) ಹೀಗೆ ಮೂವತ್ತೂರು ಮಂದಿ ಎಂದು ಹೇಳುವುದೂ ಉಂಟು. ಪುರಾಣಗಳಲ್ಲಿ ಮೂವತ್ತೂರು ಕೋಟಿ ದೇವತೆಗಳು ಇರುವರೆಂದೂ ಕೇಳುತ್ತೇವೆ. ಆದ್ದರಿಂದ ದೇವತೆಗಳು ಎಷ್ಟಿರುವರು?

ಇವೆಲ್ಲವೂ ಒಂದೇ ಅಭಿಪ್ರಾಯ ಹೇಳುವುದರಿಂದ ಎಲ್ಲವೂ ಸರಿ. ಪರಮಾತ್ಮ ತತ್ತ್ವವು ಒಂದೇ ಆದುದರಿಂದ ಅದನ್ನು ಆಧರಿಸಿ ಒಂದೇ ದೇವತೆಯೆಂಬ ಶ್ರುತಿವಚನವು ಸಂಗತವಾಗುತ್ತದೆ. ಆ ತತ್ತ್ವಕ್ಕೆ ಮೂರು ಲಕ್ಷಣಗಳಿವೆ.

ಸತ್ಯಂ ಜ್ಞಾನಮನಂತಂ ಬ್ರಹ್ಮ । —ತೈ.ಉ. ಬ್ರಹ್ಮಾನಂದವಲ್ಲೀ

ಆದುದರಿಂದ ಅದನ್ನು ಇಟ್ಟುಕೊಂಡು ಮೂರು ದೇವತೆಗಳು ಎಂಬ ನಿರುಕ್ತಾದಿಗಳ ಮಾತು ಹೊಂದಿಕೊಳ್ಳುತ್ತದೆ. ಆ ಮೂರು ದೇವತೆಗಳ ವಿಭೂತಿಗಳಾಗಿ ಮೂವತ್ತೂರನ್ನು ವಿವರಿಸಿದಾಗ ಮೂವತ್ತೂರು ದೇವತೆಗಳು ಎಂಬ ಶ್ರುತಿಯ ವಚನ ಯುಕ್ತವಾಗುತ್ತದೆ. ಆ ಮೂವತ್ತೂರನ್ನು ವಿಸ್ತರಿಸಿದಾಗ ಒಂದೊಂದು ವರ್ಗಕ್ಕೂ ಒಂದೊಂದು ಕೋಟಿಯಾಗಿ ಒಟ್ಟು ಮೂವತ್ತೂರು ಕೋಟಿಯಾಗುತ್ತದೆ. ಹೀಗೆ ಒಂದೇ ತತ್ತ್ವದ ವಿಸ್ತಾರ ಮೂವತ್ತೂರು ಕೋಟಿ ದೇವತೆಗಳು. ಆ ಮೂವತ್ತೂರು ಕೋಟಿಯನ್ನು ಮೂವತ್ತೂರರಲ್ಲೂ, ಆ



ಮೂವತ್ಮೂರನ್ನು ಮೂರರಲ್ಲೂ ಆ ಮೂರನ್ನು ಒಂದರಲ್ಲೂ ಉಪಸಂಹಾರ ಮಾಡಿಕೊಂಡಾಗ ಪರಾದೇವತೆ ಒಂದೇ ಉಳಿಯುವುದು. ಅದೇ ತತ್ತ್ವ. ವೇದಗಳ ಅರ್ಥವನ್ನು ಇತಿಹಾಸಪುರಾಣಗಳಿಂದ ವಿಸ್ತರಿಸಿಕೊಳ್ಳಬೇಕು ಎಂಬ ಅಭಿಪ್ರಾಯದ "ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್" ಎಂಬ ವಚನವಿರುವುದರಿಂದ ಸಹಜವಾಗಿಯೇ ಮೂವತ್ಮೂರು ಕೋಟಿ ದೇವತೆಗಳಿದ್ದಾರೆ ಎಂಬ ಪುರಾಣಗಳ ಮಾತು ಯುಕ್ತವಾಗಿದೆ. ದೇವತೆಗಳ ಸಂಶ್ಲೇಷಣ, (ಒಂದಾಗಿಸಿಕೊಳ್ಳುವಿಕೆ) ವಿಶ್ಲೇಷಣ (ವಿಸ್ತರಿಸಿಕೊಳ್ಳುವಿಕೆ) ಗಳಿಂದ ನಾವು ವೈದಿಕ ಸಾಹಿತ್ಯದಲ್ಲಿ ಒಂದು, ಮೂರು, ಮೂವತ್ಮೂರು ಮತ್ತು ಮೂವತ್ಮೂರುಕೋಟಿ ದೇವತೆಗಳು ಇದ್ದಾರೆಂಬ ವಚನಗಳನ್ನು ಕಾಣುತ್ತೇವೆ. ಇವೆಲ್ಲವೂ ವೈದಿಕವಿಜ್ಞಾನಕ್ಕೆ ಅನುಗುಣವಾಗಿಯೇ ಇದೆ ಎಂದು ತಿಳಿಯಬೇಕು.

ದೇವತೆಗಳ ವಿಚಾರವನ್ನು ತಿಳಿದ ನಂತರ ಛಂದಸ್ಸಿನ ವಿಷಯವನ್ನು ತಿಳಿಯೋಣ.

**ಛಂದಸ್ಸು**

ಸಂಸ್ಕೃತಸಾಹಿತ್ಯದಲ್ಲಿ ಹೆಚ್ಚು ಗ್ರಂಥಗಳು ಛಂದೋಬದ್ಧವಾಗಿಯೇ ಇವೆ. ಧರ್ಮಶಾಸ್ತ್ರ, ಆಯುರ್ವೇದ ಮೊದಲಾದ ಶಾಸ್ತ್ರಗಳ ಗ್ರಂಥಗಳನ್ನೂ ಕೂಡ ಋಷಿಗಳು ಪದ್ಯದ ರೂಪದಲ್ಲಿ ಛಂದಸ್ಸಿಗೆ ಅನುಗುಣವಾಗಿ ರಚಿಸಿದ್ದಾರೆ. ಇತಿಹಾಸ ಪುರಾಣಗಳೂ ಛಂದೋಬದ್ಧವಾಗಿಯೇ ಇವೆ. ಹೀಗಿರುವಾಗ ಇವೆಲ್ಲಕ್ಕೂ ಮೂಲವಾಗಿರುವ ವೈದಿಕಸಾಹಿತ್ಯದಲ್ಲಿ ಛಂದಸ್ಸು ಹಾಸುಹೊಕ್ಕಾಗಿರುವುದು ಆಚ್ಚರಿಯೇನಲ್ಲ.

**ಸುಂದರ ಚೌಕಟ್ಟು**

ಮಂತ್ರಗಳೆಲ್ಲಾ ಸಾಮಾನ್ಯವಾಗಿ ದೇವತಾಸ್ತುತಿಗಳು. ಸ್ತೋತ್ರಗಳಲ್ಲಿ ಭಾವವು ಪ್ರಧಾನ. ಭಾವವು ಗದ್ಯಕ್ಕಿಂತಲೂ ರಾಗಯುಕ್ತವಾದ ಪದ್ಯದಿಂದ ಹೆಚ್ಚು ಸ್ಫುಟಗೊಳ್ಳುವುದು ಎಲ್ಲರ ಅನುಭವ. ಕರುಣೆಯಿಂದ ಮರುಗಿದ ವಾಲ್ಮೀಕಿಯ "ಮಾ ನಿಷಾದ ಪ್ರತಿಷ್ಠಾಂ ತ್ವಮ್" ಎಂಬ ಮಾತು ತಾನಾಗಿಯೇ ಛಂದೋಬದ್ಧವಾಯಿತು. ಆದ್ದರಿಂದ ದೇವತಾಸ್ತೋತ್ರಗಳೇ ಹೆಚ್ಚಿರುವ ವೇದಮಂತ್ರಗಳು ಛಂದೋಬದ್ಧವಾಗಿಯೇ ಇವೆ. "ಛಂದಸ್" ಎಂಬ ಪದವು **ಚದಿ-ಆಹ್ಲಾದೇ** ಎಂಬ ಧಾತುವಿನಿಂದ ಬಂದಿದೆ. ಛಂದೋಬಂಧದ ಉಡಿಗೆಯಲ್ಲಿರುವ ಸಾಹಿತ್ಯವು ಹೆಚ್ಚು ಆಹ್ಲಾದವನ್ನುಂಟುಮಾಡುತ್ತದೆ. ಯಾಸ್ಕರು 'ಆವರಿಸುವಿಕೆ' ಎಂಬ ಅರ್ಥವುಳ್ಳ'ಛದ್' ಎಂಬ ಧಾತುವಿನಿಂದ ಛಂದಸ್ ಎಂಬ ಶಬ್ದ ಬಂದಿತೆಂದು ಹೇಳುತ್ತಾರೆ. ಛಂದಸ್ಸುಗಳಿಂದ ವೈದಿಕಮಂತ್ರಗಳಿಗೆ



ಸುಂದರವಾದ ಆವರಣವು ನಿರ್ಮಿತವಾಗಿದೆ. ದೇವತೆಗಳು ಮೃತ್ಯುವಿನ ಆಕ್ರಮಣ ದಿಂದ ತಪ್ಪಿಸಿಕೊಳ್ಳಲು ಛಂದಸ್ಸಿನ ಆವರಣವನ್ನು ಹಾಕಿಕೊಂಡರು ಎಂಬ ಅಭಿಪ್ರಾಯದ

**ಯದೇಭಿರಾತ್ಮಾನಮಾಚ್ಛಾದಯನ್ ದೇವಾ ಮೃತ್ಯೋರ್ಬಿಭ್ಯತಃ ತಚ್ಛಂದಸಾಂ ಛಂದಸ್ತ್ವಮ್ ।**

—ನಿರುಕ್ತ

ಈ ಮಾತು ಬರುತ್ತದೆ. ದೈವಭಾವಕ್ಕೆ ಅನುಗುಣವಾದ ವರ್ಣಗಳ ಅಳವಿನಲ್ಲಿ ಮಂತ್ರವು ಇರಬೇಕು. ಆ ಸೀಮೆಯನ್ನು ಮೀರಿದರೆ ಅದರ ಅಮರಭಾವವು ನಾಶಹೊಂದುತ್ತದೆ. ಅಂತಹ ಅಮರಭಾವಕ್ಕೆ ಇವುಗಳು ಆವರಣವಾದುದರಿಂದ 'ಛಂದಸ್ಸು' ಎಂಬ ಹೆಸರು ಯುಕ್ತವಾಗಿಯೇ ಇದೆ. ಛಂದಶ್ಶಾಸ್ತ್ರವನ್ನು ವೇದಗಳ ಪಾದ ಎಂದು ಕರೆಯುತ್ತಾರೆ. 'ಛಂದಃ ಪಾದೌ ತು ವೇದಸ್ಯ'. ನಿಲ್ಲಲು ಮತ್ತು ನಡೆಯಲು ಕಾಲುಗಳು ಅವಶ್ಯಕವಾಗಿರುವಂತೆಯೇ ಮಂತ್ರಗಳಲ್ಲಿ ರಸಭಾವಾದಿ ಗಳು ನಿಲ್ಲಲು ಮತ್ತು ಮುಂಬರಿಯಲು ಛಂದಸ್ಸು ಆವಶ್ಯಕ.

ಛಂದೋಬಂಧದಿಂದ ಸೌಂದರ್ಯವಿಶೇಷವು ವ್ಯಕ್ತವಾಗುವುದಲ್ಲದೆ ಲೌಕಿಕ ಪ್ರಯೋಜನಗಳೂ ಇವೆ.

೧. ಪ್ರಪಂಚದ ಎಲ್ಲ ಭಾಷೆಗಳಲ್ಲಿ ರಮಣೀಯತಮ ಮತ್ತು ಶ್ರೇಷ್ಠವಾದ ಗ್ರಂಥಗಳು ಛಂದೋಬದ್ಧವಾಗಿಯೇ ಹೊರಬಂದಿವೆ. ಆಳವಾದ ಅನುಭವಗಳೂ ಮತ್ತು ಪ್ರಭಾವಪೂರ್ಣವಾದ ಅನುಭವಗಳೂ ಛಂದೋಬದ್ಧವಾದ ಭಾಷೆ ಯಲ್ಲಿಯೇ ಬಹುಮಟ್ಟಿಗೆ ಪ್ರಕಟವಾಗುತ್ತವೆ. ಪರಿಮಿತರೂಪವಾದ ಧ್ವನಿಯನ್ನು ಒಂದು ವಿಶಿಷ್ಟವಾದ ರೂಪದಲ್ಲಿ ಅಳವಡಿಸುವುದೇ ಛಂದಸ್ಸು. ಯೋಗ್ಯವಾದ ಅಂತಹ ಅಳವಡಿಕೆಯಿಂದ ಗ್ರಂಥವು ಸುಂದರವಾಗುತ್ತದೆ.

೨. ದೇವತೆಗಳನ್ನು ಸಂತೋಷಪಡಿಸಲು ಗಾನವು ಒಂದು ಮುಖ್ಯವಾದ ಸಾಧನ. ಗಾನ ಮಾಡಲು ಛಂದೋಬದ್ಧವಾದ ಸಾಹಿತ್ಯವೇ ಹೆಚ್ಚು ಹೊಂದಿಕೆಯಾಗುತ್ತದೆ. ಆದುದರಿಂದ ವೈದಿಕಮಂತ್ರಗಳು ಛಂದೋಬದ್ಧವಾಗಿಯೇ ಋಷಿಗಳಿಗೆ ಕಾಣಿಸಿಕೊಂಡಿರುವುದು ದೇವತಾಪ್ರೀತಿಯಲ್ಲಿ ಸಾರ್ಥಕಗೊಳ್ಳುತ್ತವೆ.

೩. ನೆನಪಿನಲ್ಲಿ ಇಟ್ಟುಕೊಳ್ಳುವುದಕ್ಕೆ ಗದ್ಯಕ್ಕಿಂತಲೂ ಛಂದೋಬಂಧದ ಅಳವಿನಲ್ಲಿರುವ ಸಾಹಿತ್ಯವೇ ಹೆಚ್ಚು ಸುಲಭವಾಗಿದೆ. ವೈದಿಕಮಂತ್ರಗಳ ರೂಪವು ಕೆಡದೆ ಅವು ಒಂದೇ ರೀತಿ ಸಂಪ್ರದಾಯ–ಪರಂಪರೆಯಲ್ಲಿ ಬರಲು ಅವು ಬಹುಮಟ್ಟಿಗೆ ಛಂದೋಬದ್ಧವಾಗಿರುವುದೇ ಒಂದು ಮುಖ್ಯ ಕಾರಣ ಎಂದು ಹೇಳಬಹುದು.



ಲೌಕಿಕಸಂಸ್ಕೃತದ ಪದ್ಯಗಳಲ್ಲಿ ಮೇಲ್ಕಂಡ ಛಂದೋನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಆದರೆ ವೈದಿಕಋಕ್ಕುಗಳಲ್ಲಿ ಆ ನಿಯಮಗಳ ಬಿಗಿಯನ್ನು ಬಹುಮಟ್ಟಿಗೆ ಪಾಲಿಸುತ್ತಿಲ್ಲ. ವರ್ಣಗಳ ಕ್ರಮ ಮತ್ತು ಮಾತ್ರಾ ನಿಯಮಗಳನ್ನು ಅನೇಕ ಕಡೆ ವೈದಿಕಋಕ್ಕುಗಳಲ್ಲಿ ಮೀರಲಾಗಿದೆ. ವರ್ಣಗಳ ಒಟ್ಟು ಸಂಖ್ಯೆಯಿಂದ ಮಾತ್ರವೇ ವೇದದ ಋಕ್ಕುಗಳಲ್ಲಿ ಛಂದಸ್ಸುಗಳ ವ್ಯತ್ಯಾಸವನ್ನು ತಿಳಿಯಬೇಕಾಗುತ್ತದೆ. ಪ್ರತಿ ಋಕ್ಕಿನಲ್ಲಿಯೂ ಎರಡು ಅಥವಾ ಅದಕ್ಕಿಂತ ಹೆಚ್ಚು ಪಾದಗಳಿರುತ್ತವೆ. ಮತ್ತು ಪ್ರತಿಯೊಂದು ಪಾದದಲ್ಲಿಯೂ ನಿಯತವಾದ ಅಕ್ಷರಗಳಿರುತ್ತವೆ. ಕಾತ್ಯಾಯನರ 'ಸರ್ವಾನುಕ್ರಮಣೀ' ಎಂಬ ಗ್ರಂಥದಲ್ಲಿ ವೈದಿಕಋಕ್ಕುಗಳ ಛಂದಸ್ಸುಗಳನ್ನು ವಿಸ್ತಾರವಾಗಿ ಕೊಡಲಾಗಿದೆ.

ಋಕ್ಕುಗಳಲ್ಲಿ ಈ ಛಂದೋನಿಯಮಗಳ ಭಂಗವನ್ನು ಗಮನಿಸಿದಾಗ ಎರಡು ಪ್ರಶ್ನೆಗಳು ಏಳುತ್ತವೆ. ಆ ಪುರಾತನಸಾಹಿತ್ಯದಲ್ಲಿ ಛಂದೋನಿಯಮದ ಬಿಗಿ ಇರಲಿಲ್ಲವೇ? ಅಥವಾ ಕಾಲಕ್ರಮದಲ್ಲಿ ಉಚ್ಚಾರಣದೋಷದಿಂದ ಆ ಬಿಗಿಯು ಕಡಿಮೆಯಾಯಿತೆ? ಈ ಛಂದಸ್ಸಿನ ವ್ಯತ್ಯಾಸಗಳನ್ನು ನಾವು ಸರಿಪಡಿಸಬಹುದೇ?

ನಿಯಮಾನುಸಾರವಾಗಿ ಆ ಛಂದಸ್ಸಿನ ದೋಷಗಳನ್ನು ಸರಿಪಡಿಸಿ ಪಠಿಸಬಹುದೆಂದು ಕೆಲವರ ಅಭಿಪ್ರಾಯ. ಉದಾಹರಣೆ : ಋಗ್ವೇದದ 7ನೇ ಮಂಡಲದ 1-86-4ರಲ್ಲಿ 'ಜ್ಯೇಷ್ಠ' ಎಂಬ ಪದವನ್ನು 'ಜ್ಯಯಿಷ್ಠ' ಎಂಬುದಾಗಿಯೂ 'ವಾತ' ಎಂಬುದನ್ನು 'ವ ಆತ' ಎಂಬುದಾಗಿಯೂ ಸರಿಪಡಿಸಬಹುದು ಎನ್ನುತ್ತಾರೆ. ಆದರೆ, ವೈದಿಕ ಋಕ್ಕುಗಳನ್ನು ಹಾಗೆ ಆವಶ್ಯಕತೆ ಇದ್ದರೆ ಬದಲಾಯಿಸುವ ಅಧಿಕಾರ ಋಷಿಗಳಿಗೆ ಮಾತ್ರ ಸೇರಿದ್ದು ಎಂಬುದು ಔಚಿತ್ಯಪೂರ್ಣವಾದ ದಾರಿ. ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ, ಸಂಕೀರ್ಣ, ಪ್ರಗಾಥ, ಅಷ್ಟಿ, ಅತ್ಯಷ್ಟಿ, ಧೃತಿ, ಅತಿಧೃತಿ, ಕೃತಿ, ಪ್ರಕೃತಿ, ಆಕೃತಿ, ವಿಕೃತಿ, ಸಂಕೃತಿ, ಅಭಿಕೃತಿ, ಉತ್ಕೃತಿ, ಇತ್ಯಾದಿಗಳು ವೈದಿಕ ಛಂದಸ್ಸುಗಳು.

ಗಾಯತ್ರೀ ಮೊದಲಾದ ಛಂದಸ್ಸುಗಳ ಹೆಸರುಗಳು ಅಕ್ಷರಗಳ ಸಂಖ್ಯೆಯನ್ನು ಅವಲಂಬಿಸಿ ವ್ಯತ್ಯಾಸವಾಗುತ್ತವೆ. ಎಂಟು ಅಕ್ಷರಗಳನ್ನೊಳಗೊಂಡ ಮೂರು ಪಾದಗಳಿದ್ದರೆ ಗಾಯತ್ರೀ ಛಂದಸ್ಸು ಎನಿಸಿಕೊಳ್ಳುತ್ತದೆ.

**ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಮ್ ।**

**ಹೋತಾರಂ ರತ್ನಧಾತಮಮ್ ॥**

ಎಂಬುದು ಗಾಯತ್ರೀಛಂದಸ್ಸಿಗೆ ಉದಾಹರಣೆ.



ಕೆಲವು ಛಂದಸ್ಸುಗಳಲ್ಲಿ ನಾಲ್ಕು ಪಾದಗಳು ಇರುವುದುಂಟು. ಅನುಷ್ಟುಪ್ ಛಂದಸ್ಸಿನಲ್ಲಿ ಎಂಟು ಅಕ್ಷರಗಳನ್ನೊಳಗೊಂಡ ನಾಲ್ಕು ಪಾದಗಳಿರುತ್ತವೆ. ಕೆಲವು ಛಂದಸ್ಸಿನಲ್ಲಿ ಮೊದಲ ಪಾದದ ಅಕ್ಷರಗಳ ಸಂಖ್ಯೆ ಎರಡನೆಯ ಪಾದದಲ್ಲಿ ಇರುವುದಿಲ್ಲ. ಸತೋಬೃಹತೀಛಂದಸ್ಸಿನ ಮೊದಲ ಪಾದದಲ್ಲಿ ಹನ್ನೆರಡು ಅಕ್ಷರ ಗಳೂ ಎರಡನೆಯ ಪಾದದಲ್ಲಿ ಎಂಟು ಅಕ್ಷರಗಳೂ ಇರುತ್ತವೆ. ಅಕ್ಷರಗಳ ಸಂಖ್ಯೆಯು ಬೇರೆಬೇರೆಯಾಗಿರುವುದರಿಂದಲೂ, ಪಾದಗಳ ಸಂಖ್ಯೆ ಬೇರೆಬೇರೆ ಯಾಗಿರುವುದರಿಂದಲೂ, ಒಂದು ಛಂದಸ್ಸಿನ ಪಾದವು ಇನ್ನೊಂದು ಛಂದಸ್ಸಿನ ಪಾದವಾಗುವುದರಿಂದಲೂ ಅನೇಕ ಬಗೆಯ ಛಂದಸ್ಸುಗಳು ನಿರ್ಮಿತವಾಗಿವೆ.

ಇದುವರೆಗೆ ವೇದಗಳ ಬಗ್ಗೆ ಋಷಿ, ದೇವತಾ, ಛಂದಸ್ಸುಗಳ ಬಗ್ಗೆ ಸ್ಥೂಲ ಪರಿಚಯ ಪಡೆದೆವು. ಇನ್ನು ವೇದಗಳು ಹೇಗೆ ಅಪೌರುಷೇಯ? ಎಂಬ ವಿಚಾರ.

## ವೇದಗಳು ಅಪೌರುಷೇಯ ಏಕೆ? ಹೇಗೆ?

ನಮ್ಮ ಪರಂಪರೆಯಲ್ಲಿ ನಾವು ವೇದಗಳನ್ನು ಅಪೌರುಷೇಯಗಳೆಂದೂ ಮತ್ತು ಪರಮಪ್ರಮಾಣಗಳೆಂದೂ[1] ಅನುಸರಿಸುತ್ತಾ ಬಂದಿರುತ್ತೇವೆ. ಅಪೌರು ಷೇಯವೆಂದರೆ ಪುರುಷನಿರ್ಮಿತವಾದದ್ದಲ್ಲ ಎಂದರ್ಥ. ಮನುಷ್ಯನಾದವನು ತನ್ನ ಪ್ರತಿಭೆಯಿಂದ ಏನೆಲ್ಲ ಅದ್ಭುತಗಳನ್ನು ನಿರ್ಮಿಸುತ್ತಾನಾದರೂ ಮನುಷ್ಯ ನೆಂಬುವನ ಇಂದ್ರಿಯಗಳು, ಬುದ್ಧಿ ಇವೆಲ್ಲವೂ ಪರಿಮಿತ[2]. ಇಂದ್ರಿಯಗಳ ವ್ಯಾಪ್ತಿ ಸೀಮಿತವಾದುದರಿಂದ ಇಂದ್ರಿಯಗಳಿಗೆ ಮೀರಿದ[3] ವಸ್ತುಗಳ ವಿಷಯದಲ್ಲಿ

---

1. ಜನಸಾಮಾನ್ಯರ ನುಡಿಗಳಲ್ಲಿಯೂ ವೇದಗಳ ಪ್ರಾಮಾಣ್ಯವು ಎದ್ದುಕಾಣುತ್ತದೆ. 'ಅದೇನು ವೇದವಾಕ್ಯವೆ?', 'ಅವನ ಮಾತೆಂದರೆ ಇವನಿಗೆ ವೇದವಾಕ್ಯ'. ಇವೇ ಮೊದಲಾದ ನಾಣ್ಣುಡಿಗಳು ಇದಕ್ಕೆ ಸಾಕ್ಷಿ.

2. ಕಣ್ಣು, ಕಿವಿ, ಮೂಗು ಮುಂತಾದ ಇಂದ್ರಿಯಗಳ ಶಕ್ತಿಯಲ್ಲಿ ಹದ್ದು, ಸರ್ಪ, ಮತ್ತು ಹುಲಿಗಳಂತಹ ಪ್ರಾಣಿಗಳೇ ಮನುಷ್ಯನನ್ನು ಮೀರಿರುವುದು ಪ್ರತ್ಯಕ್ಷ.

3. ಪುಣ್ಯ, ಪಾಪ, ಅದೃಷ್ಟ ಇತ್ಯಾದಿ. ಕಾಣದ ಪುಣ್ಯ ಪಾಪಗಳಿವೆ ಎಂಬುದಕ್ಕೆ ನಮ್ಮ ಲೌಕಿಕ ಜೀವನದಲ್ಲಿ ಇದ್ದಕ್ಕಿದ್ದಂತೆ ಸಂಭವಿಸುವ ಘಟನೆಗಳೇ ಪ್ರಮಾಣ. ತುಂಬ ಶ್ರೀಮಂತನಾದವನು ಇದ್ದಕ್ಕಿದ್ದಂತೆ ಬಡವನಾಗುವುದು, ಏನೆಲ್ಲ ಉಪಾಯಗಳನ್ನು ಅನುಸರಿಸಿದರೂ ಸಂತತಿಯನ್ನೇ ಪಡೆಯದಿರುವುದು, ಬಡವನೊಬ್ಬನು ಇದ್ದಕ್ಕಿದ್ದಂತೆ ಶ್ರೀಮಂತನಾಗುವುದು, ತುಂಬ ಪಥ್ಯದಲ್ಲಿದ್ದವನಿಗೂ ಉಗ್ರವ್ಯಾಧಿಯು ತಗುಲುವುದು, ದೊಡ್ಡದೊಂದು ಅಪಘಾತದಲ್ಲಿ ಎಲ್ಲರೂ ತೀರಿದರೂ ಒಬ್ಬನೇ ಉಳಿದುಕೊಳ್ಳುವುದು, ಸ್ನೇಹ, ವೈರಗಳು ಉಂಟಾಗುವುದು ಮತ್ತು ಬಿಟ್ಟುಹೋಗುವುದು, ಸರ್ವಥಾ ನಿರಾಶನಾದವನಿಗೆ ಅನಿರೀಕ್ಷಿತವಾಗಿ ಒದಗುವ ಸಹಾಯ—ಇವೆಲ್ಲವೂ ಉಂಟಾದಾಗ ನಾವು ಕಾರ್ಯ–ಕಾರಣ ಸಂಬಂಧವನ್ನು (cause and effect) ಹುಡುಕುವುದರಲ್ಲಿ ವಿಫಲರಾಗುತ್ತೇವೆ. ಇಲ್ಲಿ ಭೌತಿಕವಾಗಿ ಯಾವ ಉತ್ತರವೂ ಸಿಗದಿದ್ದಾಗ ನಾವು ಶಾಸ್ತ್ರವನ್ನು ಆಶ್ರಯಿಸುತ್ತೇವೆ. ಅವನವನ ಪಾಪ–ಪುಣ್ಯಗಳು ಪರಿಪಾಕಸ್ಥಿತಿಗೆ ಬಂದಾಗ ಹೀಗೆ ಫಲಿಸುತ್ತವೆ ಎಂದು ಶಾಸ್ತ್ರವು ತಿಳಿಸುತ್ತದೆ.



ಇಂದ್ರಿಯಗಳ ಸಹಾಯದಿಂದ ತಿಳಿಸುವ ಅಂಶವು ಸ್ವಾಭಾವಿಕವಾಗಿ ಅಸಂಗತವಾಗುತ್ತದೆ. ಅಲ್ಲದೆ ಪುರುಷನ ಶರೀರವೆಂಬುದೇ ಜನ್ಮಾಂತರಗಳಲ್ಲಿ ಮಾಡಿದ ಒಳ್ಳೆಯ ಕರ್ಮ ಮತ್ತು ಪಾಪಕರ್ಮಗಳನ್ನು ಅನುಭವಿಸುವುದಕ್ಕಾಗಿ ಇದೆ.

ಈ ವಿಷಯದಲ್ಲಿ ಇನ್ನಷ್ಟು ತಿಳಿಯತಕ್ಕದ್ದಿದೆ : ಶರೀರವು ಎರಡು; ಸ್ಥೂಲ ಮತ್ತು ಸೂಕ್ಷ್ಮ. ಸ್ಥೂಲವು ನಾವು ಕಾಣುತ್ತಿರುವ ಕೈಕಾಲುಗಳುಳ್ಳ ಶರೀರ. ಸೂಕ್ಷ್ಮಶರೀರವೆಂದರೆ ಪಂಚ ಪ್ರಾಣಗಳು, ಹತ್ತು ಇಂದ್ರಿಯಗಳು.

ಪಂಚ ಪ್ರಾಣಗಳು : ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ.

ಐದು ಜ್ಞಾನೇಂದ್ರಿಯಗಳು : ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ.

ಐದು ಕರ್ಮೇಂದ್ರಿಯಗಳು : ವಾಕ್, ಪಾಣಿ, ಪಾದ, ಪಾಯು, ಉಪಸ್ಥ;

ಬುದ್ಧಿ ಮತ್ತು ಮನಸ್ಸು—ಈ ಹದಿನೇಳು ಪದಾರ್ಥಗಳ ಗುಂಪನ್ನು ಸೂಕ್ಷ್ಮ ಶರೀರ(ಲಿಂಗಶರೀರ) ವೆನ್ನುತ್ತಾರೆ. ನಮ್ಮ ಪುಣ್ಯ–ಪಾಪಗಳಿಂದ ಉಂಟಾದ ಸಂಸ್ಕಾರವು ಈ ಸೂಕ್ಷ್ಮಶರೀರದಲ್ಲಿರುತ್ತದೆ. ಪುಣ್ಯ–ಪಾಪಗಳ ಫಲವನ್ನು ಅನುಭವಿಸಲು ಸಾಧನ ಸ್ಥೂಲಶರೀರ.

**ಭೋಗಾಯತನಂ ಶರೀರಮ್ ।**

ಫಲವನ್ನನುಭವಿಸುವ ಸ್ಥಾನವೇ ಈ ಶರೀರ.

ವಿದ್ಯುತ್ತನ್ನು ಬಲ್ಬಿನಲ್ಲಿ ಕಾಣುವಂತೆ ಸೂಕ್ಷ್ಮಶರೀರವು ಸ್ಥೂಲಶರೀರದ ಮೂಲಕ ಕರ್ಮಗಳ ಫಲವಾದ ಸುಖ–ದುಃಖಗಳನ್ನನುಭವಿಸುತ್ತದೆ. ಈ ಸೂಕ್ಷ್ಮಶರೀರವು ಸ್ಥಿರ. ಕರ್ಮಕ್ಕೆ ಅನುಗುಣವಾಗಿ ಅನೇಕ ಸ್ಥೂಲಶರೀರಗಳನ್ನು ಪಡೆದು ಕರ್ಮಗಳ ಫಲವನ್ನು ಅನುಭವಿಸಿ, ಆತ್ಮಜ್ಞಾನವಾಗುವವರೆಗೂ ಇದ್ದು, ಯಾವ ಸ್ಥೂಲಶರೀರವನ್ನು ಪಡೆದಾಗ ಆತ್ಮಜ್ಞಾನವಾಗುತ್ತದೆಯೋ ಆಗ ತಾನು ಉಂಟಾಗಲು ಕಾರಣವಾದ ಪಂಚಭೂತಗಳಲ್ಲಿ ಸೇರಿಹೋಗುತ್ತದೆ. ನಮ್ಮೆಲ್ಲ ವೈದಿಕಕರ್ಮಗಳೂ ಈ ಸೂಕ್ಷ್ಮಶರೀರದ ಸಂಸ್ಕಾರಕ್ಕಾಗಿಯೇ ಇವೆ. ಹೀಗೆ ಪುಣ್ಯ–ಪಾಪಗಳು ಇವೆ, ಅವು ಸೂಕ್ಷ್ಮರೂಪವಾಗಿವೆ ಎಂಬುದನ್ನು ವಾಚಕರು ತಮ್ಮ ತಮ್ಮ ಅನುಭವಗಳಿಂದಲೂ ತಾಳೆ ನೋಡಿಕೊಳ್ಳಬೇಕು. ಕಾರ್ಯಕಾರಣ ಸಂಬಂಧವನ್ನು ಹುಡುಕುವಾಗ ಸೂಕ್ಷ್ಮಪರಿಶೀಲನೆ ನಡೆಸಬೇಕು.

ಇಂತಹ ಶರೀರ ಮತ್ತು ಇಂದ್ರಿಯಗಳ ಸಹಾಯದಿಂದ ನಾವು ಪರಿಮಿತ ಕಾರ್ಯಗಳನ್ನು ಮಾಡಬಲ್ಲೆವೇ ವಿನಾ ಸಾರ್ವಕಾಲಿಕವಾದ ಶಾಶ್ವತವಾದ ಅಂಶಗಳನ್ನು ತಿಳಿಸಲಾರೆವು. ಅಲ್ಲದೆ ಪುರುಷನ ಬುದ್ಧಿಯಲ್ಲಿ ಭ್ರಮೆ ಮತ್ತು ಪ್ರಮಾದ ಎರಡೂ ಸಂಭವಿಸುತ್ತವೆ. ಭ್ರಮೆ ಎಂದರೆ ತಪ್ಪಾದ ತಿಳುವಳಿಕೆ. ಪ್ರಮಾದ ಎಂದರೆ ಗೊತ್ತಿದ್ದರೂ ಬೇಹುಷಾರಿನಿಂದ ಉಂಟಾದ ತಿಳುವಳಿಕೆ.



'ಪ್ರಮಾದೋಽನವಧಾನತಾ' ಎಂದು ಅಮರಕೋಶವು ಹೇಳುತ್ತದೆ. ಈ ಎರಡನ್ನೂ ಹೊಂದಿರದ ವ್ಯಕ್ತಿಯೆಂದರೆ ಪರಮಾತ್ಮನೊಬ್ಬನೇ. ಆದುದರಿಂದ ವೇದಗಳನ್ನು ಪರಮಾತ್ಮನ ವಾಣಿ ಎಂದು ಹೇಳಿದ್ದಾರೆ ನಮ್ಮ ಪ್ರಾಚೀನರು. ಇದನ್ನು ಇನ್ನಷ್ಟು ವಿಚಾರಕ್ಕೆ ಒಳಪಡಿಸಬಹುದು. ಪರಮಾತ್ಮನು ಶರೀರವನ್ನು ಧರಿಸಿ ಈ ವೇದಗಳನ್ನು ಹೇಳಿದನು ಎಂದರ್ಥವೇ? ಪುರುಷಶರೀರವನ್ನು ಧರಿಸಿದ್ದರೆ, ಪುನಃ ಪೌರುಷೇಯತ್ವವನ್ನೇ ಹೇಳಿದಂತಾಯಿತಲ್ಲವೇ? ಈ ವಿಷಯದಲ್ಲಿ ಭಾಷ್ಯಕಾರ ರಾದ ಸಾಯಣರು ತಮ್ಮ ಭಾಷ್ಯಪೀಠಿಕೆಯಲ್ಲಿ ಹೇಳಿರುವ ಶ್ಲೋಕವನ್ನು ನೋಡೋಣ.

**ಯಸ್ಯ ನಿಃಶ್ವಸಿತಂ ವೇದಾಃ ಯೋ ವೇದೇಭ್ಯೋಽಖಿಲಂ ಜಗತ್ ।**
**ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಮ್ ॥**

—ಸಾಯಣಭಾಷ್ಯಪೀಠಿಕೆ ೧-೧

ವೇದಗಳು ಯಾವನ ಉಸಿರಿನಂತೆ ಇವೆಯೋ, ಯಾವನು ವೇದಗಳಿಂದಲೇ ಈ ಜಗತ್ತನ್ನು ಸೃಜಿಸಿದನೋ, ಅಂತಹ ವಿದ್ಯಾತೀರ್ಥಸ್ವರೂಪಿಯಾದ ಪರಮೇಶ್ವರನನ್ನು ನಾನು ವಂದಿಸುವೆ.[1]

ಮನುಷ್ಯನ ಉಚ್ಛ್ವಾಸ, ನಿಃಶ್ವಾಸಕ್ರಿಯೆಗಳು ಮನುಷ್ಯನ ಅರಿವಿಗೇ ಬಾರದಂತೆ ಸಹಜವಾಗಿ ಹೇಗೆ ನಡೆಯುತ್ತಾ ಇವೆಯೋ, ವೇದಗಳೆಂಬುವೂ ಸಹ ಪರಮಾತ್ಮನ ನಿಃಶ್ವಾಸರೂಪದಂತೆ ಇವೆ. ಈ ಅಂಶವನ್ನೇ ತಿಳಿಸುವ ಇನ್ನೊಂದು ಶ್ರುತಿವಾಕ್ಯವನ್ನು ನೋಡೋಣ.

**ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚಪ್ರಹಿಣೋತಿ ತಸ್ಮೈ । ತಗ್ಂ ಹ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ॥**

ಯಾವ ಪರಮಾತ್ಮನು ಚತುರ್ಮುಖಬ್ರಹ್ಮನನ್ನು ಸೃಷ್ಟಿಸಿ ನಂತರ ವೇದಗಳನ್ನು ಅವನಿಗೆ ಬೋಧಿಸಿದನೋ ಅಂತಹ ಚೈತನ್ಯವನ್ನು ಮುಮುಕ್ಷುವಾದ ನಾನು ಶರಣುಹೋಗುವೆನು. ಚೈತನ್ಯವಸ್ತು ಅಥವಾ ಪರಮಾತ್ಮ ಅಥವಾ ಬ್ರಹ್ಮ ಇವೆಲ್ಲವೂ ಒಂದೇ. ಒಂದಾನೊಂದು ಸತ್–ಚಿತ್–ಆನಂದಸ್ವರೂಪಿಯಾದ ವಸ್ತುವು ಸರ್ವವ್ಯಾಪ್ತವಾಗಿದ್ದು ನಮ್ಮೆಲ್ಲರ ಬುದ್ಧಿವ್ಯಾಪಾರಗಳಿಗೆ ಸಾಕ್ಷಿಭೂತ ವಾಗಿದ್ದು ಜಗತ್ತಿನ ನಿಯಾಮಕವಾಗಿದೆ ಎಂಬುದು ಸರ್ವವೇದಾಂತಸಿದ್ಧಾಂತ.

---

1. ವಿದ್ಯಾತೀರ್ಥರು ವಿದ್ಯಾರಣ್ಯರ ಗುರುಗಳು. ಸಾಯಣಾಚಾರ್ಯರು ವಿದ್ಯಾರಣ್ಯರ ತಮ್ಮ. ಮಾಧವರೇ ವಿದ್ಯಾರಣ್ಯರು. ಮಾಧವರಿಂದ ಆದೇಶಿಸಲ್ಪಟ್ಟಂತೆ ಶ್ರೀ ಸಾಯಣರು ವೇದಗಳಿಗೆ ಭಾಷ್ಯವನ್ನು ಬರೆದರು. ಈ ಶ್ಲೋಕದಲ್ಲಿ ಸಾಯಣಾಚಾರ್ಯರು ಶ್ರೀ ವಿದ್ಯಾತೀರ್ಥರನ್ನು ನಮಿಸಿದ್ದಾರೆ.



ಇಂತಹ ಚೈತನ್ಯವಸ್ತು-ವೇದಗಳು-ಚತುರ್ಮುಖ ಬ್ರಹ್ಮ (ಹಿರಣ್ಯಗರ್ಭ) ಮತ್ತು ಜಗತ್ತು ಇವುಗಳ ಅನ್ಯೋನ್ಯಕಾರ್ಯವನ್ನು ಮೇಲಿನ ಶ್ರುತಿಯು ತಿಳಿಸುತ್ತಾ ಇದೆ. ಜಗತ್ತಿನಲ್ಲಿರುವ ಸರ್ವಜೀವಿಗಳೂ ಕರ್ಮವನ್ನು ಮಾಡುತ್ತಾ ಇವೆಯಷ್ಟೆ. ಈ ಕರ್ಮಗಳು ಪರಿಪಾಕಕ್ಕೆ ಬಂದಾಗ ಫಲಿಸುತ್ತವೆ. ಫಲವನ್ನು ಅನುಭವಿಸಲು ಶರೀರವು ಬೇಕಷ್ಟೆ. ಇದಕ್ಕಾಗಿ ಜಗತ್ತಿನ ಸೃಷ್ಟಿ. ಹಾಗಾದರೆ ಜೀವಿಗಳು ಅನಂತ ವಾಗಿರುವುದರಿಂದ ಒಟ್ಟಿಗೆ ಫಲವನ್ನು ಅನುಭವಿಸುವ ದೆಶೆಯು ಬರುತ್ತದೆಯೇ? ಹೌದು. ಪ್ರತಿಯೋರ್ವ ಜೀವಿಯ ವ್ಯೆಯಕ್ತಿಕ ಕರ್ಮಗಳೂ ಅವುಗಳ ಫಲಗಳೂ ಇರುವಂತೆ ಸರ್ವಜೀವಿಗಳಿಗೂ ಸಮಾನವಾದ ಒಂದಾನೊಂದು ಕರ್ಮವು ಮುಗಿದಾಗ ಪ್ರಳಯವೂ, ಸರ್ವಜೀವಿಗಳಿಗೂ ಸಾಧಾರಣವಾದ ಕರ್ಮವೊಂದು ಪರಿಪಾಕಕ್ಕೆ ಬಂದಾಗ ಸೃಷ್ಟಿಯೂ ಆಗುತ್ತದೆ. ಅಂತೂ ಪರಮೇಶ್ವರನು ಈ ಜಗತ್ತನ್ನು ಸೃಷ್ಟಿಸಿರುವುದು ಜೀವಿಗಳ ಕರ್ಮಗಳ ಫಲದ ಅನುಭವಕ್ಕಾಗಿ ಎಂಬುದು ಸಿದ್ಧಾಂತ. ಆತ್ಮಜ್ಞಾನವನ್ನು ಎಲ್ಲರೂ ಪಡೆಯುವವರೆಗೂ ಬದ್ಧರಾದ ಜೀವಿಗಳಿಗಾಗಿ ಸೃಷ್ಟಿ, ಪ್ರಳಯಗಳು ಚಕ್ರದಂತೆ ನಡೆಯುತ್ತಲೇ ಇರುತ್ತವೆ.

ಇಂತಹ ಜಗತ್ತು ಎಂದು ಸೃಷ್ಟಿಯಾಯಿತು? ಎಂದರೆ, ಅದು ಅನಾದಿ. ಜಗತ್ತೆಂಬುದು ನಡೆದು ಬರುತ್ತಲೇ ಇದೆ. ಇದರಿಂದ ಬಿಡಿಸಿಕೊಳ್ಳುವುದನ್ನು ಚಿಂತಿಸಬೇಕು. ಹೀಗೆ ಸೃಷ್ಟಿಯ ಪ್ರಕ್ರಿಯೆಯಲ್ಲಿ ಹಿರಣ್ಯಗರ್ಭನ ಸೃಷ್ಟಿಯೇ ಮೊದಲನೆಯದು. ಹಿರಣ್ಯಗರ್ಭನೆಂದರೆ ಸಮಷ್ಟಿಜೀವ. 'ಜೀವಿಗಳ ರಾಶಿಯನ್ನೇ ಒಂದೆಂಬುದಾಗಿ ಕಲ್ಪಿಸಿಕೊಂಡಾಗ ನಮಗೆ ತೋರುವ ಒಂದೇ ಜೀವವನ್ನು ಹಿರಣ್ಯಗರ್ಭ ಎಂದು ತಿಳಿದುಕೊಳ್ಳಬೇಕು. ಹಿರಣ್ಯಗರ್ಭನ ಸೃಷ್ಟಿಯಾದ ನಂತರ ಆ ಹಿರಣ್ಯಗರ್ಭನು ಪರಮಾತ್ಮನ ನಿಃಶ್ವಾಸದಂತಿರುವ ವೇದಗಳನ್ನು ಆಧರಿಸಿಕೊಂಡು ಜಗತ್ತನ್ನು ಸೃಷ್ಟಿಸುತ್ತಾನೆ.

**ಯೋ ವೇದೇಭ್ಯೋಽಖಿಲಂ ಜಗತ್ ನಿರ್ಮಮೇ ।**

ಹೀಗೆ ಶರೀರವಿರುವ ಪುರುಷರಿಗೆ ಸಹಜವಾದ ಭ್ರಮೆ, ಪ್ರಮಾದ ಮೊದಲಾದ ದೋಷಗಳಿಂದ ಕೂಡಿರದ ಶರೀರವಿಲ್ಲದ ಪರಮಾತ್ಮನಿಂದ ವೇದಗಳು ಬಂದವಾದುದರಿಂದ ಅವು ಅಪೌರುಷೇಯಗಳು ಆಗಿವೆ. ವೇದಗಳು ಶಬ್ದರೂಪಗಳಾದುದರಿಂದ ಪರಮಾತ್ಮನಾದರೂ ಉಚ್ಚರಿಸಬೇಕಲ್ಲವೆ? ಎಂಬ ಸಂಶಯ ಬರದಿರದು. ಇಲ್ಲಿ ನಾವು ಹೀಗೆ ಆಲೋಚಿಸಬೇಕು. ಲೋಕದಲ್ಲಿ ನಾವು ಕಾಣುವ ದೃಷ್ಟಾಂತತರ್ಕಗಳ ಮಿತಿಯನ್ನು ಅರಿತುಕೊಳ್ಳಬೇಕು. ನಾವು ಕಣ್ಣಿನಿಂದ ನೋಡುತ್ತೇವೆ; ಕಿವಿಯಿಂದ ಕೇಳುತ್ತೇವೆ; ಬಾಯಿಯಿಂದ ಮಾತನಾಡುತ್ತೇವಲ್ಲವೇ? ಅಂದರೆ ಕಾಣಲು ಕಣ್ಣು, ಕೇಳಲು ಕಿವಿ, ಮಾತನಾಡಲು ಬಾಯಿ ಬೇಕೆಂಬುದು ಸಿದ್ಧ. ಆದರೆ ನಾವು ಸ್ವಪ್ನವನ್ನು ಕಾಣುತ್ತಿರುವಾಗ ಇದಾವ ಇಂದ್ರಿಯಗಳೂ



ಕೆಲಸ ಮಾಡದಿರುವಾಗ ನೋಟ, ಶ್ರವಣ, ಮಾತು ಇವುಗಳ ಅನುಭವ ನಮಗೆ ಬರುತ್ತದೆಯಲ್ಲವೇ? (ಕೆಲವೊಮ್ಮೆ ಜಾಗೃತಸ್ಥಿತಿಗಿಂತ ಚೆನ್ನಾಗಿ!) ಆಗ ಕಣ್ಣಿದ್ದರೇ ನೋಟ ಎಂಬ ದೃಷ್ಟಾಂತತರ್ಕವು ಕೊಂಚ ಸಡಿಲಿತು. ನಮಗೆ ಉಂಟಾಗುತ್ತಿರುವ ನಿತ್ಯವ್ಯವಹಾರದಲ್ಲಿಯೇ ದೃಷ್ಟಾಂತತರ್ಕವು ಅಷ್ಟೊಂದು ಸೂಕ್ತವಾಗಿಲ್ಲದಿರುವಾಗ ಬಾಯಿಯಿದ್ದರೇ ಧ್ವನಿ ಬರುತ್ತದೆ ಎಂಬುದನ್ನು ಪರಮಾತ್ಮನ ವಿಷಯದಲ್ಲಿ ಜೋಡಿಸಲಾರೆವು.

ಈ ವಿಷಯದಲ್ಲಿ ಇನ್ನೊಂದು ವಿಚಾರಸರಣಿಯನ್ನಿಡಲು ಯತ್ನಿಸೋಣ. ಜಗತ್ತಿನಲ್ಲಿ ಜೀವಿಗಳು ಕರ್ಮಗಳನ್ನು ಮಾಡುತ್ತಲೇ ಇದ್ದಾರೆ. ಏತಕ್ಕಾಗಿ? ಫಲವನ್ನು ಪಡೆಯುವುದಕ್ಕಾಗಿಯಷ್ಟೇ. ಹೀಗೆ ಜೀವಿಗಳು ನಿರಂತರವಾಗಿ, ಕರ್ಮವನ್ನು ಮಾಡಲು ಕಾರಣ ಕಾಮ ಅಥವಾ ಇಚ್ಛೆ. ಯಾವ ಇಚ್ಛೆಯಿಂದ ಕರ್ಮಗಳನ್ನು ಮಾಡಿದರೂ ನಿರಂತರವಾಗಿ ಸುಖವಾಗಿ ದೊರೆಯಲಾರದೆಂಬುದು ಅನುಭವಸಿದ್ಧವಾಗಿದೆ.[1] ಹಾಗಿದ್ದರೂ ನಾವು ನಿರಂತರವಾಗಿ ಅದನ್ನೇ ಪಡೆಯಲು ಯತ್ನಿಸುತ್ತಿರುವುದು ಏಕೆ? ಅಜ್ಞಾನವೇ ಅದಕ್ಕೆ ಕಾರಣ. ಅದನ್ನೇ ಶಾಸ್ತ್ರದಲ್ಲಿ ಅವಿದ್ಯೆ ಎಂದು ಹೇಳುತ್ತಾರೆ. ಅವಿದ್ಯೆಯಿಂದ ನಾವು ಆವೃತರಾಗಿರುವುದರಿಂದ ನಮಗೆ ಪರಮಾತ್ಮನ ಜ್ಞಾನ ಅಥವಾ ನಿಜವಾದ ಸುಖದ ಅನುಭವವಾಗಿಲ್ಲ. ಆದುದರಿಂದ ಸುಖಗಳ ಆಭಾಸವನ್ನೇ ಸುಖವೆಂದು ಭ್ರಮಿಸಿ, ಅದನ್ನು ಪಡೆಯಲು ಬಯಸುತ್ತೇವೆ. ಅದಕ್ಕಾಗಿ ಕರ್ಮಗಳನ್ನು ಮಾಡುತ್ತೇವೆ. ಕರ್ಮಗಳ ಫಲವನ್ನು ಅನುಭವಿಸಲು ಶರೀರಗಳನ್ನು ಪಡೆಯುತ್ತೇವೆ. ಹೀಗೆ ಪುನಃ ಪುನಃ ಶರೀರವನ್ನು ಪಡೆಯುವುದು[2] ನಡೆದೇ ಇದೆ.

---

1. ಯಾವ ಕರ್ಮಗಳಿಂದ ಸುಖ ಬಂದರೂ ದುಃಖಮಿಶ್ರಿತವಾಗಿಯೇ ಇರುತ್ತದೆ. ಒಂದು ಗಂಟೆಯ ಕಾಲ ಕೇಳುವ ಸಂಗೀತವನ್ನು ಹತ್ತುಗಂಟೆ ಕೇಳಲಾರೆವು. ಯಾವ ತಿಂಡಿಯೂ ಪರಿಮಾಣವು ಅಧಿಕವಾದಾಗ ಸುಖವನ್ನುಂಟುಮಾಡಲಾರದು. ಆದುದರಿಂದ ಇಂದ್ರಿಯಗಳಿಂದ ಉಂಟಾಗುವ ಸುಖ ಅತಿಕ್ಷಣಿಕ ಎಂಬುದನ್ನು ನಮ್ಮ ಅನುಭವಕ್ಕೆ ಬಂದಿದೆ. ಅದು ನೈಜ ಸುಖವಲ್ಲ.

2. ಅವಿದ್ಯಾ–ಕಾಮ–ಕರ್ಮ ಈ ಮೂರನ್ನು ಸಂಸಾರದ ಮೂಲಕಾರಣವೆಂದು ಶ್ರೀ ಶಂಕರರು ಹೇಳುತ್ತಾರೆ. ಆದುದರಿಂದಲೇ ಸಂಸಾರವನ್ನು ಚಕ್ರಕ್ಕೆ ಹೋಲಿಸುವುದುಂಟು. ಇದನ್ನು ಹೀಗೆ ಸಂಗ್ರಹಿಸಬಹುದು. ಅಜ್ಞಾನವಿರುವುದರಿಂದ ಕಾಮವೂ, ಅದರಿಂದ ಒಳ್ಳೆಯ ಕರ್ಮ, ಪಾಪಕರ್ಮಗಳೂ ಮಾಡಲ್ಪಡುತ್ತವೆ. ಕರ್ಮವನ್ನನುಭವಿಸಲು ಶರೀರ ಬೇಕು. ಶರೀರದಿಂದ ಪುನಃ ಕರ್ಮಗಳು. ಕರ್ಮಗಳ ಫಲಕ್ಕಾಗಿ ಪುನಃ ಶರೀರ. ಹೀಗೆ "ಪುನರಪಿ ಜನನಂ ಪುನರಪಿ ಮರಣಂ....." ಅವಿದ್ಯೆ ಅಥವಾ ಅಜ್ಞಾನವು ನಿವೃತ್ತವಾಗುವವರೆಗೆ ಸಂಸಾರನಿವೃತ್ತಿ ಇಲ್ಲ.



ಹೀಗೆ ಸೃಷ್ಟಿಯು ನಿರಂತರವಾಗಿರುವಾಗ ಸೃಷ್ಟಿಯು ಜೊತೆಯಲ್ಲಿಯೇ ಬರುವ ವೇದಗಳಿಗೆ[1] ಕಾಲಕಲ್ಪನೆಯು ಉಚಿತವಾದುದಲ್ಲ.

'ವೇದಗಳು ಧ್ವನಿತರಂಗರೂಪವಾಗಿವೆ. ಅವುಗಳನ್ನು ಋಷಿಗಳು ಪಡೆದು ಕೊಳ್ಳುತ್ತಾರೆ' ಎಂಬುದು ಸರಿಯೆನ್ನಿಸುವುದಿಲ್ಲ. ಧ್ವನಿಯನ್ನು ಉಚ್ಚರಿಸಲು ಪುರುಷನು ಬೇಕಾದುದರಿಂದ ಹೇಗೆ ತಾನೇ ವೇದಗಳು ಅಪೌರುಷೇಯವಾದಾವು?

ಆದುದರಿಂದ ಪುರುಷನ ಇಂದ್ರಿಯ ಮತ್ತು ಬುದ್ಧಿಗಳು ಸೀಮಿತವಾದುದರಿಂದಲೂ, ಭ್ರಮೆ-ಪ್ರಮಾದಾದಿಗಳಿಂದ ಕೂಡಿದುದರಿಂದಲೂ, ಸಾರ್ವಕಾಲಿಕವಾದ ವಿಚಾರವನ್ನು ಪುರುಷನೊಬ್ಬನು ತಿಳಿಸಲಾರನಾದುದರಿಂದಲೂ, ಜಗತ್ತಿನ ನಿರಂತರಸೃಷ್ಟಿಗೂ ವೇದಗಳಿಗೂ ನಿರಂತರಸಂಬಂಧವಿರುವುದರಿಂದಲೂ, ವೇದಗಳು ಅಪೌರುಷೇಯಗಳು.[3] ವೇದಗಳ ಕರ್ತೃ ಎಂಬುದಾಗಿ ಯಾರೊಬ್ಬನನ್ನೂ ಸ್ಮರಿಸದೇ ಇರುವುದರಿಂದಲೂ ಅವು ಅಪೌರುಷೇಯಗಳು.

ಕಾವ್ಯಾದಿಗಳ ಪೌರುಷೇಯತ್ವವನ್ನು ತಿಳಿದಷ್ಟು ಸುಲಭವಾಗಿ ವೇದಗಳ ಅಪೌರುಷೇಯತ್ವವನ್ನು ತಿಳಿಯಲಾರೆವು. ಜೀವ-ಜಗತ್ತು ಇವುಗಳ ಸಂಬಂಧ, ಸೃಷ್ಟಿ-ಅವಿದ್ಯಾ-ಕಾಮ-ಕರ್ಮ—ಈ ಪದಾರ್ಥಗಳ ಶೋಧನೆ, ವ್ಯಷ್ಟಿ-ಸಮಷ್ಟಿಗಳ ವಿವೇಚನೆ ಇವೆಲ್ಲವೂ ಅಗತ್ಯ. ಇಂದ್ರಿಯಗಳ ಶಕ್ತಿಯ ನಿರಂತರ ಪರಿಶೀಲನೆಯೂ ಅಗತ್ಯ. ಈ ಎಲ್ಲ ವಿಚಾರಗಳ ಪರಿಪಾಕವಾಗಿ ಹೊರಬಂದಿರುವ ಸಿದ್ಧಾಂತ—**ವೇದಗಳ ಅಪೌರುಷೇಯತ್ವ.**

---

1. ಪಾಶ್ಚಾತ್ಯರು ವೇದಗಳಿಗೆ ಕಾಲವನ್ನು ಊಹಿಸಿದ್ದಾರಷ್ಟೆ. ಅವರ ಚಿಂತನೆಯ ಕ್ರಮವು ಪ್ರಶಂಸಾರ್ಹವಾದರೂ ನಮ್ಮ ಪರಂಪರೆಯ ಹಿನ್ನೆಲೆಯಿಲ್ಲದಾಗ ಮಾಡುವ ವಿಚಾರಗಳು ಅಭಿಪ್ರಾಯಗಳಷ್ಟೇ ಆಗುತ್ತವೆ. ಸಿದ್ಧಾಂತವಾಗುವುದು ಕಷ್ಟ.

2. ಪುರುಷನ ಬುದ್ಧಿಯನ್ನು ಕಡೆಗಣಿಸಲಾಗಿದೆಯೆಂದು ಭಾವಿಸಲಾಗದು. ಚೈತನ್ಯದ ಅಂಶವೇ ಆಗಿರುವ ಆತನ ಬುದ್ಧಿಯು ಹೇಗೆ ಸಣ್ಣದಾದೀತು? ಅತೀಂದ್ರಿಯ ವಿಷಯಗಳಲ್ಲಿಯಷ್ಟೇ ಹೀಗೆ ಚಿಂತಿಸಬೇಕು.

3. ಈ ಶಾಸ್ತ್ರೀಯ ವಿಚಾರಗಳಲ್ಲದೆ ಹತ್ತಾರು ವರ್ಷ ಜಗತ್ತಿನ ಪರಮ ಮೇಧಾವಿಗಳಲ್ಲಿ ಗಣ್ಯರಾದ ಪಾಣಿನಿ, ಕಾತ್ಯಾಯನ, ಪತಂಜಲಿ, ಗೌತಮ ಮುಂತಾದವರು ವೇದಗಳ ವಿಷಯದಲ್ಲಿ ಹೇಳಿರುವ ಗೌರವಪೂರ್ಣ ಮಾತುಗಳೂ, ಜನಾಂಗವೊಂದು ವೇದಗಳನ್ನು ನಿರಂತರವಾಗಿ ಅನುಸರಿಸುತ್ತಿರುವುದೂ ಒದು ಋಜುವಾತಾಗಲಾರದೇ? ಜ್ಞಾನನಿಧಿಯಾದ ವೇದಗಳಿಗೆ ಕರ್ತೃವೊಬ್ಬನು ಇದ್ದಿದ್ದರೆ ಇಂತಹ ಪ್ರಮಾಣಗ್ರಂಥದ ಕರ್ತೃವನ್ನು ಸ್ಮರಿಸುತ್ತಿರಲಿಲ್ಲವೇ?



**ಜೈಮಿನಿಮುನಿಯ ಮನನ**

ವೇದಗಳು ಅಪೌರುಷೇಯವೇ? ಪೌರುಷೇಯವೇ? ಎಂಬ ವಿಚಾರವನ್ನು ಜೈಮಿನಿಮಹರ್ಷಿಗಳು ತಮ್ಮ ಸೂತ್ರಗಳಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಇದನ್ನು ಶ್ರೀ ಸಾಯಣಾಚಾರ್ಯರು ಋಗ್ವೇದಭಾಷ್ಯಭೂಮಿಕೆಯಲ್ಲಿ ವಾದ–ಪ್ರತಿವಾದಗಳ ಕ್ರಮದಲ್ಲಿಯೇ ನಿರೂಪಿಸಿದ್ದಾರೆ. ಆಕ್ಷೇಪವನ್ನು ಮಾಡುವ ಸೂತ್ರಗಳನ್ನು ಪೂರ್ವಪಕ್ಷಸೂತ್ರಗಳೆಂದೂ, ಸಮಾಧಾನ ಹೇಳುವ ಸೂತ್ರಗಳನ್ನು ಸಿದ್ಧಾಂತ ಸೂತ್ರಗಳೆಂದೂ ಶಾಸ್ತ್ರಗಳಲ್ಲಿ ಗುರುತಿಸುತ್ತಾರೆ. ಈ ಬಗೆಯ ಹತ್ತಾರು ಸೂತ್ರ ಗಳನ್ನು ವೇದಗಳ ಅಪೌರುಷೇಯತ್ವವಿಚಾರಕ್ಕಾಗಿಯೇ ಜೈಮಿನಿ ಮಹರ್ಷಿಗಳು ರಚಿಸಿದ್ದಾರೆ.

**ಔತ್ಪತ್ತಿಕಸ್ತು ಶಬ್ದಸ್ಯ ಅರ್ಥೇನ ಸಂಬಂಧಃ ।**

ಶಬ್ದಾರ್ಥಗಳ ಸಂಬಂಧವು ನಿತ್ಯವಾದುದು. ವೇದವು ಶಬ್ದಾತ್ಮಕವಾದುದರಿಂದ ಅದು ನಿತ್ಯ ಮತ್ತು ಅನಾದಿಯಾಗಿರುತ್ತದೆ.

ಆಕ್ಷೇಪ: ವೇದವು ಅಪೌರುಷೇಯವಾಗಿದ್ದರೆ, ವೇದದಲ್ಲಿ ಕಾಠಕ, ಕೌಥುಮ, ತೈತ್ತಿರೀಯ, ಪೈಪ್ಪಲಾದ ಮೊದಲಾದ ಶಾಖೆಗಳಿವೆ. (ಕಾಠಕ ಎಂದರೆ "ಕಠ" ನಿಂದ ಹೇಳಲ್ಪಟ್ಟದ್ದು ಎಂದರ್ಥ.) "ತೇನ ಪ್ರೋಕ್ತಂ" ಎಂಬ ಪಾಣಿನಿಯ ಸೂತ್ರವು ಕಠ ಎಂಬ ಶಬ್ದದ ಮೇಲೆ ಹೇಳಲ್ಪಟ್ಟದ್ದು ಎಂಬ ಅರ್ಥದಲ್ಲಿಯೇ ಪ್ರತ್ಯಯವನ್ನು ಹೇಳುತ್ತದೆ. ಆದುದರಿಂದ ಕುಥುಮೇನ ಪ್ರೋಕ್ತಮ್, ತಿತ್ತಿರಿಣಾ ಪ್ರೋಕ್ತಮ್, ಪಿಪ್ಪಲಾದೇನ ಪ್ರೋಕ್ತಮ್ ಎಂದೇ ಆಯಾ ವೇದಶಾಖೆಗಳ ವಿವರಣೆಯನ್ನು ನೀಡಬೇಕಾದುದರಿಂದ ಆ ಋಷಿಗಳಿಗಿಂತಲೂ ಮೊದಲು ಆ ವೇದಶಾಖೆ ಇರಲಿಲ್ಲವೆಂದು ಅರ್ಥವಾಗುತ್ತದೆ. ಹೀಗಿರುವಾಗ ವೇದವು ಹೇಗೆ ಅಪೌರುಷೇಯವಾದೀತು?

ಸಮಾಧಾನ : ಜೈಮಿನಿಸೂತ್ರದಲ್ಲಿ 'ಆಖ್ಯಾ ಪ್ರವಚನಾತ್' ಎಂದು ಹೇಳಿದೆ.

ಕಠ, ತಿತ್ತಿರಿ ಮೊದಲಾದ ಋಷಿಗಳು ವೇದದ ಆಯಾ ಭಾಗಗಳನ್ನು ಚೆನ್ನಾಗಿ ಪ್ರವಚನ ಮಾಡುತ್ತಿದ್ದುದರಿಂದ ಮೊದಲಿನಿಂದಲೂ ಬಂದಿರುವ ಆ ಭಾಗಗಳಿಗೆ "ಕಾಠಕ", "ತೈತ್ತಿರೀಯ" ಮೊದಲಾದ ಹೆಸರುಗಳು ಉಂಟಾದವು. ಆ ಋಷಿಗಳ ನಂತರ ಆಯಾ ವೇದಭಾಗ ಬಂದದ್ದಲ್ಲ. ವೇದವು ಅನಾದಿಯೂ, ನಿತ್ಯವೂ ಆಗಿದ್ದು ಬ್ರಹ್ಮನ ನಿಃಶ್ವಾಸದಂತೆ ಬಂದಿರುವ ವಾಣಿ.

**ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।**
**ಆದೌ ವೇದಮಯೀ ದಿವ್ಯಾ ಯತಃ ಸರ್ವಾಃ ಪ್ರವೃತ್ತಯಃ ॥**



ಆದಿಯೂ ಅಂತ್ಯವೂ ಇಲ್ಲದ ನಿತ್ಯವಾದ ವೇದಮಯವಾದ ಈ ಮಾತು ಬ್ರಹ್ಮನ ನಿಃಶ್ವಾಸದಂತೆ ಅವನಿಂದಲೇ ತಿಳಿಸಲ್ಪಟ್ಟಿತು. ಆದರಿಂದಲೇ ಸೃಷ್ಟಿಯ ಎಲ್ಲ ಪ್ರಕ್ರಿಯೆಯೂ ಮೊದಲಾಯಿತು.

**ವಾಚಾ ವಿರೂಪ ನಿತ್ಯಯಾ ।** —ತೈ.ಸಂ. ೨-೬-೧೧

**ಆಕ್ಷೇಪ** : ವೇದಮಂತ್ರಗಳಲ್ಲಿ

**ಬಬರಃ ಪ್ರಾವಾಹಣಿರಕಾಮಯತ ವಾಚಃ ಪ್ರವದಿತಾ ಸ್ಯಾಮಿತಿ ॥**

**ಕುಸುರುಬಿಂದ ಔದ್ದಾಲಕಿರಕಾಮಯತ ಪಶುಮಾನ್ಥ್ಸ್ಯಾಮಿತಿ ॥**

ಎಂಬ ಮಾತುಗಳು ಇವೆ. ಪ್ರವಾಹಣನ ಮಗನಾದ ಬಬರನು ಮಾತುಗಾರನಾಗಬೇಕೆಂದೂ, ಉದ್ದಾಲಕನ ಮಗನಾದ ಕುಸುರುಬಿಂದನು ಅನೇಕ ಪಶುಗಳ ಯಜಮಾನನಾಗಬೇಕೆಂದೂ ಬಯಸಿದರು ಎಂದು ಅವುಗಳ ಅರ್ಥ. ಹೀಗೆ ಅನಿತ್ಯರಾದ ವ್ಯಕ್ತಿಗಳನ್ನು ಹೇಳುವ ವೇದವು ನಿತ್ಯವಾಗುವುದು ಹೇಗೆ?

**ಸಮಾಧಾನ** : 'ಪರಂ ತು ಶ್ರುತಿಸಾಮಾನ್ಯಮಾತ್ರಮ್'

ಎಂದು ಜೈಮಿನಿಸೂತ್ರದಲ್ಲಿ ಹೇಳಿದೆ.

ವೇದದಲ್ಲಿ ಬರುವ ಬಬರ ಎಂಬ ಶಬ್ದಕ್ಕೆ ಬ-ಬ-ರ ಎಂದು ಶಬ್ದಮಾಡುವ ಪ್ರಾವಾಹಣಿಯು ವಾಗ್ಮಿಯಾಗಬೇಕೆಂದು ಬಯಸಿ ಯಾಗವನ್ನು ಮಾಡಿದನು ಎಂದು ಆ ಮಂತ್ರದ ಅರ್ಥ. ಹೀಗೆಯೇ ವೇದಗಳಲ್ಲಿ ಅನಿತ್ಯರಾದ ಮನುಷ್ಯರ ಹೆಸರಿನಂತೆ ತೋರುವ ಶಬ್ದಗಳಿಗೆ ಬೇರೆಯೇ ಅರ್ಥವಿರುತ್ತದೆ. ಅದನ್ನು ನಿರುಕ್ತವೇ ಮೊದಲಾದ ಗ್ರಂಥಗಳಿಂದ ತಿಳಿಯಲು ಯತ್ನಿಸಬೇಕು. ಅಲ್ಲದೆ ಬಬರ ಎಂಬುದು ಮನುಷ್ಯನ ಹೆಸರೇ ಎಂದಿಟ್ಟುಕೊಂಡರೂ ವೇದದಲ್ಲಿ ವಿಧಿ, ಅರ್ಥವಾದಗಳಿರುವುದರಿಂದ ಇಂತಹ ವೇದಮಂತ್ರಗಳನ್ನು ಅರ್ಥವಾದಗಳೆಂದು ಪರಿಗಣಿಸಬೇಕು.

ಹೀಗೆಯೇ ವೇದದಲ್ಲಿ ಅಲ್ಲಲ್ಲಿ

**ಗಾವೋ ವಾ ಏತತ್ಸತ್ರಮಾಸತ ।**

**ವನಸ್ಪತಯಸ್ಸತ್ರಮಾಸತ ।**

**ಸರ್ಪಾಸ್ಸತ್ರಮಾಸತ ।**

ಮುಂತಾದ ಮಾತುಗಳು ಬರುತ್ತವೆ. ಅವುಗಳಿಗೆ 'ಹಸುಗಳು ಸತ್ರಯಾಗವನ್ನು ಮಾಡಿದವು ; ವನಸ್ಪತಿಗಳೂ, ಸರ್ಪಗಳೂ ಸತ್ರಯಾಗವನ್ನು ಮಾಡಿದವು' ಎಂದು



ನೇರವಾದ ಅರ್ಥ.[1] ಅವುಗಳ ನೇರವಾದ ಅರ್ಥವನ್ನು ಗ್ರಹಿಸದೇ ಇವೂ ಸಹ ಅರ್ಥವಾದಗಳೆಂದೇ[2] ತಿಳಿಯಬೇಕು. ವನಸ್ಪತಿಗಳು ಮತ್ತು ಸರ್ಪಗಳೇ ಸತ್ರಯಾಗ ಮಾಡಿ ಯಾಗದ ಫಲವನ್ನು ಪಡೆಯುವುದಾದರೆ ಸತ್ರಯಾಗವು ಅದೆಷ್ಟು ಪ್ರಶಸ್ತವಾಗಿರಬೇಕು! ಎಂಬುದು ಈ ಅರ್ಥವಾದದ ತಾತ್ಪರ್ಯ.

ಆಕ್ಷೇಪ : ರಾಜಸೂಯಯಾಗದಲ್ಲಿ 'ಪ್ರಯುಜಾಂ ಹವೀಂಷಿ' ಎಂಬುದಾಗಿ ಹನ್ನೆರಡು ಹವಿರ್ಯಾಗಗಳಿವೆ. ಇವುಗಳನ್ನು

**ಆಗ್ನೇಯಮಷ್ಟಾಕಪಾಲಂ ನಿರ್ವಪತಿ ಸೌಮ್ಯಂ ಚರುಗ್ಂ ಸಾವಿತ್ರಂ ದ್ವಾದಶಕಪಾಲಮ್...।**

ಎಂಬ ಅನುವಾಕದಲ್ಲಿ ಹೇಳಿರುತ್ತಾರೆ.

ಇವುಗಳ ಬ್ರಾಹ್ಮಣವು ತೈತ್ತಿರೀಯಬ್ರಾಹ್ಮಣದ ಮೊದಲ ಅಷ್ಟಕದ ಎಂಟನೆಯ ಪ್ರಶ್ನದಲ್ಲಿ ಬರುತ್ತದೆ. ತಿಂಗಳಿಗೊಂದರಂತೆ ಈ ಹವಿರ್ಯಾಗಗಳನ್ನು ಮಾಡಬೇಕು.

**ಆಗ್ನೇಯಮಷ್ಟಾಕಪಾಲಂ ನಿರ್ವಪತಿ । ತಸ್ಮಾಚ್ಛಿಶಿರೇ ಕುರುಪಂಚಾಲಾಃ ಪ್ರಾಂಚೋ ಯಾಂತಿ ।**

ಶಿಶಿರಋತುವಿನ ಫಾಲ್ಗುನ ಮಾಸದಲ್ಲಿ ಅಗ್ನಿಯ ಅನುಗ್ರಹವನ್ನು ಪಡೆದು ಕುರು ಪಾಂಚಾಲದೇಶಗಳ ರಾಜರು ಪೂರ್ವದಿಕ್ಕಿಗೆ ವಿಜಯಯಾತ್ರೆಗಾಗಿ ಹೋಗುತ್ತಾರೆ.

---

1. ಶ್ರುತಿಯು ಇಲ್ಲದ್ದನ್ನು ಹೇಳಬಹುದೇ? ಎಂಬ ಸಂಶಯ ಬಂದೀತು. ಲೋಕದಲ್ಲಿ ವಸ್ತುವನ್ನು ಪ್ರಶಂಸಿಸದಿದ್ದರೆ (Advertisement) ಜನರು ಹೇಗೆ ಅದನ್ನು ಕೊಂಡಾರು? ನಮ್ಮ ಪ್ರವೃತ್ತಿಗೆ ಅನುಗುಣವಾಗಿ ಶ್ರುತಿಯೂ ನಮ್ಮ ಬುದ್ಧಿಯನ್ನು ಅನುಸರಿಸಿಯೇ ವಿಷಯವನ್ನು ತಿಳಿಸುತ್ತದೆ. ವಸ್ತುವನ್ನು ಪ್ರಶಂಸಿಸುವಾಗ ಅಸಂಭವವನ್ನೂ ಪ್ರದರ್ಶಿಸುತ್ತೇವಲ್ಲವೇ? ಬಟ್ಟೆ ತೆಳುವಾದುದೆಂಬುದನ್ನು ಪ್ರಶಂಸಿಸಲು ಅದನ್ನು ಧರಿಸಿದವನು ಆಕಾಶದಲ್ಲಿ ಹಾರುತ್ತಿರುವಂತೆ ಚಿತ್ರಿಸುವುದಿಲ್ಲವೇ?

2. ಅರ್ಥವಾದವೆಂದರೆ ಪ್ರಶಂಸಾವಾಕ್ಯ ಎಂದು ಹೇಳಬಹುದು. ಯಾವುದೇ ವಿಧಿಯನ್ನು ತಿಳಿಸಿದ ಬಳಿಕ ಆ ವಿಧಿಯಲ್ಲಿ ಪ್ರವೃತ್ತಿಯು ಉಂಟಾಗಬೇಕಾದರೆ ಆ ವಿಧಿಯನ್ನು ಪ್ರಶಂಸಿಸಲೇಬೇಕು. ವೇದವೂ ತಾನು ಒಂದು ವಿಧಿಯನ್ನು ತಿಳಿಸಿ ನಂತರ ಅದರ ಪ್ರಶಂಸೆಯನ್ನು ಮಾಡುತ್ತದೆ. ಇದನ್ನು ಅರ್ಥವಾದವೆನ್ನುತ್ತಾರೆ. ಈ ಅರ್ಥವಾದಗಳ ನೇರವಾದ ಶಬ್ದಾರ್ಥಕ್ಕೆ ಪ್ರಾಮಾಣ್ಯವಿಲ್ಲ. ವಿಧಿಯ ಪ್ರಶಂಸೆಯೇ ಅವುಗಳ ತಾತ್ಪರ್ಯ. ಮೇಲಿನ ವಾಕ್ಯಗಳಿಗೆ, ವೇದದಲ್ಲಿ ಹೇಳಿರುವ ಪಂಚರಾತ್ರ, ಸಪ್ತರಾತ್ರ ಮೊದಲಾದ ಯಾಗಗಳು ಪ್ರಶಸ್ತ ಎಂದೇ ತಾತ್ಪರ್ಯ.



ಸೌಮ್ಯಂ ಚರುಮ್ । ತಸ್ಮಾದ್ವಸಂತಂ ವ್ಯವಸಾಯಾದಯಂತಿ ।

ಚೈತ್ರದಲ್ಲಿ ಸೋಮಾನುಗ್ರಹದಿಂದ ಪೂರ್ವ ದಿಕ್ಕಿನ ರಾಜ್ಯಗಳ ಧಾನ್ಯವನ್ನು ವಶಪಡಿಸಿಕೊಂಡು ಸೈನಿಕರಿಗೆ ಹಂಚುತ್ತಾರೆ.

ಸಾವಿತ್ರಂ ದ್ವಾದಶಕಪಾಲಮ್ । ತಸ್ಮಾತ್ಪುರಸ್ತಾದ್ಯವಾನಾಗ್ಂ ಸವಿತ್ರಾ ವಿರುಂಧತೇ ।

ವೈಶಾಖದಲ್ಲಿ ಸವಿತೃದೇವತೆಯ ಅನುಗ್ರಹವನ್ನು ಪಡೆದು ಶತ್ರುರಾಜ್ಯಗಳಲ್ಲಿ ಬೆಳೆದಿರುವ ಯವಧಾನ್ಯವನ್ನು ಅಲ್ಲಿನ ಜನರು ತೆಗೆದುಕೊಳ್ಳದಂತೆ ತಡೆಯುತ್ತಾರೆ.

ಬಾರ್ಹಸ್ಪತ್ಯಂ ಚರುಮ್ । ಸವಿತ್ರೈವ ವಿರುಧ್ಯ । ಬ್ರಹ್ಮಣಾ ಯವಾನಾದಧತೇ ।

ಜ್ಯೇಷ್ಠದಲ್ಲಿ ಬ್ರಹ್ಮದೇವತೆಯ ಅನುಗ್ರಹದಿಂದ ಶತ್ರುರಾಜ್ಯದ ಯವಧಾನ್ಯಗಳನ್ನು ವಶಪಡಿಸಿಕೊಳ್ಳುತ್ತಾರೆ.

ತ್ವಾಷ್ಟ್ರಮಷ್ಟಾಕಪಾಲಮ್ । ರೂಪಾಣ್ಯೇವ ತೇನ ಕುರ್ವತೇ ।

ಆಷಾಢದಲ್ಲಿ ತ್ವಷ್ಟೃದೇವತೆಯ ಅನುಗ್ರಹದಿಂದ ಯವಧಾನ್ಯಗಳಿಂದ ಕೂಡಿದ ಭೋಜನದಿಂದ ಪುಷ್ಟಿಯನ್ನು ಹೊಂದುತ್ತಾರೆ.

ವೈಶ್ವಾನರಂ ದ್ವಾದಶಕಪಾಲಮ್ । ತಸ್ಮಾಜ್ಜಘನ್ಯೇ ನೈದಾಘೇ ಪ್ರತ್ಯಂಚಃ ಕುರುಪಂಚಾಲಾ ಯಾಂತಿ ।

ಶ್ರಾವಣದಲ್ಲಿ ವೈಶ್ವಾನರದೇವನ ಅನುಗ್ರಹದಿಂದ ಶತ್ರುರಾಜ್ಯಗಳನ್ನು ಜಯಿಸಿ ಪ್ರತ್ಯಙ್ಮುಖರಾಗಿ ಸ್ವರಾಜ್ಯಕ್ಕೆ ಹಿಂದಿರುಗುತ್ತಾರೆ.

ಇದು ಸಾಮಾನ್ಯವಾಗಿ ಎಲ್ಲ ರಾಜರೂ ಅನುಸರಿಸುವ ರೀತಿಯೆಂದು ಶ್ರೀ ಸಾಯಣಾಚಾರ್ಯರು ಬರೆದಿರುತ್ತಾರೆ. ಮುಂದಿನ ಆರು ಯಾಗಗಳನ್ನು ತಮ್ಮ ರಾಜ್ಯದಲ್ಲಿ ಮಾಡಬೇಕು.

ಇದನ್ನು ವಿಮರ್ಶಿಸಿದರೆ ಸಿಂಧುನದಿಯನ್ನೂ ಅದರ ಉಪನದಿಗಳನ್ನೂ ದಾಟಿ, ಗಂಗಾ ಯಮುನಾ ನದಿಗಳ ಮೈದಾನದಲ್ಲಿದ್ದ ರಾಜರು (ಕುರುಪಾಂಚಾಲ ದೇಶಗಳು ಗಂಗಾ ಯಮುನಾ ನದಿಗಳ ಬಯಲಿನ ಪಶ್ಚಿಮಭಾಗದಲ್ಲಿವೆ.



ದೆಹಲಿಯೂ ಆ ಭಾಗದಲ್ಲಿಯೇ ಇದೆ) ಪೂರ್ವದಿಕ್ಕಿನ ರಾಜ್ಯಗಳನ್ನು ಜಯಿಸಲು ಹೊರಡುವ ವಿಷಯವು ತಿಳಿಯುತ್ತದೆ. ರಾಜರು ತಮ್ಮ ಸುತ್ತಮುತ್ತಲಿನ ರಾಜ್ಯಗಳನ್ನು ಗೆಲ್ಲುವುದು ಸಾಮಾನ್ಯವಾದರೂ ಇಲ್ಲಿ ಹೇಳಿರುವುದು ಒಂದೆರಡು ದೇಶಕ್ಕೆ ಸಂಬಂಧಿಸಿದಂತೆ ಹೇಳಿರುವ ವಿಷಯವಾಗಿದೆ. ಇದು ಕೆಲವು ರಾಜರಿಗೆ ಸಂಬಂಧಿಸಿದ ವಿಷಯವಾದುದರಿಂದ, ಅವರು ಅನಿತ್ಯರಾದುದರಿಂದ, ಅನಿತ್ಯವಾದ ವಿಷಯವನ್ನು ಹೇಳುವ ವೇದವು ಹೇಗೆ ನಿತ್ಯವಾದೀತು? ನಿತ್ಯವಲ್ಲದುದು ಅಪೌರುಷೇಯ ಹೇಗಾದೀತು? ಇದಕ್ಕೆ ಸಮಾಧಾನವೇನು?

**ಸಮಾಧಾನ** : ಅರ್ಥವಾದವಾಕ್ಯಗಳಾದ್ದರಿಂದ ಇವುಗಳಿಗೆ ಸ್ವಾರ್ಥ (ನೇರವಾದ ಅರ್ಥ)ದಲ್ಲಿ ತಾತ್ಪರ್ಯವಿಲ್ಲ. ಕುರುಪಾಂಚಾಲರೆಂದರೆ ರಾಜರೆಂದರ್ಥ. ಪ್ರಾಂಚೋ ಯಾಂತಿ ಎಂದರೆ ಶತ್ರುರಾಜ್ಯಗಳಿರುವ ದಿಕ್ಕುಗಳಿಗೆ ಅಭಿಮುಖವಾಗಿ ಎಂದರ್ಥ. ಹಿಂದಿನ ಮಂತ್ರಗಳಲ್ಲಿ ಹೇಳಿದ ಫಲಗಳು ಆಗ್ನೇಯಯಾಗದಿಂದ ಲಭಿಸುತ್ತವೆ. ಆದುದರಿಂದ ಆಗ್ನೇಯಯಾಗವು ಪ್ರಶಸ್ತ ಎಂಬುದು ಮಂತ್ರದ ತಾತ್ಪರ್ಯ.

### ಅಸಾಮಾನ್ಯರ ದರ್ಶನ

ಸಾಮಾನ್ಯಪುರುಷರಲ್ಲದವರು ವೇದಗಳನ್ನು ದರ್ಶನ ಮಾಡಿದುದರಿಂದ ವೇದಗಳು ಅಪೌರುಷೇಯ ಎಂದು ಶ್ರೀ ಸಾಯಣಾಚಾರ್ಯರು ಸಮರ್ಥಿಸುತ್ತಾರೆ.

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥**

—ಭಗವದ್ಗೀತೆ ೧೮-೪೧

ಎಂಬ ಭಗವಂತನ ನುಡಿಯಂತೆ ಮಹಾಮಹಿಮರು ಭಗವಂತನ ಅಂಶವೇ ಆಗಿರುತ್ತಾರೆ. ಋಷಿಗಳು ಭಗವಂತನ ಅಂಶರಾದುದರಿಂದ ಅವರು ಅಪೌರುಷೇಯ ವಾದ ವೇದಗಳನ್ನು ದರ್ಶನ ಮಾಡಲು ಸಮರ್ಥರಾಗಿರುತ್ತಾರೆ.

ತಪಸ್ಸಿನಿಂದ ಸಂಕಲ್ಪಗಳು ಸಿದ್ಧಿಸುತ್ತವೆ ಎಂದು ವಾನಪ್ರಸ್ಥ, ಸನ್ಯಾಸ ಮೊದಲಾದ ಆಶ್ರಮಗಳ ಪ್ರಶಂಸೆಯನ್ನು ಮಾಡುವಾಗ ಆಪಸ್ತಂಬರು **"ತೇಽಮೃತತ್ವಾಯ ಕಲ್ಪತೇ", "ಅಥಾಪಿ ಸಂಕಲ್ಪಸಿದ್ಧಯೋ ಭವಂತಿ"** ಎನ್ನುತ್ತಾರೆ.

ತರ್ಕಶಾಸ್ತ್ರದಲ್ಲಿ ಧರ್ಮವು ನಮಗೆ ಪ್ರತ್ಯಕ್ಷವಲ್ಲದಿದ್ದರೂ ಯೋಗಿಗಳಿಗೆ ಪ್ರತ್ಯಕ್ಷವಾಗಬಹುದು ಎಂದು ಹೇಳಿದೆ. ತಪೋಬಲದಿಂದ—

**ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।**
**ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟಸಿದ್ಧಯಃ ॥**

ಎಂಬ ಅಷ್ಟಸಿದ್ಧಿಗಳನ್ನು ಪಡೆಯಬಹುದೆಂದು ಶಾಸ್ತ್ರಗಳಲ್ಲಿ ಹೇಳಿದೆ.



ಭರದ್ವಾಜರು ತಮ್ಮ ತಪಃಪ್ರಭಾವದಿಂದ ಭರತನಿಗೂ, ಅವನ ಪರಿವಾರಕ್ಕೂ, ಸೈನ್ಯಕ್ಕೂ ಊಹಿಸಲೂ ಸಾಧ್ಯವಾಗದಂತಹ ಉಪಚಾರವನ್ನು ಮಾಡಿದರು ಎಂದು ರಾಮಾಯಣದಿಂದ ತಿಳಿಯುತ್ತದೆ.

ಅಂತಹ ಮಹನೀಯರಿಗೆ ತಪಸ್ಸಿನ ಪ್ರಭಾವದಿಂದಲೂ, ಪರಮಾತ್ಮನ ಅನುಗ್ರಹದಿಂದಲೂ ಮಂತ್ರಗಳು ಕಂಡರೆ ಅವುಗಳನ್ನು ಅಪೌರುಷೇಯಗಳೆಂದೇ ಭಾವಿಸಬಹುದು. ಏಕೆಂದರೆ ಅವರು ಸಾಮಾನ್ಯಪುರುಷರಲ್ಲ. ಆದರೆ ಯಾವಾಗ ಕಂಡರೆಂಬುವುದಕ್ಕೆ ಯಾವ ಪ್ರಮಾಣವೂ ಇಲ್ಲದಿರುವುದರಿಂದ ಕಾಲನಿರ್ಣಯವು ಸಾಧ್ಯವಿಲ್ಲ.[1]

ಹೀಗೆ ವೇದಗಳು ಅಪೌರುಷೇಯವಾದುದರಿಂದಲೇ ನಮಗೆ ಪ್ರಮಾಣ ಗ್ರಂಥಗಳಾಗಿವೆ. ವೇದಗಳನ್ನೇ ಮುಖ್ಯವಾದ ಪ್ರಮಾಣಗ್ರಂಥಗಳೆಂದು ನಾವು ಏಕೆ ಅನುಸರಿಸುತ್ತಾ ಬಂದಿದ್ದೇವೆ? ಪ್ರಾಮಾಣ್ಯವೆಂದರೇನು? ಎಂಬುದನ್ನು ತಿಳಿಯೋಣ.

### ವೇದಗಳೇ ಪ್ರಮಾಣಗ್ರಂಥಗಳು : ಏಕೆ? ಹೇಗೆ?

ವೇದಗಳು ನಿತ್ಯವಾದುದರಿಂದಲೂ, ಪುರುಷರಿಂದ ನಿರ್ಮಿತವಾಗದೇ ಇರುವುದರಿಂದಲೂ, ಪ್ರತ್ಯಕ್ಷ ಮತ್ತು ಅನುಮಾನಪ್ರಮಾಣಗಳಿಗೆ ದೊರೆಯದ ಇಷ್ಟಪ್ರಾಪ್ತಿ ಮತ್ತು ಅನಿಷ್ಟನಿವಾರಣೆಯ ಉಪಾಯವನ್ನು ಬೋಧಿಸುವುದರಿಂದಲೂ, ಅವು ಸ್ವತಃ ಪ್ರಮಾಣಗಳು. ಪ್ರಮಾಣ ಎಂದರೇನು? 'ಪ್ರಮಾ' ಎಂದರೆ ಸಂಸ್ಕೃತದಲ್ಲಿ ಸರಿಯಾದ ತಿಳುವಳಿಕೆ ಎಂದರ್ಥ. ವಸ್ತುವಿನ ಬಗ್ಗೆ ಅದು ಯಾವ ಧರ್ಮದಿಂದ ಕೂಡಿದೆಯೋ, ಅದನ್ನು ಅದೇ ಧರ್ಮದಿಂದ ಕೂಡಿದ್ದನ್ನಾಗಿ ತಿಳಿದುಕೊಳ್ಳುವಿಕೆ.[2] ಇದನ್ನೇ 'ಯಥಾರ್ಥಜ್ಞಾನ ಎಂದೂ ಕರೆಯುತ್ತಾರೆ.

---

1. ಕ್ರೈಸ್ತಮತದಲ್ಲಿ ಕ್ರಿಸ್ತನನ್ನು ದೇವಪುತ್ರನೆಂದು ನಂಬಿ, ಆತನ ಉಪದೇಶಗಳನ್ನು ಪ್ರಮಾಣವೆನ್ನುತ್ತಾರೆ.

ಇಸ್ಲಾಂ ಮತದಲ್ಲಿ ಮಹಮದ್ ಪೈಗಂಬರ್ ಕೊನೆಯ ಪ್ರವಾದಿಯೆಂದು ನಂಬಿದ್ದಾರೆ. ಅವರಿಗೆ ದೇವವಾಣಿಯು ಕೇಳಿಬರುತ್ತಿತ್ತೆಂದು ನಂಬುತ್ತಾರೆ. ಆದುದರಿಂದಲೇ ಆತನ ಉಪದೇಶಗಳೇ ಪ್ರಮಾಣವೆನ್ನುತ್ತಾರೆ.

ಗೌತಮಬುದ್ಧನಿಗೆ ಬುದ್ಧಗಯೆಯಲ್ಲಿ ಜ್ಞಾನಸ್ಫೂರ್ತಿ ಎಂದು ಬೌದ್ಧರ ನಂಬಿಕೆ.

ಹೀಗೆಯೇ ನಮ್ಮಲ್ಲಿ ಅಪೌರುಷೇಯವಾದ ವೇದವು ಧರ್ಮ-ಬ್ರಹ್ಮಗಳ ವಿಷಯದಲ್ಲಿ ಪ್ರಮಾಣವೆಂದು ಪ್ರತಿಪಾದಿಸಿರುತ್ತಾರೆ.

2. ಇದನ್ನು ಶಾಸ್ತ್ರದಲ್ಲಿ 'ತದ್ವತಿ ತತ್ಪ್ರಕಾರಕಜ್ಞಾನಮ್' ಎನ್ನುತ್ತಾರೆ. ಎದುರಿಗಿರುವ ಮೋಟುಮರವನ್ನು ನೋಡಿ ಅದನ್ನು ಮೋಟುಮರವೆಂದೇ ಸರಿಯಾಗಿ ತಿಳಿದುಕೊಂಡ ನಂತರ ಬರುವ ತಿಳುವಳಿಕೆ ಪ್ರಮಾ ಅಥವಾ ಯಥಾರ್ಥಜ್ಞಾನ.



ಈ ಯಥಾರ್ಥಜ್ಞಾನ(ಪ್ರಮಾ)ವುಂಟಾಗಲು ಯಾವ ಸಾಧನಗಳು ಬೇಕಾಗುತ್ತವೆಯೋ ಅವೇ ಪ್ರಮಾಣಗಳು.[1] ನಮ್ಮ ಇಂದ್ರಿಯಗಳೆಲ್ಲವೂ ಪ್ರಮಾಣಗಳೇ. ಕಣ್ಣು ಒಂದು ವಸ್ತುವನ್ನು ಇರುವಂತೆ ತಿಳಿಸುತ್ತದೆ. ಕಿವಿಯು ಶಬ್ದವನ್ನು ಇರುವಂತೆ ಕೇಳುತ್ತದೆ. ಹೀಗೆಯೇ ಉಳಿದ ಇಂದ್ರಿಯಗಳೂ ಕೂಡ. ಆದರೆ ಇದನ್ನು ಇನ್ನಷ್ಟು ವಿಚಾರಿಸಿದರೆ ನಮ್ಮ ಇಂದ್ರಿಯಗಳೇ ಕೆಲವೊಮ್ಮೆ ತಪ್ಪಾದ ವರದಿಯನ್ನು ಬುದ್ಧಿಗೆ ನೀಡಿ ಯಥಾರ್ಥಜ್ಞಾನವನ್ನು ಬದಲಾಯಿಸುವುದೂ ನಮ್ಮ ಅನುಭವಕ್ಕೆ ಬಂದಿದೆ.[2] ಅಂದ ಮೇಲೆ ಇಂದ್ರಿಯಗಳ ಪ್ರಾಮಾಣ್ಯ ಒಂದು ಹಂತದವರೆಗೆ ಮಾತ್ರ ಎಂದೆನ್ನಬಹುದು. ಇಂತಹ ಇಂದ್ರಿಯ ಮತ್ತು ಬುದ್ಧಿಯ ಗುಂಪುಗಳನ್ನು ಹೊಂದಿರದ ಈಶ್ವರನಿಂದ ವೇದಗಳು ಹೊರಬಂದಿರುವುದರಿಂದ ವೇದಗಳು ನಿಚ್ಚಳವಾದ ಪ್ರಮಾಣಗಳು. ವೇದಗಳು ಶಬ್ದರೂಪವಾದುದರಿಂದ ಶಬ್ದವೆಂಬ ಪ್ರಮಾಣಗಳಾಗುತ್ತವೆ. ಶಬ್ದವು ಯಥಾರ್ಥಜ್ಞಾನವನ್ನುಂಟುಮಾಡುತ್ತದೆ. ಇನ್ನೊಂದು ಅಂಶ; ಮನುಷ್ಯನಾದವನು ಯಾವ ವಿಷಯವನ್ನು ಹೇಳಿದರೂ ನಾವು ಅದನ್ನು ಪ್ರಮಾಣವನ್ನಾಗಿ ಒಪ್ಪುವುದಿಲ್ಲ. ಅವನು ಹೇಳಿದ ವಿಷಯಕ್ಕೆ ಇನ್ನೊಂದು ಪ್ರಮಾಣವನ್ನು ಹುಡುಕುತ್ತೇವೆ. ಪೌರುಷೇಯವಾಕ್ಯಕ್ಕೂ ಅಪೌರುಷೇಯ ವಾಕ್ಯಕ್ಕೂ ಇರುವ ವ್ಯತ್ಯಾಸ ಇಲ್ಲಿಯೇ. ಪುರುಷನ ಮಾತು ವಿಷಯವನ್ನು ಬೋಧಿಸುತ್ತದೆ. ನಂತರ ಅದರ ರುಜುವಾತಿಗೆ ಇನ್ನೊಂದು ಪ್ರಮಾಣ ಬೇಕು. ಸ್ನೇಹಿತನೊಬ್ಬನು ಮಾವಿನ ಹಣ್ಣು ತುಂಬ ಚೆನ್ನಾಗಿದೆಯೆಂದು ಹೇಳಿದರೂ ನಮಗೆ ಯಥಾರ್ಥಜ್ಞಾನವಾಗಬೇಕಾದರೆ ನಾವು ತಿಂದ ನಂತರವೇ. ಸ್ನೇಹಿತನ ಮಾತು ಸರಿಯಿದ್ದರೂ ಇರಬಹುದು, ಇಲ್ಲದೆಯೂ ಇರಬಹುದು, ಅವನೂ ಮನುಷ್ಯನಲ್ಲವೆ? ಎಂಬ ಸಂಶಯವೇ ಆತನ ಶಬ್ದಪ್ರಮಾಣಕ್ಕೆ ಇನ್ನೊಂದು ಪ್ರಮಾಣವನ್ನು ಹುಡುಕುವಂತೆ ಮಾಡುತ್ತದೆ. ವೇದದ ವಿಷಯದಲ್ಲಿ ಹೀಗಲ್ಲ. ಅಶರೀರಿಯಾದ ಪರಮಾತ್ಮನಿಂದ ವೇದಗಳು ಬಂದಿರುವುದರಿಂದ ಅವು ಸ್ವತಃ ಪ್ರಮಾಣಗಳು. ಇದು ಶ್ರೀ ಸಾಯಣಾಚಾರ್ಯರು ಯಜುರ್ವೇದಭಾಷ್ಯಭೂಮಿಕೆಯಲ್ಲಿ ಹೇಳಿರುವ ಅಂಶ.

---

1. 'ಪ್ರಮಾ' ಎಂಬುದನ್ನು ಉಂಟುಮಾಡುವ ಸಾಧನ ಪ್ರಮಾಣ.

**ಪ್ರಮೀಯತೇ ಅನೇನ ಇತಿ ಪ್ರಮಾಣಮ್.**

ಪ್ರ+ಮಾ+ಲ್ಯುಟ್ (ಪ್ರತ್ಯಯ) = ಪ್ರಮಾಣಮ್

ಅವು ನಾಲ್ಕು;. ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ.

2. ಕಡುಬೇಸಿಗೆಯಲ್ಲಿ ನಮ್ಮ ಕಣ್ಣಿಗೆ ಬಿಸಿಲಿನ ಝಳವು ನೀರಿನಂತೆ ಕಾಣುವುದು, ಕಿವಿಯು ಶಬ್ದವನ್ನು ತಪ್ಪಾಗಿ ಗ್ರಹಿಸುವುದು—ಇತ್ಯಾದಿ ಅನುಭವಗಳಿವೆ.



ತತ್ಪ್ರಾಮಾಣ್ಯಂ ತು ಬೋಧಕತ್ವಾತ್ ಸ್ವತ ಏವ ಸಿದ್ಧಮ್ । ಪೌರುಷೇಯವಾಕ್ಯಂ ತು ಬೋಧಕಮಪಿ ಸತ್ ಪುರುಷಗತಭ್ರಾಂತಿಮೂಲಕತ್ವಸಂಭಾವನಯಾ ತತ್ಪರಿಹಾರಾಯ ಅನ್ಯಪ್ರಮಾಣಮಪೇಕ್ಷ್ಯೈವ ಪ್ರಮಾಣಮ್ । ನ ತು ವೇದಃ ಮೂಲಪ್ರಮಾಣಮಪೇಕ್ಷತೇ । ತಸ್ಯ ನಿತ್ಯತ್ವೇನ ಕರ್ತೃದೋಷಶಂಕಾಯಾ ಅನುದಯಾತ್ ।

—ಶ್ರೀ ಸಾಯಣಾಚಾರ್ಯರ ಯಜುರ್ವೇದ ಭಾಷ್ಯಭೂಮಿಕೆ

ವೇದದ ಪ್ರಾಮಾಣ್ಯವು ಅದು ಅರ್ಥವನ್ನು ಬೋಧಿಸುವುದರಿಂದ ಸ್ವತಃ ಇರುತ್ತದೆ. ಪುರುಷನ ವಾಕ್ಯವು ಅರ್ಥವನ್ನು ಬೋಧಿಸುವುದಾದರೂ ಪುರುಷನಲ್ಲಿರಬಹುದಾದ ಭ್ರಾಂತಿಯೂ ಆತನ ಮಾತಿನಲ್ಲಿರಬಹುದೆಂಬ ಊಹೆಯಿಂದ ಭ್ರಾಂತಿಯ ನಿವಾರಣೆಗಾಗಿ ಇನ್ನೊಂದು ಪ್ರಮಾಣವನ್ನು ಅಪೇಕ್ಷಿಸುತ್ತದೆ. ವೇದಕ್ಕಾದರೋ ಇನ್ನೊಂದು ಪ್ರಮಾಣವು ಬೇಡ. ಅದು ನಿತ್ಯವಾದುದರಿಂದಲೂ, ಅಪೌರುಷೇಯವಾದುದರಿಂದಲೂ ಕರ್ತೃವಿನ ದೋಷವು ಅಲ್ಲಿರಬಹುದೆಂಬ ಸಂಶಯವೇ ಬರುವುದಿಲ್ಲ.

ವೇದಗಳ ಪ್ರಾಮಾಣ್ಯಕ್ಕೆ ಸಂಬಂಧಿಸಿದಂತೆಯೂ ಋಗ್ವೇದದ ಸಾಯಣ ಭಾಷ್ಯದ ಭೂಮಿಕೆಯಲ್ಲಿ ವಿಪುಲವಾಗಿ ಚರ್ಚಿಸಲಾಗಿದೆ. ವೇದದ ಮೂರು ಭಾಗಗಳಾದ ಮಂತ್ರಭಾಗ, ವಿನಿಯೋಗ ವಾಕ್ಯಗಳು (ಬ್ರಾಹ್ಮಣ) ಮತ್ತು ಅರ್ಥವಾದ ಈ ಮೂರರ ಪ್ರಾಮಾಣ್ಯವನ್ನು ಚೆನ್ನಾಗಿ ನಿರೂಪಿಸುತ್ತಾರೆ. ಆ ವಿಮರ್ಶೆಯ ಸಾರಾಂಶ ಹೀಗಿದೆ.

**ವೇದಗಳ ಪ್ರಾಮಾಣ್ಯ : ಆಕ್ಷೇಪ-ಸಮಾಧಾನ**

ಆಕ್ಷೇಪ : ವೇದವೆಂಬ ವಸ್ತುವಿದೆಯೆಂದು ಒಪ್ಪಬಹುದಾದರೂ ವೇದವು ಪ್ರಮಾಣವಲ್ಲವಾದುದರಿಂದ ಅದಕ್ಕೆ ವ್ಯಾಖ್ಯಾನವನ್ನು ಮಾಡಬೇಕಾದುದಿಲ್ಲ. ಪ್ರಮಾಣವೆಂದರೆ ಸರಿಯಾದ ಅನುಭವವನ್ನು ತಂದುಕೊಡುವ ಸಾಧನ.[1] ನಾವು ಬೇರೆ ಪ್ರಮಾಣಗಳಿಂದ ತಿಳಿಯದ ವಸ್ತುವನ್ನು ಯಾವುದು ತಿಳಿಸಿಕೊಡುತ್ತದೆಯೋ[2] ಅದನ್ನು ಪ್ರಮಾಣ ಎಂದು ಕೆಲವರು ಹೇಳುತ್ತಾರೆ. ಇವೆರಡೂ ವೇದದಲ್ಲಿ ಇಲ್ಲ. ಕೆಲವೆಡೆ ವೇದಮಂತ್ರಗಳಿಗೆ ಅರ್ಥವೇ ಇಲ್ಲ. ಉದಾಹರಣೆಗಾಗಿ

ಸೃಣ್ಯೇವ ಜರ್ಭರೀ ತುರ್ಫರೀತೂ । —ಋ.ಸಂ. ೧೦-೧೦೬-೬

1. ಸಮ್ಯಗನುಭವಸಾಧನಂ ಪ್ರಮಾಣಮ್.

2. "ಅನಧಿಗತಾಬಾಧಿತಾರ್ಥಬೋಧಕತ್ವಂ" (ಬೇರೆಯ ಪ್ರಮಾಣದಿಂದ ತಿಳಿಯದ, ಬೇರೆಯ ಪ್ರಮಾಣಗಳಿಂದ ಬಾಧಿತವಲ್ಲದ ವಿಷಯವನ್ನು ತಿಳಿಸಿಕೊಡುವಂತಹದು.)



ಅರ್ಥವನ್ನೇ ತಿಳಿಸದಿರುವಾಗ ಅನುಭವವಾಗುವುದೆಂತು? ಅದೂ ಸರಿಯಾಗಿ ಆಗುವುದೆಂತು? ವೇದವು ಅಂತಹ ಅನುಭವವನ್ನು ತಂದು ಕೊಡುವ ಸಾಧನ ವಾದೀತೇ? ಹೀಗೆಯೇ 'ಶುಭಿಕೇ ಶಿರ ಆರೋಹ ಶೋಭಯಂತೀ ಮುಖಂ ಮಮ' (ಎಲೈ ಬಾಸಿಂಗವೇ, ನನ್ನ ತಲೆಯಲ್ಲಿದ್ದು ನನ್ನ ಮುಖವು ಶೋಭಿಸುವಂತೆ ಮಾಡು) ಎಂಬ ಮಂತ್ರವು ಬಾಸಿಂಗವನ್ನು ತಲೆಯ ಮೇಲೆ ಧರಿಸುವಾಗ ಹೇಳುವ ಮಂತ್ರ. ಈ ಮಂತ್ರದಲ್ಲಿ ಹೊಸದೇನೂ ಇಲ್ಲ. ಲೋಕದಲ್ಲಿ ತಾನಾಗಿಯೇ ತಿಳಿದು ಬರುವ ವಿಚಾರವನ್ನು ಈ ಮಂತ್ರ ಹೇಳುತ್ತದೆ. ನಾವು ತಿಳಿಯದ ಯಾವ ವಸ್ತುವನ್ನೂ ಈ ವೇದಮಂತ್ರವು ತಿಳಿಸುತ್ತಿಲ್ಲ. ಆದುದರಿಂದ ಪ್ರಮಾಣ ಎಂಬುದಕ್ಕೆ ಇರುವ ಎರಡು ಲಕ್ಷಣಗಳೂ ವೇದದಲ್ಲಿ ಹೊಂದಿಕೊಳ್ಳುವುದಿಲ್ಲ. ಆದ್ದರಿಂದ ವೇದವು ಪ್ರಮಾಣವಲ್ಲ.

ಹೀಗೆಯೇ ಅಚೇತನಗಳಾದ ಕಲ್ಲುಗಳನ್ನು ಕುರಿತು

ಶೃಣೋತ ಗ್ರಾವಾಣೋ ವಿದುಷೋನು....। —ತೈ.ಸಂ. 1-3-13-1

'ಕಲ್ಲುಗಳೇ ಕೇಳಿರಿ' ಎಂಬ ಅರ್ಥದ ವೇದಮಂತ್ರವಿದೆ.

ಒಂದೆಡೆ ಒಬ್ಬನೇ ರುದ್ರನೆಂದೂ

ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ......। —ತೈ.ಸಂ. 1-8-6-1

ಒಂದೆಡೆ ಸಹಸ್ರರುದ್ರರೆಂದೂ

ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿ ಭೂಮ್ಯಾಮ್ ।

—ತೈ.ಸಂ. 4-5-11-1

ವೇದವೇ ಹೇಳುತ್ತದೆ. ಹೀಗೆ ವಿರುದ್ಧವಾದುದನ್ನು ಹೇಳುವ, ಅಚೇತನಗಳನ್ನು ಸಂಬೋಧಿಸುವ ವೇದಮಂತ್ರಗಳು ಹೇಗೆ ಪ್ರಮಾಣವಾದಾವು? ಆದ್ದರಿಂದ ಮಂತ್ರವಾಕ್ಯಗಳು ಪ್ರಮಾಣವಲ್ಲ.

**ಸಮಾಧಾನ :** ಅರ್ಥರಹಿತವಾದ ಮಂತ್ರಗಳಿಂದ ಕೂಡಿರುವ ವೇದವು ಸರಿಯಾದ ಅನುಭವವನ್ನು ಹೇಗೆ ತಂದೀತೆಂಬ ಆಕ್ಷೇಪವಷ್ಟೆ.

ಸೃಣ್ಯೇವ ಜರ್ಭರೀ ತುರ್ಫರೀತೂ ।

ಮುಂತಾದ ಮಂತ್ರಗಳು ಅರ್ಥರಹಿತವಲ್ಲ. ನಿರುಕ್ತದಲ್ಲಿ ಆ ಶಬ್ದಗಳ



ಅರ್ಥವು ಚೆನ್ನಾಗಿ ತಿಳಿಸಲ್ಪಟ್ಟಿದೆ. ಜರ್ಭರೀ ಎಂದರೆ ಭರ್ತಾರೌ = ಪೋಷಿಸುವವರು ಎಂದೂ, ತುರ್ಫರೀತೂ ಎಂದರೆ ಹಿಂಸಿತಾರೌ = ಕೊಲ್ಲುವವರು ಎಂದೂ ಅರ್ಥ. ಅಲ್ಲದೆ

**ಅಶ್ವಿನೋಃ ಕಾಮಮಪ್ರಾಃ ।**

ಎಂದಿರುವುದರಿಂದಲೂ, ಅಶ್ವಿನೀಸೂಕ್ತವೆಂಬ ಮಂತ್ರಗಳಲ್ಲಿಯೇ ಈ ಎರಡು ಪದಗಳೂ, ದ್ವಿವಚನವೂ ಇರುವುದರಿಂದಲೂ, ಆ ಶಬ್ದಗಳಿಗೆ ಅಶ್ವಿನೀದೇವತೆಗಳೆಂದು ಅರ್ಥ ಮಾಡಬೇಕು. ನಿರುಕ್ತ[1] ಗ್ರಂಥವನ್ನು ಪರಿಶೀಲಿಸದೇ ಮಂತ್ರಕ್ಕೇ ಅರ್ಥವಿಲ್ಲ ಎಂದೆನ್ನುವುದು ಅನುಚಿತ.[2]

ಎರಡನೆಯದಾಗಿ, ಲೋಕದಲ್ಲಿ ಇರುವ ವಿಷಯವನ್ನೇ ವೇದವು ಬೋಧಿಸುತ್ತಿರುವುದರಿಂದ ತಿಳಿಯದ ಯಾವ ವಿಷಯವನ್ನು ವೇದವು ತಿಳಿಸಿದಂತಾಯಿತು? ಎಂಬ ಆಕ್ಷೇಪವಷ್ಟೇ. ಬಾಸಿಂಗವನ್ನು ಕುರಿತು ಹೇಳುವ ಮಂತ್ರ ಬಾಸಿಂಗದ ಅಭಿಮಾನಿಯಾದ ದೇವತೆಯನ್ನು ಕುರಿತು ಹೇಳಿರುವುದು. ಪ್ರತ್ಯಕ್ಷ ಅಥವಾ ಅನುಮಾನಪ್ರಮಾಣಗಳಿಂದ ತಿಳಿಯಲಾಗದ ಇಷ್ಟಪ್ರಾಪ್ತಿಯ ಉಪಾಯವನ್ನೇ ವೇದವು ತಿಳಿಸುವುದಷ್ಟೆ. ದೇವತೆಯ ಇರುವಿಕೆಯು ಪ್ರತ್ಯಕ್ಷವಲ್ಲ. ಆದರೆ ಆ ದೇವತೆಯ ಅನುಗ್ರಹದ ಉಪಾಯವನ್ನೇ ವೇದವು ತಿಳಿಸುತ್ತಾ ಇದೆ. ವೇದವು ತಿಳಿಸುವ ಮೊದಲು ಈ ಉಪಾಯವು ನಮಗೆ ತಿಳಿದಿರಲಿಲ್ಲವಾದುದರಿಂದ ತಿಳಿಯದ ವಿಷಯವನ್ನೇ ವೇದವು ತಿಳಿಸಿಕೊಟ್ಟಂತಾಯಿತು.

ಇದೇ ಅಭಿಪ್ರಾಯವನ್ನೇ ಬ್ರಹ್ಮಸೂತ್ರಗಳಲ್ಲಿ ಮಹರ್ಷಿ ವೇದವ್ಯಾಸರು ತಿಳಿಸಿರುತ್ತಾರೆ.[3]

---

1. ನಿರುಕ್ತವು ವೇದಾರ್ಥವನ್ನು ತಿಳಿಯಲು ಮುಖ್ಯವಾದ ಅಂಗ. ನಿರುಕ್ತವನ್ನು ಚೆನ್ನಾಗಿ ಪರಿಶೀಲಿಸಿ ವೇದಾರ್ಥವನ್ನು ಅರಿಯಬೇಕು. ವೇದಗಳ ಶಬ್ದಗಳನ್ನು ಕೇಳಿ ಸಂಸ್ಕೃತ ಭಾಷೆಯಲ್ಲಿನ ತಿಳುವಳಿಕೆಯ ಸಹಾಯದಿಂದ ವೇದಾರ್ಥಕ್ಕೆ ಯತ್ನಿಸತಕ್ಕದ್ದಲ್ಲ.

2. ನೈಷ ಸ್ಥಾಣೋರಪರಾಧೋ ಯದೇನಮಂಧೋ ನ ಪಶ್ಯತಿ ।
ಎಂದು ನಿರುಕ್ತದಲ್ಲಿಯೇ ವಿನೋದದ ಮಾತು ಬರುತ್ತದೆ. ಮೋಟುಮರವೊಂದು ಕುರುಡನ ಕಣ್ಣಿಗೆ ಬೀಳದಿದ್ದರೆ ಅದು ಮೋಟುಮರದ ಅಪರಾಧವೇ?

3. ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ —ಬ್ರಹ್ಮಸೂತ್ರ 2-1-5

ಮೃದಬ್ರವೀತ್ (ಶತಪಥ ಬ್ರಾಹ್ಮಣ 61-1-3-2-4) ಎಂದರೆ ಮಣ್ಣು ಹೇಳಿತು ಎಂದರ್ಥ. ಅಚೇತನವಾದ ಮಣ್ಣಿನಲ್ಲಿ ಚೈತನ್ಯವೆಲ್ಲಿಯದು ಎಂದರೆ ಶ್ರುತಿಯು ಆ ಮಣ್ಣಿನ ಅಭಿಮಾನಿಯಾದ ದೇವತೆಯನ್ನು ತಿಳಿಸುತ್ತಾ ಇದೆ ಎಂದು ಅರ್ಥ ಮಾಡಿಕೊಳ್ಳಬೇಕು. ಅಚೇತನಗಳನ್ನು ಕುರಿತ ಮಂತ್ರಗಳು ಸ್ತುತಿಪರಗಳೆಂದು ಮೀಮಾಂಸಕರು ಹೇಳುತ್ತಾರೆ.



ಆದುದರಿಂದ ಪ್ರಮಾಣ ಎಂಬುದಕ್ಕೆ ಹೇಳಿದ 'ಸರಿಯಾದ ಅನುಭವವನ್ನು ತಂದುಕೊಡುವ ಸಾಧನ' ಮತ್ತು 'ತಿಳಿಯದ ವಸ್ತುವನ್ನು ತಿಳಿಸಿಕೊಡುವುದು' ಎಂಬ ಈ ಎರಡೂ ಲಕ್ಷಣಗಳು ವೇದದಲ್ಲಿ ಇರುವುದರಿಂದ ವೇದವು ಪ್ರಮಾಣವಾಗುತ್ತದೆ. ಆದ್ದರಿಂದ ವೇದದ ವ್ಯಾಖ್ಯಾನವನ್ನು ಮಾಡಬೇಕು. ವೇದವು ವಿರುದ್ಧವಾದ ಅರ್ಥವನ್ನು ತಿಳಿಸುತ್ತದೆ ಎಂಬ ಆಕ್ಷೇಪವಿದೆಯಷ್ಟೆ. ರುದ್ರನು ಒಬ್ಬನೇ ಆದರೂ ತನ್ನ ಮಹಿಮೆಯಿಂದ ಸಾವಿರಾರು ಶರೀರಗಳನ್ನು ಪಡೆಯುತ್ತಾನೆ ಎಂಬುದಾಗಿ ಎರಡೂ ಮಂತ್ರಗಳಿಗೆ ಸಾಮಂಜಸ್ಯವನ್ನು ಕಂಡುಕೊಳ್ಳಬೇಕು. ಆದುದರಿಂದ ಮಂತ್ರಗಳು ಪ್ರಮಾಣವೇ ಆಗಿವೆ.

**ಆಕ್ಷೇಪ** : ಮಂತ್ರಭಾಗಗಳಿಗೆ ಮೇಲೆ ತಿಳಿಸಿದ ರೀತಿಯಲ್ಲಿ ಪ್ರಾಮಾಣ್ಯವಿದೆ ಎನ್ನುವುದಾದರೂ ವಿನಿಯೋಗವಾಕ್ಯಗಳಿಗೆ (ಬ್ರಾಹ್ಮಣಗಳಿಗೆ) ಪ್ರಾಮಾಣ್ಯವನ್ನು ಒಪ್ಪುವುದು ಕಷ್ಟ. ಏಕೆಂದರೆ ಬ್ರಾಹ್ಮಣಭಾಗದಲ್ಲಿ ಹೇಳುವ ವಿಧಿಗಳು ಕೆಲವು ವಿರುದ್ಧವಾಗಿವೆ.

**ಜರ್ತಿಲಯವಾಗ್ವಾ ವಾ ಜುಹುಯಾದ್ ಗವೀಧುಕಯವಾಗ್ವಾ ವಾ......।**

—ತೈ.ಸಂ. 5-4-3-2

ಎಂಬ ವಿಧಿವಾಕ್ಯವು ಅರಣ್ಯದ ಎಳ್ಳಿನಿಂದಾಗಲೀ, ಅರಣ್ಯದ ಗೋಧಿಯಿಂದಾಗಲೀ ಹೋಮ ಮಾಡಬಹುದು ಎಂದು ತಿಳಿಸುತ್ತದೆ. ನಂತರ ಅಲ್ಲಿಯೇ ಮುಂದಿನ ವಿನಿಯೋಗವಾಕ್ಯದಲ್ಲಿ

**ಅನಾಹುತಿರ್ವೈ ಜರ್ತಿಲಾಶ್ಚ ಗವೀಧುಕಾಶ್ಚೇತಿ.....।**

—ತೈ.ಸಂ. 5-4-3-2

ಎಂಬ ಮಾತು ಅರಣ್ಯದ ಎಳ್ಳು ಮತ್ತು ಅರಣ್ಯದ ಗೋಧಿ ಆಹುತಿಗೆ ಯೋಗ್ಯವಲ್ಲ ಎಂದು ತಿಳಿಸುತ್ತದೆ. ಮುಂದಿನ ವಾಕ್ಯದಿಂದ ಹಿಂದಿನ ವಾಕ್ಯದ ಅರ್ಥವು ಬಾಧಿತವಾದುದರಿಂದ ಮೊದಲನೆಯ ವಿಧಿಯು ಸರಿಯಾದ ಅನುಭವವನ್ನು ತಂದು ಕೊಡುವ ಸಾಧನವಲ್ಲವಾದುದರಿಂದ ಅಪ್ರಮಾಣವಾಯಿತಲ್ಲವೇ? ಹೀಗೆಯೇ ವೇದದ ಇನ್ನೊಂದು ಭಾಗವಾದ ಜ್ಞಾನಕಾಂಡದಲ್ಲಿ ಒಂದೆಡೆ

**ಆತ್ಮಾ ವಾ ಇದಮೇಕ ಏವಾಗ್ರೇ ಆಸೀತ್ ।** —ಐ.ಆ. 2-4-1

ಸೃಷ್ಟಿಯ ಆದಿಯಲ್ಲಿ ಪರಮಾತ್ಮನೊಬ್ಬನೇ ಇದ್ದನೆಂದು ಹೇಳುತ್ತದೆ.



ತೈತ್ತಿರೀಯ ಶ್ರುತಿಯಲ್ಲಿ

**ಅಸದ್ವಾ ಇದಮಗ್ರ ಆಸೀತ್ ।** —ತೈ.ಉ. ಬ್ರಹ್ಮಾನಂದವಲ್ಲೀ

ಎಂದು ಅಸತ್ ವಸ್ತುವೇ ಇತ್ತು ಎಂದು ತಿಳಿಸುತ್ತದೆ. ಹೀಗೆ ಬ್ರಹ್ಮಕಾಂಡದ ವಾಕ್ಯಗಳಿಗೂ ಸಹ ಪರಸ್ಪರ ವಿರೋಧವಿರುವುದರಿಂದ ಬ್ರಾಹ್ಮಣವಾಕ್ಯಗಳು ಪ್ರಮಾಣವಲ್ಲ.

**ಸಮಾಧಾನ :** ನಿರ್ದಿಷ್ಟವಾದ ದ್ರವ್ಯದಿಂದ ಆಹುತಿಯನ್ನು ಹೇಳಿ ಅದೇ ದ್ರವ್ಯವನ್ನು ಮುಂದೆ ದೂಷಿಸುತ್ತಿರುವುದರಿಂದ ಹಿಂದಿನ ವಾಕ್ಯವು ಅಪ್ರಮಾಣವೆಂಬುದೇ ಆಕ್ಷೇಪವಷ್ಟೆ. ಇವೆರಡಕ್ಕಿಂತಲೂ ಮುಂದೆ ಇನ್ನೊಂದು ವಾಕ್ಯ—

**ಅಜಕ್ಷೀರೇಣ ಜುಹೋತಿ ।**

ಆಡಿನ ಹಾಲಿನಿಂದ ಹೋಮ ಮಾಡಬೇಕು ಎಂದು ಇದೆ. ಈ ಅಜಕ್ಷೀರವೆಂಬ ದ್ರವ್ಯವು ಪ್ರಶಸ್ತವೆಂಬುದನ್ನು ತಿಳಿಸಲು ಎಳ್ಳನ್ನು ಹವಿಸ್ಸೇ ಅಲ್ಲವೆಂದು ಶ್ರುತಿಯು ಹೇಳುತ್ತದೆ. ನ ಹಿ ನಿಂದಾ ನ್ಯಾಯದಂತೆ ಇದನ್ನು ಅರ್ಥ ಮಾಡಿಕೊಳ್ಳಬೇಕು.

**ನ ಹಿ ನಿಂದಾ ನಿಂದಿತುಂ ಪ್ರವೃತ್ತಾ ಅಪಿ ತು ನಿಂದಿತಾತ್ ಇತರತ್ ಸ್ತೋತುಮ್।**

ಇದು ನ್ಯಾಯವಾಕ್ಯ. ನಿಂದೆಯ ವಾಕ್ಯಕ್ಕೆ ನಿಂದಿಸುವುದರಲ್ಲಿ ತಾತ್ಪರ್ಯವಲ್ಲ. ಯಾವುದು ವಿಹಿತವೋ ಅದನ್ನು ಪ್ರಶಂಸಿಸುವುದರಲ್ಲಿ ತಾತ್ಪರ್ಯ. ಇದು ತಾಯಿಯು ಮಗುವನ್ನು ನಿಂದಿಸುವಂತೆ. ಓದದ ಮಗನನ್ನು ತಾಯಿಯು ಗದರಿಸಿದಾಗ ತಾಯಿಗೆ ಓದು ಅವಶ್ಯ, ಪ್ರಶಸ್ತ ಎಂಬ ಅರ್ಥದಲ್ಲಿಯೇ ತಾತ್ಪರ್ಯವಿರುವುದಲ್ಲವೇ? ಅಥವಾ ತಮ್ಮ ಮಕ್ಕಳನ್ನು ಇನ್ನೊಬ್ಬರ ಮಕ್ಕಳ ಎದುರು ತಾಯಿಯು ನಿಂದಿಸಿದರೆ ತಾಯಿಗೆ ತಮ್ಮ ಮಕ್ಕಳು ಚೆನ್ನಾಗಿ ಓದಬೇಕೆಂಬುದರಲ್ಲಿಯೇ ತಾತ್ಪರ್ಯವಿರುತ್ತದೆ. ಲೋಕದ ಕ್ರಮವನ್ನು ಅನುಸರಿಸಿಯೇ ಶ್ರುತಿಯು ವಿಷಯವನ್ನು ತಿಳಿಸಿ ಕೊಡುತ್ತದೆ.

ಹೀಗೆಯೇ ವೇದದ ಒಂದು ಶಾಖೆಯಲ್ಲಿ ಬರುವ ಮಂತ್ರವನ್ನು ಇನ್ನೊಂದು ಶಾಖೆಯಲ್ಲಿ ನಿಂದಿಸುವುದೂ ಉಂಟು. ಆಗಲೂ ಆಯಾ ಶಾಖೆಯವರಿಗೆ ಆಯಾ ಮಂತ್ರಗಳು ಪ್ರಮಾಣ ಎಂದು ತಿಳಿಯಬೇಕು. ವೇದದಲ್ಲಿ ಮೇಲ್ನೋಟಕ್ಕೆ ವಿರೋಧವೆಂದು ತೋರಿ ಬಂದಾಗ ಆಯಾ ಶಾಖೆಯನ್ನು ಅನುಸರಿಸುವವರಿಗೆ ಆಯಾ ಮಂತ್ರಗಳು ಅನ್ವಯವಾಗುತ್ತವೆಯೆಂದು ತಿಳಿಯಬೇಕು.

**ವಿರೋಧೇ ವಿಕಲ್ಪಃ, ಅವಿರೋಧೇ ಸಮುಚ್ಚಯಃ ।**

ಎಂಬುದು ಮೀಮಾಂಸಾಸಿದ್ಧಾಂತ. ಎರಡು ಶ್ರುತಿವಚನಗಳಿಗೆ ವಿರೋಧ



ಬಂದರೆ ಎರಡು ರೀತಿಯಲ್ಲೂ ಆಚರಿಸಬಹುದೆಂದರ್ಥ. ವಿರೋಧ ಬರದಿದ್ದರೆ ಎರಡನ್ನೂ ಸೇರಿಸಿ ಅರ್ಥ ಮಾಡಿಕೊಳ್ಳಬೇಕು.

ಹೀಗೆಯೇ ಬ್ರಹ್ಮಕಾಂಡದಲ್ಲಿನ ವಚನಗಳು ವಿರುದ್ಧವಾದವುಗಳಲ್ಲ. 'ಆತ್ಮಾ ವಾ.....' ಎಂಬ ವಚನಕ್ಕೂ 'ಅಸದ್ವಾ' ಎಂಬ ವಚನಕ್ಕೂ ವಿರೋಧವಿಲ್ಲ. ಎರಡನೆಯ ಶ್ರುತಿವಚನದಲ್ಲಿ 'ಅಸತ್' ಎಂಬ ಪದಕ್ಕೆ ಶೂನ್ಯ ಎಂದರ್ಥವಲ್ಲ. ಅಸತ್ ಎಂದರೆ ಅವ್ಯಕ್ತ ಎಂದರ್ಥ. ಆತ್ಮವಸ್ತುವೇ ಇದ್ದಿತಾದರೂ ಅದು ಅವ್ಯಕ್ತವಾಗಿದ್ದಿತು ಎಂದರ್ಥ. ಸೃಷ್ಟಿಗೆ ಮೊದಲು ಅದಕ್ಕೆ ನಾಮ-ರೂಪಗಳು ಇಲ್ಲದ್ದರಿಂದ, ಅಸತ್‌ನಂತೆ ಇರುವುದರಿಂದ ಅಸತ್ ಎಂದು ಶ್ರುತಿಯು ಹೇಳುತ್ತದೆ. ಇದನ್ನು ವೇದವ್ಯಾಸರು

**ಅಸದ್ವ್ಯಪದೇಶಾದಿತಿ ಚೇನ್ನ, ಧರ್ಮಾಂತರೇಣ ವಾಕ್ಯಶೇಷಾತ್**

—ಬ್ರ.ಸೂ. 2-1-17

ಎಂದು ಪ್ರತಿಪಾದಿಸಿದ್ದಾರೆ. ಆದುದರಿಂದ ಬ್ರಹ್ಮಕಾಂಡದ ವಾಕ್ಯಗಳಲ್ಲಿಯೂ ಪರಸ್ಪರ ವಿರೋಧವಿಲ್ಲ.

ಹೀಗೆ ಬ್ರಾಹ್ಮಣಭಾಗದ ವಿಧಿವಾಕ್ಯಗಳು ಪ್ರಮಾಣಗಳೇ ಆಗಿವೆ ಎಂಬುದು ಸಿದ್ಧವಾದಂತಾಯಿತು.

ಇನ್ನು ಮೂರನೆಯದಾದ ಅರ್ಥವಾದದ ಬಗ್ಗೆ ಆಕ್ಷೇಪ–ಸಮಾಧಾನಗಳು ಹೀಗಿವೆ.

**ಆಕ್ಷೇಪ** : ವೇದವಾಕ್ಯಗಳು ಕರ್ಮಬೋಧಕಗಳಾಗಿರುವಾಗ ಯಾವುದೇ ಕರ್ಮವನ್ನೂ ಬೋಧಿಸದಂತಹ ವಾಕ್ಯಗಳು ಅನಿತ್ಯ ಮತ್ತು ಅವುಗಳಿಗೆ ಧರ್ಮವನ್ನು ತಿಳಿಸುವ ಸಾಮರ್ಥ್ಯವಿಲ್ಲದಿರುವುದರಿಂದ ಅಪ್ರಮಾಣ. ಉದಾಹರಣೆಗಾಗಿ

**ಸೋಽರೋದೀತ್ ಯದರೋದೀತ್, ತದ್ರುದ್ರಸ್ಯ ರುದ್ರತ್ವಮ್ ।**

ಅವನು ಅತ್ತನು, ಅತ್ತಿದ್ದರಿಂದ ರುದ್ರ ಎಂಬ ಹೆಸರನ್ನು ಪಡೆದನು. (ರೋದಿತಿ ಇತಿ ರುದ್ರಃ) ಈ ವಾಕ್ಯವು ಯಾವ ಕ್ರಿಯೆಯನ್ನೂ ತಿಳಿಸುತ್ತಿಲ್ಲವಾದುದರಿಂದ ಕಾವ್ಯದ ಮಾತುಗಳಂತೆ ಇದೆ. ಇದೇ ರೀತಿ ಅನೇಕ ವಾಕ್ಯಗಳು ವೇದಗಳಲ್ಲಿ ಇರುವುದರಿಂದ ಇವುಗಳಿಗೆ ಪ್ರಾಮಾಣ್ಯವಿಲ್ಲ.

**ಸಮಾಧಾನ** : ವೇದವಾಕ್ಯಗಳು ಕರ್ಮವನ್ನು ಬೋಧಿಸದಿದ್ದರೂ ಕರ್ಮವನ್ನು ಬೋಧಿಸುವ ವಿಧಿವಾಕ್ಯಗಳೊಡನೆ ಈ ವಾಕ್ಯಗಳು ಸೇರಿಕೊಂಡು ಪ್ರಮಾಣಗಳೇ



ಆಗುತ್ತವೆ. ವಿಧಿವಾಕ್ಯಗಳು ಸ್ವತಃ ಕರ್ಮವನ್ನು ವಿಧಿಸುತ್ತವೆಯಾದರೂ ಕರ್ಮವನ್ನು ಪ್ರಶಂಸಿಸಲು ಅರ್ಥವಾದವನ್ನು ಶ್ರುತಿಯು ಹೇಳುತ್ತದೆ.

**ವಾಯವ್ಯಗ್ಂ ಶ್ವೇತಮಾಲಭೇತ ಭೂತಿಕಾಮೋ ವಾಯುರ್ವೈ ಕ್ಷೇಪಿಷ್ಠಾ ॥ ದೇವತಾ.....।**

ಸಂಪತ್ತನ್ನು ಬಯಸುವವನು ವಾಯುದೇವತೆಗೆ ಬಿಳಿಯ ಆಡನ್ನು ಹವಿಸ್ಸನ್ನಾಗಿ ಕೊಡಬೇಕು. ವಾಯುವು ವೇಗವಾಗಿ ಬೀಸುವನಷ್ಟೆ. ಅವನಷ್ಟು ವೇಗವಾಗಿ ಮತ್ತಾವ ದೇವತೆಗಳೂ ಫಲ ಕೊಡಲಾರರು ಎಂದು ಶ್ರುತಿಯು ಹೇಳುತ್ತಿದೆ. ಹೀಗೆ ವಿಧಾನ ಮಾಡಿದ ಕರ್ಮವನ್ನು ಪ್ರಶಂಸಿಸಲು ಬಂದಿರುವ ಮಾತು ವಿಧಿವಾಕ್ಯದೊಡನೆ ಸೇರಿ ಪ್ರಮಾಣವೇ ಆಗುತ್ತದೆ.'ಸೋಽರೋದೀತ್' ಎಂಬ ವಾಕ್ಯವು ನಿಷೇಧದ ಅರ್ಥವಾದ. ಯಜ್ಞದಲ್ಲಿ ಬೆಳ್ಳಿಯನ್ನು ದಕ್ಷಿಣೆಯನ್ನಾಗಿ ಕೊಡಬಾರದು. ಬೆಳ್ಳಿಯೆಂಬುದು ರುದ್ರನ ಕಣ್ಣೀರು. ಬೆಳ್ಳಿಯನ್ನು ದಕ್ಷಿಣೆಯನ್ನಾಗಿ ಕೊಟ್ಟರೆ ದಕ್ಷಿಣೆಯನ್ನಾಗಿ ನೀಡುವವನ ಮನೆಯಲ್ಲಿ ಒಂದು ವರ್ಷದೊಳಗೆ ಅನಿಷ್ಟವು ಉಂಟಾಗುತ್ತದೆ ಎಂದು ತಿಳಿಸುತ್ತದೆ. ಬೆಳ್ಳಿಯನ್ನು ದಕ್ಷಿಣೆಯನ್ನಾಗಿ ನೀಡಬಾರದು ಎಂಬ ನಿಷೇಧವನ್ನು ಚೆನ್ನಾಗಿ ತಿಳಿಸಲು ಇದು ಅರ್ಥವಾದ. ಅಸಂಭವ ವಿಷಯಗಳನ್ನು ಇಟ್ಟುಕೊಂಡೂ ಅರ್ಥವಾದವು ಬರುತ್ತದೆ. ಆದ್ದರಿಂದ ಅರ್ಥವಾದ ವಾಕ್ಯಗಳು ವಿಧಿ ಅಥವಾ ನಿಷೇಧವಾಕ್ಯದೊಡನೆ ಸೇರಿ ಪ್ರಮಾಣಗಳಾಗುತ್ತವೆ. ವೇದಗಳಲ್ಲಿ

**ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತಹಸ್ತಾಸೋ ಅಸ್ಯ।**
**ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾಗ್ಂ**
**ಆವಿವೇಶ ॥**

—ಮಹಾನಾರಾಯಣೋಪನಿಷತ್

ನಾಲ್ಕು ಕೋಡುಗಳೂ, ಮೂರು ಪಾದಗಳೂ, ಎರಡು ತಲೆಗಳೂ, ಏಳು ಹಸ್ತಗಳೂ ಇರುವ ವೃಷಭವೊಂದು ಮೂರು ರೀತಿಯಲ್ಲಿ ಕಟ್ಟಲ್ಪಟ್ಟು ಮತ್ತೆ ಮತ್ತೆ ಧ್ವನಿ ಮಾಡುತ್ತಾ ಮನುಷ್ಯರನ್ನು ಪ್ರವೇಶಿಸಿತು—ಎಂಬ ಅರ್ಥದ ಮಂತ್ರವು



ಬರುತ್ತದೆ. ಇಂತಹ ವಿಚಿತ್ರ ಪ್ರಾಣಿಯು ಪ್ರಪಂಚದಲ್ಲಿ ಇಲ್ಲವಾದುದರಿಂದ ಇಂತಹ ವೇದವಾಕ್ಯವು ಹೇಗೆ ಪ್ರಮಾಣವಾಗುತ್ತದೆ?

**ಸಮಾಧಾನ :** ಕವಿಗಳು ವರ್ಣಿಸುವಾಗ ಉಪಮಾನ, ರೂಪಕ ಮುಂತಾದ ಅಲಂಕಾರಗಳನ್ನು ಬಳಸುವುದುಂಟು. ವೇದವೇ ಆ ಕಲ್ಪನೆಗೆ ಮೂಲ. ಮೇಲಿನ ಮಂತ್ರದಲ್ಲಿ ಯಜ್ಞವನ್ನು ಪ್ರಶಂಸಿಸುವ ಸಮಯದಲ್ಲಿ ಯಜ್ಞವೆಂಬ ವೃಷಭವನ್ನು ಕಲ್ಪಿಸಿಕೊಂಡರೂ ಅದಕ್ಕೆ ಹೋತೃ, ಅಧ್ವರ್ಯು, ಉದ್ಗಾತೃ ಮತ್ತು ಬ್ರಹ್ಮರೇ ನಾಲ್ಕು ಶೃಂಗಗಳು. ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಪಾದಗಳು ಆ ವೃಷಭಕ್ಕೆ ಇವೆ. ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್ ಮತ್ತು ಜಗತೀ ಎಂಬ ಏಳು ಛಂದಸ್ಸುಗಳೇ ಏಳು ಹಸ್ತಗಳು. ಋಗ್ವೇದ, ಯಜುರ್ವೇದ, ಸಾಮವೇದಗಳೆಂಬ ಮೂರು ವೇದಗಳಿಂದ ಯಜ್ಞವು ಬದ್ಧವಾಗಿದೆ. ಇಷ್ಟಾರ್ಥಗಳನ್ನು ಕೊಡುವುದರಿಂದ ಅದು ವೃಷಭವೂ ಹೌದು. 'ವರ್ಷತಿ ಇತಿ ವೃಷಭಃ' ಎಂಬ ನಿರ್ವಚನದಂತೆ ಯಾವುದು ನಮಗೆ ಸುರಿಸುತ್ತದೆಯೋ ಅದು ವೃಷಭ. ವೃಷಭವು ಶಬ್ದ ಮಾಡುವಂತೆ ಯಜ್ಞವೆಂಬ ವೃಷಭದಲ್ಲಿ ಸ್ತೋತ್ರ, ಶಸ್ತ್ರ ಮೊದಲಾದ ಶಬ್ದಗಳಿವೆ. ಆದುದರಿಂದ ಆ ಮಂತ್ರಕ್ಕೆ ಆಲಂಕಾರಿಕವಾದ ರೂಪವಿದೆಯೆಂದೂ, ವಿಚಿತ್ರವಾದ ಪ್ರಾಣಿಯನ್ನು ತಿಳಿಸಲು ಆ ಮಂತ್ರವು ಹೇಳಲ್ಪಟ್ಟಿಲ್ಲವೆಂದೂ ತಿಳಿಯಬೇಕು. ಈ ಮಂತ್ರಕ್ಕೆ ಅಗ್ನಿಯ ಪರವಾಗಿಯೂ ಅರ್ಥವಿದೆ. ಪತಂಜಲಿಯು ವ್ಯಾಕರಣದ ಪರವಾಗಿಯೂ ಈ ಮಂತ್ರದ ಅರ್ಥವನ್ನು ವರ್ಣಿಸಿರುತ್ತಾನೆ.

ಹೀಗೆ ಋಗ್ವೇದಭಾಷ್ಯಭೂಮಿಕೆಯಲ್ಲಿ ಶ್ರೀ ಸಾಯಣಾಚಾರ್ಯರು ಪೂರ್ವ ಮೀಮಾಂಸಾಸೂತ್ರಗಳನ್ನು ಆಧರಿಸಿ[1] ಯುಕ್ತಿಗಳಿಂದ ವೇದದ ಎಲ್ಲ ಭಾಗಗಳೂ ಪ್ರಮಾಣಗಳಾಗಿವೆ ಎಂದು ನಿರೂಪಿಸಿರುತ್ತಾರೆ. ಜೈಮಿನಿಮಹರ್ಷಿಯು ಮಾತ್ರವಲ್ಲದೆ, ವೇದವ್ಯಾಸರು, ಆಪಸ್ತಂಬರು, ಮನುಮಹರ್ಷಿ ಮುಂತಾದ ಎಲ್ಲ ಪ್ರಾಚೀನಋಷಿಪುಂಗವರೂ ಏಕಕಂಠದಿಂದ ಧರ್ಮ ಮತ್ತು ಬ್ರಹ್ಮಗಳ ವಿಷಯದಲ್ಲಿ ವೇದವೊಂದೇ ಪ್ರಮಾಣವಾಗುವುದು ಎಂದು ಘೋಷಿಸಿದ್ದಾರೆ. ಇಂದ್ರಿಯಗಳು ಪರಿಮಿತಶಕ್ತಿಯನ್ನು ಹೊಂದಿರುವುದರಿಂದಲೂ ಪ್ರತ್ಯಕ್ಷವಲ್ಲದ ಧರ್ಮ–ಬ್ರಹ್ಮಗಳ ವಿಷಯದಲ್ಲಿ ವೇದವಲ್ಲದೇ ಮತ್ತಾವ ಗ್ರಂಥವೂ ಪ್ರಮಾಣವಾಗಲಾರದು ಎಂಬುದೇ ಎಲ್ಲ ಮುನಿಗಳ ಮತ. ಜೈಮಿನಿಮಹರ್ಷಿಗಳು,

---

1. ಜೈಮಿನಿಮಹರ್ಷಿಯ ಪೂರ್ವಮೀಮಾಂಸಾ ಸೂತ್ರಗಳು : ೧-೨-೧ ರಿಂದ ೧-೨-೧೮ ೧-೩-೩೧ ರಿಂದ ೧-೩-೫೩



**ಅಥಾತೋ ಧರ್ಮಜಿಜ್ಞಾಸಾ ।** ಎಂದು ಹೇಳಿ

**ಚೋದನಾಲಕ್ಷಣೋಽರ್ಥೋ ಧರ್ಮಃ ।**

ಎಂದು ಧರ್ಮದಲ್ಲಿ ವೇದವಿಧಿಯೇ ಪ್ರಮಾಣವೆಂದು ಪ್ರತಿಪಾದಿಸಿರುತ್ತಾರೆ.

**ಸತ್ಸಂಪ್ರಯೋಗೇ ಪುರುಷಸ್ಯೇಂದ್ರಿಯಾಣಾಂ ಬುದ್ಧಿಜನ್ಮ**
**ತತ್ಪ್ರತ್ಯಕ್ಷಮ್ । ಅನಿಮಿತ್ತಂ ವಿದ್ಯಮಾನೋಪಲಂಭನತ್ವಾತ್ ।**

ಎಂದು ಪ್ರತ್ಯಕ್ಷಾದಿಗಳು ಧರ್ಮದಲ್ಲಿ ಪ್ರಮಾಣವಾಗಲಾರವು ಎಂದು ಸಮರ್ಥಿಸಿರುತ್ತಾರೆ. ಈ ಸೂತ್ರಗಳ ವಿವರಣೆ ಹೀಗಿದೆ.

**ಸತೀಂದ್ರಿಯಾರ್ಥಸಂಬಂಧೇ ಪುರುಷಸ್ಯ ಯಾ ಬುದ್ಧಿಃ ಜಾಯತೇ ತತ್ಪ್ರತ್ಯಕ್ಷಮ್। ಭವಿಷ್ಯಂಶ್ಚ ವಿಷೋಽರ್ಥಃ (ಧರ್ಮಃ)। ನ ಜ್ಞಾನಕಾಲೇ ಅಸ್ತೀತಿ। ಅತಃ ಪ್ರತ್ಯಕ್ಷಮನಿಮಿತ್ತಂ ವಿದ್ಯಮಾನೋಪಲಂಭನತ್ವಾತ್ । ಪ್ರತ್ಯಕ್ಷಪೂರ್ವಕತ್ವಾಚ್ಚ ಅನುಮಾನಾದೀನಾಮಪಿ ಧರ್ಮೇ ನ ಪ್ರಾಮಾಣ್ಯಮ್ ।**

ಇಂದ್ರಿಯಗಳಿಗೂ ಇಂದ್ರಿಯಗ್ರಾಹ್ಯಪದಾರ್ಥಗಳಿಗೂ ಸಂಬಂಧವಿದ್ದಾಗ ಉಂಟಾಗುವ ಜ್ಞಾನವು ಪ್ರತ್ಯಕ್ಷ ಎನಿಸುತ್ತದೆ. ಕಾಲಾಂತರದಲ್ಲಿ ಫಲವನ್ನು ಕೊಡುವ ಅಪೂರ್ವರೂಪವಾದ ಅದೃಷ್ಟವಾದ ಧರ್ಮವು ಇಂದ್ರಿಯಗೋಚರವಾಗಲಾರದು. ಯಜ್ಞ ಮಾಡುತ್ತಿರುವುದನ್ನು ನೋಡಬಹುದು. ಆದರೆ ಯಜ್ಞದಿಂದ ಉಂಟಾಗುವ ಅಪೂರ್ವವು ಫಲ ಕೊಡುವುದನ್ನು ನೋಡಲು ಸಾಧ್ಯವಿಲ್ಲ. ಎದುರಿಗೆ ಇರುವುದನ್ನು ಮಾತ್ರವೇ ಕಣ್ಣು ನೋಡುತ್ತದೆ. ಆದುದರಿಂದ ಧರ್ಮದಲ್ಲಿ ವೇದವಿಧಿಯೇ ಪ್ರಮಾಣವೆಂದು ಪ್ರತಿಪಾದಿಸಿರುತ್ತಾರೆ.

ರೂಪಾದಿರಹಿತವಾದ ಪರಬ್ರಹ್ಮವಸ್ತುವನ್ನು ಪ್ರತ್ಯಕ್ಷಾದಿಪ್ರಮಾಣಗಳಿಂದ ತಿಳಿಯಲು ಸಾಧ್ಯವಿಲ್ಲ. ವೇದದಿಂದಲೇ ತಿಳಿಯಬೇಕು ಎಂದು ಬ್ರಹ್ಮಸೂತ್ರಗಳಲ್ಲಿ ಬಾದರಾಯಣರು ಪ್ರತಿಪಾದಿಸಿರುತ್ತಾರೆ. ಆಪಸ್ತಂಬರು,

**ಅಥಾತಸ್ಸಾಮಯಾಚಾರಿಕಾನ್ ಧರ್ಮಾನ್ ವ್ಯಾಖ್ಯಾಸ್ಯಾಮಃ ।**
**ಧರ್ಮಜ್ಞಸಮಯಃ ಪ್ರಮಾಣಮ್ । ವೇದಾಶ್ಚ ।**

ಎಂದು ತಮ್ಮ ಧರ್ಮಸೂತ್ರದಲ್ಲಿ ವೇದವೇ ಧರ್ಮಕ್ಕೆ ಪ್ರಮಾಣ ಎನ್ನುತ್ತಾರೆ. ವ್ಯಾಖ್ಯಾನಕಾರರು ಈ ಸೂತ್ರಗಳ ಅಭಿಪ್ರಾಯವನ್ನು ಹೀಗೆ ವಿವರಿಸಿರುತ್ತಾರೆ:

**ಧರ್ಮಜ್ಞಾನಾಂ ಮನ್ವಾದೀನಾಂ ಸಮಯಃ ಸ್ಮೃತಿರೂಪಃ ಧರ್ಮೇ ಪ್ರಮಾಣಮ್ । ಕುತಃ? ತಸ್ಯ ವೇದಮೂಲಕತ್ವಾತ್ । ವೇದಾನಾಂ ಚ ಅಪೌರುಷೇಯತ್ವಾತ್ । ಸ್ವತಃ ಪ್ರಮಾಣತ್ವಾಚ್ಚ ।**



ಸ್ಮೃತಿಮೂಲಕವಾದ, ಶಿಷ್ಟಾಚಾರಮೂಲಕವಾದ ಧರ್ಮಗಳನ್ನು ಹೇಳುತ್ತೇವೆ. ಧರ್ಮಜ್ಞರಾದ ಮನುವೇ ಮೊದಲಾದವರ ಸಮಯವು (ಸ್ಮೃತಿಯು) ಧರ್ಮದಲ್ಲಿ ಪ್ರಮಾಣಗಳಾಗುತ್ತವೆ. ಸ್ಮೃತಿಗಳು ತಮಗೆ ಮೂಲಭೂತವಾದ ಶ್ರುತಿಯನ್ನು ಕಲ್ಪಿಸಿ ಅದರ ಮೂಲಕ ಧರ್ಮದಲ್ಲಿ ಪ್ರಮಾಣಗಳಾಗುತ್ತವೆ. ಹೀಗೆ ವೇದಗಳೇ ಧರ್ಮದಲ್ಲಿ ಪ್ರಮಾಣಗಳಾಗಿವೆ.

## ಏಕದೇಶಪ್ರಾಮಾಣ್ಯವಾದ

ಇತ್ತೀಚಿನ ಮತಗಳಲ್ಲಿ ಆರ್ಯಸಮಾಜದವರು ವೇದಗಳಿಗೆ ಹೆಚ್ಚಿನ ಪ್ರಾಮಾಣ್ಯವನ್ನು ಕೊಡತಕ್ಕವರು. ಆದರೆ ಅವರು ಬ್ರಾಹ್ಮಣಭಾಗಕ್ಕೆ ಪ್ರಾಮಾಣ್ಯ ವುಂಟೆಂದು ಒಪ್ಪುವುದಿಲ್ಲ. ವಿಗ್ರಹಾರಾಧನೆಯನ್ನೂ ಒಪ್ಪುವುದಿಲ್ಲ. ಇದನ್ನು ಏಕದೇಶಪ್ರಾಮಾಣ್ಯವಾದ—ವೇದದ ಒಂದು ಭಾಗ ಮಾತ್ರ ಪ್ರಮಾಣವಾಗುತ್ತದೆ ಎನ್ನುವ ವಾದ—ಎನ್ನಬಹುದು.

ವೇದಗಳ ಅರ್ಥವನ್ನು ತಿಳಿದುಕೊಳ್ಳಲು ಯತ್ನಿಸುವಾಗ ಒಂದು ಮುಖ್ಯ ಅಂಶವನ್ನು ಮನಸ್ಸಿನಲ್ಲಿಡಬೇಕು. ಅದು "ನ ಹಿ ನಿಂದಾನ್ಯಾಯ."

## ನಿಂದೆಯ ಮರ್ಮ

ಅಗ್ನಿಹೋತ್ರಹೋಮದಲ್ಲಿ 'ಉದಿತಹೋಮ, ಅನುದಿತಹೋಮ' ಎಂಬ ಎರಡು ಪಕ್ಷಗಳಿವೆ[1]. ಉದಿತಹೋಮದ ವಿಚಾರ ಬಂದಾಗ

**ಸಾಯಂ ಪ್ರಾತರನೃತಂ ತೇ ವದಂತಿ ಪುರೋದಯಾಜ್ಜುಹ್ವತಿ ಯೇಽಗ್ನಿ ಹೋತ್ರಮ್ । ಸೂರ್ಯೋ ಜ್ಯೋತಿರಿತಿ ಮಂತ್ರಂ ವದಂತಃ ಸೂರ್ಯೋ ಜ್ಯೋತಿರ್ನ ತದಾ ಜ್ಯೋತಿರೇಷಾಮ್ ॥**

ಸೂರ್ಯನು ಹುಟ್ಟುವ ಮೊದಲು ಹೋಮ ಮಾಡುವವರು ಸೂರ್ಯನೇ ಜ್ಯೋತಿ

---

1. ಅಗ್ನಿಹೋತ್ರವನ್ನು ಯಾವ ಕಾಲದಲ್ಲಿ ಮಾಡಬೇಕೆಂಬ ವಿಚಾರ ಬಂದಾಗ ಉದಿತೇ ಜುಹೋತಿ, ಅನುದಿತೇ ಜುಹೋತಿ ಎಂಬ ಎರಡು ವೇದವಾಕ್ಯಗಳಿರುವುದರಿಂದ ಅಗ್ನಿಹೋತ್ರವನ್ನು ಸೂರ್ಯನು ಹುಟ್ಟುವ ಮೊದಲು ಮಾಡಬೇಕೆಂದೂ ಸೂರ್ಯನು ಹುಟ್ಟಿನ ನಂತರ ಮಾಡಬೇಕೆಂದೂ ಎರಡು ಪಕ್ಷಗಳೂ ಇವೆ. ವಿರೋಧೇ ವಿಕಲ್ಪಃ ಎಂಬ ಮಾತಿನಂತೆ ಎರಡು ವೇದವಾಕ್ಯಗಳಿಗೆ ವಿರೋಧ ಬಂದಾಗ ವೇದವಾಕ್ಯಗಳು ಪ್ರಮಾಣವಾದುದರಿಂದ ಎರಡೂ ರೀತಿಯಲ್ಲಿ ಹೋಮಮಾಡಲು ಶಾಸ್ತ್ರಗಳು ಅವಕಾಶವನ್ನು ಕಲ್ಪಿಸಿಕೊಡುತ್ತವೆ. ಹೀಗಿರುವಾಗ ಒಂದು ಪಕ್ಷದ ವಿಚಾರ ಬಂದಾಗ ಇನ್ನೊಂದು ಪಕ್ಷವನ್ನು ನಿಂದಿಸುವುದು ವೇದದಲ್ಲಿ ಕಾಣುತ್ತದೆ. ಆದರೆ ಅಂತಹ ಸಂದರ್ಭಗಳಲ್ಲಿ "ನ ಹಿ ನಿಂದಾನ್ಯಾಯ" ವನ್ನು ಅನ್ವಯಿಸಿಕೊಳ್ಳಬೇಕು.



ಎಂದು ನಿತ್ಯವೂ ಸುಳ್ಳು ಹೇಳುತ್ತಾರೆ. ಏಕೆಂದರೆ ಅವರು ಹೋಮ ಮಾಡುವಾಗ ಸೂರ್ಯನು ಹುಟ್ಟಿಯೇ ಇರುವುದಿಲ್ಲ ಎಂದು ಅನುದಿತಹೋಮದ ನಿಂದೆ ಇದೆ. ಹಾಗೆಯೇ ಅನುದಿತಹೋಮದ ವಿಚಾರ ಬಂದಾಗ

**ಯಥಾತಿಥಯೇ ಪ್ರದ್ರುತಾಯ ಶೂನ್ಯಾಯಾವಸಥಾಯಾಹಾರ್ಯಗ್ಂ ಹರಂತಿ । ತಾದೃಗೇವ ತತ್ ।**

ಸೂರ್ಯನು ಉದಿಸಿದ ನಂತರ ಹೋಮ ಮಾಡುವುದು ಅತಿಥಿಯು ಹೊರಟು ಹೋದ ಮೇಲೆ ಅವನಿಗಾಗಿ ಅನ್ನವನ್ನು ತೆಗೆದುಕೊಂಡು ಹೋದಂತೆ ಎಂದು ಉದಿತ ಹೋಮದ ನಿಂದೆ ಇದೆ.

ಆದುದರಿಂದ ಇಲ್ಲಿ ಪರಸ್ಪರ ವಿರೋಧವಿದೆಯೆಂದು ಭಾವಿಸಬಾರದು. ಉದಿತಹೋಮವನ್ನಾದರೂ ಮಾಡಬಹುದು; ಅನುದಿತಹೋಮವನ್ನಾದರೂ ಮಾಡಬಹುದು. ಆದರೆ 'ಪ್ರಕ್ರಮಾತ್ತು ನಿಯಮ್ಯೇತ' ಎಂದರೆ ಅಗ್ನಿಹೋತ್ರವನ್ನು ಮೊಟ್ಟಮೊದಲು ಆರಂಭಿಸಿದಾಗ ಹೇಗೆ ಆರಂಭಿಸುತ್ತಾರೆಯೋ ಹಾಗೆಯೇ ಮುಂದುವರಿಸಬೇಕು ಎಂದರ್ಥ. ಹೀಗೆ ಎರಡು ವೇದವಾಕ್ಯಗಳೂ ಪ್ರಮಾಣಗಳೇ.

ಹೀಗೆಯೇ ಸ್ಮೃತಿಪುರಾಣಾದಿಗಳಲ್ಲಿಯೂ ಕರ್ಮಮಾರ್ಗದ ಪ್ರಶಂಸೆ ಮಾಡುವಾಗ ಜ್ಞಾನದ ನಿಂದೆಯೂ ಜ್ಞಾನದ ಪ್ರಶಂಸೆ ಮಾಡುವಾಗ ಕರ್ಮ ನಿಂದೆಯೂ ಕಂಡುಬರುತ್ತದೆ.

ಉಳಿದ ಆಶ್ರಮಗಳನ್ನು ಪ್ರಶಂಸೆ ಮಾಡುವಾಗ ಆಪಸ್ತಂಬರು :

**ಅಷ್ಟಾಶೀತಿಸಹಸ್ರಾಣಿ ಯೇ ಪ್ರಜಾಮೀಶಿರ ಋಷಯಃ ।**
**ದಕ್ಷಿಣೇನಾರ್ಯಮ್ಣಃ ಪಂಥಾನಂ ತೇ ಶ್ಮಶಾನಾನಿ ನಾಭೇಜಿರೇ ॥**

ಎಂಬತ್ತೆಂಟು ಸಾವಿರ ಋಷಿಗಳು ಗೃಹಸ್ಥರಾಗಿ, ಸಂತತಿಯನ್ನು ಪಡೆದು ಸೂರ್ಯಮಂಡಲದ ದಕ್ಷಿಣಮಾರ್ಗದಿಂದ ಪಿತೃಲೋಕವನ್ನು ಸೇರಿದರು.

ಎಂದು ಗೃಹಸ್ಥಾಶ್ರಮವನ್ನು ನಿಂದಿಸಿರುತ್ತಾರೆ.

**ಅಷ್ಟಾಶೀತಿಸಹಸ್ರಾಣಿ ಯೇ ಪ್ರಜಾಂ ನೇಶಿರ ಋಷಯಃ ।**
**ಉತ್ತರೇಣಾರ್ಯಮ್ಣಃ ಪಂಥಾನಂ ತೇಽಮೃತತ್ವಾಯ ಕಲ್ಪತೇ ॥**

ಗೃಹಸ್ಥಾಶ್ರಮವನ್ನು ಸ್ವೀಕರಿಸಿದೆ ಸಾಧನೆಯನ್ನು ಮಾಡಿದ ಎಂಬತ್ತೆಂಟು ಸಾವಿರ ಋಷಿಗಳು ಸೂರ್ಯಮಂಡಲದ ಉತ್ತರಮಾರ್ಗದಿಂದ ಅಮೃತತ್ವವನ್ನು ಪಡೆದರು. ಎಂದು ಉಳಿದ ಆಶ್ರಮಗಳ ಪ್ರಶಂಸೆಯನ್ನೂ ಮಾಡಿರುತ್ತಾರೆ.



ಗೃಹಸ್ಥಾಶ್ರಮವು ಎಲ್ಲಾ ಆಶ್ರಮದವರಿಗೂ ಆಶ್ರಯವೆಂದೂ, ಅಂತ್ಯಸಂಸ್ಕಾರವೂ ಒಂದು ಇಷ್ಟಿಯೆಂದೂ ಹೊಗಳಿರುತ್ತಾರೆ.

ಇಂತಹ ಕಡೆಗಳಲ್ಲೂ 'ನ ಹಿ ನಿಂದಾನ್ಯಾಯ' ವನ್ನು ಅನ್ವಯಿಸಿಕೊಳ್ಳಬೇಕು.

ಮತ್ತೆ ಕೆಲವರು 'ಮಾನವನಿಗೆ ಪರಮಪುರುಷಾರ್ಥವು ಮೋಕ್ಷ. ಆದರ ಸಾಧನೆಯ ಕಡೆಗೇ ಮಾನವನ ಗುರಿಯಿರಬೇಕೇ ಹೊರತು ಈ ಕರ್ಮಮಾರ್ಗಕ್ಕಲ್ಲ" ಎನ್ನುತ್ತಾರೆ. ಇದೂ ಒಂದು ವಿಧದಲ್ಲಿ ಏಕದೇಶಪ್ರಾಮಾಣ್ಯವಾದವೇ.

ಪುರಾತನಕಾಲದಿಂದಲೂ ಬ್ರಾಹ್ಮಣಸಹಿತವಾದ ಮಂತ್ರಭಾಗಕ್ಕೆ ವೇದವೆಂಬ ವ್ಯವಹಾರವಿದೆ. ಶಬ್ದಾರ್ಥವ್ಯವಹಾರವನ್ನೇ ಗಮನಿಸದೆ ಕೇವಲ ಮಂತ್ರಭಾಗವೇ ಪ್ರಮಾಣವೆಂದು ಭಾವಿಸುವುದು ಸರಿಯಲ್ಲ. ಹಾಗೆಯೇ ಕರ್ಮಮಾರ್ಗವನ್ನೂ, ಯಜ್ಞಗಳನ್ನೂ ವೇದಗಳಲ್ಲಿಯೇ ಹೇಳಿರುವಾಗ ಆ ಭಾಗವು ಬೇಕಿಲ್ಲವೆನ್ನುವುದೂ ಸರಿಯಲ್ಲ.

ಒಂದು ಭಾಗಕ್ಕೆ ಪ್ರಾಮಾಣ್ಯವಿಲ್ಲವೆಂದರೆ ಮತ್ತೊಂದು ಭಾಗಕ್ಕೂ ಸಹ ಪ್ರಾಮಾಣ್ಯವಿಲ್ಲವೆಂದೇ ಆಗುತ್ತದೆ.

ನ ಹಿ ನಿಂದಾನ್ಯಾಯದಂತೆಯೇ ಗಮನಿಸಬೇಕಾದ ಮತ್ತೊಂದು ಅಂಶ 'ಸಮನ್ವಯ'. ನಮ್ಮ ವೈದಿಕಧರ್ಮವು ಸಮನ್ವಯಪ್ರಧಾನವಾದುದು. ವೇದದಲ್ಲಿಯೇ ಕೆಲವೊಮ್ಮೆ ಪರಸ್ಪರ ವಿರೋಧವಿರುವಂತೆ ತೋರುತ್ತದೆ. ಆದರೆ ವಾಸ್ತವವಾಗಿ ವಿರೋಧವಿಲ್ಲ.

**ಸಮನ್ವಯವೇ ತಾರಕ**

ಮಾನವನಿಗೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳೂ ಬೇಕು. ಎಲ್ಲರೂ ಎಲ್ಲವನ್ನೂ ಏಕಕಾಲದಲ್ಲಿಯೇ ಸಾಧಿಸಲು ಸಾಧ್ಯವಿಲ್ಲ. ತಮ್ಮ ತಮ್ಮ ಶಕ್ತಿಗೆ ತಕ್ಕಂತೆ ಬೇರೆ ಬೇರೆಯವರು ಬೇರೆಬೇರೆಯ ದಾರಿಗಳನ್ನು ಹಿಡಿಯಬಹುದು.

ಹಾಗೆಯೇ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳೂ ಬೇಕು. ಮೋಕ್ಷವು ಪರಮಪುರುಷಾರ್ಥ. ಆದರೆ ಅದಕ್ಕೆ ಬೇಕಾದ ವಿರಕ್ತಿ ಮೊದಲಾದುವು ಎಲ್ಲರಿಗೂ ಇರುವುದಿಲ್ಲ. ಆದುದರಿಂದ ಕರ್ಮಮಾರ್ಗದಿಂದ ಚಿತ್ತಶುದ್ಧಿಯನ್ನು ಪಡೆದು ಅನಂತರ ಮೋಕ್ಷಕ್ಕಾಗಿ ಯತ್ನಿಸಬಹುದು.

ಆದರಂತೆಯೇ ಬೇರೆಬೇರೆಯ ವೃತ್ತಿಯನ್ನು ಅವಲಂಬಿಸಿರುವ ಜನರೂ ಸಮಾಜದ ಹಿತದೃಷ್ಟಿಯಿಂದ ಇರಲೇಬೇಕು.



ಹೀಗೆ ವ್ಯಕ್ತಿಯ ಜೀವನದಲ್ಲಿ ಸಮನ್ವಯ ; ಕುಟುಂಬದಲ್ಲಿ ಸಮನ್ವಯ; ಗ್ರಾಮದಲ್ಲಿ ಸಮನ್ವಯ; ದೇಶದಲ್ಲಿ ಸಮನ್ವಯ; ವಿಶ್ವದಲ್ಲಿ ಸಮನ್ವಯ; ಹೀಗೆ ಸಮನ್ವಯದೃಷ್ಟಿಯಿಂದ ಬಾಳಿದಾಗ ಮಾತ್ರ ವಿಶ್ವಶಾಂತಿಯು ಮೂಡಬಲ್ಲುದು.

ತೈತ್ತಿರೀಯೋಪನಿಷತ್ತಿನಲ್ಲಿ ಸತ್ಯ, ತಪಸ್ಸು, ದಮ, ಶಮ, ದಾನ, ಧರ್ಮ, ಯಜ್ಞ, ಅಗ್ನಿಹೋತ್ರ, ಅಗ್ನಿ, ಪ್ರಜನನ, ಮಾನಸ, ನ್ಯಾಸ ಇವುಗಳನ್ನು ಪರಮ ಶ್ರೇಷ್ಠವಾದುವೆಂದು ಹೇಳಿರುತ್ತಾರೆ. ಇಂತಹ ಗುಣಗಳನ್ನು ಬೆಳೆಸಿಕೊಳ್ಳಬೇಕು.

**ಸಮಾನೀ ವ ಆಕೂತಿಃ । ಸಮಾನಾ ಹೃದಯಾನಿ ವಃ ।**

**ಸಮಾನಮಸ್ತು ವೋ ಮನಃ । ಯಥಾ ವಸ್ಸುಸಹಾಸತಿ ॥**

ತೈ.ಬ್ರಾ. ೨-೪

ನಿಮ್ಮೆಲ್ಲರ ಸಂಕಲ್ಪವೂ ಒಂದಾಗಲಿ; ನಿಮ್ಮ ಅಂತಃಕರಣಗಳೂ ಒಂದಾಗಲಿ; ನಿಮ್ಮ ಮನಸ್ಸೂ ಒಂದಾಗಲಿ; ಎಲ್ಲರೂ ಒಳ್ಳೆಯ ರೀತಿಯಲ್ಲಿ ಸಹಜೀವನವನ್ನು ಸಾಗಿಸುವಂತಾಗಲಿ.

ಇಂತಹ ಸಮನ್ವಯಭಾವನೆಯು ಎಲ್ಲರಲ್ಲಿಯೂ ಮೂಡಲಿ.

## ಅಚಲ ಶ್ರದ್ಧೆ

ಅನೇಕ ಶಾಖೆಗಳನ್ನೊಳಗೊಂಡಿರುವ ಛಂದಸ್ಸುಗಳಿಂದ ಅಲಂಕೃತವಾದ ಅಪೌರುಷೇಯವಾದ ಪ್ರಮಾಣಮೂರ್ಧನ್ಯವಾದ ವೇದದ ಸ್ಥೂಲಪರಿಚಯವಾದಂತಾಯಿತು. ಇಂತಹ ಅನುಪಮವಾದ ವೇದಗಳ ಅಧ್ಯಯನಪರಂಪರೆಯು ನಮ್ಮ ದೇಶದಲ್ಲಿ ಸಾವಿರಾರು ವರ್ಷಗಳಿಂದ ಅವ್ಯಾಹತವಾಗಿ ನಡೆದುಬರುತ್ತಿದೆ. ವೇದವು ಶ್ರುತಿಯಾಗಿರುವುದರಿಂದ ಕಿವಿಯಿಂದ ಕೇಳಿ ಸ್ವರ–ವರ್ಣಗಳು ಸ್ವಲ್ಪವೂ ವ್ಯತ್ಯಾಸವಾಗದಂತೆ ಉಚ್ಚಾರಣಪದ್ಧತಿಯನ್ನು ರಕ್ಷಿಸಿಕೊಂಡು ಬರಲಾಗಿದೆ. ನಮ್ಮ ಪೂರ್ವಿಕರು ವೇದಾಧ್ಯಯನವನ್ನು ಒಂದು ಕರ್ತವ್ಯ ಎಂದೇ ಭಾವಿಸಿದ್ದರು. ಪತಂಜಲಿಮಹರ್ಷಿಯ ಮಹಾಭಾಷ್ಯದಲ್ಲಿ,

**ಬ್ರಾಹ್ಮಣೇನ ನಿಷ್ಕಾರಣೋ ಧರ್ಮಃ ಷಡಂಗೋ ವೇದೋಽಧ್ಯೇಯೋ ಜ್ಞೇಯಶ್ಚ**

ಎಂಬ ವಚನವನ್ನು ಉಲ್ಲೇಖಿಸಲಾಗಿದೆ. ಯಾವ ಪ್ರತಿಫಲವನ್ನೂ ಬಯಸದೆ, ಬ್ರಾಹ್ಮಣನಾದವನು ವೇದವನ್ನು ಅಧ್ಯಯನ ಮಾಡಬೇಕು. ಅದರೊಡನೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ ಮತ್ತು ಕಲ್ಪಗಳೆಂಬ ಆರು ವೇದಾಂಗಗಳನ್ನೂ ಅವಶ್ಯವಾಗಿ ಅಧ್ಯಯನ ಮಾಡಬೇಕು. ಈ ಮಾತನ್ನು ನಮ್ಮ



ಪೂರ್ವಿಕರು ಅತ್ಯಂತ ಶ್ರದ್ಧೆಯಿಂದ ಅನುಸರಿಸುತ್ತಾ ಬಂದುದರಿಂದ ಇಂದಿಗೂ ವೇದವು ಕೊಂಚವಾದರೂ ಉಳಿದಿದೆ.

ವೇದಗಳ ಅಧ್ಯಯನಸೌಕರ್ಯಕ್ಕಾಗಿ ಸಂಹಿತೆ, ಬ್ರಾಹ್ಮಣ ಮತ್ತು ಅರಣ್ಯಕಗಳನ್ನು ಅನೇಕ ರೀತಿಯಲ್ಲಿ ವಿಭಾಗ ಮಾಡಿಕೊಳ್ಳಲಾಗಿದೆ. ಆ ವಿಭಾಗಗಳ ರೀತಿಯನ್ನೂ, ಅವುಗಳ ಹೆಸರುಗಳನ್ನೂ ತಿಳಿಯೋಣ.

## ಸಂಹಿತೆಗಳ ಅಧ್ಯಯನಕ್ರಮ

**ಋಗ್ವೇದ :** ಋಗ್ವೇದಸಂಹಿತೆಯನ್ನು ಅಧ್ಯಯನಸೌಕರ್ಯಕ್ಕಾಗಿ ಹತ್ತು ಭಾಗಗಳನ್ನಾಗಿ ಮಾಡಲಾಗಿದೆ. ಅವುಗಳಿಗೆ 'ಮಂಡಲಗಳು' ಎಂದು ಹೆಸರು. ಪ್ರತಿಯೊಂದು ಮಂಡಲದಲ್ಲಿಯೂ ಮುಖ್ಯವಾಗಿ ಒಬ್ಬ ಋಷಿ ಅಥವಾ ಆ ಋಷಿಯ ಗುಂಪಿನವರು ಕಂಡ ಮಂತ್ರಗಳ ಸಮೂಹವು ಸೇರಿದೆ. ಪ್ರತಿಯೊಂದು ಮಂಡಲಕ್ಕೂ ಒಬ್ಬೊಬ್ಬ ದೇವತೆಯು ಇರುತ್ತಾನೆ. ಆದರೆ ಈ ಕ್ರಮ 1, 9, ಮತ್ತು 10ನೆಯ ಮಂಡಲಗಳಲ್ಲಿ ಬೇರೆಯಾಗಿದೆ. ಆ ಮಂಡಲಗಳಲ್ಲಿ ಬೇರೆ ಬೇರೆ ಗುಂಪಿನ ಅನೇಕ ಋಷಿಗಳು ಕಂಡ ಮಂತ್ರಗಳಿವೆ. 9ನೆಯ ಮಂಡಲದಲ್ಲಿ ಋಷಿಗಳು ಅನೇಕ, ಪವಮಾನಸೋಮನೆಂಬ ಒಬ್ಬನೇ ದೇವತೆ.

ಈ ಮೂರು ಮಂಡಲಗಳನ್ನು ಬಿಟ್ಟರೆ, ಉಳಿದ 2, 3, 4, 5, 6, 7 ಮತ್ತು 8ನೆಯ ಮಂಡಲಗಳ ಮಂತ್ರಗಳನ್ನು ಕಂಡವರು ಕ್ರಮವಾಗಿ ಋಷಿಗಳಾದ ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಠ ಮತ್ತು ಕಣ್ವರು.

ಪ್ರತಿಯೊಂದು ಮಂಡಲವನ್ನು ಅನುವಾಕಗಳನ್ನಾಗಿಯೂ, ಅನುವಾಕಗಳನ್ನು ಸೂಕ್ತಗಳನ್ನಾಗಿಯೂ ವಿಂಗಡಿಸಲಾಗಿದೆ. ಸಾಮಾನ್ಯವಾಗಿ ಒಂದೇ ದೇವತೆಯನ್ನು ಉದ್ದೇಶಿಸಿದ ಮಂತ್ರಗಳ ಸಮುದಾಯವು 'ಸೂಕ್ತ' ಎನಿಸಿಕೊಳ್ಳುತ್ತದೆ. ಅಂತಹ ಅನೇಕ ಸೂಕ್ತಗಳನ್ನು ಒಬ್ಬನೇ ಋಷಿಯು ಕಂಡಿರುವುದೂ ಉಂಟು. ಮೊದಲನೆಯ ಮಂಡಲದಲ್ಲಿ ಸಾಮಾನ್ಯವಾಗಿ ನೂರು ಮಂತ್ರಗಳಿಗೆ ಒಬ್ಬ ಋಷಿಯಿರುವುದರಿಂದ ಅವರನ್ನು 'ಶತರ್ಚಿನರು' ಎಂದು ಕರೆಯುತ್ತಾರೆ.

ಋಗ್ವೇದದ ಮಂತ್ರಗಳನ್ನು ಮಂಡಲಗಳನ್ನಾಗಿ ವಿಭಾಗ ಮಾಡಿದ್ದಾರಷ್ಟೆ. ಆ ಮಂಡಲಗಳು ಸಮಪ್ರಮಾಣವಾಗಿಲ್ಲ. ಕೆಲವು ದೊಡ್ಡ ಮಂಡಲಗಳು, ಮತ್ತೆ ಕೆಲವು ಚಿಕ್ಕವು. ಆದುದರಿಂದ ಅಧ್ಯಯನದ ಸೌಕರ್ಯಕ್ಕಾಗಿ ಋಗ್ವೇದವನ್ನು ಎಂಟು ಅಷ್ಟಕಗಳನ್ನಾಗಿ ವಿಂಗಡಿಸಿದ್ದಾರೆ. ಒಂದೊಂದು ಅಷ್ಟಕದಲ್ಲಿ ಎಂಟೆಂಟು ಅಧ್ಯಾಯಗಳಿವೆ. ಆ ಅಧ್ಯಾಯಗಳನ್ನು ವರ್ಗಗಳನ್ನಾಗಿ ವಿಂಗಡಿಸಿದ್ದಾರೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ಸುಮಾರು ಅಷ್ಟೇ ಸಂಖ್ಯೆಯ ಮಂತ್ರಗಳಿರುವುದರಿಂದ ಅಧ್ಯಯನ ಮಾಡುವವರಿಗೆ ಈ ವಿಭಾಗವು ಹೆಚ್ಚು ಸೌಕರ್ಯದಿಂದ ಕೂಡಿದೆ.



## ಋಗ್ವೇದದ ಮಂಡಲಗಳ ವಿವರ

| ಮಂಡಲದ ಸಂಖ್ಯೆ | ಅನುವಾಕಗಳು | ಸೂಕ್ತಗಳ ಸಂಖ್ಯೆ | ಮಂತ್ರಗಳ ಸಂಖ್ಯೆ |
|---|---|---|---|
| 1 | 24 | 191 | 2006 |
| 2 | 4 | 43 | 429 |
| 3 | 5 | 62 | 617 |
| 4 | 5 | 58 | 589 |
| 5 | 6 | 87 | 727 |
| 6 | 6 | 75 | 765 |
| 7 | 6 | 104 | 841 |
| 8 | 10 | 103 | 1716 |
| 9 | 7 | 114 | 1108 |
| 10 | 12 | 191 | 1754 |
| ಒಟ್ಟು 10 | 85 | 1028 | 10.552 |

ಋಗ್ವೇದಸಂಹಿತೆಯಲ್ಲಿ ಒಟ್ಟು 1028 ಸೂಕ್ತಗಳಿವೆಯಷ್ಟೆ. ಅವುಗಳಲ್ಲಿ ಹನ್ನೊಂದು ಸೂಕ್ತಗಳು 'ವಾಲಖಿಲ್ಯ' ಸೂಕ್ತಗಳು. ಇದಲ್ಲದೆ 'ಖಿಲ' ಎಂದು ಕರೆಯಲ್ಪಡುವ ಮೂವತ್ತಾರು ಸೂಕ್ತಗಳೂ ಉಂಟು. 'ಖಿಲ' ಎಂದರೆ ಇತರ ಶಾಖೆಗಳಿಗೆ ಸೇರಿದ್ದು, ವಿಶೇಷಕಾರಣಗಳಿಂದ ಋಗ್ವೇದದಲ್ಲಿ ಸೇರಿಸಲ್ಪಟ್ಟಿರುವ ಸೂಕ್ತಗಳು.

**ಪರಶಾಖೀಯಂ ಸ್ವಶಾಖಾಯಾಮಪೇಕ್ಷಾವಶಾತ್ ಪಠ್ಯತೇ ತತ್ ಖಿಲಮುಚ್ಯತೇ**

ಇವುಗಳನ್ನು ಪರಿಶಿಷ್ಟ ಎಂದೂ ಕರೆಯುತ್ತಾರೆ. ಶ್ರೀಸೂಕ್ತ, ರಾತ್ರಿಸೂಕ್ತ ಇತ್ಯಾದಿಗಳು ಪ್ರಸಿದ್ಧವಾದ ಖಿಲಸೂಕ್ತಗಳು.

**ಯಜುರ್ವೇದ :** ಯಜುರ್ವೇದದಲ್ಲಿ ಶುಕ್ಲಯಜುರ್ವೇದ ಮತ್ತು ಕೃಷ್ಣಯಜುರ್ವೇದವೆಂಬ ಎರಡು ವಿಭಾಗಗಳಿವೆ.[1] ಕೃಷ್ಣಯಜುರ್ವೇದದಲ್ಲಿ ಮಂತ್ರ ಮತ್ತು ಬ್ರಾಹ್ಮಣಗಳ ಮಿಶ್ರಣವಿದೆ. ಶುಕ್ಲಯಜುರ್ವೇದದಲ್ಲಿ ಮಂತ್ರಗಳ ಅಳವಡಿಕೆಯು ಒಂದೇ ಕಡೆಗೆ ಇದೆ. ಶುಕ್ಲಯಜುರ್ವೇದವನ್ನು ಕಂಡವರು ಯಾಜ್ಞವಲ್ಕ್ಯ ಮಹರ್ಷಿ

1. ಈ ಸಂಪುಟದ ಮುಂದಿನ ಭಾಗವಾದ "ಕೃಷ್ಣಯಜುರ್ವೇದದ ಪರಿಚಯ"ದಲ್ಲಿ ಯಜುರ್ವೇದದ ಬಗ್ಗೆ ವಿಸ್ತಾರವಾಗಿ ತಿಳಿಸಲಾಗುವುದು. ಆದುದರಿಂದ ಇಲ್ಲಿ ಅದರ ಪರಿಚಯವನ್ನು ಅತಿಸಂಕ್ಷಿಪ್ತವಾಗಿ ಕೊಡಲಾಗಿದೆ.



ಗಳು. ಶುಕ್ಲಯಜುರ್ವೇದದಲ್ಲಿ 40 ಅಧ್ಯಾಯಗಳೂ, 1971 ಕಂಡಿಕೆ (ಉಪವಿಭಾಗ) ಗಳೂ ಇವೆ. ಕೃಷ್ಣಯಜುರ್ವೇದದ ಸಂಹಿತೆಯಲ್ಲಿ 7 ಕಾಂಡಗಳಿವೆ ಮತ್ತು 44 ಪ್ರಪಾಠಕಗಳಿವೆ.

ಸಾಮವೇದ : ಋಗ್ವೇದದ ಮಂತ್ರಗಳೇ ಬಹುಮಟ್ಟಿಗೆ ಸಾಮವೇದದಲ್ಲಿ ಇವೆ. 'ಋಚ್ಯಧ್ಯೂಢಂ ಸಾಮ' ಎಂಬ ವಚನವು ಋಕ್ಕುಗಳಿಗೆ ಗಾನವನ್ನು ಅಳವಡಿಸಿದಾಗ ಅದನ್ನು ಸಾಮವೆಂದು ಕರೆಯುತ್ತಾರೆ ಎಂದು ತಿಳಿಸುತ್ತದೆ. ಸಾಮವೇದದ ಒಂದು ಭಾಗವನ್ನು 'ಛಂದ' ಅಥವಾ 'ಛಂದಸಿಕಾ' ಎಂದು ಕರೆಯುವುದರಿಂದ ಸಾಮವೇದಿಗಳನ್ನು 'ಛಂದೋಗ'ರೆಂದು ಕರೆಯುತ್ತಾರೆ.

ಸಾಮವೇದದ ಸಂಹಿತೆಯಲ್ಲಿ ಪೂರ್ವಾರ್ಚಿಕ ಮತ್ತು ಉತ್ತರಾರ್ಚಿಕ ಎಂಬ ಎರಡು ಭಾಗಗಳಿವೆ. ಪೂರ್ವಾರ್ಚಿಕವನ್ನು ಛಂದ, ಛಂದಸೀ, ಛಾಂದಸಿಕಾ ಎಂದು ಕರೆಯುತ್ತಾರೆ. ಈ ಪೂರ್ವಾರ್ಚಿಕವನ್ನು ಆರು ಪ್ರಪಾಠಕಗಳನ್ನಾಗಿ ವಿಂಗಡಿಸಲಾಗಿದೆ. ಪ್ರತಿಯೊಂದು ಪ್ರಪಾಠಕದಲ್ಲಿಯೂ ಹತ್ತು ಗೀತಿಗಳು ಇವೆ. ಕೊನೆಯ ಪ್ರಪಾಠಕದಲ್ಲಿ ಮಾತ್ರ ಒಂಬತ್ತು ಗೀತಿಗಳು ಇವೆ. ಈ ಪೂರ್ವಾರ್ಚಿಕವನ್ನು ಇನ್ನೊಂದು ರೀತಿಯಾಗಿ ವಿಂಗಡಿಸಿರುತ್ತಾರೆ. ಆಗ್ನೇಯ, ಐಂದ್ರ, ಪವಮಾನ, ಅರುಣ ಮತ್ತು ಶುಕ್ರಿಯ ಇವೇ ಐದು ವಿಭಾಗಗಳು. ಅಗ್ನಿ, ಇಂದ್ರ ಮತ್ತು ವಾಯುಗಳು ಆ ಸಾಮಗಳ ದೇವತೆಗಳಾದುದರಿಂದಲೂ, ಅರುಣನೂ ಶುಕ್ರಾಚಾರ್ಯರೂ ಲೋಕದಲ್ಲಿ ಆ ಸಾಮವನ್ನು ಪ್ರಚಾರಮಾಡಿದುದರಿಂದಲೂ ಆ ಹೆಸರುಗಳು ಇವೆ. ಅರುಣ ಮತ್ತು ಶುಕ್ರಿಯಸಾಮಗಳಿಗೆ ಪರಮಾತ್ಮನೇ ದೇವತೆ.

ಪೂರ್ವಾರ್ಚಿಕದ ಸಾಮಗಳನ್ನು ಪ್ರಕೃತಿ ಎಂದೂ, ಉತ್ತರಾರ್ಚಿಕದ ಸಾಮಗ್ರಂಥವನ್ನು ಊಹ ಮತ್ತು ರಹಸ್ಯ ಎಂದೂ ಕರೆಯುತ್ತಾರೆ. ಪೂರ್ವಾರ್ಚಿಕದ ಕಡೆಯಲ್ಲಿ ಬರುವ'ಮಹಾನಾಮ್ನೀಂ' ಎಂಬ ಭಾಗವನ್ನು ಕೆಲವರು ಪೂರ್ವಾರ್ಚಿಕವೆಂದೇ ಅಧ್ಯಯನ ಮಾಡುತ್ತಾರೆ. ಕೆಲವರು ಅದನ್ನು ಪ್ರತ್ಯೇಕ ಭಾಗವೆಂದು ತಿಳಿಯುತ್ತಾರೆ.

ಉತ್ತರಾರ್ಚಿಕದಲ್ಲಿ ದಾಶರಾತ್ರ, ಸಂವತ್ಸರ, ಐಕಾಹ, ಪ್ರಾಯಶ್ಚಿತ್ತ ಮತ್ತು ಕ್ಷುದ್ರ ಎಂಬ ಐದು ವಿಭಾಗಗಳನ್ನು ಮಾಡಿ ಅಧ್ಯಯನವನ್ನು ಮಾಡುತ್ತಾರೆ.

ಪೂರ್ವಾರ್ಚಿಕದಲ್ಲಿ 585 ಮಂತ್ರಗಳೂ, ಉತ್ತರಾರ್ಚಿಕದಲ್ಲಿ 964 ಮಂತ್ರಗಳೂ ಇವೆ. ಸಾಮವೇದದಲ್ಲಿ ಇರುವ 1549 ಮಂತ್ರಗಳಲ್ಲಿ 75 ಮಂತ್ರಗಳನ್ನು ಬಿಟ್ಟರೆ ಉಳಿದುದೆಲ್ಲವೂ ಋಗ್ವೇದದ ಮಂತ್ರಗಳೇ ಆಗಿವೆ.

ಸಾಮವೇದದ ಅಧ್ಯಯನವು ಗಾನಪ್ರಧಾನವಾದುದರಿಂದ ಇದರಲ್ಲಿ ಏಳು ಸ್ವರಗಳಿವೆ. ಸಂಗೀತದಲ್ಲಿ ಗುರುತಿಸುವ ಪಂಚಮ, ಮಧ್ಯಮ, ಗಾಂಧಾರ, ಋಷಭ, ಷಡ್ಜ, ಧೈವತ ಮತ್ತು ನಿಷಾದಗಳಿಗೆ ಅನುಗುಣವಾಗಿ ಸಾಮವೇದದಲ್ಲಿ ಕ್ರುಷ್ಟ,



ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಪಂಚಮ ಮತ್ತು ಷಷ್ಠ ಎಂದು ಹೆಸರುಗಳು.

ಅಥರ್ವವೇದ : ಅಥರ್ವವೇದವನ್ನು 'ಅಥರ್ವಾಂಗಿರಸ', 'ಭೃಗ್ವಂಗಿರಸ' ಎಂದೂ ಕರೆಯುತ್ತಾರೆ. ಅಥರ್ವವೇದದಲ್ಲಿ ಅಭಿಚಾರಕೃತ್ಯ (ಮದ್ದು, ಮಾಟ) ಗಳಿಗೆ ಸಂಬಂಧಿಸಿದ ಮಂತ್ರಗಳೇ ಇವೆಯೆಂಬ ಕಲ್ಪನೆ ಇದೆ. ಅದು ಸರಿಯಲ್ಲ. ಶರೀರಶಾಸ್ತ್ರ, ಶತ್ರುರಕ್ಷಣೆಗಾಗಿ ಹೇಳಬೇಕಾದ ಮಂತ್ರಗಳೂ ಅಥರ್ವವೇದ ದಲ್ಲಿವೆ. ರಾಜಪುರೋಹಿತನು ಅಥರ್ವವೇದವನ್ನು ಅವಶ್ಯವಾಗಿ ತಿಳಿದಿರಲೇ ಬೇಕಾಗಿತ್ತು. ಅಥರ್ವವೇದದ ಸಂಹಿತೆಯನ್ನು ಅಧ್ಯಯನಸೌಕರ್ಯಕ್ಕಾಗಿ ಇಪ್ಪತ್ತು ಭಾಗಗಳನ್ನಾಗಿ ಮಾಡಿದ್ದಾರೆ. ಇದರಲ್ಲಿ 731 ಸೂಕ್ತಗಳು ಮತ್ತು 12 ಸಾವಿರ ಮಂತ್ರಗಳೂ ಇವೆ. ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಭಾಗಗಳಲ್ಲಿ ಸಾಮಾನ್ಯವಾಗಿ ಋಗ್ವೇದದ ಮಂತ್ರಗಳೇ ಇವೆ. ಹದಿನೈದು ಮತ್ತು ಹದಿನಾರನೆಯ ಭಾಗವು ಹೆಚ್ಚು ಗದ್ಯರೂಪವಾಗಿಯೇ ಇದೆ. ಎಂಟರಿಂದ ಹದಿನೆಂಟರವರೆಗೆ ಇರುವ ಭಾಗಗಳಲ್ಲಿ ಬರುವ ಸೂಕ್ತಗಳು ಬಲು ದೊಡ್ಡವು. ಛಂದಸ್ಸಿನ ನಿಯಮವು ಋಗ್ವೇದದಲ್ಲಿ ಇರುವಷ್ಟು ಬಿಗಿಯಾಗಿ ಅಥರ್ವಣವೇದದಲ್ಲಿ ಇಲ್ಲ.

## ಬ್ರಾಹ್ಮಣಗಳ ಅಧ್ಯಯನಕ್ರಮ

ಬ್ರಾಹ್ಮಣಗಳೆಂದರೆ ಏನೆಂಬುದನ್ನು ಹಿಂದೆಯೇ ತಿಳಿದಿದ್ದೇವೆ. ಋಗ್ವೇದಕ್ಕೆ "ಐತರೇಯ" ಮತ್ತು "ಕೌಷೀತಕೀ" ಎಂಬ ಬ್ರಾಹ್ಮಣಗಳಿವೆ. ಮಹೀದಾಸ ಎಂಬುವನು 'ಇತರಾ' ಎಂಬಾಕೆಯ ಸುಪುತ್ರ. ಇವನು ತನ್ನ ತಂದೆಯು ತನ್ನನ್ನು ಅಕ್ಕರೆಯಿಂದ ಕಾಣಲಿಲ್ಲವೆಂದು ದುಃಖದಿಂದ ಭೂಮಾತೆಯನ್ನು ಕುರಿತು ತಪಸ್ಸು ಮಾಡಿ ಆಕೆಯ ಅನುಗ್ರಹದಿಂದ ಈ ಬ್ರಾಹ್ಮಣಭಾಗವನ್ನು ಕಂಡುಕೊಂಡನು. 'ಇತರಾ' ಎಂಬುವಳ ಮಗನಾದ ಐತರೇಯನು ಇದನ್ನು ಕಂಡದ್ದರಿಂದ ಈ ಬ್ರಾಹ್ಮಣವನ್ನು ಐತರೇಯಬ್ರಾಹ್ಮಣವೆನ್ನುತ್ತಾರೆ.

ಐತರೇಯಬ್ರಾಹ್ಮಣದಲ್ಲಿ ಐದು ಅಧ್ಯಾಯಗಳಿವೆ. ಎಂಟು ಪಂಚಿಕೆ (ವಿಭಾಗ)ಗಳಿವೆ. ಇವುಗಳಲ್ಲಿ ಉಕ್ಥ್ಯ, ಅತಿರಾತ್ರ ಮುಂತಾದ ಯಾಗಗಳ ಬಗೆಗೂ, ಹೋತೃ, ಯಜಮಾನ ಮೊದಲಾದವರ ಕರ್ತವ್ಯದ ಬಗೆಗೂ ವಿವರಿಸಲಾಗಿದೆ. ಶತಪಥಬ್ರಾಹ್ಮಣವು ಶುಕ್ಲಯಜುರ್ವೇದದ ಬ್ರಾಹ್ಮಣ. ಇದರಲ್ಲಿ ನೂರು ಅಧ್ಯಾಯಗಳಿವೆ. ಆದುದರಿಂದ ಇದನ್ನು ಶತಪಥ ಎನ್ನುತ್ತಾರೆ. ಇದರಲ್ಲಿ ಹದಿನಾಲ್ಕು ಕಾಂಡಗಳಿವೆ. ಶತಪಥಬ್ರಾಹ್ಮಣದಲ್ಲಿ ಸಂಸ್ಕೃತವ್ಯಾಕರಣ ಮತ್ತು ನಿರುಕ್ತದ ಮೂಲವನ್ನು ಕಾಣುತ್ತೇವೆ.



ತೈತ್ತಿರೀಯಬ್ರಾಹ್ಮಣವು ಕೃಷ್ಣಯಜುರ್ವೇದದ ಬ್ರಾಹ್ಮಣ. ಇದರಲ್ಲಿ 3 ಅಷ್ಟಕಗಳೂ, 28 ಪ್ರಪಾಠಕಗಳೂ ಇವೆ. ಸಾಮವೇದದ ತಾಂಡ್ಯಬ್ರಾಹ್ಮಣದಲ್ಲಿ 25 ಭಾಗಗಳಿವೆ. ಆದುದರಿಂದ ಇದನ್ನು 'ಪಂಚವಿಂಶಬ್ರಾಹ್ಮಣ' ಎಂದು ಕರೆಯುತ್ತಾರೆ. ಅಥರ್ವವೇದದ 'ಗೋಪಥಬ್ರಾಹ್ಮಣ' ದಲ್ಲಿ ಎರಡು ಭಾಗಗಳಿದ್ದು ಮೊದಲ ಭಾಗದಲ್ಲಿ 5 ಮತ್ತು 2ನೆಯ ಭಾಗದಲ್ಲಿ 6 ಅಧ್ಯಾಯಗಳಿವೆ.

### ಆರಣ್ಯಕಗಳ ಅಧ್ಯಯನಕ್ರಮ

ಋಗ್ವೇದದ ಐತರೇಯಾರಣ್ಯಕವೂ, ಶುಕ್ಲಯಜುರ್ವೇದದ ಶತಪಥ ಬ್ರಾಹ್ಮಣದ ಒಂದು ಭಾಗವಾದ ಬೃಹದಾರಣ್ಯಕವೂ, ಕೃಷ್ಣಯಜುರ್ವೇದದ ತೈತ್ತಿರೀಯ ಆರಣ್ಯಕವೂ, ಸಾಮವೇದದ ತಾಂಡ್ಯಬ್ರಾಹ್ಮಣದಲ್ಲಿರುವ ಆರಣ್ಯಕವೂ ಅಧ್ಯಯನದಲ್ಲಿ ಇವೆ. ಇಲ್ಲಿಯೂ ಪ್ರಪಾಠಕ, ಅಧ್ಯಾಯ, ಕಂಡಿಕೆ ಮುಂತಾದ ಒಳವಿಭಾಗಗಳನ್ನು ಮಾಡಲಾಗಿದೆ.

### ಉಪನಿಷತ್ತುಗಳ ಅಧ್ಯಯನಕ್ರಮ

ಮುಕ್ತಿಕೋಪನಿಷತ್ತು 108 ಉಪನಿಷತ್ತುಗಳಿವೆ ಎಂದು ಹೇಳಿದರೂ,

**ಈಶ-ಕೇನ-ಕಠ-ಪ್ರಶ್ನ-ಮುಂಡ-ಮಾಂಡೂಕ್ಯ-ತಿತ್ತಿರಿ: ।**
**ಐತರೇಯಂ ಚ ಛಾಂದೋಗ್ಯಂ ಬೃಹದಾರಣ್ಯಕಂ ದಶ ॥**

ಈ ಹತ್ತು ಉಪನಿಷತ್ತುಗಳು ಅತಿ ಪ್ರಸಿದ್ಧ. ಇವುಗಳಲ್ಲಿ ಕೆಲವನ್ನು ಉದಾತ್ತ, ಅನುದಾತ್ತ, ಸ್ವರಿತಗಳೆಂಬ ಮೂರು ಸ್ವರಗಳಿಂದಲೂ, ಕೆಲವನ್ನು ಅನುದಾತ್ತ ಸ್ವರದಿಂದಲೂ ಅಧ್ಯಯನ ಮಾಡುತ್ತಾರೆ. ಹೆಚ್ಚು ಉಪನಿಷತ್ತುಗಳಿಗೆ ಸಸ್ವರ ಪಾಠವು ಕಂಡುಬರುವುದಿಲ್ಲ.

### ಸಸ್ವರಪಾಠ

ವೇದದ ಮಂತ್ರಗಳನ್ನು ನಿರ್ದಿಷ್ಟವಾದ ಸ್ವರಗಳಿಂದಲೂ, ನಿರ್ದಿಷ್ಟವಾದ ಕ್ರಮದಿಂದಲೂ ಉಚ್ಚರಿಸಬೇಕು. ಮುಖ್ಯವಾಗಿ ವೇದದಲ್ಲಿ ಮೂರು ಸ್ವರಗಳಿಂದ ಮಂತ್ರೋಚ್ಚಾರಣೆಯನ್ನು ಮಾಡುತ್ತೇವೆ. ಅವು ಉದಾತ್ತ, ಅನುದಾತ್ತ ಮತ್ತು ಸ್ವರಿತ. ವರ್ಣಗಳು ಹುಟ್ಟಲು ಸ್ಥಾನ ಮತ್ತು ಒಂದಾನೊಂದು ಪ್ರಯತ್ನ ಬೇಕು. ಹೀಗೆ ಪ್ರಯತ್ನಿಸಿದಾಗ ಜಠರಾಗ್ನಿಯಿಂದ ತಳ್ಳಲ್ಪಟ್ಟ ಗಾಳಿಯು ಕಂಠವೇ ಮುಂತಾದ ಸ್ಥಾನಗಳನ್ನು ಸ್ಪರ್ಶಿಸಿ ವರ್ಣವನ್ನು ಉಂಟುಮಾಡುತ್ತದೆ. ಕಂಠವೇ ಮೊದಲಾದ ಸ್ಥಾನಗಳನ್ನು ಮೇಲುಭಾಗ, ಕೆಳಭಾಗಗಳೆಂದು ವಿಂಗಡಿಸಬಹುದು. ಹಾಗೆ ವಿಂಗಡಿಸಿದ ಮೇಲ್ಭಾಗಕ್ಕೆ ಗಾಳಿಯ ಆಘಾತವಿದ್ದರೆ ಆಗ ಜನಿಸುವ ಸ್ವರವು (ಅ, ಇ, ಉ,) ಉದಾತ್ತ ಎನಿಸಿಕೊಳ್ಳುತ್ತದೆ. ಇದನ್ನು 'ಉಚ್ಚೈರುದಾತ್ತ:' ಎಂಬ



ಸೂತ್ರದಿಂದ ಪಾಣಿನಿ ಮಹರ್ಷಿಯು ತಿಳಿಸಿರುತ್ತಾನೆ. ಗಾಳಿಯ ಆಘಾತವು ಕಂಠದ ಕೆಳಭಾಗದಲ್ಲಿ ಉಂಟಾದರೆ ಆಗ ಅನುದಾತ್ತಸ್ವರವು ಉಂಟಾಗುವುದು. ಇದನ್ನು 'ನೀಚೈರನುದಾತ್ತ' ಎಂಬ ಸೂತ್ರವು ತಿಳಿಸುತ್ತದೆ. ಉದಾತ್ತ, ಅನುದಾತ್ತಗಳ ಮಿಶ್ರಣವೇ ಸ್ವರಿತ. ಇದನ್ನು 'ಸಮಾಹಾರಃ ಸ್ವರಿತಃ' ಎಂಬ ಸೂತ್ರವು ತಿಳಿಸುತ್ತದೆ.

**ಯಥೇಂದ್ರಶತ್ರುಃ ಸ್ವರತೋಽಪರಾಧಾತ್**

ವೇದಗಳಲ್ಲಿ ಸ್ವರವರ್ಣಾದಿಗಳ ಉಚ್ಚಾರಣೆಗೆ ವಿಶೇಷ ಮಹತ್ತ್ವವುಂಟು. ಲೌಕಿಕಪ್ರಯೋಗದಲ್ಲಿಯೂ ಅಸ್ಪಷ್ಟವಾದ ಉಚ್ಚಾರಣೆಯ ಫಲವಾಗಿ ತೊಂದರೆಗಳು ತಲೆದೋರಬಹುದು. ವೈದಿಕಪ್ರಯೋಗಗಳಲ್ಲಿ ಇಂತಹ ತಪ್ಪಿನಿಂದ ಉಂಟಾದ ವಿಷಮಪರಿಣಾಮವನ್ನು ಈ ಹೋಲಿಕೆಯು ತಿಳಿಸುತ್ತದೆ. ಅದರ ಇತಿಹಾಸವು ಹೀಗಿದೆ:

ತ್ವಷ್ಟನ ಮಗನಾದ ವಿಶ್ವರೂಪನು ಕೆಲವು ಕಾಲ ದೇವತೆಗಳ ಪುರೋಹಿತನಾಗಿದ್ದನು. ಆತನು ದೇವತೆಗಳಿಗೆ ಪ್ರತ್ಯಕ್ಷವಾಗಿ ಹವಿರ್ಭಾಗವನ್ನು ಕೊಟ್ಟನು. ಅವನು ಅಸುರರ ಸೋದರಳಿಯನಾದುದರಿಂದ ಅಸುರರಿಗೆ ಪರೋಕ್ಷವಾಗಿ ಭಾಗವನ್ನು ಕೊಟ್ಟನು. ಇದನ್ನು ತಿಳಿದು ಕೋಪಗೊಂಡ ಇಂದ್ರನು ವಿಶ್ವರೂಪನ ಮೂರು ತಲೆಗಳನ್ನೂ ಕತ್ತರಿಸಿಬಿಟ್ಟನು.

ಇದರಿಂದ ಬಂದ ಬ್ರಹ್ಮಹತ್ಯೆಯನ್ನು ಇಂದ್ರನು ಭೂಮಿ, ವನಸ್ಪತಿಗಳು ಮತ್ತು ಸ್ತ್ರೀಯರು ಇವರಲ್ಲಿ ಹಂಚಿ, ಅವರಿಗೆ ಅವರು ಕೇಳಿದ ವರಗಳನ್ನು ಕೊಟ್ಟು ಬ್ರಹ್ಮಹತ್ಯಾಪಾಪದಿಂದ ವಿಮುಕ್ತನಾದನು. ಇದರಿಂದ ಕೋಪಗೊಂಡ ತ್ವಷ್ಟನು ಇಂದ್ರನನ್ನು ಕೊಲ್ಲುವಂತಹ ಪುತ್ರನನ್ನು ಪಡೆಯಬೇಕೆಂದು ಸಂಕಲ್ಪಿಸಿ ಒಂದು ಸೋಮಯಾಗವನ್ನು ಮಾಡಿ, ಅದರಲ್ಲಿ ಇಂದ್ರನಿಗೆ ಹವಿರ್ಭಾಗವನ್ನು ಕೊಡದೆ,

ಸ್ವಾಹೇಂದ್ರಶತ್ರುರ್ವರ್ಧಸ್ವ

ಎಂದು ಆಹವನೀಯಾಗ್ನಿಯಲ್ಲಿ ಹೋಮ ಮಾಡಿದನು. ಇದರ ಫಲವಾಗಿ ವೃತ್ರನು ಹುಟ್ಟಿದನು. ಆದರೆ ಸ್ವರದ ದೋಷದಿಂದ ವೃತ್ರನು ಇಂದ್ರನನ್ನು ಕೊಲ್ಲುವುದಕ್ಕಾಗಿ ಪ್ರತಿಯಾಗಿ ಇಂದ್ರನೇ ವೃತ್ರನನ್ನು ಕೊಲ್ಲುವಂತಾಯಿತು.

'ಇಂದ್ರಶತ್ರುಃ' ಎನ್ನುವುದಕ್ಕೆ 'ಇಂದ್ರಸ್ಯ-ಶತ್ರುಃ=ಇಂದ್ರಶತ್ರುಃ' ಎಂದು ತತ್ಪುರುಷಸಮಾಸವನ್ನು ಮಾಡಬಹುದು. ಆಗ 'ಸಮಾಸಸ್ಯ' ಎಂಬ ಸೂತ್ರಕ್ಕೆ ಅನುಸಾರವಾಗಿ

ಇಂದ್ರಶತ್ರುಃ ಎಂದು ಅಂತೋದಾತ್ತವಾಗಬೇಕು.



ಇಂದ್ರಃ ಶತ್ರುಃ ಯಸ್ಯ ಸಃ=ಇಂದ್ರಶತ್ರುಃ (ಶತ್ರುಃ—ಶಾತಯಿತಾ=ಕೊಲ್ಲುವವನು; ಯಾರನ್ನು ಇಂದ್ರನು ಕೊಲ್ಲುವನೋ ಅವನು) ಎಂದು ಬಹುವ್ರೀಹಿಸಮಾಸವನ್ನು ಮಾಡಿದರೆ ಪೂರ್ವಪದಪ್ರಕೃತಿಸ್ವರವು ಬಂದು ಆದ್ಯುದಾತ್ತವಾಗಿ.

ಇಂದ್ರಶತ್ರುಃ ಎಂದಾಗುತ್ತದೆ ಹೀಗೆ ಇಂದ್ರಶತ್ರುಃ

ಎಂದು ಹೇಳಿದುದರ ಫಲವಾಗಿ ಇಂದ್ರನೇ ವೃತ್ರನನ್ನು ಕೊಲ್ಲುವಂತಾಯಿತು.

ಈ ಪ್ರಕರಣವನ್ನು ಉದಾಹರಣೆಯಾಗಿ ಕೊಟ್ಟು ಶಾಸ್ತ್ರದಲ್ಲಿ ಹೀಗೆ ಹೇಳಿದೆ:

**ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥ ಮಾಹ । ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ।**

ಮಂತ್ರವು ಸ್ವರದಿಂದಾಗಲೀ ವರ್ಣದಿಂದಾಗಲೀ ಹೀನವಾಗಿ ಹೇಳಲ್ಪಟ್ಟರೆ ಯಾವ ಅರ್ಥವನ್ನು ಅದು ಕೊಡಬೇಕೆಂದು ಮಂತ್ರೋಚ್ಚಾರಕನು ಆಶಿಸುತ್ತಾನೆಯೋ ಆ ಅರ್ಥವನ್ನು ಆ ಮಂತ್ರವು ತಿಳಿಸುವುದಿಲ್ಲ. ಆ ಮಾತು ವಜ್ರಾಯುಧದಂತೆ ಯಜಮಾನನನ್ನೇ ಹಿಂಸಿಸುತ್ತದೆ. ಈ ವಿಷಯದಲ್ಲಿ—

ಇಂದ್ರಶತ್ರುಃ ಎನ್ನುವುದು ಉದಾಹರಣೆಯಾಗಿದೆ.

ಮತ್ತೊಂದು ಉದಾಹರಣೆ :

**ಸ್ಥೂಲಪೃಷತೀಮಾಗ್ನಿವಾರುಣೀಮನಡ್ವಾಹೀಮಾಲಭೇತ ।**

ಈ ವಾಕ್ಯದಲ್ಲಿ 'ಸ್ಥೂಲಪೃಷತೀ' ಎಂಬ ಪದವಿದೆ. 'ಸ್ಥೂಲಾನಿ ಪೃಷಂತಿ ಯಸ್ಯಾಃ ಸಾ=ಸ್ಥೂಲಪೃಷತೀ' ಹೀಗೆ ಸಮಾಸವನ್ನು ಮಾಡಬಹುದು. 'ಸ್ಥೂಲಾ ಚ ಸಾ ಪೃಷತೀ ಚ = ಸ್ಥೂಲಪೃಷತೀ' ಹೀಗೂ ಸಮಾಸವನ್ನು ಮಾಡಬಹುದು. ಮೊದಲನೆಯದು ಬಹುವ್ರೀಹಿ; ಎರಡನೆಯದು ಕರ್ಮಧಾರಯ. ಬಹುವ್ರೀಹಿ ಸಮಾಸವಾದರೆ ಆ ಪಶುವಿನ ದೇಹದಲ್ಲಿರುವ ಚುಕ್ಕೆಗಳು ಸ್ಥೂಲವಾಗಿವೆ ಎಂದು ಅರ್ಥವಾಗುತ್ತದೆ. ಕರ್ಮಧಾರಯವಾದರೆ ಆ ಪಶುವು ದಪ್ಪವಾಗಿಯೂ, ಚುಕ್ಕೆಗಳಿಂದ ಕೂಡಿದುದಾಗಿಯೂ ಇದೆ ಎಂದು ಅರ್ಥವಾಗುತ್ತದೆ.

**ಸ್ಥೂಲಪೃಷತೀ** ಎಂದು ಸ್ವರವಿದ್ದರೆ ಬಹುವ್ರೀಹಿಸಮಾಸ,

**ಸ್ಥೂಲ ಪೃಷತೀ** ಎಂದು ಸ್ವರವಿದ್ದರೆ ಕರ್ಮಧಾರಯಸಮಾಸ.

ಹೀಗೆ ಸ್ವರಭೇದದಿಂದ ಅರ್ಥಭೇದವಾಗುತ್ತದೆ.



ಇನ್ನೂ ಕೆಲವು ಉದಾಹರಣೆಗಳನ್ನು ಕೊಡಬಹುದು.

ಸಂಸ್ಕೃತಭಾಷೆಯಲ್ಲಿ 'ತೇ' ಎಂಬ ಪದವು 'ಅವರು' (ಗಂಡಸರು) 'ಅವರಿಬ್ಬರು' (ಸ್ತ್ರೀಯರು), 'ಅವೆರಡು,' 'ಅವರಿಬ್ಬರನ್ನು' (ಸ್ತ್ರೀಯರನ್ನು), 'ಅವೆರಡನ್ನು' ಎಂದು ಅರ್ಥಗಳನ್ನು ಕೊಡುತ್ತದೆ. ಹಾಗೆಯೇ 'ನಿನಗೆ' 'ನಿನ್ನ' ಎಂಬ ಅರ್ಥಗಳನ್ನೂ ಕೊಡುತ್ತದೆ.

ಮೊದಲನೆಯ 'ತೇ' ಶಬ್ದ 'ಉದಾತ್ತ' ಎರಡನೆಯ 'ತೇ' ಶಬ್ದವು ಅನುದಾತ್ತ.

॥
ತೇऽಬ್ರುವನ್=ಅವರು ಹೇಳಿದರು.

॥
ತೇ+ ಅಬ್ರುವನ್ = ತೇऽಬ್ರುವನ್ ।

ಇಲ್ಲಿ ಉದಾತ್ತವು

ತಸ್ಮಿನ್ನನುದಾತ್ತೇ ಪೂರ್ವ ಉದಾತ್ತ: ಸ್ವರಿತಮ್ ।

ಎಂಬ ಸೂತ್ರಕ್ಕೆ ಅನುಸಾರವಾಗಿ ಸ್ವರಿತವಾಗಿದೆ.

ಆರ್ತ್ನೀ ಇಮೇ ಎಂಬುದಕ್ಕೆ ಅನುಗುಣವಾಗಿ ತೇ ಆಚರಂತೀ ಎಂಬುದು ಸ್ತ್ರೀಲಿಂಗ ದ್ವಿವಚನವಾಗಿದೆ.

ತೇ ಜಾನಾತಿ ಸುಮತಿಮ್ ।

(ನಿನ್ನ ಒಳ್ಳೆಯ ಬುದ್ಧಿಯನ್ನು ತಿಳಿದಿರುತ್ತಾನೆ.) ಇಲ್ಲಿ ತೇ ಎಂಬುದು ಷಷ್ಠೀ ವಿಭಕ್ತಿಯ ರೂಪವಾಗಿದೆ ಮತ್ತು ಅನುದಾತ್ತವಾಗಿದೆ.

ಮಾ ಮಾ ಹಿಂಸೀಃ

ಇಲ್ಲಿ ಎರಡು 'ಮಾ' ಶಬ್ದಗಳಿವೆ.

ಒಂದು 'ಮಾ' ಉದಾತ್ತವಾಗಿದೆ. ಮತ್ತೊಂದು 'ಮಾ' ಅನುದಾತ್ತವಾಗಿದೆ.

ಮೊದಲನೆಯದು 'ಬೇಡ' ಎಂಬ ನಿಷೇಧಾರ್ಥವನ್ನು ಕೊಟ್ಟರೆ, ಎರಡನೆಯದು 'ನನ್ನನ್ನು' ಎಂಬ ಅರ್ಥವನ್ನು ಕೊಡುತ್ತದೆ. 'ನನ್ನನ್ನು ಹಿಂಸಿಸಬೇಡ' ಎಂದು ಇದರ ಅರ್ಥ.

ದೇವಾಃ = ದೇವತೆಗಳು, ದೇವಾಃ = ಎಲೈ ದೇವತೆಗಳೇ,

ಎಂಬಂತೆ ಸ್ವರಭೇದದಿಂದ ಅರ್ಥಭೇದವಾಗುತ್ತದೆ.

ಆದುದರಿಂದ ಸ್ವರ-ವರ್ಣಗಳ ಉಚ್ಚಾರಣೆಯಲ್ಲಿ ಜಾಗರೂಕರಾಗಿರಬೇಕು.



**ವಿಕೃತಿಪಾಠಗಳು**

ಸ್ವರಸಹಿತವಾದ ಅಧ್ಯಯನಪರಂಪರೆಯನ್ನು ಚಾಚೂ ತಪ್ಪದಂತೆ ಉಳಿಸಿಕೊಳ್ಳುವ ಸಲುವಾಗಿ ಸಂಹಿತೆಯನ್ನು ಅಧ್ಯಯನ ಮಾಡಿದ ನಂತರ ಪದಪಾಠ, ಕ್ರಮಪಾಠ, ಜಟಾಪಾಠ ಮತ್ತು ಘನಪಾಠಗಳನ್ನು ಅಭ್ಯಾಸ ಮಾಡುವ ರೂಢಿ ಇದೆ. ಇವುಗಳನ್ನು ವಿಕೃತಿಪಾಠಗಳು ಎನ್ನುತ್ತಾರೆ. ಈ ಪಾಠಗಳ ಅಧ್ಯಯನದಿಂದ ಸಂಹಿತೆಯಲ್ಲಿ ಬರುವ ಮಂತ್ರಗಳ ಸ್ವರಪರಿಚಯವು ಚೆನ್ನಾಗಿ ಆಗುವುದಲ್ಲದೇ ವೇದದ ಅರ್ಥವನ್ನು ಮನನ ಮಾಡಲು ಸಾಧ್ಯವಾಗುವುದು.

ಈ ಪಾಠಗಳ ಸ್ವರೂಪವನ್ನು ಕೆಳಗಿನ ಉದಾಹರಣೆಯಿಂದ ತಿಳಿಯೋಣ.

ಸಂಹಿತೆ    ನಮಃ ಶಿವಾಯ ಚ ।

ಪದಪಾಠ    ನಮಃ । ಶಿವಾಯ । ಚ ।

ಕ್ರಮಪಾಠ    ನಮಃ ಶಿವಾಯ । ಶಿವಾಯ ಚ ।

ಜಟಾಪಾಠ    ನಮಃ ಶಿವಾಯ ಶಿವಾಯ ನಮೋ ನಮಃ ಶಿವಾಯ ।
ಶಿವಾಯ ಚ ಚ ಶಿವಾಯ ಶಿವಾಯ ಚ ।

ಘನಪಾಠ    ನಮಃ ಶಿವಾಯ ಶಿವಾಯ ನಮೋ ನಮಃ ಶಿವಾಯ ಚ
ಚ ಶಿವಾಯ ನಮೋ ನಮಃ ಶಿವಾಯ ಚ । ಶಿವಾಯ
ಚ ಚ ಶಿವಾಯ ಶಿವಾಯ ಚ ।

ಈ ವಿಕೃತಿಪಾಠಗಳಲ್ಲದೆ ದಂಡ, ರಥ ಮುಂತಾದ ವಿಕೃತಿಪಾಠಗಳೂ ಉಂಟು.

**ಸಾಂಗಾಧ್ಯಯನ**

'ಬ್ರಾಹ್ಮಣೇನ ನಿಷ್ಕಾರಣೋ ಧರ್ಮಃ ಷಡಂಗೋ ವೇದೋಽಧ್ಯೇಯೋ ಜ್ಞೇಯಶ್ಚ' ಎಂಬ ಮಾತಿನಂತೆ ಆರು ಅಂಗಗಳೊಡಗೂಡಿದಂತೆ ವೇದಾಧ್ಯಯನವನ್ನು ಮಾಡಿದರೆ ವೇದದ ಮುಖ್ಯ ಉದ್ದೇಶವಾದ ಧರ್ಮ ಮತ್ತು ಬ್ರಹ್ಮಗಳ ಸ್ವರೂಪವನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡಂತಾಗುವುದು. ವೇದಗಳನ್ನು ಆಚಾರ್ಯರಿಂದ ಹೇಳಿಸಿಕೊಂಡ ಮಾತ್ರದಿಂದ ವೇದಮಂತ್ರಗಳ ರಹಸ್ಯ ಏನೂ

ತಿಳಿದಂತಾಗುವುದಿಲ್ಲ. ಮಂತ್ರಗಳ ಅರ್ಥವನ್ನು ತಿಳಿದು ಅಧ್ಯಯನ ಮಾಡುವುದು ಶ್ರೇಷ್ಠವಾದರೂ, ಅರ್ಥವನ್ನು ತಿಳಿಯದೇ ಮಾಡುವ ವೇದಮಂತ್ರಗಳ ಉಚ್ಚಾರಣೆಗೂ ಫಲವಿದ್ದೇ ಇದೆ.

**ಯಂ ಯಂ ಕ್ರತುಮಧೀತೇ ತೇನ ತೇನಾಸ್ಯೇಷ್ಟಂ ಭವತಿ....... ।**

ಆಯಾ ಯಜ್ಞಮಂತ್ರಗಳ ಅಧ್ಯಯನದಿಂದ ಯಾಗ ಮಾಡಿದಂತೆಯೇ ಎಂದು ಶ್ರುತಿಯೇ ತಿಳಿಸುತ್ತದೆ. ಅರ್ಥಜ್ಞಾನದಿಂದ ಕೂಡಿದ ವೇದಾಧ್ಯಯನ ತುಂಬ ಪ್ರಶಸ್ತ ಎಂದಷ್ಟೇ ಇಲ್ಲಿಯ ತಾತ್ಪರ್ಯ—ಕೇವಲ ಅರ್ಥರಹಿತಅಧ್ಯಯನದ ನಿಂದೆಯಲ್ಲ.

ವೇದದ ಅಧ್ಯಯನವು ಪರಿಪೂರ್ಣವಾಗಬೇಕಾದರೆ ವ್ಯಾಕರಣವೇ ಮೊದಲಾದ ಶಾಸ್ತ್ರಗಳು ಮಾತ್ರವಲ್ಲದೆ ಮಹಾಭಾರತ ಮತ್ತು ಪುರಾಣಗಳನ್ನು ಪರಿಶೀಲಿಸುವುದೂ ಅಗತ್ಯ 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂಬ ವಚನವು ಇತಿಹಾಸ ಪುರಾಣಗಳಿಂದ ವೇದಾರ್ಥವನ್ನು ವಿಸ್ತರಿಸಿಕೊಳ್ಳಬೇಕೆಂದು ಹೇಳುತ್ತದೆ. ನಮ್ಮ ಎಲ್ಲ ಶಾಸ್ತ್ರಗಳ ವಿಚಾರಗಳೂ ವೇದವನ್ನು ಕೇಂದ್ರವನ್ನಾಗಿಟ್ಟುಕೊಂಡಿವೆ. ವೇದದ ಸಂಬಂಧವಿರದ ಯಾವ ಶಾಸ್ತ್ರವೂ ಇಲ್ಲ. ಹೀಗೆ ಸಾಂಗಾಧ್ಯಯನದಿಂದಲೇ ವೇದಾಧ್ಯಯನದ ಪರಿಪೂರ್ಣತೆಯು ಬರುವಂತಹದು. ಇಂದು ವೇದಾಧ್ಯಯನ ಮಾಡುವವರೇ ವಿರಳ. ಶಾಸ್ತ್ರಗಳನ್ನು ಅಭ್ಯಾಸ ಮಾಡುವವರೂ ವಿರಳ. ಅಲ್ಲದೇ ವೇದಾಧ್ಯಯನ ಮಾಡುವವರು ಸಾಧಾರಣವಾಗಿ ಶಾಸ್ತ್ರಾಧ್ಯಯನವನ್ನು ಮಾಡುತ್ತಿಲ್ಲ. ಶಾಸ್ತ್ರಾಧ್ಯಯನ ಮಾಡುತ್ತಿರುವವರು ವೇದವನ್ನು ಅರಿತಿಲ್ಲ. ಹೀಗಾಗಿ ನಮ್ಮ ವೇದ-ಶಾಸ್ತ್ರಗಳ ಒಟ್ಟಭಿಪ್ರಾಯವನ್ನು ತಿಳಿಯಲಾರದವರಾಗಿದ್ದೇವೆ. ವೇದವನ್ನು ಆಚಾರ್ಯರಿಂದ ಕಲಿತ ನಂತರವೂ ಅದರ ಅರ್ಥವನ್ನು ತಿಳಿಯಲು ಪ್ರಯತ್ನಿಸುತ್ತಿರುವುದು ದುರ್ಲಭವಾಗಿದೆ. ಸಮಗ್ರ ಜ್ಞಾನವು ಬರಬೇಕಾದರೆ ವೇದಾರ್ಥವನ್ನು ತಿಳಿಯುವುದು ಅತ್ಯಾವಶ್ಯಕ.

### ವೇದಾರ್ಥಜ್ಞಾನದ ಆವಶ್ಯಕತೆ

ವೇದಾಧ್ಯಯನವನ್ನು ಮಾಡಿ ಅರ್ಥವನ್ನರಿಯದವನು ಭಾರವನ್ನು ಹೊರುವ ಮೋಟು ಮರದಂತೆ. ಹೊತ್ತಿರುವ ಭಾರವಾದ ವಸ್ತುವಿನ ಗುಣವನ್ನಾಗಲೀ ರೂಪವನ್ನಾಗಲೀ ಆ ಮರವು ಹೇಗೆ ಅರಿಯಲಾರದೋ, ಶಬ್ದರಾಶಿಯನ್ನು ಹೊತ್ತಿರುವ ವೇದಾಧ್ಯಾಯಿಯ ಪಾಡೂ ಅದೇ ಎಂದು ನಿರುಕ್ತವು ಹೇಳುತ್ತದೆ.

**ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಮ್ । ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನು ತೇ ಸ ನಾಕಮೇತಿ ಜ್ಞಾನವಿಧೂತಪಾಪ್ಮಾ ॥**



ಅರ್ಥವನ್ನು ತಿಳಿದವನು ಎಲ್ಲ ಮಂಗಳಗಳನ್ನು ಪಡೆದು, ಬ್ರಹ್ಮಜ್ಞಾನದಿಂದ ಪಾಪವನ್ನು ತೊಡೆದು ಸ್ವರ್ಗವನ್ನೇರುವನು. ಇದಲ್ಲದೆ,

**ಉಭೌ ಕುರುತೋ ಯಶ್ಚೈವಂ ವೇದ ಯಶ್ಚ ನ ವೇದ ।**
**ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ ॥**

ಯಾರು ಮಂತ್ರಾರ್ಥವನ್ನರಿತಿರುವನೋ, ಯಾರು ಅರಿತಿಲ್ಲವೋ ಇಬ್ಬರೂ ಕರ್ಮಗಳನ್ನು ಮಾಡುತ್ತಾರೆ. ಯಾರು ಕರ್ಮಸ್ವರೂಪವನ್ನು ಅರಿತು ಕರ್ಮಗಳನ್ನು ಮಾಡುತ್ತಾನೆಯೋ ಅವನಿಗೆ ಕರ್ಮವು ವಿಶೇಷಫಲವನ್ನುಂಟುಮಾಡುತ್ತದೆ ಎಂಬ ಈ ಮಾತು ವೇದಾರ್ಥಜ್ಞಾನವುಳ್ಳವನ ಕರ್ಮವು ಪ್ರಶಸ್ತ ಎಂದು ಹೇಳುತ್ತದೆ. ಹಿಂದಿನ ವಿಧಿವಾಕ್ಯವಾದ"ಅಧ್ಯೇಯೋ ಜ್ಞೇಯಶ್ಚ" ಎಂಬಲ್ಲಿ "ಬ್ರಾಹ್ಮಣೇನ ವೇದೋಽಧ್ಯೇಯಃ" "ಬ್ರಾಹ್ಮಣೇನ ವೇದೋ ಜ್ಞೇಯಶ್ಚ" ಎಂಬ ಎರಡು ವಿಧಿಗಳಿರುವುದರಿಂದ ಎರಡಕ್ಕೂ ಸಹ ಪ್ರಯೋಜನವನ್ನು ಹೇಳಬೇಕು. ಆದುದರಿಂದ ಕೇವಲ ಅಧ್ಯಯನಕ್ಕೂ, ಅರ್ಥಸಹಿತವಾದ ಅಧ್ಯಯನಕ್ಕೂ ಬೇರೆ ಬೇರೆ ಫಲಗಳಿವೆ ಎಂದು ಹೇಳುವುದು ಶಾಸ್ತ್ರೀಯವೇ ಆಗುತ್ತದೆ. ಕೇವಲ ಮಂತ್ರಾಧ್ಯಯನವನ್ನು ಮಾಡಿದರೂ

**ಅಗ್ನೇರ್ವಾಯೋರಾದಿತ್ಯಸ್ಯ ಸಾಯುಜ್ಯಂ ಗಚ್ಛತಿ ।**

ಎಂಬ ಮಾತಿನಂತೆ ಅಗ್ನಿಯ ಸಾಯುಜ್ಯವೂ ದೊರಕುತ್ತದೆ. ಅರ್ಥಸಹಿತವಾಗಿ ಅಧ್ಯಯನ ಮಾಡುವುದು ವಿಶೇಷಫಲವನ್ನುಂಟುಮಾಡುತ್ತದೆ ಎಂಬುದೇ ಈ ಪ್ರಕರಣದ ತಾತ್ಪರ್ಯ. ಯಜ್ಞಕ್ಕೆ ಅಧಿಕಾರಿ ಯಾರು ಎಂಬ ವಿಚಾರ ಬಂದಾಗ 'ಅರ್ಥೀ ಸಮರ್ಥಃ ವಿದ್ವಾನ್ ಅಧಿಕಾರೀ' ಎಂಬ ಜೈಮಿನಿಯ ಮಾತಿನಂತೆ ಅರ್ಥಜ್ಞಾನವನ್ನು ಪಡೆಯುವುದು ಆವಶ್ಯಕವೇ ಹೌದು.

ವೇದದ ಅರ್ಥವನ್ನು ಅರಿಯಲು ಅನೇಕ ಸಾಧನಗಳು ಬೇಕು. ನಮ್ಮ ಶಾಸ್ತ್ರಗಳೆಲ್ಲವೂ ವೇದಮೂಲಗಳೇ ಆದುದರಿಂದ ವೇದದಲ್ಲಿ ಆ ಶಾಸ್ತ್ರಗಳ ಸೂಕ್ಷ್ಮ ಉಲ್ಲೇಖ ಇರುತ್ತದೆ. ವೇದದ ಮಾತುಗಳು ಸೂತ್ರಗಳಂತೆ ಅತಿಸಂಕ್ಷಿಪ್ತವಾಗಿರುವುದರಿಂದ ಅವುಗಳ ಅರ್ಥವನ್ನು ವಿಸ್ತರಿಸಿಕೊಳ್ಳಲು ಶಾಸ್ತ್ರಗಳ ಸಹಾಯ ಬೇಕೇ ಬೇಕು. ಶಿಕ್ಷಾ ಮೊದಲಾದ ಆರು ಅಂಗಗಳೂ, ಪೂರ್ವಮೀಮಾಂಸಾ ಮೊದಲಾದ ಶಾಸ್ತ್ರಗಳೂ, ವೇದಾರ್ಥವನ್ನು ತಿಳಿಯಲು ಸಹಾಯಕಗಳಾಗುತ್ತವೆ. ಇವುಗಳನ್ನು ಕ್ರಮವಾಗಿ ತಿಳಿಯೋಣ. ಶಿಕ್ಷಾದಿಗಳನ್ನು ಸೂತ್ರರೂಪವಾಗಿ ಹೇಳುವುದಾದರೆ :

**ಶಿಕ್ಷಾ** ವರ್ಣ, ಸ್ವರ, ಇತ್ಯಾದಿಗಳ ಉಚ್ಚಾರಣೆಯು ಹೇಗಿರಬೇಕು ಎಂಬುದನ್ನು ತಿಳಿಸುವ ಶಾಸ್ತ್ರ.



| | |
|---|---|
| ಕಲ್ಪ | ವೇದಗಳಲ್ಲಿ ಹೇಳಿದ ಯಜ್ಞಗಳ ಅನುಷ್ಠಾನಕ್ರಮವನ್ನು ಬೋಧಿಸುವ ಶಾಸ್ತ್ರ. |
| ವ್ಯಾಕರಣ | ಶಬ್ದಗಳ ನಿಷ್ಪತ್ತಿ, ಸ್ವರಗಳ ಸಂಚಾರ, ವೈದಿಕಶಬ್ದಗಳ ವಿಶೇಷನಿಷ್ಪತ್ತಿಗಳು ಇವುಗಳನ್ನು ತಿಳಿಸುವ ಶಾಸ್ತ್ರ. |
| ನಿರುಕ್ತ | ವೇದದಲ್ಲಿ ಬರುವ ಕಠಿಣಪದಗಳ ಅರ್ಥತಿಳಿಸುವ ನಿಘಂಟು |
| ಜ್ಯೋತಿಷ್ಯ | ಯಜ್ಞಗಳ ಅನುಷ್ಠಾನದ ಕಾಲವನ್ನು ನಿರ್ಣಯಿಸುವ ಶಾಸ್ತ್ರ. |
| ಛಂದಸ್ಸು | ಮಂತ್ರಗಳ ಅಕ್ಷರನಿಯಮವನ್ನು, ಪಾದನಿಯಮವನ್ನು ಹೇಳುವ ಶಾಸ್ತ್ರ. |

ಇವುಗಳಲ್ಲಿ ಛಂದಸ್ಸು, ವ್ಯಾಕರಣ ಮತ್ತು ಜ್ಯೋತಿಷ್ಯಗಳು ಲೋಕದ ವ್ಯವಹಾರದಲ್ಲಿಯೂ ಅಳವಡಿಸಲ್ಪಟ್ಟಿವೆ.

ಶಿಕ್ಷಾ : ತೈತ್ತಿರೀಯಉಪನಿಷತ್ತಿನಲ್ಲಿ ಶಿಕ್ಷಾಶಾಸ್ತ್ರದ ಪರಿಚಯವನ್ನು ಕೊಡುವ ಒಂದು ಮಂತ್ರವಿದೆ.

**ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಃ ಸ್ವರಃ । ಮಾತ್ರಾ ಬಲಮ್ । ಸಾಮ ಸಂತಾನಃ । ಇತ್ಯುಕ್ತಃ ಶೀಕ್ಷಾಧ್ಯಾಯಃ ।**

ವರ್ಣಗಳ ಉದಾತ್ತವೇ ಮೊದಲಾದ ಸ್ವರಗಳು, ಹ್ರಸ್ವ-ದೀರ್ಘ ಮೊದಲಾದ ವರ್ಣಗಳ ಉಚ್ಚಾರಣೆಗೆ ಬೇಕಾಗುವ ಕಾಲಪ್ರಮಾಣ, ವರ್ಣಗಳು ಜನಿಸಲು ಬೇಕಾಗುವ ಪ್ರಯತ್ನ, ವರ್ಣಗಳು ಹುಟ್ಟುವ ಸ್ಥಾನ ಮತ್ತು ವರ್ಣಗಳ ಒಟ್ಟುಗೂಡುವಿಕೆ ಇವುಗಳನ್ನು ಶಿಕ್ಷಾಶಾಸ್ತ್ರವು ವಿವರಿಸುತ್ತದೆ. ಈ ರೀತಿ ವರ್ಣಗಳನ್ನು ಚೆನ್ನಾಗಿ ಅರಿತು ವೇದಮಂತ್ರಗಳನ್ನು ಉಚ್ಚರಿಸಬೇಕು.

**ಸಮ್ಯಗ್ವರ್ಣಪ್ರಯೋಗೇಣ ಬ್ರಹ್ಮಲೋಕೇ ಮಹೀಯತೇ ।**

ವರ್ಣವನ್ನು ಚೆನ್ನಾಗಿ ಅರಿತು ಉಚ್ಚರಿಸುವವನು ಬ್ರಹ್ಮಲೋಕದಲ್ಲಿಯೂ ಪೂಜ್ಯನೆನಿಸುತ್ತಾನೆ. ಶಿಕ್ಷೆಗಳು ಒಂಬತ್ತು.

**ಪ್ರಥಮಾ ವ್ಯಾಸಶಿಕ್ಷಾ ಚ ಲಕ್ಷ್ಮೀಶಿಕ್ಷಾ ದ್ವಿತೀಯಕಾ ॥**
**ಭಾರದ್ವಾಜೀ ತೃತೀಯಾ ಚ ಶಿಕ್ಷಾರಣ್ಯಾ ತುರೀಯಕಾ ॥**
**ಪಂಚಮೀ ಶಂಭುಶಿಕ್ಷಾ ಚ ಷಷ್ಠೀ ಚಾಪಿಶಲೀಯಕಾ ॥**
**ಸಪ್ತಮೀ ಪಾಣಿನೇಃ ಶಿಕ್ಷಾ ಅಷ್ಟಮೀ ಕೌಹಲೀ ತಥಾ ॥**
**ವಾಸಿಷ್ಠೀ ನವಮೀ ಚೈವಂ ನವ ಶಿಕ್ಷಾಃ ಪ್ರಕೀರ್ತಿತಾಃ ॥**



ಇವುಗಳಲ್ಲಿ ವ್ಯಾಸಶಿಕ್ಷೆಯು ಇಪ್ಪತ್ತೆಂಟು ಪ್ರಕರಣಗಳಿಂದ ಕೂಡಿದೆ. ಇದು ಕೃಷ್ಣಯಜುರ್ವೇದಕ್ಕೆ ಸಂಬಂಧಿಸಿದೆ. ಭರದ್ವಾಜಶಿಕ್ಷೆಯೂ ಯಜುರ್ವೇದಕ್ಕೆ ಸಂಬಂಧಿಸಿದೆ ಎನ್ನುತ್ತಾರೆ. ಆರಣ್ಯಕಶಿಕ್ಷೆಯು ಆರಣ್ಯಕಭಾಗಕ್ಕೆ ಸಂಬಂಧಿಸಿದೆ.

ಎಲ್ಲ ಶಿಕ್ಷೆಗಳಲ್ಲಿಯೂ ವರ್ಣಸ್ವರಾದಿವಿಷಯಗಳನ್ನು ಹೇಳಿರುತ್ತಾರೆ. ಉದಾಹರಣೆಗಾಗಿ ಪಾಣಿನೀಯಶಿಕ್ಷೆಯ ಕೆಲವು ಶ್ಲೋಕಗಳನ್ನು ಕೊಡಲಾಗಿದೆ.

**ತ್ರಿಷಷ್ಟಿಶ್ಚತುಷ್ಷಷ್ಟಿರ್ವಾ ವರ್ಣಾಶ್ಶಂಭುಮತೇ ಮತಾಃ ।**

ವರ್ಣಗಳು ಅರವತ್ತಮೂರು ಅಥವಾ ಅರವತ್ತನಾಲ್ಕು. ವ್ಯಾಸಶಿಕ್ಷೆಯಲ್ಲಿ ಅರುವತ್ತಾರೆಂದೂ ಪ್ರಾತಿಶಾಖ್ಯದಲ್ಲಿ ಐವತ್ತೊಂಬತ್ತು ಎಂದೂ ಹೇಳಿದೆ.

**ಉದಾತ್ತಶ್ಚಾನುದಾತ್ತಶ್ಚ ಸ್ವರಿತಶ್ಚ ಸ್ವರಾಸ್ತ್ರಯಃ ॥**

ಉದಾತ್ತ, ಅನುದಾತ್ತ, ಸ್ವರಿತಗಳು ಮೂರು ಸ್ವರಗಳು.

ಅನುದಾತ್ತವೇ 'ಪ್ರಚಯ' ಸ್ವರವಾಗುವುದರಿಂದ ಅದನ್ನು ಬೇರೆಯಾಗಿ ಹೇಳಿಲ್ಲ.

**ಪ್ರಚಯಶ್ಚ ಬುಧೈಃ ಪ್ರೋಕ್ತ ಉದಾತ್ತಶ್ರುತಿರಿತ್ಯಪಿ ।**

ಪ್ರಚಯವನ್ನೇ ಉದಾತ್ತಶ್ರುತಿ ಎಂದೂ ಕರೆಯುತ್ತಾರೆ.

**ಹ್ರಸ್ವೋ ದೀರ್ಘಃ ಪ್ಲುತ ಇತಿ ಕಾಲತೋ ನಿಯಮಾ ಅಚಿ ।**

ಹ್ರಸ್ವವು ಏಕಮಾತ್ರಿಕ, ದೀರ್ಘವು ದ್ವಿಮಾತ್ರಿಕ, ಪ್ಲುತವು ತ್ರಿಮಾತ್ರಿಕ ಹೀಗೆ ಸ್ವರಗಳಲ್ಲಿ ಕಾಲನಿಯಮವಿದೆ.

**ಅಷ್ಟೌ ಸ್ಥಾನಾನಿ ವರ್ಣಾನಾಮುರಃ ಕಂಠಶ್ಶಿರಸ್ತಥಾ ।**
**ಜಿಹ್ವಾಮೂಲಂ ಚ ದಂತಾಶ್ಚ ನಾಸಿಕೋಷ್ಠೌ ಚ ತಾಲು ಚ ॥**

ವರ್ಣಗಳಿಗೆ ಹೃದಯ, ಕಂಠ ಮೂರ್ಧ, ತಾಲು, ನಾಲಿಗೆಯ ಮೂಲಭಾಗ, ಹಲ್ಲುಗಳು, ಮೂಗು, ತುಟಿಗಳು ಇವು ಎಂಟು ಸ್ಥಾನಗಳು.

**ಅಚೋಽಸ್ಪೃಷ್ಟಾ ಯಣಸ್ತ್ವೀಷನ್ನೇಮಸ್ಪೃಷ್ಟಾಶ್ಶಲಃ ಸ್ಮೃತಾಃ ।**
**ಶೇಷಾಃ ಸ್ಪೃಷ್ಟಾ ಹಲಃ ಪ್ರೋಕ್ತಾ ನಿಬೋಧಾನುಪ್ರದಾನತಃ ॥**

ಸ್ವರಗಳು ಸ್ಪೃಷ್ಟಪ್ರಯತ್ನವಿಲ್ಲದವುಗಳು. ಯ, ರ, ಲ, ವ ಈಷತ್ ಸ್ಪೃಷ್ಟಗಳು. ಶ, ಷ, ಸ, ಹ ಅರ್ಧ ಸ್ಪೃಷ್ಟಗಳು. ಉಳಿದ ವ್ಯಂಜನಗಳು ಸ್ಪೃಷ್ಟ ಪ್ರಯತ್ನವುಳ್ಳವು.

**ಗೀತೀ ಶೀಘ್ರೀ ಶಿರಃಕಂಪೀ ತಥಾ ಲಿಖಿತಪಾಠಕಃ ।**
**ಅನರ್ಥಜ್ಞೋಽಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ॥**

ವೇದವನ್ನು ಹಾಡಿನಂತೆ ಹೇಳುವವನೂ, ಅತಿವೇಗವಾಗಿ ಹೇಳುವವನೂ,



ಶಿರಸ್ಸನ್ನು ಕಂಪಿಸುತ್ತಾ ಹೇಳುವವನೂ, ಬರೆದಂತೆಯೇ ಓದಿಕೊಳ್ಳುವವನೂ, ಅರ್ಥವನ್ನರಿಯದವನೂ, ಕೀರಲು ಸ್ವರದವನೂ, ಉತ್ತಮನಾದ ವೇದಾಧ್ಯಾಯಿಯಲ್ಲ.

**ಮಾಧುರ್ಯಮಕ್ಷರವ್ಯಕ್ತಿಃ ಪದಚ್ಛೇದಸ್ತು ಸುಸ್ವರಃ ।**
**ಧೈರ್ಯಂ ಲಯಸಮರ್ಥಂ ಚ ಷಡೇತೇ ಪಾಠಕಾಗುಣಾಃ ॥**

ಮಧುರವಾಗಿಯೂ, ಅಕ್ಷರಗಳನ್ನು ಸ್ಫುಟವಾಗಿಯೂ, ಪದಗಳನ್ನು ಚೆನ್ನಾಗಿ ಬಿಡಿಸಿಯೂ, ಸ್ವರ ತಪ್ಪದೆಯೂ, ಧೈರ್ಯದಿಂದಲೂ, ಲಯಕ್ಕೆ ಸರಿಯಾಗಿಯೂ ಹೇಳುವವನು ಉತ್ತಮನಾದ ವೇದಾಧ್ಯಾಯಿಯು.

ಅಂಗಪದಕ್ಕೆ ತಕ್ಕಂತೆ ಹೀಗೆ ನಿರ್ವಚನವನ್ನು ಮಾಡಿರುತ್ತಾರೆ.

**ಛಂದಃ ಪಾದೌ ತು ವೇದಸ್ಯ ಹಸ್ತೌ ಕಲ್ಪೋಽತ್ರ ಪಠ್ಯತೇ ।**
**ಜ್ಯೋತಿಷಾಮಯನಂ ಚಕ್ಷುಃ ನಿರುಕ್ತಂ ಶ್ರೋತ್ರಮುಚ್ಯತೇ ॥**
**ಶಿಕ್ಷಾ ಘ್ರಾಣಂ ತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಮ್ ।**
**ತಸ್ಮಾತ್ಸಾಂಗಮಧೀತ್ಯೈವ ಬ್ರಹ್ಮಲೋಕೇ ಮಹೀಯತೇ ॥**

ವೇದವೆಂಬ ಪುರುಷನಿಗೆ ಛಂದಸ್ಸು ಪಾದಗಳಂತೆ, ಕಲ್ಪವು ಎರಡು ಕೈಗಳಂತೆ, ಜ್ಯೋತಿಷ್ಯವು ಬಾಯಿಯಂತೆ ಇದೆ. ಆರು ಅಂಗಗಳಿಂದ ಸಹಿತವಾಗಿ ವೇದವನ್ನು ಅಧ್ಯಯನ ಮಾಡಿದವನು ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ.

ವ್ಯಾಸಶಿಕ್ಷೆಯಲ್ಲಿ ಜಟಾಪಾಠಕ್ಕೆ ಸಂಬಂಧಿಸಿದ ಉಲ್ಲೇಖವಿದೆ.

**ಸಂಹಿತಾಂ ಚ ಪದಂ ಚಾಪಿ ಕ್ರಮಂ ಚೈವ ಜಟಾಂ ಪಠನ್ ।**
**ಲಕ್ಷಣಜ್ಞಸ್ತದಾಪ್ನೋತಿ ಬ್ರಹ್ಮಜ್ಞಾನಂ ಹಿ ಶಾಶ್ವತಮ್ ॥**

ಸಂಹಿತೆಯನ್ನೂ, ಪದವನ್ನೂ, ಕ್ರಮವನ್ನೂ, ಜಟೆಯನ್ನೂ ಕಲಿತು ಲಕ್ಷಣಗಳನ್ನು ಅರಿತವನು ಶಾಶ್ವತವಾದ ಬ್ರಹ್ಮಜ್ಞಾನವನ್ನು ಪಡೆಯುತ್ತಾನೆ.

**ಸುವ್ಯಕ್ತಸ್ಸುಸ್ವರೋ ಧೈರ್ಯಂ ತಚ್ಚಿತ್ತತ್ವಂ ಚತುರ್ಗುಣಾಃ ।**
**ಏತದ್ಯುಕ್ತಃ ಪಠೇದ್ವೇದಂ ಸ ವೇದಫಲಮಶ್ನುತೇ ॥**

ವ್ಯಕ್ತವಾಗಿಯೂ, ಸುಸ್ವರವಾಗಿಯೂ, ಧೈರ್ಯದಿಂದಲೂ, ಅದರಲ್ಲಿಯೇ ಮನಸ್ಸನ್ನಿಟ್ಟು ಹೇಳುವುದೂ ವೇದಾಧ್ಯಾಯಿಯ ನಾಲ್ಕು ಗುಣಗಳು.

ಶಿಕ್ಷಾಸಾಹಿತ್ಯವು ವಿಪುಲವಾಗಿದೆ. ಅವುಗಳ ಅಧ್ಯಯನವು ಆವಶ್ಯಕ.

**ಕಲ್ಪ**

**ಕಲ್ಪ್ಯತೇ ಸಮರ್ಥ್ಯತೇ ಯಾಗಪ್ರಯೋಗಃ ಅತ್ರೇತಿ-ಕಲ್ಪಃ ।**



ಆಪಸ್ತಂಬ - ಬೋಧಾಯನಾದಿ ಸೂತ್ರಗಳಿಗೆ ಕಲ್ಪವೆಂದು ಹೆಸರು.

ಸೋಮಯಾಗವು ಮೂರು ವೇದಗಳಿಂದ ವಿಹಿತವಾಗಿದೆ. ದರ್ಶಪೂರ್ಣಮಾಸಯಾಗವು ಋಗ್ಯಜುರ್ವೇದಗಳಿಂದ ವಿಹಿತವಾಗಿದೆ. ಅಗ್ನಿಹೋತ್ರವು ಯಜುರ್ವೇದ ವಿಹಿತವಾದುದು. ಬ್ರಾಹ್ಮಣದಲ್ಲಿ ವಿಧಿಗಳಿವೆ, ಅರ್ಥವಾದಗಳಿವೆ. ಋಗ್ವೇದದ ಹೌತ್ರಕ್ಕೆ ಸಂಬಂಧಿಸಿದ ವಿಧಿಗಳು ಯಜುರ್ವೇದದಲ್ಲಿಯೂ ಬರುತ್ತದೆ. ಆದುದರಿಂದ ಒಂದು ಶಾಖೆಯಲ್ಲಿ ಅಥವಾ ಒಂದು ವೇದದಲ್ಲಿ ಸೋಮಯಾಗದ ಸಂಪೂರ್ಣ ಪ್ರಯೋಗವು ಸಿಕ್ಕುವುದು ಸಾಧ್ಯವಿಲ್ಲ. ದರ್ಶಪೂರ್ಣಮಾಸದಲ್ಲಿ ಮೊದಲು ಬರುವ ವತ್ಸಾಪಾಕರಣದ ವಿಧಿಯು

**ಯತ್ಪರ್ಣಶಾಖಯಾ ವತ್ಸಾನಪಾಕರೋತಿ ।** ಎಂದು ಹೇಳುವುದು.

ಇದಕ್ಕೆ ಮೊದಲು

**ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ ।**

ಎಂದು ಪರ್ಣ (ಪಲಾಶ)ದ ಉತ್ಪತ್ತಿಯ ಕಥೆಯು ಬರುತ್ತದೆ.

ಇವುಗಳನ್ನು ವಿಂಗಡಿಸಿ ಪ್ರಯೋಗವನ್ನು ಕಲ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ. ಜೈಮಿನಿಗಳು

**ಸರ್ವಶಾಖಾಪ್ರತ್ಯಯಮೇಕಂ ಕರ್ಮ ।**

ಎಲ್ಲಾ ಶಾಖೆಗಳಲ್ಲಿಯೂ ಹೇಳಿರುವ ಕರ್ಮವು ಒಂದೇ ಹೊರತು ಬೇರೆಯಲ್ಲ ಎಂದು ಸಿದ್ಧಾಂತ ಮಾಡಿರುತ್ತಾರೆ.

ಆಪಸ್ತಂಬರು

**ಆಪ್ಯಾಯಧ್ವಮಘ್ನಿಯಾ ದೇವಭಾಗಮ್....।**

ಎಂಬ ಮಂತ್ರಕ್ಕೆ ವಿನಿಯೋಗವನ್ನು ಹೇಳಿ,

**ಇಂದ್ರಾಯ ದೇವಭಾಗಮೇಕೇ ಸಮಾಮನಂತಿ ; ಮಹೇಂದ್ರಾಯೇತ್ಯೇಕೇ ।**

ಎಂದು ಬೇರೆ ಶಾಖೆಗಳ ಮಂತ್ರಗಳ ವಿನಿಯೋಗವನ್ನೂ ಹೇಳಿರುತ್ತಾರೆ.

ಹಾಗೆಯೇ ಎಷ್ಟೋ ಕಡೆಗಳಲ್ಲಿ

**ವಾಜಸನೇಯಿನಃ ಸಮಾಮನಂತಿ ।**

ಎಂದು ಉದಾಹರಿಸುತ್ತಾರೆ. ಹೀಗೆ ಆಪಸ್ತಂಬರೇ ಮೊದಲಾದ ಋಷಿಗಳು ಅನೇಕ ವೇದಗಳಲ್ಲಿ, ಅನೇಕ ಶಾಖೆಗಳಲ್ಲಿ, ಬರುವ ವಿಷಯಗಳನ್ನು ಸಂಗ್ರಹಿಸಿ, ಸೂತ್ರಗಳ ಮೂಲಕ ಅಚ್ಚುಕಟ್ಟಾದ ಪ್ರಯೋಗವನ್ನು ಬರೆದು ಉಪಕಾರ



ಮಾಡಿರುತ್ತಾರೆ. ಇಂತಹ ಕಡೆಗಳಲ್ಲಿ 'ಅವಿರೋಧೇ ಸಮುಚ್ಚಯಃ' 'ವಿರೋಧೇ ವಿಕಲ್ಪಃ' ಎಂಬ ನಿಯಮವನ್ನು ಅನುಸರಿಸಬೇಕೆಂದು ಹೇಳಿರುತ್ತಾರೆ.

ಆದುದರಿಂದ ವೇದವಿಹಿತವಾದ ಕರ್ಮಗಳನ್ನು ಮಾಡಲು ಕಲ್ಪಗಳೆಂದು ಕರೆಯಲ್ಪಡುವ ಆಪಸ್ತಂಬ, ಬೋಧಾಯನ, ಆಶ್ವಲಾಯನ, ಕಾತ್ಯಾಯನ, ಸತ್ಯಾಷಾಢ, ಮಾನವ, ಹಿರಣ್ಯಕೇಶೀಯ ಮೊದಲಾದ ಶ್ರೌತಸೂತ್ರಗಳು ಸಹಾಯಕವಾಗಿವೆ.

## ವ್ಯಾಕರಣ

ವೇದದ ಅರ್ಥವನ್ನು ತಿಳಿಯಲು ವ್ಯಾಕರಣದ ಸಹಾಯ ಅತ್ಯಾವಶ್ಯಕ. ಪೂರ್ವಮೀಮಾಂಸಾಶಾಸ್ತ್ರದಲ್ಲಿ ವ್ಯಾಕರಣದ ಆವಶ್ಯಕತೆ ಮತ್ತು ಪ್ರಯೋಜನಗಳ ಬಗ್ಗೆ ಚೆನ್ನಾಗಿ ತಿಳಿಸಲಾಗಿದೆ.

ವ್ಯಾಕರಣವನ್ನು ತಿಳಿಯದ ಸಾಮಾನ್ಯ ಜನರೂ ಶಬ್ದಗಳನ್ನು ಬಳಸಿ ತಮ್ಮ ತಮ್ಮ ವ್ಯವಹಾರಗಳನ್ನು ನಡೆಸಿಕೊಳ್ಳುತ್ತಿದ್ದಾರೆ. ಇನ್ನೊಬ್ಬರು ಮಾಡುವ ಶಬ್ದದ ಪ್ರಯೋಗವನ್ನು ಅನುಸರಿಸಿ ತಾವೂ ಸಹ ಸರಿಯಾದ ಶಬ್ದಗಳನ್ನೇ ಪ್ರಯೋಗಿಸುತ್ತಿದ್ದಾರೆ. ವ್ಯಾಕರಣದಿಂದ ನಮಗೆ ಆಗುವ ಎರಡು ಪ್ರಯೋಜನಗಳಾದ ಸರಿಯಾದ ಶಬ್ದಪ್ರಯೋಗ ಮತ್ತು ಶಬ್ದದ ಅರ್ಥಜ್ಞಾನ— ಇವೆರಡೂ ಲೋಕವ್ಯವಹಾರದಿಂದಲೇ ಆಗುತ್ತಿರುವುದರಿಂದ ವ್ಯಾಕರಣದ ವಿಶೇಷ ಪ್ರಯೋಜನವೇನು? ಎಂಬುದಾಗಿ ಆಕ್ಷೇಪಿಸಿ ಸಮಾಧಾನವನ್ನು ಹೀಗೆ ಹೇಳುತ್ತಾರೆ.

ವ್ಯಾಕರಣವು ಅತಿ ಪುರಾತನವಾದುದು. 'ವಾಕ್' ಎಂಬುದು ಬಹು ಹಿಂದೆ ಪ್ರಕೃತಿ ಪ್ರತ್ಯಯ ವಿಭಾಗಗಳಿಂದ ಕೂಡಿರಲಿಲ್ಲವೆಂದೂ, ದೇವತೆಗಳು ಇಂದ್ರನನ್ನು ಕುರಿತು ಆ ವಾಕ್ಕಿಗೆ ವ್ಯಾಕರಣವನ್ನು ರಚಿಸುವಂತೆ ಕೇಳಿದರೆಂದೂ, ಇಂದ್ರನು ವಾಕ್ಕನ್ನು ವ್ಯಾಕರಣದಿಂದ ಸಂಸ್ಕರಿಸಿದನೆಂದೂ ಒಂದು ಆಖ್ಯಾನವು ವೇದದಲ್ಲಿದೆ.

**ತಾಮಿಂದ್ರೋ ಮದ್ಧ್ಯತೋಽವಕ್ರಮ್ಯ ವ್ಯಾಕರೋತ್ತಸ್ಮಾದಿಯಂ ವ್ಯಾಕೃತಾ ವಾಗುದ್ಯತೇ.....।**

—ತೈ.ಸಂ. ೬-೪-೭೩

ಇದು ವ್ಯಾಕರಣಶಾಸ್ತ್ರದ ಹಿರಿಮೆಯನ್ನು ತಿಳಿಸುತ್ತದೆ. ವ್ಯಾಕರಣ ಶಾಸ್ತ್ರಗಳು ಅನೇಕವಿದ್ದರೂ ಈಶ್ವರನ ವರಪ್ರಸಾದದಿಂದ ಪಡೆದ ಶಿವಸೂತ್ರಗಳಿಂದ ಕೂಡಿರುವ ಪಾಣಿನಿಯ ವ್ಯಾಕರಣಶಾಸ್ತ್ರವೇ ಪ್ರಸಿದ್ಧವಾದುದು.



ಪಾಣಿನಿಯ ವ್ಯಾಕರಣಕ್ಕೆ ಮಹರ್ಷಿ ಪತಂಜಲಿಯು ವಿಸ್ತಾರವಾದ ಭಾಷ್ಯವನ್ನು ಬರೆದಿದ್ದಾರೆ. ಆ ಭಾಷ್ಯದ ಉಪೋದ್ಘಾತದಲ್ಲಿ ವ್ಯಾಕರಣಶಾಸ್ತ್ರದ ಪ್ರಯೋಜನವನ್ನು ಸಂಗ್ರಹಿಸಿ

**ರಕ್ಷೋಹಾಗಮಲಘ್ವಸಂದೇಹಾಃ ಪ್ರಯೋಜನಮ್**

ಎಂಬುದಾಗಿ ತಿಳಿಸಿದ್ದಾರೆ. ರಕ್ಷಾ, ಊಹ, ಆಗಮ, ಲಘು ಮತ್ತು ಅಸಂದೇಹಗಳು ವ್ಯಾಕರಣದ ಪ್ರಯೋಜನ.

**ರಕ್ಷಾ** : ವೇದದ ರಕ್ಷಣೆಗಾಗಿ ವ್ಯಾಕರಣವನ್ನು ಅಧ್ಯಯನ ಮಾಡಬೇಕು. ವ್ಯಾಕರಣವನ್ನು ಬಲ್ಲವನು ಪ್ರಕೃತಿ ಮತ್ತು ಪ್ರತ್ಯಯಗಳನ್ನು ಚೆನ್ನಾಗಿ ತಿಳಿಯುತ್ತಾನಾದುದರಿಂದ ಪದಗಳನ್ನು ತಪ್ಪಿಲ್ಲದೆ ಉಚ್ಚರಿಸಬಲ್ಲನು ಮತ್ತು ಅರ್ಥವನ್ನೂ ತಿಳಿಯಬಲ್ಲನು. ಹೀಗೆ ಶಬ್ದ ಮತ್ತು ಅರ್ಥಗಳನ್ನು ಚೆನ್ನಾಗಿ ತಿಳಿದು ವೇದವನ್ನು ರಕ್ಷಿಸಬಲ್ಲನು.

**ಊಹ** : ವೇದಮಂತ್ರಗಳಲ್ಲಿ ಕೆಲವೇ ಪದಗಳು ಸೂಚಿಸಲ್ಪಟ್ಟಿರುತ್ತವೆ. ಅದರಂತೆ ಬೇರೆ ಪದಗಳನ್ನು ಊಹಿಸಿಕೊಂಡು ಯಜ್ಞಗಳಲ್ಲಿ ಬಳಸಬೇಕಾಗುತ್ತದೆ. ಉದಾಹರಣೆಗೆ, "ಅಗ್ನಯೇ ಜುಷ್ಟಂ ನಿರ್ವಪಾಮಿ" ಎಂಬ ಮಂತ್ರವು ಆಗ್ನೇಯ ಯಾಗದಲ್ಲಿ ಹೇಳಲ್ಪಟ್ಟಿದೆ. ಇದನ್ನು ಅನುಸರಿಸಿ ಸೂರ್ಯದೇವತೆಯನ್ನು ಕುರಿತು ಯಾಗ ಮಾಡುವಾಗ ನಾವು ಮಂತ್ರವನ್ನು ಊಹಿಸಿಕೊಳ್ಳಬೇಕಾಗುತ್ತದೆ. "ಸೂರ್ಯಾಯ ಜುಷ್ಟಂ ನಿರ್ವಪಾಮಿ" ಎಂಬುದು ಮಂತ್ರದ ಊಹೆ. ಪ್ರಕೃತಿ ಮತ್ತು ಪ್ರತ್ಯಯದ ಕಲ್ಪನೆಯಿಲ್ಲದವನು 'ಅಗ್ನಯೇ' ಎಂಬಂತೆ 'ಸೂರ್ಯಯೇ' ಎಂದು ಊಹಿಸಿಯಾನು. ವ್ಯಾಕರಣವನ್ನು ಚೆನ್ನಾಗಿ ತಿಳಿದವನು ತಪ್ಪಾಗಿ ಊಹಿಸುವುದಿಲ್ಲ.

**ಆಗಮ** : ವೇದವನ್ನು ಅಂಗಗಳ ಸಹಿತವಾಗಿ ಅಧ್ಯಯನ ಮಾಡಬೇಕೆಂಬ ವಿಧಿ ಇದೆ. ಈ ವಿಧಿಯನ್ನು ಪಾಲಿಸಲು ವ್ಯಾಕರಣದ ಅಧ್ಯಯನ ಆವಶ್ಯಕ.

**ಲಘು** : ಇಡೀ ಶಬ್ದರಾಶಿಯನ್ನು ತಿಳಿಯಲು ಒಂದು ಚಿಕ್ಕದಾದ ಉಪಾಯ ಆವಶ್ಯಕ. ಎಲ್ಲ ಶಬ್ದಗಳನ್ನೂ ನಾವು ವಿಶ್ಲೇಷಿಸಲಾರೆವು. ಪ್ರಕೃತಿ ಮತ್ತು ಪ್ರತ್ಯಯಗಳ ವಿಭಾಗವನ್ನು ಮಾಡಿದರೆ ಶಬ್ದಗಳನ್ನು ಸುಲಭವಾಗಿ ತಿಳಿಯಬಹುದು. ಹಿಂದೊಮ್ಮೆ ಎಲ್ಲ ಶಬ್ದಗಳನ್ನೂ ತಿಳಿಸುವ ಬಯಕೆಯಿಂದ ಬೃಹಸ್ಪತಿಯು ಇಂದ್ರನಿಗೆ ಶಬ್ದಗಳನ್ನು ಹೇಳುತ್ತಾ ಹೋದನು. ಅನೇಕ ಸಾವಿರ ವರ್ಷಗಳು ಹೇಳುತ್ತಾ ಹೋದರೂ ಶಬ್ದಗಳು ಮುಗಿಯಲೇ ಇಲ್ಲ. ಹೇಳುವವನು ಬೃಹಸ್ಪತಿಯಂತಹ ಆಚಾರ್ಯ! ಕೇಳುವವನು ಇಂದ್ರ! ಆದರೂ ಶಬ್ದಗಳು ಮುಗಿಯಲಿಲ್ಲ. ಇನ್ನು ನಮ್ಮಗಳ ಪಾಡೇನು? ಆದುದರಿಂದ ಎಲ್ಲ ಶಬ್ದಗಳನ್ನೂ



ತಿಳಿಯಲು ಪ್ರಕೃತಿ ಮತ್ತು ಪ್ರತ್ಯಯದ ವಿಭಾಗವೇ ಉಪಾಯ. ಇಂತಹ ಉಪಾಯವನ್ನು ವ್ಯಾಕರಣವು ತಿಳಿಸುತ್ತದೆ. ಈ ವಿಭಾಗವನ್ನು ತಿಳಿಯುವುದೇ ವ್ಯಾಕರಣದ ಪ್ರಯೋಜನ.

**ಅಸಂದೇಹ** : ವೇದದಲ್ಲಿ ಬರುವ ಒಂದೇ ರೀತಿಯ ಶಬ್ದಗಳಿಗೆ ಉದಾತ್ತ ಮೊದಲಾದ ಸ್ವರಗಳ ದೆಸೆಯಿಂದ ಅರ್ಥವು ವ್ಯತ್ಯಾಸವಾಗುವುದಷ್ಟೆ. ಯಾವ ಸ್ವರವಿದ್ದರೆ ಯಾವ ಅರ್ಥವನ್ನು ತಿಳಿಯಬೇಕೆಂಬ ಸಂದೇಹವು ನಮಗೆ ಉಂಟಾಗುವುದು. ಇಂತಹ ಸಂದೇಹವು ನಮಗೆ ಬರದೇ ಇರಲು ವ್ಯಾಕರಣವನ್ನು ಅಧ್ಯಯನ ಮಾಡಬೇಕು. ನಿರ್ದಿಷ್ಟವಾದ ಅರ್ಥಕ್ಕೆ ನಿರ್ದಿಷ್ಟವಾದ ಸ್ವರವನ್ನು ವ್ಯಾಕರಣವು ತಿಳಿಸುವುದರಿಂದ ಸ್ವರದಿಂದ ಅರ್ಥವನ್ನು ನಿರ್ಣಯಿಸಲು ಆ ಶಾಸ್ತ್ರವು ತುಂಬಾ ಆವಶ್ಯಕ. ಈ ಪ್ರಯೋಜನಗಳಲ್ಲದೆ, ವ್ಯಾಕರಣಕ್ಕೆ ಇನ್ನೂ ಹಲವು ಪ್ರಯೋಜನಗಳಿವೆ.

ಯಜ್ಞ ಮಾಡುವ ಸಂದರ್ಭದಲ್ಲಿ ಅಪಶಬ್ದವನ್ನು ಬಳಸಬಾರದು. ಅಪಶಬ್ದವನ್ನು ಬಳಸಿದರೆ, ಸಾರಸ್ವತೀ ಎಂಬ ಇಷ್ಟಿಯನ್ನು ಮಾಡಬೇಕು; ಇದರಿಂದ ಪ್ರಾಯಶ್ಚಿತ್ತವಾಗುತ್ತದೆ ಎಂದು ವೇದವು ತಿಳಿಸುತ್ತದೆ. ಇಂತಹ ಪ್ರಾಯಶ್ಚಿತ್ತವು ನಮಗೆ ಒದಗದಿರಬೇಕಾದರೆ ವ್ಯಾಕರಣವನ್ನು ತಿಳಿಯಲೇಬೇಕು.

ಮಗುವಿಗೆ ನಾಮಕರಣವನ್ನು ಮಾಡುವಾಗ ಕೃದಂತಶಬ್ದಗಳನ್ನೇ ಬಳಸಬೇಕು; ತದ್ಧಿತಾಂತಗಳನ್ನಲ್ಲ ಎಂಬ ಮಾತು ಇದೆ.

**ಕೃತಂ ಕುರ್ಯಾತ್ ನ ತದ್ಧಿತಮ್ ।**

ಕೃದಂತ ಮತ್ತು ತದ್ಧಿತಾಂತಗಳ ಪರಿಚಯವಾಗಬೇಕಾದರೆ ವ್ಯಾಕರಣದ ಪರಿಚಯ ಆವಶ್ಯಕ.

**ಏಕಃ ಶಬ್ದಃ ಸಮ್ಯಕ್ ಜ್ಞಾತಃ ಸುಷ್ಠು ಪ್ರಯುಕ್ತಃ ಸ್ವರ್ಗೇ ಲೋಕೇ ಕಾಮಧುಕ್ ಭವತಿ ।**

ಎಂಬ ಮಾತಿನಿಂದ ಶಬ್ದವನ್ನು ಚೆನ್ನಾಗಿ ತಿಳಿದು ಬಳಸಿದರೆ ಅದು ಏನೆಲ್ಲಾ ಫಲಗಳನ್ನು ನೀಡುವುದು ಎಂದು ತಿಳಿಯುತ್ತೇವೆ. ಶಬ್ದವನ್ನು ತಪ್ಪಿಲ್ಲದೆ ಬಳಸಬೇಕಾದರೆ ವ್ಯಾಕರಣವು ಅತಿ ಆವಶ್ಯಕ. ವ್ಯಾಕರಣದಿಂದ ಸಂಸ್ಕರಿಸಲ್ಪಟ್ಟ ಶಬ್ದಗಳನ್ನು ಬಳಸುವುದರಿಂದ ಚಿತ್ತಶುದ್ಧಿಯೂ, ಅದರಿಂದ ಉಪಾಸನೆಯೂ, ತನ್ಮೂಲಕ ಮೋಕ್ಷವೂ, ವ್ಯಾಕರಣದ ಪ್ರಯೋಜನವೆಂದು ಶಾಸ್ತ್ರದಲ್ಲಿ ಹೇಳಿದೆ.

**ನಿರುಕ್ತ** : ವೇದದ ಅರ್ಥವನ್ನು ತಿಳಿಯಲು ನಿರುಕ್ತವು ಅತಿ ಆವಶ್ಯಕ. ಯಾಸ್ಕಾಚಾರ್ಯರು ನಿರುಕ್ತವನ್ನು ರಚಿಸಿದ್ದಾರೆ.



**ಅರ್ಥಾವಬೋಧೇ ನಿರಪೇಕ್ಷತಯಾ ಪದಜಾತಂ ಯತ್ರೋಕ್ತಂ ತನ್ನಿರುಕ್ತಮ್।**

ವೇದದ ಅರ್ಥವನ್ನು ತಿಳಿಯಲು ಇನ್ನೊಂದರ ಅಪೇಕ್ಷೆಯಿಲ್ಲದೆ ಪದಗಳನ್ನು ಯಾವ ಗ್ರಂಥದಲ್ಲಿ ತಿಳಿಸಿರುವರೋ ಅದು ನಿರುಕ್ತ. ಉದಾಹರಣೆಗೆ ಹಸುವೆಂಬ ಅರ್ಥವನ್ನು ಕೊಡಲು ವೇದದಲ್ಲಿ ಬಳಸಿರುವ ಎಲ್ಲಾ ಶಬ್ದಗಳನ್ನೂ ಗೌಃ, ಗ್ಮಾ, ಜ್ಮಾ, ಕ್ಷ್ಮಾ ಎಂದು ಆರಂಭಿಸಿ ದೇವಪತ್ನ್ಯಃ ಎನ್ನುವವರೆಗೆ ಸಂಗ್ರಹಿಸಿ ಕೊಡಲಾಗಿದೆ. ಹೀಗೆಯೇ ಬಂಗಾರಕ್ಕೂ, ಭೂಮಿಗೂ ಇರುವ ಹೆಸರುಗಳನ್ನೂ ಇನ್ನಿತರ ವಸ್ತುಗಳ ಹೆಸರುಗಳನ್ನೂ ಒಂದೆಡೆ ಸಂಗ್ರಹಿಸಲಾಗಿದೆ.

ನಿರುಕ್ತದಲ್ಲಿ ಮೂರು ಕಾಂಡಗಳಿವೆ. ಮೊದಲನೆಯದು ನೈಘಂಟುಕಕಾಂಡ, ಎರಡನೆಯದು ನೈಗಮಕಾಂಡ, ಮೂರನೆಯದು ದೈವತಕಾಂಡ.

ನೈಘಂಟುಕಕಾಂಡದಲ್ಲಿ ವೇದದಲ್ಲಿ ಬರುವ ಪದಗಳ ಪರ್ಯಾಯಪದಗಳನ್ನು ತಿಳಿಸಲಾಗಿದೆ. ನೈಗಮಕಾಂಡದಲ್ಲಿ ವೇದದಲ್ಲಿ ಬರುವ ಪದಗಳ ನಿರ್ವಚನ (ಶಬ್ದವು ಅರ್ಥವನ್ನು ಕೊಡುವ ರೀತಿ) ವನ್ನು ತಿಳಿಸಲಾಗಿದೆ. ನಿಗಮವೆಂದರೆ ವೇದ ಎಂದರ್ಥ. ನಿಗಮಕ್ಕೆ ಸಂಬಂಧಿಸಿದ ಕಾಂಡವಾದುದರಿಂದ ಇದನ್ನು ನೈಗಮ ಕಾಂಡ ಎಂದು ಕರೆದಿದ್ದಾರೆ. ಇದರಲ್ಲಿ ವೇದದಲ್ಲಿಯೇ ಉಲ್ಲೇಖವಾಗಿರುವ ನಿರ್ವಚನವನ್ನು ಸಮರ್ಥನೆಗಾಗಿ ಕೊಟ್ಟಿರುವುದೂ ಉಂಟು. ಮೂರನೆಯದಾದ ದೈವತಕಾಂಡದಲ್ಲಿ ದೇವತೆಗಳ ಗಣ ಮತ್ತು ಅವರ ಸ್ಥಾನಗಳನ್ನು ತಿಳಿಸಲಾಗಿದೆ. ಒಟ್ಟು ಮೂರು ದೇವತಾಗಣಗಳನ್ನು ಮಾಡಿದ್ದು ಆ ಗಣಗಳಿಗೆ ಭೂಮಿ, ಅಂತರಿಕ್ಷ ಮತ್ತು ದ್ಯುಲೋಕಗಳನ್ನು ಸ್ಥಾನಗಳನ್ನಾಗಿ ಹೇಳಿದ್ದಾರೆ. ಮೊದಲನೆಯ ಕಾಂಡದಲ್ಲಿ ಮೂರು ಅಧ್ಯಾಯಗಳೂ, ಎರಡನೆಯ ಕಾಂಡದಲ್ಲಿ ಆರು ಅಧ್ಯಾಯಗಳೂ, ಮೂರನೆಯ ಕಾಂಡದಲ್ಲಿ ಆರು ಅಧ್ಯಾಯಗಳೂ ಇವೆ. ಇದಲ್ಲದೆ ಪರಿಶಿಷ್ಟ ಕಾಂಡವೂ ನಿರುಕ್ತದಲ್ಲಿ ಇದೆ. ಅದರಲ್ಲಿ ನಿಪಾತಗಳು, ಅವುಗಳ ಲಕ್ಷಣ, ವೇದದಲ್ಲಿ ಅವುಗಳ ಅರ್ಥ, ನಿಪಾತಗಳಿಗೆ ವೇದದಲ್ಲಿ ಆಗುವ ಅರ್ಥವ್ಯತ್ಯಾಸ, ಇವುಗಳನ್ನು ಉದಾಹರಣೆಸಹಿತವಾಗಿ ತಿಳಿಸಲಾಗಿದೆ.

**ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಮ್ । ದುರ್ಮದಾಸೋ ನ ಸುರಾಯಾಮಿತ್ಯುಪಮಾರ್ಥೀಯಃ ।**

"ನ" ಎಂಬ ನಿಪಾತಕ್ಕೆ ಲೌಕಿಕಸಂಸ್ಕೃತದಲ್ಲಿ ನಿಷೇಧ ಎಂದರ್ಥ. ವೇದದಲ್ಲಿ ಸದೃಶ ಎಂದರ್ಥ. ಎಲ್ಲಾ ಶಬ್ದಗಳಿಗೂ ನಿರ್ವಚನವನ್ನು ಈ ಗ್ರಂಥವು ತಿಳಿಸುವುದರಿಂದ ಇದಕ್ಕೆ 'ನಿರುಕ್ತ' ಎಂದು ಹೆಸರು. ಎಲ್ಲಾ ಶಬ್ದಗಳೂ ಧಾತುವಿನಿಂದ ಹುಟ್ಟಿದುದಲ್ಲ ಎಂದು ಗಾರ್ಗ್ಯರು ಮತ್ತು ಕೆಲವು ವೈಯಾಕರಣರ ಅಭಿಪ್ರಾಯ.



ಶಾಕಟಾಯನರು ಎಲ್ಲವೂ ಧಾತುಜನ್ಯವೆಂದೇ ಹೇಳುತ್ತಾರೆ. ವರ್ಣಗಳ ಹೋಲಿಕೆ ಇದ್ದರೂ ನಿರ್ವಚನವನ್ನು ಹೇಳಬೇಕು ಎಂದು ಯಾಸ್ಕರ ಅಭಿಪ್ರಾಯ.

ವೇದಭಾಷ್ಯದಲ್ಲಿ ನಿರುಕ್ತದ ಸಹಾಯದಿಂದಲೇ ವೇದದ ಅರ್ಥವನ್ನು ಪ್ರತಿಪಾದಿಸಲಾಗಿದೆ.

ಜ್ಯೌತಿಷ : 'ಪಂಚಸಂವತ್ಸರಮಯಂ ಯುಗಾಧ್ಯಕ್ಷಂ ಪ್ರಜಾಪತಿಮ್' ಎಂದು ಆರಂಭಿಸಿ ವೇದಾಂಗಜ್ಯೌತಿಷವನ್ನು ಲಗಧಮುನಿಗಳು ರಚಿಸಿರುತ್ತಾರೆ. ವರಾಹ ಮಿಹಿರ, ಭಾಸ್ಕರಾಚಾರ್ಯ, ಆರ್ಯಭಟ್ಟ ಮೊದಲಾದವರು ಜ್ಯೋತಿಶ್ಶಾಸ್ತ್ರವನ್ನು ಬೆಳೆಸಿರುತ್ತಾರೆ. ಜ್ಯೌತಿಷದಲ್ಲಿ ಫಲಭಾಗವು ವೈಜ್ಞಾನಿಕವಲ್ಲ ಎಂದು ಕೆಲವರು ಆಕ್ಷೇಪಿಸುತ್ತಾರೆ. ಆದರೆ ಗ್ರಹಣ, ಹುಣ್ಣಿಮೆ, ಅಮಾವಾಸ್ಯೆ ಮೊದಲಾದವುಗಳನ್ನು ತಿಳಿಸಿಕೊಡುವ ಗಣಿತಭಾಗವು ವೈಜ್ಞಾನಿಕವೆಂಬುದರಲ್ಲಿ ಸಂಶಯವೇ ಇಲ್ಲ. ವೇದವಿಹಿತವಾದ ಕರ್ಮಗಳನ್ನು ಮಾಡಲು ಜ್ಯೋತಿಶ್ಶಾಸ್ತ್ರದ ನೆರವು ಬೇಕೇ ಬೇಕು.

**ವೇದಾ ಹಿ ಯಜ್ಞಾರ್ಥಮಭಿಪ್ರವೃತ್ತಾ**
**ನಿರ್ದಿಷ್ಟಕಾಲಾ ವಿಹಿತಾಶ್ಚ ಯಜ್ಞಾಃ ।**
**ತಸ್ಮಾದಿದಂ ಕಾಲವಿಧಾನಶಾಸ್ತ್ರಂ**
**ಯೋ ಜ್ಯೌತಿಷಂ ವೇದ ಸ ವೇದ ಯಜ್ಞಾನ್ ॥**

ವೇದಗಳು ಯಜ್ಞಗಳನ್ನು ತಿಳಿಸುವುದಕ್ಕಾಗಿ ಇವೆ. ಯಜ್ಞಗಳನ್ನು ಗೊತ್ತಾದ ಕಾಲದಲ್ಲಿಯೇ ನಡೆಸಬೇಕು. ಆ ಕಾಲವನ್ನು ತಿಳಿಸಲು ಈ ಜ್ಯೌತಿಷಶಾಸ್ತ್ರವು ಹೊರಟಿದೆ. ಆದ್ದರಿಂದ ಜ್ಯೌತಿಷವನ್ನು ಬಲ್ಲವನು ಯಜ್ಞಗಳನ್ನರಿತಂತೆಯೇ.

ಬ್ರಾಹ್ಮಣನು ದ್ವಿಜನೆನಿಸಿಕೊಳ್ಳಬೇಕಾದರೆ ಉಪನೀತನಾಗಬೇಕು. ಉಪ ನಯನದ ಕಾಲವನ್ನು 'ವಸಂತೇ ಬ್ರಾಹ್ಮಣಮುಪನಯೀತ' ಎಂದು ವೇದವು ಹೇಳುತ್ತದೆ. ಕ್ಷತ್ರಿಯ, ವೈಶ್ಯರಿಗೆ ಗ್ರೀಷ್ಮ ಶರದೃತುಗಳನ್ನು ಹೇಳುತ್ತದೆ. ಈ ಕಾಲವು ಜ್ಯೋತಿಶ್ಶಾಸ್ತ್ರದಿಂದ ನಿಶ್ಚಯಿಸಲ್ಪಡುತ್ತದೆ. ಉಪಾಕರ್ಮದ ಕಾಲವು ಶ್ರಾವಣಪೂರ್ಣಿಮೆಯೆಂದೂ ಉತ್ಸರ್ಜನದ ಕಾಲವು ಪುಷ್ಯಪೂರ್ಣಿಮೆಯೆಂದೂ ಸ್ಮೃತಿಗಳು ತಿಳಿಸುತ್ತವೆ. ಅದನ್ನು ಜ್ಯೌತಿಷವು ನಿರ್ಣಯಿಸಿಕೊಡುತ್ತದೆ. ವಿವಾಹದ ಕಾಲವನ್ನು ಆಪಸ್ತಂಬರು ಹೀಗೆ ಹೇಳುತ್ತಾರೆ :

**ಸರ್ವ ಋತವೋ ವಿವಾಹಸ್ಯ ಶೈಶಿರೌ ಮಾಸೌ ಪರಿಹಾಪ್ಯ, ಉತ್ತಮಂ ಚ ನೈದಾಘಮ್ ।**

ಈ ಕಾಲನಿರ್ಣಯವು ಜ್ಯೌತಿಷಾಧೀನ.



**ಜಾತಪುತ್ರಃ ಕೃಷ್ಣಕೇಶೋಽಗ್ನೀನಾದಧೀತ**

ಎಂದು ಅಗ್ನಿಯ ಆಧಾನವು ವಿಹಿತವಾಗಿದೆ. ಇದಕ್ಕೆ ಕಾಲವನ್ನು ಶ್ರುತಿಯು

**ವಸಂತಾ ಬ್ರಾಹ್ಮಣೋಽಗ್ನಿಮಾದಧೀತ । ಗ್ರೀಷ್ಮೇ ರಾಜನ್ಯ ಆದಧೀತ ।**

**ಶರದಿ ವೈಶ್ಯ ಆದಧೀತ ।**

ಎಂದು ತಿಳಿಸುತ್ತದೆ. ಇದನ್ನೂ ಜ್ಯೌತಿಷದಿಂದ ತಿಳಿಯಬೇಕು.

ದರ್ಶ ಮತ್ತು ಪೂರ್ಣಮಾಸ ಇಷ್ಟಿಗಳಿಗೂ, ಜ್ಯೋತಿಷ್ಟೋಮಯಾಗಕ್ಕೂ, ಅದರ ದೀಕ್ಷೆಗೂ ವೇದದಲ್ಲಿ ಕಾಲವು ನಿರ್ದಿಷ್ಟವಾಗಿದೆ. ಇದನ್ನು ತಿಳಿಯಲು ಜ್ಯೌತಿಷವು ಅತಿ ಅಗತ್ಯ.

**ಛಂದಸ್ಸು**

**ಯೋ ಹ ವಾ ಅವಿದಿತಾರ್ಷೇಯಚ್ಛಂದೋದೈವತಬ್ರಾಹ್ಮಣೇನ ಮಂತ್ರೇಣ ಯಾಜಯತಿ ವಾಧ್ಯಾಪಯತಿ ವಾ ಸ್ಥಾಣುಂ ವರ್ಛತಿ ಗರ್ತಂ ವಾ ಪತತಿ ಪ್ರ ವಾ ಮೀಯತೇ ಪಾಪೀಯಾನ್ ಭವತಿ । ತಸ್ಮಾದೇತಾನಿ ಮಂತ್ರೇ ಮಂತ್ರೇ ವಿದ್ಯಾತ್ ।**

—ಆರ್ಷಬ್ರಾಹ್ಮಣ

ಯಾವನು ಋಷಿ, ಛಂದಸ್ಸು, ದೇವತೆ, ಬ್ರಾಹ್ಮಣ ಇವುಗಳ ಅರಿವಿಲ್ಲದ ಮಂತ್ರದಿಂದ ಯಾಗ ಮಾಡಿಸುತ್ತಾನೆಯೋ, ಅಧ್ಯಯನ ಮಾಡಿಸುತ್ತಾನೆಯೋ ಅವನು ಹಾನಿಯನ್ನು ಹೊಂದುತ್ತಾನೆ. ಆದುದರಿಂದ ಪ್ರತಿಯೊಂದು ಮಂತ್ರದಲ್ಲಿಯೂ ಈ ಛಂದಸ್ಸು ಮೊದಲಾದವುಗಳನ್ನು ತಿಳಿಯಬೇಕು.

ಪಿಂಗಲನಾಗಮುನಿಗಳ ಛಂದಃಶಾಸ್ತ್ರದಲ್ಲಿ

**ಮಯರಸತಜಭನಲಗಸಂಮಿತಮ್ ।**

ಎಂದು ಎಂಟು ಗಣಗಳನ್ನೂ ಲಘುಗುರುಗಳನ್ನೂ ತಿಳಿಸಿರುತ್ತಾರೆ.

**ಆದಿಮಧ್ಯಾವಸಾನೇಷು ಯ-ರ-ತಾ ಯಾಂತಿ ಲಾಘವಮ್ ।**
**ಭ-ಜ-ಸಾ ಗೌರವಂ ಯಾಂತಿ ಮ-ನೌ ತು ಗುರುಲಾಘವಮ್ ॥**

ಎಂದು ಎಂಟು ಗಣಗಳ ಲಕ್ಷಣಗಳನ್ನು ಹೇಳಿರುತ್ತಾರೆ. ಇವುಗಳನ್ನು

**ಯಮಾತಾರಾಜಭಾನಸಲಗಂ**

ಎಂದು ಸೂತ್ರವಾಗಿ ತಿಳಿಸುವುದುಂಟು.



ಋಗ್ವೇದದಲ್ಲಿ ಪ್ರತಿಯೊಂದು ಋಕ್ಕಿಗೂ ಛಂದಸ್ಸು ಮೊದಲಾದುವನ್ನು ಹೇಳಬೇಕು. ಯಜುಸ್ಸುಗಳು ಛಂದೋಬದ್ಧವಲ್ಲ. ವೇದದ ಅರ್ಥವನ್ನು ತಿಳಿಯಲೂ ಛಂದಸ್ಸಿನ ಉಪಯೋಗವು ಇದೆ.

ಗಾಯತ್ರೀಭಿರ್ಬ್ರಾಹ್ಮಣಸ್ಯಾದಧ್ಯಾತ್ । ತ್ರಿಷ್ಟುಗ್ಭೀ ರಾಜನ್ಯಸ್ಯ ।

ಜಗತೀಭಿರ್ವೈಶ್ಯಸ್ಯ ।

ಬ್ರಾಹ್ಮಣನು ಗಾಯತ್ರೀಛಂದಸ್ಸಿನ ಮಂತ್ರದಿಂದಲೂ, ಕ್ಷತ್ರಿಯನು ತ್ರಿಷ್ಟುಪ್ ಛಂದಸ್ಸಿನ ಮಂತ್ರದಿಂದಲೂ, ವೈಶ್ಯನು ಜಗತೀಛಂದಸ್ಸಿನ ಮಂತ್ರ ದಿಂದಲೂ ಅಗ್ನಿಯ ಆಧಾನವನ್ನು ಮಾಡಬೇಕು. ಛಂದಶ್ಶಾಸ್ತ್ರವನ್ನು ತಿಳಿಯದವನು ಗಾಯತ್ರೀ ಮೊದಲಾದ ಛಂದಸ್ಸುಗಳ ಸ್ವರೂಪವನ್ನು ತಿಳಿಯಲಾರನು. ಕಾವ್ಯಗಳಲ್ಲಿಯಂತೂ ಛಂದಸ್ಸಿನ ಮಹತ್ತ್ವವನ್ನು ಹೇಳಬೇಕಾಗಿಯೇ ಇಲ್ಲ.

**ವೇದಾರ್ಥಕ್ಕೆ ಸಹಕಾರಿಯಾದ ಇತರ ಶಾಸ್ತ್ರಗಳು**

**ಪುರಾಣ–ನ್ಯಾಯ–ಮೀಮಾಂಸಾ ಧರ್ಮಶಾಸ್ತ್ರಾಂಗಮಿಶ್ರಿತಾಃ ।**
**ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ ॥**

ನಾಲ್ಕು ವೇದಗಳು, ಆರು ಅಂಗಗಳು, ಪುರಾಣ, ನ್ಯಾಯ, ಪೂರ್ವ ಮೀಮಾಂಸಾ, ಉತ್ತರಮೀಮಾಂಸಾ, ಧರ್ಮಶಾಸ್ತ್ರ ಇವು ಹದಿನಾಲ್ಕು ವಿದ್ಯಾಸ್ಥಾನ ಗಳು. ಇವು ಧರ್ಮಸ್ಥಾನಗಳೂ ಆಗಿವೆ.

**ಪುರಾಣಗಳು** : ವ್ಯಾಸರು ಬರೆದಿರುವ 18 ಪುರಾಣಗಳು, ಉಪಪುರಾಣಗಳು ಮತ್ತು ಇತಿಹಾಸಗಳೆನಿಸಿದ ರಾಮಾಯಣ–ಮಹಾಭಾರತಗಳೂ ಧರ್ಮಬೋಧಕಗಳಾಗಿವೆ. ವೇದಗಳು ಪ್ರಭುಸಂಮಿತಗಳು; ಇತಿಹಾಸ ಪುರಾಣಗಳು ಮಿತ್ರಸಂಮಿತಗಳು; ಕಾವ್ಯಗಳು ಕಾಂತಾಸಂಮಿತಗಳು. ಇವುಗಳ ಉದ್ದೇಶವೂ ಧರ್ಮೋಪದೇಶವೆಂದೇ ಹೇಳುತ್ತಾರೆ. ವೇದವಿಧಿಯು ರಾಜಾಜ್ಞೆಯಂತೆ. ಅದನ್ನು ತಪ್ಪದೇ ಪಾಲಿಸಬೇಕು.

ಮಿತ್ರನು ಒಳ್ಳೆಯ ಮಾತಿನಿಂದ ಹಿತವನ್ನು ಬೋಧಿಸುವಂತೆ ಇತಿಹಾಸ ಪುರಾಣಗಳು ಕಥೆಗಳ ಮೂಲಕ ಧರ್ಮಮಾರ್ಗವನ್ನು ಬೋಧಿಸುತ್ತವೆ. ಕಾವ್ಯಗಳು ಹೆಂಡತಿಯು ಗಂಡನ ಮನಸ್ಸನ್ನು ತಿಳಿದು ಮನೋಹರವಾದ ವಚನಗಳಿಂದ ಆತನನ್ನು ತಿದ್ದುವಂತೆ ರಸಭರಿತವಾದ ಮಾತುಗಳಿಂದ ಮಾನವನನ್ನು ಒಳ್ಳೆಯ ಮಾರ್ಗಕ್ಕೆ ತರುತ್ತವೆ. ಕಾವ್ಯಪ್ರಕಾಶಕಾರ ಮಮ್ಮಟನು ಹೀಗೆ ಹೇಳಿರುತ್ತಾನೆ.

**ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ।**



ಪುರಾಣಗಳಲ್ಲಿ ಬರುವ ಸೃಷ್ಟಿ–ಪ್ರಳಯ ವರ್ಣನೆಗಳಿಗೂ ಹಲವು ಉಪಾಖ್ಯಾನಗಳಿಗೂ ವೇದಗಳಲ್ಲಿಯೇ ಮೂಲವಿದೆಯೆಂಬುದನ್ನು ಗಮನಿಸಬಹುದು.

ಆತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ ।
ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ ।

—ತೈ.ಉ. ಬ್ರಹ್ಮಾನಂದವಲ್ಲೀ.

ಊರ್ವಶೀ–ಪುರೂರವ ವೃತ್ತಾಂತ, ತ್ರಿಪುರದಹನ, ಅಮೃತಾಹರಣ, ಹರಿಶ್ಚಂದ್ರೋಪಾಖ್ಯಾನ ಇಂತಹ ಹಲವು ಕಥೆಗಳಿಗೆ ವೇದದಲ್ಲಿ ಮೂಲವು ಕಂಡು ಬರುತ್ತದೆ. ಅದನ್ನೇ ವಿಸ್ತರಿಸಿ ಉಪಾಖ್ಯಾನಗಳ ಮೂಲಕ ಪುರಾಣಗಳು ಧರ್ಮವನ್ನು ಬೋಧಿಸುತ್ತವೆ. ವೇದಾಂತಭಾಗದ ತತ್ತ್ವಗಳನ್ನು ಸರಳವಾದ ರೀತಿಯಲ್ಲಿ ತಿಳಿಸುತ್ತವೆ. ಲೋಕಮಾನ್ಯವಾದ ಭಗವದ್ಗೀತೆಯೂ ಇತಿಹಾಸವಾದ ಮಹಾಭಾರತದ ಒಂದು ಭಾಗವಾಗಿದೆ. ಈ ಪುರಾಣಾದಿಗಳಲ್ಲಿ ಜನರು ಅನುಸರಿಸಬೇಕಾದ ನೀತಿಗಳನ್ನು ವಿಶದವಾಗಿ ಪ್ರತಿಪಾದಿಸಿರುತ್ತಾರೆ. ಪುರಾಣೇತಿಹಾಸಗಳಲ್ಲಿಯೂ ವೇದಗಳಲ್ಲಿ ಹೇಗೋ ಹಾಗೇ ತಾತ್ಪರ್ಯಾರ್ಥಕ್ಕೇ ಪ್ರಾಧಾನ್ಯವನ್ನು ಕೊಡಬೇಕೆಂಬುದನ್ನು ಗಮನಿಸಬೇಕು. ಹಾಗೆಯೇ ಸಮನ್ವಯಭಾವನೆಯನ್ನು ಇಟ್ಟುಕೊಂಡು ಅರ್ಥವನ್ನು ಮಾಡಬೇಕು. ಹೀಗೆ ಪುರಾಣಗಳು ವೇದಕ್ಕೆ ಸಹಕಾರಿಗಳಾಗಿವೆ.

**ತರ್ಕಶಾಸ್ತ್ರ** : ದ್ರವ್ಯಾದಿ ಏಳು ಪದಾರ್ಥಗಳನ್ನು ತಿಳಿಸುವ ವೈಶೇಷಿಕಶಾಸ್ತ್ರ, ಪ್ರಮಾಣ–ಪ್ರಮೇಯಾದಿ ಷೋಡಶ ಪದಾರ್ಥಗಳನ್ನು ಬೋಧಿಸುವ ಗೌತಮರ ನ್ಯಾಯಶಾಸ್ತ್ರ, ಇವೆರಡಕ್ಕೂ ನ್ಯಾಯಶಾಸ್ತ್ರವೆನ್ನುತ್ತಾರೆ. ತರ್ಕಶಾಸ್ತ್ರವೆಂದೂ ಇದಕ್ಕೆ ಹೆಸರು. 'ಯಾವುದು ಪ್ರಮಾಣ? ಯಾವುದು ಪ್ರಮಾಣವಲ್ಲ?' ಎಂದು ನಿರ್ಣಯಿಸಲು ಎಲ್ಲಾ ಶಾಸ್ತ್ರಗಳವರೂ ಎಲ್ಲಾ ಮತಗಳವರೂ ತರ್ಕಶಾಸ್ತ್ರವನ್ನೇ ಆಶ್ರಯಿಸಿರುತ್ತಾರೆ. ಕೆಲವು ಅಂಶಗಳಲ್ಲಿ ಬೇರೆ ಶಾಸ್ತ್ರಕಾರರು ತಮ್ಮದೇ ಆದ ವಾದವನ್ನು ಅನುಸರಿಸಬಹುದು. ಆದರೆ ತರ್ಕದ ನೆಲೆಗಟ್ಟಿಲ್ಲದ ಸಿದ್ಧಾಂತವು ನಿಲ್ಲಲಾರದು. ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ ಎಂಬ ನಾಲ್ಕು ಪ್ರಮಾಣಗಳನ್ನು ತರ್ಕಶಾಸ್ತ್ರದಲ್ಲಿ ಅಂಗೀಕರಿಸಿರುತ್ತಾರೆ. ಅರ್ಥಾಪತ್ತಿಪ್ರಮಾಣವನ್ನು ಮೀಮಾಂಸಕರು ಒಪ್ಪುತ್ತಾರೆ. ಪದ (ವ್ಯಾಕರಣ), ವಾಕ್ಯ (ಮೀಮಾಂಸಾ), ಪ್ರಮಾಣ (ತರ್ಕಶಾಸ್ತ್ರ) ಈ ಮೂರೂ ಯಾವ ಸಿದ್ಧಾಂತಕ್ಕಾದರೂ ಆವಶ್ಯಕವಾದವುಗಳೇ. ಶಂಕರ ಭಗವತ್ಪಾದರು, ಕುಮಾರಿಲ ಭಟ್ಟಪಾದರು ತಮ್ಮ ಸಿದ್ಧಾಂತಗಳ ಪ್ರತಿಪಾದನೆಗಾಗಿ ತರ್ಕಶಾಸ್ತ್ರವನ್ನೇ ಆಶ್ರಯಿಸಿರುತ್ತಾರೆ. 'ಎಲ್ಲಕ್ಕೂ ಒಬ್ಬ



ಕರ್ತನಿರುವಂತೆ ಪೃಥಿವೀ ಮೊದಲಾದವುಗಳಿಗೂ ಒಬ್ಬ ಕರ್ತನಿರಬೇಕು' ಎಂಬ ನ್ಯಾಯಶಾಸ್ತ್ರದ ಅನುಮಾನಪ್ರಮಾಣವಿದೆ. ಇದನ್ನು ಬ್ರಹ್ಮನ ವಿಷಯದಲ್ಲಿ ಪ್ರಮಾಣವಾಗಿ ಶಂಕರಭಗವತ್ಪಾದರೂ ಹೇಳಿರುತ್ತಾರೆ. ವೇದಾಂತಿಗಳಿಗೂ ಮೀಮಾಂಸಕರಿಗೂ ಬ್ರಹ್ಮಧರ್ಮಗಳ ವಿಷಯದಲ್ಲಿ ಶಾಬ್ದಪ್ರಮಾಣ (ಶ್ರುತಿ)ವೇ ಮುಖ್ಯವಾಗಿದೆ. ಅನುಮಾನವನ್ನೂ ಸಹಕಾರಿಯನ್ನಾಗಿ ಹೇಳುತ್ತಾರೆ. ತಾರ್ಕಿಕರು ಅನುಮಾನಪ್ರಮಾಣವನ್ನು ಮುಖ್ಯವಾಗಿ ಹೇಳಿ 'ಯಸ್ಸರ್ವಜ್ಞಸ್ಸ ಸರ್ವವಿತ್' ಎಂದು ಶ್ರುತಿಯೂ ಇದೆ ಎನ್ನುತ್ತಾರೆ.

**'ತರ್ಕಾಪ್ರತಿಷ್ಠಾನಾತ್'** : (ತರ್ಕವು ಸ್ಥಿರವಾಗಿ ನಿಲ್ಲಲಾರದು) ಎಂಬ ವೇದಾಂತಸೂತ್ರವಿದೆ. ಎಂದರೆ ಪ್ರತಿಯೊಂದಕ್ಕೂ ಒಂದು ವಿಧವಾದ ತರ್ಕವನ್ನು ಜೋಡಿಸಬಹುದು. ದೇವರಿಲ್ಲ, ಧರ್ಮವಿಲ್ಲವೆಂಬುದಕ್ಕೂ ಯುಕ್ತಿಪೂರ್ವಕವಾದ ವಾದಗಳನ್ನು ಮಂಡಿಸುವವರು ಹಲವರಿದ್ದಾರೆ. ಆದುದರಿಂದ ಕುತರ್ಕವು ಸರಿಯಲ್ಲವೆಂದು ವೇದಾಂತಿಗಳ ಅಭಿಪ್ರಾಯವೇ ಹೊರತು ತರ್ಕಶಾಸ್ತ್ರವೇ ಸರಿಯಲ್ಲವೆಂದಲ್ಲ. ವೇದಕ್ಕೆ ವಿರೋಧವಿಲ್ಲದ ತರ್ಕವು ಮಾತ್ರ ಗ್ರಾಹ್ಯ. ವೈಶೇಷಿಕ ಶಾಸ್ತ್ರವು ಪದಾರ್ಥಗಳ ಬಗ್ಗೆ ಸರಿಯಾದ ಜ್ಞಾನವನ್ನು ಕೊಡುತ್ತದೆ. **'ಲಕ್ಷಣ ಪ್ರಮಾಣಾಭ್ಯಾಂ ವಸ್ತುಸಿದ್ಧಿಃ'** ಲಕ್ಷಣ ಮತ್ತು ಪ್ರಮಾಣಗಳಿದ್ದರೇ ವಸ್ತುವು ಸಿದ್ಧಿಸುತ್ತದೆ, ಇಲ್ಲವಾದರೆ ಇಲ್ಲ ಎಂಬ ಮಾತು ಎಲ್ಲಾ ದರ್ಶನಕಾರರೂ ಅಂಗೀಕರಿಸಿರುವ ವಚನವೇ ಆಗಿದೆ. ಹೀಗೆ ತರ್ಕ (ನ್ಯಾಯ) ಶಾಸ್ತ್ರವು ಪದಾರ್ಥಗಳನ್ನು ಬೋಧಿಸಿ, ಪ್ರಮಾಣಗಳನ್ನು ವಿವೇಚಿಸಿ ವೇದಾರ್ಥವನ್ನು ತಿಳಿಯಲು ಸಹಾಯ ಮಾಡುತ್ತದೆ.

**ಪೂರ್ವ ಮತ್ತು ಉತ್ತರಮೀಮಾಂಸಾಶಾಸ್ತ್ರಗಳು** : ವೇದದ ಅರ್ಥವನ್ನು ಸರಿಯಾದ ರೀತಿಯಲ್ಲಿ ತಿಳಿಸುವುದೇ ಪೂರ್ವಮೀಮಾಂಸಾ ಮತ್ತು ಉತ್ತರ ಮೀಮಾಂಸಾಶಾಸ್ತ್ರಗಳ ಗುರಿಯಾಗಿದೆ. ವೇದದ ಪೂರ್ವಭಾಗವು ಧರ್ಮವನ್ನೂ, ವೇದಾಂತಭಾಗವು ಬ್ರಹ್ಮವನ್ನೂ ಪ್ರತಿಪಾದಿಸುತ್ತವೆ. ಪೂರ್ವಭಾಗದಲ್ಲಿಯೂ

**ಏಕಂ ಸದ್ವಿಪ್ರಾ ಬಹುಧಾ ವದಂತಿ ।**

**ಯೋ ದೇವಾನಾಂ ನಾಮಧಾ ಏಕ ಏವ ।**

ಮೊದಲಾದ ಕಡೆಗಳಲ್ಲಿ ಬ್ರಹ್ಮದ ವಿಷಯವನ್ನು ಶ್ರುತಿಯು ಹೇಳುತ್ತದೆಯೆಂದು ಕೆಲವರು ಹೇಳುತ್ತಾರೆ. ಹಾಗೆಯೇ ಉಪನಿಷತ್ತುಗಳಲ್ಲಿ ಉಪಾಸನೆಗಳ ವಿಷಯವನ್ನೂ, ಶಿಷ್ಯರ ಉಪದೇಶ ಮೊದಲಾದ ಧರ್ಮವಿಷಯಗಳನ್ನೂ ಹೇಳಲಾಗಿದೆ.



ವೇದಗಳ ತಾತ್ಪರ್ಯವನ್ನು ಗ್ರಹಿಸುವುದು ಸುಲಭವಾದ ವಿಷಯವಲ್ಲ. 'ಉದಿತೇ ಜುಹೋತಿ' 'ಅನುದಿತೇ ಜುಹೋತಿ' 'ಅತಿರಾತ್ರೇ ಷೋಡಶಿನಂ ಗೃಹ್ಣಾತಿ' 'ನಾತಿರಾತ್ರೇ ಷೋಡಶಿನಂ ಗೃಹ್ಣಾತಿ' 'ಗ್ರಾವಾಣಃ ಪ್ಲವಂತೇ' 'ವನಸ್ಪತಯಸ್ಸತ್ರ ಮಾಸತ' 'ಗಾವೋ ವಾ ಏತತ್ಸತ್ರಮಾಸತ' 'ನಾಸದಾಸೀನ್ನೋಸದಾಸೀತ್ತದಾನೀಮ್' 'ಅಸದ್ವಾ ಇದಮಗ್ರ ಆಸೀತ್' 'ಸದೇವ ಸೋಮ್ಯೇದಮಗ್ರ ಆಸೀತ್' ಹೀಗೆ ಪರಸ್ಪರ ವಿರುದ್ಧವಾಗಿ ತೋರುವ ವಾಕ್ಯಗಳಿವೆ. ಅದಕ್ಕಾಗಿ ಅಧಿಕರಣವೆಂಬ ಒಂದು ನಿಶ್ಚಿತವಾದ ಕ್ರಮವನ್ನು ಅನುಸರಿಸಿ ವಿಮರ್ಶೆ ಮಾಡಿ ಸಿದ್ಧಾಂತ ಮಾಡುತ್ತಾರೆ.

**ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಮ್ ।**
**ಪ್ರಯೋಜನಂ ಸಂಗತಿಶ್ಚ ಷೋಢಾಧಿಕರಣಂ ವಿದುಃ ॥**

ವಿಷಯವೆಂದರೆ ಆ ಅಧಿಕರಣದಲ್ಲಿ ಯಾವುದರ ಮೇಲೆ ಚರ್ಚಿಸುತ್ತಾರೆಯೋ ಅದು. ಇದು ಸಾಮಾನ್ಯವಾಗಿ ವಾಕ್ಯರೂಪವಾಗಿರುತ್ತದೆ. ಇದನ್ನು 'ವಿಷಯವಾಕ್ಯ' ವೆನ್ನುತ್ತಾರೆ. ವಿಶಯವೆಂದರೆ ಸಂಶಯವೆಂದರ್ಥ. ಸಂಶಯವು ತಲೆದೋರಿದರೇ ವಿಚಾರದ ಆವಶ್ಯಕತೆಯಷ್ಟೇ. ಈ ರೀತಿ ಅರ್ಥ ಮಾಡುವುದೇ ಅಥವಾ ಇನ್ನೊಂದು ರೀತಿ ಅರ್ಥ ಮಾಡುವುದೇ? ಎಂಬುದು ಸಂಶಯ. ಪೂರ್ವಪಕ್ಷವೆಂದರೆ ಸಿದ್ಧಾಂತಕ್ಕೆ ವಿರುದ್ಧವಾದ ಪಕ್ಷ. ಉತ್ತರಪಕ್ಷ ಅಥವಾ ಸಿದ್ಧಾಂತವು ನಾಲ್ಕನೆಯದು. ಈ ವಿಚಾರದಿಂದ ಆಗುವ ಪ್ರಯೋಜನವು ಐದನೆಯದು. ಹೊಂದಿಕೊಳ್ಳದ ವಿಷಯಗಳನ್ನು ಒಂದಾದ ಮೇಲೆ ಮತ್ತೊಂದರಂತೆ ಹೇಳಿದರೆ ತಿಳಿದುಕೊಳ್ಳುವುದು ಹೇಗೆ? ಅದಕ್ಕಾಗಿ ಅಧಿಕರಣವು ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿ, ಪೂರ್ವಾಧಿಕರಣಸಂಗತಿಗಳನ್ನು ಹೊಂದಿರಬೇಕು. ಈ ಕ್ರಮವನ್ನು ಮೀಮಾಂಸಾ ಶಾಸ್ತ್ರಗಳಲ್ಲಿ ಅನುಸರಿಸಿರುತ್ತಾರೆ. ಉದಾಹರಣೆ :

**ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ ।**

**ಯ ಏವಂ ವಿದ್ವಾನಮಾವಾಸ್ಯಾಂ ಯಜತೇ ।**

ಎಂಬ ಎರಡು ವಾಕ್ಯಗಳನ್ನು ಪೌರ್ಣಮಾಸ್ಯಧಿಕರಣದಲ್ಲಿ ವಿಷಯವಾಗಿ ತೆಗೆದುಕೊಂಡು ವಿಚಾರ ಮಾಡಿರುತ್ತಾರೆ.

ಈ ವಾಕ್ಯಗಳು ಎರಡು ಯಾಗಗಳನ್ನು ವಿಧಿಸುತ್ತವೆಯೇ? ಅಥವಾ ಪೂರ್ಣಿಮೆ ಮತ್ತು ಅಮಾವಾಸ್ಯೆಗಳಲ್ಲಿ ಮಾಡುವ ಯಾಗಗಳೆಲ್ಲವನ್ನೂ ಅನುವಾದ ಮಾಡುತ್ತವೆಯೇ? ಎಂಬುದು ಸಂಶಯ. ಇದೇ ರೀತಿಯ 'ಸಮಿಧೋ ಯಜತಿ' 'ತನೂನಪಾತಂ ಯಜತಿ' ಎಂಬ ಎರಡು ವಾಕ್ಯಗಳು ವೇದದಲ್ಲಿ ಕಂಡಾಗ ಅವು



ಎರಡು ಯಾಗಗಳನ್ನು ವಿಧಿಸುತ್ತವೆಂದು ನಿರ್ಧರಿಸಿದ್ದರಿಂದ ಈ ವಾಕ್ಯಗಳೂ ಎರಡು ಯಾಗಗಳನ್ನು ವಿಧಿಸಬೇಕಲ್ಲವೇ? ಎಂಬುದಾಗಿ ಹಿಂದಿನ ವಿಚಾರದ ಸಂಗತಿಯೂ ಇದೆ. ಮೇಲಿನ ಎರಡು ವಾಕ್ಯಗಳಲ್ಲಿ 'ಯಜತೇ' ಎಂಬ ಕ್ರಿಯಾಪದವಿದೆಯೇ ಹೊರತು ಯಾಗಮಾಡಬೇಕು ಎಂಬ ಅರ್ಥದ 'ಯಜೇತ' ಎಂಬ ಕ್ರಿಯಾಪದವು ಇಲ್ಲದುದರಿಂದ ಈ ವಾಕ್ಯಗಳು ಹೇಗೆ ವಿಧಿವಾಕ್ಯಗಳಾಗುತ್ತವೆ? ಎಂಬ ವಿಚಾರ ಬಂದರೆ, 'ಯಾವಜ್ಜೀವಮಗ್ನಿಹೋತ್ರಂ ಜುಹೋತಿ' ಎಂಬ ವಾಕ್ಯದಲ್ಲಿಯೂ 'ಜುಹೋತಿ' ಎಂಬ ಕ್ರಿಯಾಪದವಿದ್ದರೂ 'ಜುಹುಯಾತ್' ಎಂಬ ಕ್ರಿಯಾಪದದ ಅರ್ಥವನ್ನು ಗ್ರಹಿಸುವಂತೆ ಇಲ್ಲಿಯೂ ತಿಳಿದುಕೊಳ್ಳಬೇಕು ಎಂದು ಸಮಾಧಾನ ಹೇಳಬಹುದು. ಅಂತೂ ಈ ಎರಡು ವಾಕ್ಯಗಳಿಗೆ ಪೂರ್ವಸಂಗತಿ ಇರುವುದರಿಂದ ಇವು ಎರಡು ಯಾಗಗಳನ್ನು ವಿಧಿಸುತ್ತಿವೆಯೆಂದು ಪೂರ್ವಪಕ್ಷ.

ಮೇಲಣ ವಾಕ್ಯದಲ್ಲಿ ದ್ರವ್ಯ ಮತ್ತು ದೇವತೆಗಳನ್ನು ತಿಳಿಸದೇ ಇರುವುದರಿಂದ ಇವು ಯಾಗವನ್ನು ವಿಧಾನ ಮಾಡುವ ವಾಕ್ಯಗಳಲ್ಲ. ಯಾಗವೆಂದರೆ— 'ದೇವತೋದ್ದೇಶಪೂರ್ವಕದ್ರವ್ಯತ್ಯಾಗಃ ಪ್ರಕ್ಷೇಪಾಂಗಕಃ' — ದೇವತೆಯನ್ನು ಉದ್ದೇಶಿಸಿ, ವಿಹಿತವಾದ ಸ್ಥಳದಲ್ಲಿ ದ್ರವ್ಯವನ್ನು ನನ್ನದಲ್ಲವೆಂದು ಪ್ರಕ್ಷೇಪ ಮಾಡುವುದು. ಅಲ್ಲದೆ ಮೇಲಣ ವಾಕ್ಯದಲ್ಲಿ ಇರುವ 'ಯತ್' ಶಬ್ದವು ಈ ವಾಕ್ಯಗಳು ವಿಧಿವಾಕ್ಯಗಳಲ್ಲವೆಂಬುದಕ್ಕೆ ಸೂಚಕವಾಗಿದೆ. ಆದುದರಿಂದ ಮೇಲಣ ವಾಕ್ಯಗಳು ಎರಡು ಯಾಗಗಳನ್ನು ವಿಧಿಸುತ್ತಿಲ್ಲ. ಅಮಾವಾಸ್ಯೆ ಮತ್ತು ಪೌರ್ಣಮಿಯಂದು ನಡೆಸುವ ಆರು ಯಾಗಗಳ ಸಮುದಾಯವನ್ನು ಹೇಳುತ್ತಿವೆ ಇದು ಸಿದ್ಧಾಂತ. ಹೀಗೆ ಸಮುದಾಯವನ್ನು ಅನುವಾದ ಮಾಡಿದುದರಿಂದ ಆ ಆರು ಯಾಗಗಳಿಗೆ ಮಾತ್ರವೇ 'ಸ್ವರ್ಗಕಾಮೋ ಯಜೇತ' ಎಂಬ ಪ್ರಯೋಜನ ವಾಕ್ಯದೊಡನೆ ಸಂಬಂಧವು ಬರುತ್ತದೆ. ಹೀಗೆ ಅವುಗಳಿಗೇ ಸಂಬಂಧ ಬರಲೆಂದು ವಾಕ್ಯಗಳು ಬಂದಿವೆ. ಇದು ಪ್ರಯೋಜನ.

ಬ್ರಹ್ಮಸೂತ್ರಗಳಲ್ಲಿಯೂ ವಿಚಾರ ಮಾಡುವಾಗ ಇದೇ ರೀತಿಯ ಅಧಿಕರಣ ಪದ್ಧತಿಯನ್ನು ಅನುಸರಿಸುತ್ತಾರೆ.

'ಪುರಾಣ ನ್ಯಾಯ ಮೀಮಾಂಸಾ' ಎಂಬ ಮೇಲಿನ ಶ್ಲೋಕದಲ್ಲಿ ಮೀಮಾಂಸಾ ಎಂಬ ಒಂದೇ ಪದವಿರುವುದರಿಂದ ಪೂರ್ವೋತ್ತರ ಮೀಮಾಂಸೆಗಳು ಒಂದೇ ಶಾಸ್ತ್ರ ಎಂದು ಕೆಲವರ ಅಭಿಪ್ರಾಯ.

ವೇದದ ಅಪೌರುಷೇಯತ್ವವಾದ, ಸ್ವತಃ ಪ್ರಾಮಾಣ್ಯವಾದ, ಉಪಕ್ರಮ ಪ್ರಾಧಾನ್ಯವಾದ–ಇಂತಹ ಮುಖ್ಯ ವಿಷಯಗಳಲ್ಲಿ ಎರಡು ಮೀಮಾಂಸೆಗಳಲ್ಲಿಯೂ ಏಕಮತವಿದೆ. ಆದರೆ ಕೆಲವು ವಿಷಯಗಳಲ್ಲಿ ಭಿನ್ನಮತವೂ ಉಂಟು.



ಪೂರ್ವಮೀಮಾಂಸಾಕಾರರು ದೇವತೆಗಳಿಗೆ ವಿಗ್ರಹವೇ ಮೊದಲಾದವು ಗಳನ್ನು–ಎಂದರೆ ದೇವತೆಗಳಿಗೆ ಗೊತ್ತಾದ ಆಕಾರ, ಹವಿಃಸ್ವೀಕಾರ, ಫಲಗಳನ್ನು ಕೊಡುವ ಸಾಮರ್ಥ್ಯ, ಅನುಗ್ರಹಬುದ್ಧಿ, ಫಲದಾತೃತ್ವ ಇವುಗಳನ್ನು ಒಪ್ಪುವು ದಿಲ್ಲ. ಮಂತ್ರಗಳಲ್ಲಿ ಅಥವಾ ಅರ್ಥವಾದಗಳಲ್ಲಿ ಬರುವ 'ವಜ್ರಹಸ್ತಃ ಪುರಂದರಃ' ಮೊದಲಾದ ಪದಗಳು ಕೇವಲ ಸ್ತುತಿಗಳು ಎನ್ನುತ್ತಾರೆ. ವೇದಾಂತಿಗಳು ದೇವತೆಗಳ ವಿಗ್ರಹಸ್ವೀಕಾರವನ್ನು ಅಂಗೀಕರಿಸುತ್ತಾರೆ.

**ಯೋಽಶ್ವಮೇಧೇನ ಯಜತೇ । ಯ ಉ ಚೈನಮೇವಂ ವೇದ ।**

ಮೊದಲಾದ ಕಡೆಗಳಲ್ಲಿ ಜ್ಞಾನದ ಪ್ರಶಂಸೆ ಮಾತ್ರವೆಂದೂ, ಜ್ಞಾನಮಾತ್ರ ದಿಂದ ಫಲವು ಸಿಕ್ಕುವುದಾದರೆ ಕರ್ಮಗಳನ್ನು ಯಾರೂ ಮಾಡುವುದಿಲ್ಲವೆಂದೂ ಪೂರ್ವಮೀಮಾಂಸಾಕಾರರ ಮತ.

ವೇದಾಂತಿಗಳು 'ಜ್ಞಾನಕ್ಕೂ ಫಲವುಂಟು. ಆದರೆ ಕರ್ಮಕ್ಕೆ ಸಿಕ್ಕುವ ಫಲವೇ ಸಿಕ್ಕುತ್ತದೆಯೆಂದಲ್ಲ. ಅಗ್ನಿಹೋತ್ರ, ದರ್ಶಪೂರ್ಣಮಾಸ, ಜ್ಯೋತಿಷ್ಟೋಮಗಳಿಗೆ ಸ್ವರ್ಗವೇ ಫಲವಾದರೂ ಅಲ್ಪಪ್ರಯತ್ನದಿಂದ ಮಾಡಬಹುದಾದ ಅಗ್ನಿ ಹೋತ್ರಕ್ಕೂ ಹೆಚ್ಚು ಪ್ರಯತ್ನದಿಂದ ಸಾಧ್ಯವಾಗುವ ಜ್ಯೋತಿಷ್ಟೋಮಕ್ಕೂ ಫಲ ದಲ್ಲಿ ವೈಷಮ್ಯವನ್ನು ಒಪ್ಪುವಂತೆ ಇಲ್ಲಿಯೂ ಫಲದಲ್ಲಿ ಹೆಚ್ಚುಕಡಿಮೆಗಳಿವೆ. ಆದುದರಿಂದ ಜ್ಞಾನಕ್ಕೂ ಫಲವುಂಟು' ಎಂದು ಪ್ರತಿಪಾದಿಸುತ್ತಾರೆ.

ವೇದಭಾಷ್ಯಕಾರರು ಎರಡು ಮತಗಳನ್ನೂ ಹೇಳಿರುತ್ತಾರೆ.

### ವೇದಾರ್ಥಜ್ಞಾನ—ಪೂರ್ವಸಿದ್ಧತೆ

ವಿಸ್ತಾರವಾದ ಶಬ್ದರಾಶಿಯನ್ನು ಒಳಗೊಂಡಿರುವ ವೇದಗಳ ಅರ್ಥವನ್ನು ತಿಳಿಯುವುದು ವೇದಾಧ್ಯಯನ ಮಾಡಿರುವವನಿಗೂ ವೇದಾಧ್ಯಯನ ಮಾಡದಿರು ವವನಿಗೂ ಅತ್ಯಾವಶ್ಯಕ. ಆದರೆ ವೇದಾರ್ಥವನ್ನು ತಿಳಿಯುವ ಮೊದಲು ಕೆಲವು ಪೂರ್ವಸಿದ್ಧತೆಗಳು ಮತ್ತು ಜಾಗರೂಕತೆಗಳು ಅಗತ್ಯ. ಮೊದಲನೆಯದಾಗಿ ವೇದದ ಭಾಷೆಯು ಒಂದು ತೆರನಾದುದು. ಒಂದೆಡೆ ನಾವು ಬಳಸುವಂತಹ ವಾಕ್ಯಗಳಿವೆ.

**ಶ್ರೇಷ್ಠತಮಾಯ ಕರ್ಮಣ ಇತ್ಯಾಹ ।**

**ಯಜ್ಞೋ ಹಿ ಶ್ರೇಷ್ಠತಮಂ ಕರ್ಮ ।**

ತೈ.ಬ್ರಾ. 3-2-3.

ಶ್ರೇಷ್ಠವಾದ ಕರ್ಮಕ್ಕಾಗಿ ಎಂಬುದು ಶ್ರುತಿ. ಯಜ್ಞವೇ ಶ್ರೇಷ್ಠವಾದ ಕರ್ಮ.



ಒಂದೆಡೆ ಶಾಸ್ತ್ರವನ್ನು ಬಲ್ಲವನೂ ಸಹ ಸುಲಭವಾಗಿ ಶಾಸ್ತ್ರದ ಸಹಾಯವಿಲ್ಲದೇ ಊಹಿಸಲಾಗದ ಪದಗಳನ್ನೊಳಗೊಂಡಿದೆ.

ಆನಡಾದಿದ್ಗ್ರಸಿಷ್ಟ್ವ ಓಷಧೀರಜೀಗಃ ।

—ತೈ.ಸಂ. 4-6-36

ಆನಟ್ + ಆತ್ + ಇತ್ + ಗ್ರಸಿಷ್ಟಃ + ಓಷಧೀಃ + ಅಜೀಗಃ

ಆದುದರಿಂದ ವೇದಾರ್ಥವನ್ನು ತಿಳಿಯಲು ಯತ್ನಿಸುವ ಮುನ್ನ ಚೆನ್ನಾದ ವ್ಯಾಕರಣಜ್ಞಾನ ಆವಶ್ಯಕ. ಇದಲ್ಲದೆ ಆಯಾ ಶಾಖೆಯಲ್ಲಿ ವಿಶೇಷವಾಗಿ ಹೇಳಿರುವ ಪ್ರಾತಿಶಾಖ್ಯದ ಸೂತ್ರಜ್ಞಾನವೂ ಆವಶ್ಯಕ. ವೇದದಲ್ಲಿ ಬರುವ ಪದಗಳು ಕೆಲವೆಡೆ ಲೋಕದಲ್ಲಿ ಪ್ರಸಿದ್ಧಿ ಇಲ್ಲದ ಅರ್ಥವನ್ನೂ ತಿಳಿಸುವುದುಂಟು.[1] ಅಂತಹ ಅರ್ಥವನ್ನು ತಿಳಿಯಲು ನಿರುಕ್ತ (ವೈದಿಕ ನಿಘಂಟು) ವನ್ನು ಚೆನ್ನಾಗಿ ತಿಳಿದಿರಬೇಕು. ಹಿಂದಿನ ಪ್ರಕರಣದಲ್ಲಿ ತಿಳಿಸಿದಂತೆ ವೇದಾರ್ಥವನ್ನರಿಯಲು ಷಡಂಗಗಳನ್ನು ಚೆನ್ನಾಗಿ ತಿಳಿದಿರಬೇಕಲ್ಲದೆ ಮೀಮಾಂಸಾಶಾಸ್ತ್ರವನ್ನೂ ಸಹ ವಿಶೇಷವಾಗಿ ತಿಳಿದಿರ ಬೇಕು. ಈ ಎಲ್ಲ ಪರಿಕರಗಳಿಂದ ಕೂಡಿ ವೇದಾರ್ಥವನ್ನು ನಿರ್ಣಯಿಸಬೇಕು. ಹೀಗೆ ನಿರ್ಣಯಿಸುವಾಗ ನಾನಾ ಕಡೆಗಳಲ್ಲಿ ಹೇಳಿರುವ ಮಂತ್ರಗಳನ್ನು ಒಂದೆಡೆಗೆ ತಂದುಕೊಂಡು ಏಕವಾಕ್ಯತೆಯನ್ನಾಗಿ[2] ಪರಿವರ್ತಿಸಿಕೊಳ್ಳಬೇಕಾದದ್ದು ಅಗತ್ಯ. ಅಲ್ಲದೆ ಒಂದೊಂದು ವೇದಮಂತ್ರಗಳಿಗೆ ಒಂದೊಂದು ವಿನಿಯೋಗವು ಪ್ರಸಿದ್ಧ ವಾಗಿದೆ. ಋಗ್ವೇದದ ಮಂತ್ರಗಳು ಸ್ತೋತ್ರಪ್ರಧಾನವಾಗಿಯೂ, ಯಜುರ್ವೇದ ಮಂತ್ರಗಳು ಯಜ್ಞಪ್ರಕ್ರಿಯೆಯನ್ನು ವಿಶೇಷವಾಗಿ ಹೇಳತಕ್ಕವುಗಳಾಗಿಯೂ, ಸಾಮವೇದವು ಗಾನಪ್ರಧಾನವಾಗಿಯೂ, ಅಥರ್ವವೇದದ ಮಂತ್ರಗಳು ಔಷಧಿಗಳು, ಚಿಕಿತ್ಸೆ ಮುಂತಾದ ವಿಷಯಗಳನ್ನು ವಿಶೇಷವಾಗಿ ತಿಳಿಸುತ್ತವೆ. ಆಯಾ ವೇದದ ಅರ್ಥವನ್ನು ತಿಳಿಯುವಾಗ ಈ ಹಿನ್ನೆಲೆಯು ತುಂಬ ಅಗತ್ಯ. ಯಜ್ಞಗಳ ಪ್ರಕ್ರಿಯೆಯ ಪೂರ್ಣ ಮನನವಾದ ಹೊರತು ಯಜುರ್ವೇದದ ಮಂತ್ರಗಳ ಅರ್ಥವನ್ನು ಚೆನ್ನಾಗಿ ಅರಿಯಲಾರೆವು. ಹೀಗೆ ಆಯಾ ವೇದವು ಏತಕ್ಕಾಗಿ ಇದೆ ಎಂಬ ಹಿನ್ನೆಲೆಯಲ್ಲಿ ವೇದಾರ್ಥವನ್ನು ತಿಳಿಯಬೇಕು.

---

1. 'ನ' ಎಂಬ ಶಬ್ದಕ್ಕೆ ನಿಷೇಧ ಎಂಬ ಅರ್ಥ ಪ್ರಸಿದ್ಧ. ಕೆಲವೆಡೆ 'ನ' ಎಂಬುದಕ್ಕೆ ವೇದದಲ್ಲಿ ಉಪಮಾ (ಹೋಲಿಕೆ) ಎಂಬರ್ಥವಿದೆ.

2. ನಾನಾ ಕಡೆಗಳಲ್ಲಿ ಹಂಚಿಹೋಗಿರುವ ವಾಕ್ಯಗಳನ್ನು ಅರ್ಥಕ್ಕೆ ಅನುಗುಣವಾಗಿ ಒಂದೆಡೆ ಜೋಡಿಸಿಕೊಂಡು ಇಡೀ ಅರ್ಥವನ್ನು ಗ್ರಹಿಸುವಿಕೆ. ಹೀಗೆ ಅರ್ಥ ಮಾಡಿಕೊಳ್ಳದಿದ್ದರೆ ಕೆಲವೆಡೆ ತಪ್ಪಾದ ಅರ್ಥ ಬರುವ ಸಂದರ್ಭವಿರುತ್ತದೆ.



ಎರಡನೆಯದಾಗಿ, ವೇದದ ಅವಾಂತರವಿಭಾಗವನ್ನು ಮಾಡುವಾಗ ಮಂತ್ರ, ವಿಧಿ, ಅರ್ಥವಾದ, ಕರ್ಮಕಾಂಡ, ಉಪಾಸನಾಕಾಂಡ, ಜ್ಞಾನಕಾಂಡ, ಸಂಹಿತಾ, ಬ್ರಾಹ್ಮಣ, ಆರಣ್ಯಕ, ಉಪನಿಷತ್ ಮುಂತಾದ ಹಲವು ವಿಭಾಗಗಳನ್ನು ಮಾಡಿರುವುದರಿಂದ ನಾವು ಮಂತ್ರಾರ್ಥವನ್ನು ತಿಳಿಯುವಾಗ ಯಾವ ವಿಭಾಗದ್ದೆಂಬುದನ್ನೂ, ಅದರ ತಾತ್ಪರ್ಯವೇನು ಎಂಬುದನ್ನೂ ತಿಳಿಯಬೇಕು. ಕೆಲವೊಮ್ಮೆ ಕರ್ಮವನ್ನು ಪ್ರಶಂಸಿಸಿ, ಜ್ಞಾನವನ್ನು ದೂಷಿಸುವುದುಂಟು. ಆಗ ಅದು ಕರ್ಮಪ್ರಕರಣದ ಉತ್ಕರ್ಷೆಯ ಮಾತೇ ಹೊರತು ಜ್ಞಾನವು ದೂಷ್ಯವೆಂಬುದಲ್ಲ. ಹೀಗೆ ಶಾಸ್ತ್ರಗಳ ಜ್ಞಾನವನ್ನು ಚೆನ್ನಾಗಿ ಪಡೆದು ವೇದಾರ್ಥಕ್ಕಾಗಿ ಯತ್ನಿಸಬೇಕು. ಅಲ್ಪ ತಿಳುವಳಿಕೆಯಿಂದ ವೇದಾರ್ಥವನ್ನು ತಿಳಿಯಹೊರಟರೆ ತಪ್ಪಾಗಿಯೇ ಅರ್ಥವಾಗುತ್ತದೆ. ಅಲ್ಪ ತಿಳುವಳಿಕೆಯುಳ್ಳವನನ್ನು ಕಂಡರೆ ಮೋಸ ಮಾಡುತ್ತಾನೆಂದು ವೇದವೇ ಹೆದರುತ್ತದೆಯಂತೆ!

ಬಿಭೇತ್ಯಲ್ಪಶ್ರುತಾದ್ವೇದಃ ಮಾಮಯಂ ಪ್ರತರಿಷ್ಯತಿ

ಎಂಬ ವಚನವಿದೆ. ವೇದಾರ್ಥವನ್ನು ತಿಳಿಯಹೊರಟಾಗ ಬೇಕಾಗುವ ಸಿದ್ಧತೆ ಮತ್ತು ಜಾಗರೂಕತೆಯನ್ನು ಹೀಗೆ ಸಂಗ್ರಹಿಸಬಹುದು.

1) ವೇದಗಳು ಪರಮಾತ್ಮನ ಉಸಿರಿನಂತೆ ಇದ್ದು ಪರಮಾತ್ಮನನ್ನು ತಿಳಿಸಲು ಹೊರಟಿವೆ ಎಂಬುದಾಗಿ ತಿಳಿದು ವೇದಾರ್ಥವನ್ನರಿಯಲು ಯತ್ನಿಸಬೇಕು.

2) ಕರ್ಮಕಾಂಡವು ಚಿತ್ತದ ಶುದ್ಧಿಯನ್ನೇ ಪ್ರಧಾನಫಲವನ್ನಾಗಿ ಹೊಂದಿದೆ ಎಂಬುದಾಗಿಯೂ, ಉಪಾಸನಾಕಾಂಡವು ಚಿತ್ತಶುದ್ಧಿಯಾದವನ ಸಾಧನಪ್ರಕಾರವನ್ನು ತಿಳಿಸುತ್ತದೆಯೆಂಬುದಾಗಿಯೂ, ಜ್ಞಾನಕಾಂಡವು ಪರವಸ್ತುವಿನ ಸ್ವರೂಪವನ್ನು ತಿಳಿಸುತ್ತದೆ ಎಂಬ ವಿಷಯವಿಭಾಗಜ್ಞಾನ ಅಗತ್ಯ.

3) ಲೋಕದಲ್ಲಿ ನಾವು ಕಾಣುವ ನಿಯಮಗಳೇ ಸೃಷ್ಟಿಯಲ್ಲಿಯೂ ಯಥಾವತ್ ಇರಬೇಕೆಂಬುದನ್ನು ಬಿಟ್ಟು ಸೃಷ್ಟಿಯೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿ ವೇದದ ಅರ್ಥವನ್ನು ತಿಳಿಯಬೇಕು.

4) ಸಾವಿರಾರು ವರ್ಷಗಳಿಂದ ಜನಾಂಗವೊಂದು ನಂಬಿ ನಡೆದು ಬಂದಿರುವ ರೀತಿಗೆ ಪ್ರಮಾಣಭೂತವಾದ ಗ್ರಂಥ ಇದು ಎಂಬ ಹಿನ್ನೆಲೆಯೂ ಅಗತ್ಯ.

5) ಕರ್ಮಕಾಂಡದ ಅರ್ಥ ತಿಳಿಯುವಾಗ ಯಜ್ಞಗಳ, ಅದರ ಸಾಧನಗಳ ಚೆನ್ನಾದ ಪರಿಚಯವು ಅಗತ್ಯ.

೬) ವೇದಾಂಗಗಳಾದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಕಲ್ಪ ಮತ್ತು ಜ್ಯೋತಿಷ್ಯ ಇವುಗಳನ್ನೂ ಪೂರ್ವೋತ್ತರಮೀಮಾಂಸೆಗಳ ನ್ಯಾಯವನ್ನೂ ತಿಳಿದೇ ವೇದಾರ್ಥವನ್ನು ತಿಳಿಯಬೇಕು.



7) ಪ್ರಸಿದ್ಧವಾದ ಅರ್ಥವು ಹೊಂದಿಕೊಳ್ಳುವಾಗ ಅಪ್ರಸಿದ್ಧವಾದ ಅರ್ಥವನ್ನು ಮಾಡಬಾರದು.

8) ಇಂದಿನ ಎಲ್ಲ ವಿಚಾರಗಳೂ ವೇದದಲ್ಲಿಯೇ ಇವೆಯೆಂಬ ಆಗ್ರಹದಿಂದ ವೇದದಿಂದ ಆ ರೀತಿಯ ಅರ್ಥವು ಹೊರಡುವಂತೆ ಯತ್ನಿಸಬಾರದು.

9) ವೇದಾಧ್ಯಯನವನ್ನು ಮಾತ್ರ ಮಾಡಿರುವವರು ಶಾಸ್ತ್ರಗಳನ್ನು ತಿಳಿದು, ಶಾಸ್ತ್ರಾಧ್ಯಯನವನ್ನು ಮಾತ್ರ ಮಾಡಿರುವವರು ವೇದಾಧ್ಯಯನವನ್ನು ಕ್ರಮವಾಗಿ ಸಂಪೂರ್ಣ ಮಾಡಿಯೇ ವೇದಾರ್ಥವನ್ನು ತಿಳಿಯಲು ಯತ್ನಿಸಬೇಕು.

10) ಮೇಲಣ ಎಲ್ಲ ಸಂಗತಿಗಳನ್ನೂ ಸಮರಸವಾಗುವಂತೆ ಹೊಂದಿಸಿಕೊಂಡಾಗ ನಾವು ವೇದದ ಅರ್ಥವನ್ನು ಚೆನ್ನಾಗಿ ತಿಳಿಯಬಹುದಾಗಿದೆ.

## ವೇದದಲ್ಲಿಯ ಶಬ್ದ ಮತ್ತು ಅರ್ಥ

ವೇದದಲ್ಲಿಯ ಶಬ್ದಗಳು ಲೋಕದಲ್ಲಿಯ ಶಬ್ದಗಳಂತೆ ಇರುವುದಿಲ್ಲ. ಆದುದರಿಂದ ಆ ವ್ಯತ್ಯಾಸವನ್ನು ತಿಳಿಯುವುದು ಅವಶ್ಯ. ವೇದಾರ್ಥವನ್ನು ತಿಳಿಯುವಾಗಲೂ ಮೇಲುನೋಟದ ಅರ್ಥವು ಒಂದು ರೀತಿಯಲ್ಲಿದ್ದರೆ ತಾತ್ಪರ್ಯವೇ ಬೇರೆಯಾಗಿರುತ್ತದೆ. ವೇದದ ಯಾವುದೋ ಒಂದು ಭಾಗದ ಮಂತ್ರವನ್ನು ನೋಡಿ ಅದೇ ತಾತ್ಪರ್ಯವೆಂಬುದಾಗಿ ತಿಳಿದು ವೇದವು ಅಸಂಗತವಾದ ವಿಷಯಗಳನ್ನು ತಿಳಿಸುತ್ತದೆ ಎಂದು ಕೆಲವರು ಹೇಳುತ್ತಾರಷ್ಟೆ. ಆದರೆ ತಾತ್ಪರ್ಯವನ್ನು ನಿರ್ಣಯಿಸುವ ರೀತಿ ಏನು ಎಂಬುದು ನಮ್ಮ ಶಾಸ್ತ್ರಗಳಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿದೆ.[1] ಆದ್ದರಿಂದ ವೇದದ ಶಬ್ದಗಳ ವಿಷಯದಲ್ಲಿಯೂ ಅರ್ಥವಿಷಯದಲ್ಲಿಯೂ ಎಚ್ಚರಿಕೆ ಅಗತ್ಯ. ಈ ಹಿನ್ನೆಲೆಯಲ್ಲಿ ವೇದದ ಶಬ್ದಗಳು ಮತ್ತು ಲೋಕದ ಶಬ್ದಗಳು ಇವುಗಳ ಸಾಮ್ಯ-ವೈಷಮ್ಯಗಳನ್ನೂ ವೇದದ ಅಂತರಾರ್ಥವನ್ನು ತಿಳಿಯುವ ಬಗೆಯನ್ನೂ ವಿವರಿಸಲಾಗುತ್ತದೆ.

## ವೈದಿಕಶಬ್ದ-ಲೌಕಿಕಶಬ್ದ

ವೇದದ ಅರ್ಥವನ್ನು ತಿಳಿಯುವ ಮೊದಲು ವೇದದಲ್ಲಿರುವ ಸಂಸ್ಕೃತ ಶಬ್ದಗಳಿಗೂ ಲೌಕಿಕಸಂಸ್ಕೃತಶಬ್ದಗಳಿಗೂ ಇರುವ ಹೋಲಿಕೆ-ವ್ಯತ್ಯಾಸಗಳನ್ನು ತಿಳಿಯುವುದು ಆವಶ್ಯಕ. ವೇದದಲ್ಲಿ ಬರುವ ಬಹುಪಾಲು ಶಬ್ದಗಳು ಲೌಕಿಕಭಾಷೆಯಲ್ಲಿ ಬಳಕೆಯಲ್ಲಿರುವ ಶಬ್ದಗಳೇ ಆಗಿವೆ. ನಾಮಪದಗಳೂ, ಕ್ರಿಯಾಪದಗಳೂ ಮತ್ತು ಪ್ರತ್ಯಯಗಳೂ ಸಾಧಾರಣವಾಗಿ ಒಂದೇ ಆಗಿರುತ್ತವೆ.

---

1. ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವ, ಅರ್ಥವಾದ, ಉಪಪತ್ತಿ ಇವುಗಳಿಂದ ಮಂತ್ರತಾತ್ಪರ್ಯವನ್ನು ನಿರ್ಣಯಿಸಬೇಕು.



ತ್ವಮಗ್ನೇ ಸೂರ್ಯವರ್ಚಾ ಅಸಿ ಸಂ ಮಾಮಾಯುಷಾ ವರ್ಚಸಾ ಪ್ರಜಯಾ ಸೃಜ ।

ಎಂಬ ವೈದಿಕಮಂತ್ರದಲ್ಲಿ ಬರುವ ಎಲ್ಲ ನಾಮಪದಗಳೂ ಮತ್ತು ಕ್ರಿಯಾಪದಗಳೂ ಲೌಕಿಕಸಂಸ್ಕೃತಪದಗಳಂತೆಯೇ ಇವೆ. ತ್ವಮ್, ಅಗ್ನೇ, ಸೂರ್ಯವರ್ಚಾಃ, ಅಸಿ, ಸಮ್, ಮಾಮ್, ಆಯುಷಾ, ವರ್ಚಸಾ, ಪ್ರಜಯಾ, ಸೃಜ — ಎಂಬ ಪದಗಳು ಈ ಮಂತ್ರದಲ್ಲಿ ಇವೆ. ಇದರಲ್ಲಿ ಸಮ್ ಎಂಬುದು ಕ್ರಿಯಾಪದದ ಹಿಂದೆ ಇರಬೇಕಾದ ಉಪಸರ್ಗ. ಅದು ಇಲ್ಲಿ ನಾಮಪದದ ಹಿಂದೆ ಇದೆ. 'ಸೃಜ' ಎಂಬ ಕ್ರಿಯಾಪದದೊಡನೆ ಅದರ ಅನ್ವಯವಾಗುತ್ತದೆ. ಲೌಕಿಕಸಂಸ್ಕೃತದಲ್ಲಿ ಉಪಸರ್ಗವು ಕ್ರಿಯಾಪದದ ಹಿಂದೆಯೇ ಇರಬೇಕೆಂಬ ನಿಯಮವಿದೆ. ಇದನ್ನು 'ತೇ ಪ್ರಾಗ್ಧಾತೋಃ' ಎಂಬ ಸೂತ್ರದಿಂದ ಪಾಣಿನಿಯೂ ತಿಳಿಸುತ್ತಾನೆ. (ಪಾ.ಸೂ. ೧.೪.೮೦). ವೇದದಲ್ಲಿ ಉಪಸರ್ಗಕ್ಕೂ ಕ್ರಿಯಾಪದಕ್ಕೂ ನಡುವೆ ಬೇರೆ ಪದಗಳೂ ಬರಬಹುದು. ಇದನ್ನೂ ಪಾಣಿನಿಯೇ ತಿಳಿಸಿರುತ್ತಾನೆ. ವ್ಯವಹಿತಾಶ್ಚ (ಪಾ.ಸೂ. ೧-೪-೮೨). ಈ ವ್ಯತ್ಯಾಸವನ್ನು ಬಿಟ್ಟರೆ ಮೇಲೆ ಹೇಳಿದ ವೇದಮಂತ್ರದಲ್ಲಿ ಎಲ್ಲ ಶಬ್ದಗಳೂ ಲೌಕಿಕಸಂಸ್ಕೃತದಂತೆಯೇ ಇವೆ. ಏನೂ ವ್ಯತ್ಯಾಸವಿಲ್ಲ.

ಬ್ರಾಹ್ಮಣಭಾಗಗಳಲ್ಲಿ ಈ ವ್ಯತ್ಯಾಸವು ಇನ್ನೂ ಕಡಿಮೆ. ನಮ್ಮ ಕರ್ನಾಟಕದಲ್ಲಿಯೇ ಗುಲ್ಬರ್ಗ, ಬಿಜಾಪುರ, ಧಾರವಾಡ, ಮಂಗಳೂರು, ಬೆಂಗಳೂರು ಮೊದಲಾದ ಬೇರೆ ಬೇರೆ ಭಾಗಗಳಲ್ಲಿ ಆಡುವ ಕನ್ನಡಭಾಷೆಯಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಉಚ್ಚಾರಣೆಯಲ್ಲಿಯೂ, ಧ್ವನಿಯಲ್ಲಿಯೂ ವ್ಯತ್ಯಾಸಗಳು ಇದ್ದರೂ ಕನ್ನಡಭಾಷೆಯು ಒಂದೇ ಅಲ್ಲವೇ? ಹಾಗೆಯೇ ವೈದಿಕಭಾಷೆಗೂ, ಲೌಕಿಕಭಾಷೆಗೂ ವ್ಯತ್ಯಾಸವಿದ್ದರೂ ಸಾಮ್ಯವು ಹೆಚ್ಚು. ಭಾಷೆಯು ಒಂದೇ.

ವೈದಿಕಶಬ್ದಗಳಿಗೂ, ಲೌಕಿಕಶಬ್ದಗಳಿಗೂ ಇರುವ ಭೇದಗಳನ್ನು ಹೀಗೆ ಸಂಗ್ರಹಿಸಬಹುದು. ವೇದದ ಶಬ್ದಗಳಿಗೆ ಸ್ವರಸಹಿತವಾದ ಪಾಠವು ರೂಢಿಯಲ್ಲಿದ್ದು ಅವು ಇಂದಿಗೂ ಸ್ವರಸಹಿತವಾಗಿಯೇ ಇದೆ. ಲೌಕಿಕಶಬ್ದಗಳಲ್ಲಿ ನಿರ್ದಿಷ್ಟಸ್ವರಸಹಿತವಾದ ಉಚ್ಚಾರಣೆಯು ಕಂಡುಬರುವುದಿಲ್ಲ. ಲೌಕಿಕಸಂಸ್ಕೃತ ಭಾಷೆಯನ್ನು ಪಾಣಿನಿಮಹರ್ಷಿಯು ಸಂಸ್ಕರಿಸಿ ವಿಭಕ್ತಿಗಳು, ಕ್ರಿಯಾಪದದ ಪರಸ್ಮೈಪದ, ಆತ್ಮನೇಪದಗಳು ಮುಂತಾದುವುಗಳನ್ನು ಒಂದು ನಿಯಮಕ್ಕೆ ಒಳಪಡಿಸಿರುತ್ತಾನೆ. ವೈದಿಕಮಂತ್ರಗಳಲ್ಲಿ ಈ ನಿಯಮವು ಹಾಗೆಯೇ ಇರಬಹುದು, ಇಲ್ಲದಿರಲೂಬಹುದು. ಇದನ್ನು 'ವ್ಯತ್ಯಯೋ ಬಹುಲಮ್' ಮುಂತಾದ ಸೂತ್ರಗಳಿಂದ ಪಾಣಿನಿಯು ಸೂಚಿಸಿರುತ್ತಾನೆ.



ವೈದಿಕಸಂಸ್ಕೃತಕ್ಕೂ, ಲೌಕಿಕಸಂಸ್ಕೃತಕ್ಕೂ ಇರುವ ವ್ಯತ್ಯಾಸಗಳನ್ನು ತಿಳಿಸುವ ಶ್ಲೋಕವು ಹೀಗಿದೆ :

**ಸುಪ್ತಿಙುಪಗ್ರಹಲಿಂಗನರಾಣಾಂ ಕಾಲಹಲಚ್‌ಸ್ವರಕರ್ತೃಯಙಾಂ ಚ |**
**ವ್ಯತ್ಯಯಮಿಚ್ಛತಿ ಶಾಸ್ತ್ರಕೃದೇಷಾಂ ಸೋಽಪಿ ಚ ಸಿಧ್ಯತಿ ಬಾಹುಲಕೇನ ||**

ನಾಮಪದದ ಪ್ರತ್ಯಯಗಳು, ಕ್ರಿಯಾಪದದ ಪ್ರತ್ಯಯಗಳು, ಪರಸ್ಮೈಪದ, ಆತ್ಮನೇಪದಗಳು, ಪುಲ್ಲಿಂಗ–ಸ್ತ್ರೀಲಿಂಗ–ನಪುಂಸಕಲಿಂಗಗಳು, ಪ್ರಥಮಪುರುಷ–ಮಧ್ಯಮಪುರುಷ–ಉತ್ತಮಪುರುಷಗಳು, ಕಾಲವನ್ನು ಸೂಚಿಸುವ ಪ್ರತ್ಯಯಗಳು, ಸ್ವರಗಳು–ವ್ಯಂಜನಗಳು—ಇವುಗಳು ವೇದದಲ್ಲಿ ವ್ಯತ್ಯಾಸ ಹೊಂದುತ್ತವೆ.

ಉದಾಹರಣೆಗಳು :

**'ಧುರಿ ದಕ್ಷಿಣಾಯಾಃ'**—'ದಕ್ಷಿಣಸ್ಯಾಂ' ಎಂದು ಸಪ್ತಮೀವಿಭಕ್ತಿಗೆ ಬದಲಾಗಿ **'ದಕ್ಷಿಣಾಯಾಃ'** ಎಂದು ಷಷ್ಠೀವಿಭಕ್ತಿಯು ಬಂದಿದೆ.

**'ಚಷಾಲಂ ಯೇ ಅಶ್ವಯೂಪಾಯ ತಕ್ಷತಿ'**–ಇಲ್ಲಿ ತಕ್ಷಂತಿ ಎಂಬ ಬಹುವಚನಕ್ಕೆ ಬದಲಾಗಿ **ತಕ್ಷತಿ** ಎಂದು ಏಕವಚನವಿದೆ.

ಉಪಗ್ರಹವೆಂದರೆ ಪರಸ್ಮೈಪದ–ಆತ್ಮನೇಪದಗಳು. ಇವುಗಳ ವ್ಯತ್ಯಾಸಕ್ಕೆ ಉದಾಹರಣೆಗಳು: 'ಬ್ರಹ್ಮಚಾರಿಣಮಿಚ್ಛತೇ' ಇಚ್ಛತಿ ಎಂಬ ಪರಸ್ಮೈಪದಕ್ಕೆ **ಬದಲಾಗಿ ಇಚ್ಛತೇ** ಎಂದು ಆತ್ಮನೇಪದವು ಬಂದಿದೆ. 'ಪ್ರತೀಪಮನ್ಯ ಊರ್ಮಿರ್ಯುಧ್ಯತಿ' **ಯುಧ್ಯತೇ** ಎಂಬ ಆತ್ಮನೇಪದಕ್ಕೆ ಬದಲಾಗಿ **ಯುಧ್ಯತಿ** ಎಂದು ಪರಸ್ಮೈಪದವಿದೆ. 'ಮಧ್ವೋ ಅಗ್ರಮ್' ಮಧುನಃ ಎಂಬ ನಪುಂಸಕಲಿಂಗದ ರೂಪಕ್ಕೆ ಬದಲಾಗಿ ಮಧ್ವಃ ಬಂದಿದೆ. 'ಅಥಾ ಸ ವೀರೈರ್ದಶಭಿರ್ವಿಯೂಯಾಃ' **ವಿಯೂಯಾತ್** ಎಂಬ ಪ್ರಥಮಪುರುಷಸ್ಥಾನದಲ್ಲಿ ಮಧ್ಯಮಪುರುಷವಿದೆ. 'ವಾಯವಃ ಸ್ಥೋಪಾಯವಃ ಸ್ಥ' ಇಲ್ಲಿ ಲೇಟ್ ಲಕಾರದ ಅರ್ಥದಲ್ಲಿ ಲಟ್ ಲಕಾರವು ಬಂದಿದೆ. 'ಶ್ವೋಽಗ್ನೀನಾಧಾಸ್ಯಮಾನೇನ್' ಇಲ್ಲಿ ಲುಟ್ ಸ್ಥಾನದಲ್ಲಿ ಲೃಟ್ (ಅದರ ಅರ್ಥದಲ್ಲಿ ಶಾನಚ್) ಬಂದಿದೆ. 'ಅಂಡಾ ಶುಷ್ಮಸ್ಯ ಭೇದತಿ' **ಭಿನತ್ತಿ** ಎಂಬುದರ ಬದಲಾಗಿ **ಭೇದತಿ**, 'ಜರಸಾ ಮರತೇ ಪತಿಃ' **ಮ್ರಿಯತೇ** ಎಂಬುದರ ಸ್ಥಾನದಲ್ಲಿ ಮರತೇ, 'ಇಂದ್ರೇಣ ಯುಜಾ ತರುಷೇಮ ವೃತ್ರಮ್' **ತರೇಮ** ಎಂಬುದರ ಸ್ಥಾನದಲ್ಲಿ ತರುಷೇಮ– ಹೀಗೆ ವಿಕರಣಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. 'ಭದ್ರಂ ಕರ್ಣೇಭಿಃ' 'ಏಕಾದಶಾಸೋ ಅಪ್ಸುಷದಃ' ಎಂಬ ಎರಡು ಮಂತ್ರಗಳಲ್ಲಿ ಕರ್ಣೈಃ ಮತ್ತು ಏಕಾದಶ ಎಂಬ ಲೌಕಿಕಸಂಸ್ಕೃತಕ್ಕೆ ಬದಲಾಗಿ **ಕರ್ಣೇಭಿಃ ಏಕಾದಶಾಸಃ** ಎಂಬ ಪ್ರಯೋಗವಿದೆ. **'ತುಮರ್ಥೇ ಸೇ ಸೇನ್......'**, **'ಈಶ್ವರೇ ತೋಸುನ್‌ಕಸುನೌ'** ಎಂಬ ಸೂತ್ರಗಳಿಂದ ತುಮುನ್ ಪ್ರತ್ಯಯದ



ಅರ್ಥದಲ್ಲಿ ಸೇ, ಸೇನ್, ತೋಸುನ್ ಮೊದಲಾದ ಪ್ರತ್ಯಯಗಳು ಬರುತ್ತವೆ. ಹೀಗೆ ವೈದಿಕಭಾಷೆಗೂ ಲೌಕಿಕಭಾಷೆಗೂ ಹಲವು ವ್ಯತ್ಯಾಸಗಳುಂಟು.

## ತಾತ್ಪರ್ಯಾರ್ಥ ಮುಖ್ಯ

ವೈದಿಕಶಬ್ದಗಳಿಗೂ, ಲೌಕಿಕಶಬ್ದಗಳಿಗೂ ಇರುವ ವ್ಯತ್ಯಾಸಗಳನ್ನು ಗಮನಿಸಿದೆವು. ಹಾಗೆಯೇ ವೇದಮಂತ್ರಗಳಿಗೆ ಅರ್ಥವನ್ನು ತಿಳಿಯುವಾಗ 'ನ ಹಿ ನಿಂದಾನ್ಯಾಯ', ಸಮನ್ವಯದೃಷ್ಟಿ ಇವೂ ಸಹಕಾರಿಗಳಾಗುತ್ತವೆ. ಇವಲ್ಲದೆ ವೇದದಲ್ಲಿ ಕೆಲವೆಡೆ ಶಬ್ದದ ನೇರವಾದ ಅರ್ಥಕ್ಕೆ ತಾತ್ಪರ್ಯವಿರದೆ ಅಂತರಾರ್ಥಕ್ಕೆ ತಾತ್ಪರ್ಯವಿರುವುದು ಕಂಡುಬರುತ್ತದೆ. ಈ ಕ್ರಮವು ವೇದದಲ್ಲಿ ಮಾತ್ರವಲ್ಲ; ಲೋಕದಲ್ಲಿಯೂ ನಾವು ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ವಾಕ್ಯಗಳನ್ನು ಉಪಯೋಗಿಸುತ್ತೇವೆ. ವಾಕ್ಯದಲ್ಲಿ ಶಬ್ದಗಳಿರುವುದರಿಂದ ಶಬ್ದಾರ್ಥವೇ ಮುಖ್ಯವಾಗಿರುವಂತೆ ಕಂಡುಬಂದರೂ, ವಾಕ್ಯವೃಂದಗಳನ್ನು ತಿಳಿದುಕೊಂಡಾಗ ಅಥವಾ ಆಲಂಕಾರಿಕವಾಗಿ ಹೇಳುವಾಗ ಅಂತರಾರ್ಥವೇ ಮುಖ್ಯವಾಗುತ್ತದೆ. ಕಷ್ಟಕ್ಕೆ ಸಿಕ್ಕಿದವನೊಬ್ಬನು 'ನಾವಿನ್ನು ತಲೆಯೆತ್ತುವಂತಿಲ್ಲ' ಎಂದು ದುಃಖಿಸುತ್ತಾನೆ. ಇದು ದುಃಖದ ಪ್ರಸಂಗವಾದುದರಿಂದ 'ನಾವು ಮತ್ತೆ ಮೇಲೆ ಬರಲಾರೆವು' ಎಂಬ ಅರ್ಥವೂ, 'ನಮಗೆ ತುಂಬಾ ಅಪಮಾನವಾಗಿದೆ' ಎಂಬ ಅರ್ಥವೂ ತೋರುವುದಲ್ಲದೆ 'ನಮ್ಮ ಶರೀರದ ಮೇಲ್ಭಾಗವಾದ ಕಣ್ಣು, ಕಿವಿ ಮತ್ತು ಮೂಗುಗಳಿಂದ ಕೂಡಿರುವ ತಲೆ ಎಂಬ ಅಂಗವನ್ನು ಮೇಲ್ಮುಖವಾಗಿ ಏರಿಸುವಂತಿಲ್ಲ' ಎಂಬ ಶಬ್ದಾರ್ಥವು ತೋರಿದರೂ ಅದು ಮುಖ್ಯವಲ್ಲ.

ಕೆಲವೊಮ್ಮೆ ಒಂದು ವಿಷಯವನ್ನು ಸಮರ್ಥಿಸುವಾಗ ಯುಕ್ತಿಗಳನ್ನು ಕೊಡುವುದುಂಟು. ಅವುಗಳಲ್ಲಿ ಒಂದೊಂದು ಮುಖ್ಯವಾದ ಯುಕ್ತಿಯಾಗದೆ ಅಭ್ಯುಚ್ಚಯಯುಕ್ತಿಯೂ ಆಗಿರುತ್ತದೆ. ಮುಖ್ಯವಾದ ಯುಕ್ತಿಗೆ ಪೋಷಕವಾದ ಯುಕ್ತಿಯನ್ನು ಅಭ್ಯುಚ್ಚಯಯುಕ್ತಿ ಎನ್ನುತ್ತಾರೆ. ಕೆಲವೊಮ್ಮೆ 'ಹೀಗಿದ್ದರೆ ಹೀಗಾಗಬಹುದು' ಎಂಬ ಕೃತ್ವಾಚಿಂತಾವಿಚಾರವೂ ಬರುತ್ತದೆ. 'ನಾನು ಮುಖ್ಯಮಂತ್ರಿಯಾದರೆ' ಎಂದು ಕಲ್ಪಿಸಿಕೊಂಡು ಮಾಡಬಹುದಾದ ಕೆಲಸಗಳ ಬಗ್ಗೆ ವಿದ್ಯಾರ್ಥಿಗಳು ಶಾಲೆಗಳಲ್ಲಿ ಮಾತನಾಡುವುದುಂಟು. ಇದನ್ನು ಕೃತ್ವಾ ಚಿಂತಾ ವಿಚಾರವೆನ್ನುತ್ತಾರೆ.

ವೇದದಲ್ಲಿ ಈ ರೀತಿಯ ಚಿಂತನೆಯೂ ಬರುತ್ತದೆ.

ಆದುದರಿಂದ ವೇದದ ಅರ್ಥವನ್ನು ಗ್ರಹಿಸುವಾಗ ಹಿಂದೆ ತಿಳಿಸಿದ ಉಪಕ್ರಮ, ಉಪಸಂಹಾರ ಮುಂತಾದ ತಾತ್ಪರ್ಯವನ್ನು ನಿರ್ಣಯಿಸುವ ಸಾಧನಗಳಲ್ಲದೆ ಅಂತರಾರ್ಥಕ್ಕೇ ಪ್ರಾಶಸ್ತ್ಯವಿದೆಯೆಂಬ ವಿಚಾರವು ಮನಸ್ಸಿನಲ್ಲಿ ಇರಬೇಕು.



ಅಶ್ವಮೇಧಯಾಗದಲ್ಲಿ ರಾಣಿಯರು ಮಾಡಬೇಕಾದ ಅಶ್ವದ ಉಪಚಾರವನ್ನು ಕುರಿತ ಮಂತ್ರಗಳ ಬಗ್ಗೆ ಕೆಲವರು ಆಕ್ಷೇಪಿಸುತ್ತಾರೆ. ತಾತ್ಪರ್ಯಾರ್ಥವನ್ನು ಗಮನಿಸಿದರೆ ಈ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ. ಅಲ್ಲದೆ ಮೀಮಾಂಸಕರ ಮತದಲ್ಲಿ—ಕೆಲವೆಡೆ ಶಬ್ದದ ನೇರವಾದ ಅರ್ಥವನ್ನು ಗ್ರಹಿಸಬೇಕೆಂದೂ, ಕೆಲವೆಡೆ ವಾಕ್ಯವೃಂದದ ಅರ್ಥವನ್ನು ಗ್ರಹಿಸಬೇಕೆಂದೂ, ಕೆಲವೆಡೆ ವಾಕ್ಯವೃಂದದ ಅರ್ಥಕ್ಕೆ ಸಂಬಂಧಿಸಿದ ಇನ್ನೊಂದು ಅರ್ಥವನ್ನು ಗ್ರಹಿಸಬೇಕೆಂದೂ— ಹೇಳಲಾಗಿದೆ. ಮೂರನೆಯ ರೀತಿಯನ್ನು ಒಪ್ಪಿರುವುದರಿಂದ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಎಂಬ ವಾಕ್ಯಕ್ಕೆ 'ವಾಯುದೇವತೆಯು ಅತಿ ಶೀಘ್ರವಾಗಿರುವವನು' ಎಂಬುದು ನೇರವಾದ ಅರ್ಥವಾದರೂ, ಆ ಅರ್ಥದ ಮೂಲಕ 'ವಾಯುವನ್ನು ದೇವತೆಯನ್ನಾಗಿಟ್ಟುಕೊಂಡು ಮಾಡುವ ಕರ್ಮ ಪ್ರಶಸ್ತ' ಎಂಬ ಇನ್ನೊಂದು ಅರ್ಥಕ್ಕೆ ಪ್ರಾಧಾನ್ಯ ಬರುತ್ತದೆ. ಆದುದರಿಂದ ಅಶ್ವಮೇಧಪ್ರಕರಣದಲ್ಲಿ ಬರುವ ಮಂತ್ರಗಳಿಗೆ ತಾತ್ಪರ್ಯವನ್ನು ಜಾಗರೂಕರಾಗಿ ಗಮನಿಸಬೇಕು.

**ಅಶ್ಲೀಲವಲ್ಲ**

ಅಶ್ವಮೇಧಯಾಗದಲ್ಲಿ ರಾಣಿಯರು ಮಾಡುವ ಅಶ್ವೋಪಚಾರದ ಮಂತ್ರಗಳಾದ

**ಅಂಬೇ ಅಂಬಾಲ್ಯಂಬಿಕೇ.....।**

ಮೊದಲಾದವುಗಳಿಗೆ ಅಶ್ಲೀಲವಾದ ಅರ್ಥವಿದೆಯೆಂದು ಆಕ್ಷೇಪಿಸುತ್ತಾರೆ. ಆ ಅನುವಾಕದಲ್ಲಿ ಬರುವ ಮಂತ್ರಗಳ ತಾತ್ಪರ್ಯವನ್ನು ಬ್ರಾಹ್ಮಣವೇ ತಿಳಿಸಿಕೊಟ್ಟಿದೆ. 'ಅಂಬೇ ಅಂಬಾಲ್ಯಂಬಿಕೇ' ಎಂಬ ಅನುವಾಕವು ತೈತ್ತಿರೀಯಸಂಹಿತೆಯ ಏಳನೆಯ ಕಾಂಡದಲ್ಲಿದೆ. ಇದರ ತಾತ್ಪರ್ಯಾರ್ಥವನ್ನು ತಿಳಿಸುವ ಬ್ರಾಹ್ಮಣಭಾಗವು ತೈತ್ತಿರೀಯ ಬ್ರಾಹ್ಮಣದ ಮೂರನೇ ಅಷ್ಟಕದ ಒಂಬತ್ತನೆಯ ಪ್ರಪಾಠಕದಲ್ಲಿದೆ.

ಆ ಪ್ರಕರಣದಲ್ಲಿ ಅಶ್ವವನ್ನು ಸರ್ವದೇವತೆಗಳಿಗೂ ಹವಿಃಸ್ವರೂಪವೆಂದೂ, ದೇವತಾಸ್ವರೂಪವೆಂದೂ ವರ್ಣಿಸಿರುತ್ತಾರೆ.

**ತಸ್ಮಾದಶ್ವೇ ಸರ್ವಾ ದೇವತಾ ಅನ್ವಾಯತ್ತಾಃ ।**

**ಪ್ರಾಜಾಪತ್ಯೋ ವಾ ಅಶ್ವಃ ।**

**ವಾರುಣೋ ವಾ ಅಶ್ವಃ ।**

**ವೈಶ್ವದೇವೋ ವಾ ಅಶ್ವಃ......।**

ಮೊದಲಾದ ಶ್ರುತಿವಾಕ್ಯಗಳಿವೆ.



'ಅಂಬೇ ಅಂಬಾಲ್ಯಂಬಿಕೇ' ಎಂಬ ಅನುವಾಕದ ಮಂತ್ರಗಳ ಅರ್ಥವಿವರಣೆಯನ್ನು ಬ್ರಾಹ್ಮಣವಾಕ್ಯಗಳು ಹೀಗೆ ನೀಡಿವೆ.

ಅಪ ವಾ ಏತಸ್ಮಾಚ್ಛ್ರೀ ರಾಷ್ಟ್ರಂ ಕ್ರಾಮತಿ ।

ಯೋಽಶ್ವಮೇಧೇನ ಯಜತೇ ।

ಅಶ್ವಮೇಧಯಾಗ ಮಾಡುವವನ ಲಕ್ಷ್ಮಿಯೂ ರಾಷ್ಟ್ರವೂ ಕ್ಷೀಣವಾಗುತ್ತವೆ ಎಂಬ ಉಪಕ್ರಮವನ್ನು ಗಮನಿಸಿ, ಮುಂದಿನ ಮಂತ್ರಾರ್ಥವನ್ನು ಗಮನಿಸಬೇಕು.

ಊರ್ಧ್ವಾಮೇನಾಮುಚ್ಛ್ರಯತಾದಿತ್ಯಾಹ ।

ಶ್ರೀರ್ವೈ ರಾಷ್ಟ್ರಮಶ್ವಮೇಧಃ ।

ಶ್ರಿಯಮೇವಾಸ್ಮೈ ರಾಷ್ಟ್ರಮೂರ್ಧ್ವಮುಚ್ಛ್ರಯತಿ ।

ಅಶ್ವಮೇಧಾಭಿಮಾನಿದೇವತೆಯೇ ಶ್ರೀಯೂ ರಾಷ್ಟ್ರವೂ ಆಗಿದೆ. ಈ ಮಂತ್ರವನ್ನು ಹೇಳುವುದರಿಂದ ಹೀನಸ್ಥಿತಿಗೆ ಬಂದಿರುವ ಯಜಮಾನನ (ರಾಜನ) ಶ್ರೀಯನ್ನೂ ರಾಷ್ಟ್ರವನ್ನೂ ಮೇಲಕ್ಕೆ ತಂದಂತೆ ಆಗುತ್ತದೆ. ಈ ಬ್ರಾಹ್ಮಣದ ತಾತ್ಪರ್ಯ ವಿವರಣೆಯಲ್ಲಿ ಆಕ್ಷೇಪಾರ್ಹವಾದುದೇನಿದೆ?

ಅಥಾಸ್ಯಾ ಮಧ್ಯಮೇಧತಾಮಿತ್ಯಾಹ ।

ಶ್ರೀರ್ವೈ ರಾಷ್ಟ್ರಸ್ಯ ಮಧ್ಯಮ್ । ಶ್ರಿಯಮೇವಾವರುಂಧೇ ।

ಇಲ್ಲಿ 'ಅಸ್ಯಾಃ ಮಧ್ಯಂ' ಎನ್ನುವುದಕ್ಕೆ 'ರಾಷ್ಟ್ರಮಧ್ಯರೂಪವಾದ ಶ್ರೀಯನ್ನು' ಎಂದು ಅರ್ಥವನ್ನು ಕೊಡಲಾಗಿದೆ. ಈ ಮಂತ್ರವನ್ನು ಹೇಳುವುದರಿಂದ ಯಜಮಾನನಿಗೆ ಶ್ರೀಪ್ರಾಪ್ತಿಯಾಗುತ್ತದೆ.

ಯದ್ಧರಿಣೀ ಯವಮತ್ತೀತ್ಯಾಹ । ವಿಡ್ವೈ ಹರಿಣೀ । ರಾಷ್ಟ್ರಂ ಯವಃ । ವಿಶಂ ಚೈವಾಸ್ಮೈ ರಾಷ್ಟ್ರಂ ಚ ಸಮೀಚೀ ದಧಾತಿ ॥

ಇಲ್ಲಿ 'ವಿಟ್' ಎಂದರೆ ಪ್ರಜೆ. ಹರಿಣೀಪದವು ಪ್ರಜೆಯೆಂಬ ಅರ್ಥವನ್ನು ಕೊಡುತ್ತದೆ. 'ಯವ' ಶಬ್ದವು ರಾಷ್ಟ್ರವೆಂಬ ಅರ್ಥವನ್ನು ಕೊಡುತ್ತದೆ. ಈ ಮಂತ್ರವನ್ನು ಹೇಳುವುದರಿಂದ ಪ್ರಜೆಗಳೂ ರಾಷ್ಟ್ರವೂ (ಆಡಳಿತವೂ) ಹೊಂದಿಕೊಂಡು



ಹೋಗುವಂತೆ ಆಗುತ್ತದೆ.

ಆಹತಂ ಗಭೇ ಪಸ ಇತ್ಯಾಹ । ವಿಡ್ವೈ ಗರ್ಭಃ । ರಾಷ್ಟ್ರಂ ಪಸಃ ।

ರಾಷ್ಟ್ರಮೇವ ವಿಶ್ಯಾಹಂತಿ । ತಸ್ಮಾದ್ರಾಷ್ಟ್ರಂ ವಿಶಂ ಘಾತುಕಮ್ ॥

ಇಲ್ಲಿ 'ಗಭ' ಎಂದರೆ ಪ್ರಜೆ, 'ಪಸ' ಎಂದರೆ ರಾಷ್ಟ್ರ. ಈ ಮಂತ್ರವನ್ನು ಹೇಳುವುದರಿಂದ ರಾಷ್ಟ್ರವನ್ನು ಪ್ರಜೆಗಳಲ್ಲಿ ನೆಲೆಗೊಳಿಸಿದಂತೆ ಆಗುತ್ತದೆ.

ಮಾತಾ ಚ ತೇ ಪಿತಾ ಚ ತ ಇತ್ಯಾಹ ।

ಇಯಂ ವೈ ಮಾತಾ । ಅಸೌ ಪಿತಾ । ಅಭ್ಯಾಮೇವೈನಂ ಪರಿದದಾತಿ ॥

'ಇಯಂ' ಎಂದರೆ 'ಪೃಥಿವೀ' ಆಕೆಯೇ ತಾಯಿ. 'ಅಸೌ' ಎಂದರೆ 'ದ್ಯುಲೋಕ', ಅದೇ ತಂದೆ.(ದ್ಯೌಃಪಿತಾ । ಪೃಥಿವೀ ಮಾತಾ । ಎಂದು ಬೇರೆಯ ಕಡೆಯಲ್ಲಿಯೂ ಇದೆ.) ಈ ಮಂತ್ರವನ್ನು ಹೇಳುವುದರಿಂದ ಮಾತಾಪಿತೃಸ್ವರೂಪರಾದ ಭೂ–ದ್ಯು ಲೋಕಗಳಿಗೆ ಯಜಮಾನನನ್ನು ರಕ್ಷಣೆಗಾಗಿ ಒಪ್ಪಿಸಿದಂತೆ ಆಗುತ್ತದೆ.

ಅಗ್ರಂ ವೃಕ್ಷಸ್ಯ ರೋಹತ ಇತ್ಯಾಹ । ಶ್ರೀರ್ವೈ ವೃಕ್ಷಸ್ಯಾಗ್ರಮ್ ।

ಶ್ರಿಯಮೇವಾವರುಂಧೇ ॥

'ವೃಕ್ಷಸ್ಯ ಅಗ್ರ' ಎಂದರೆ 'ಶ್ರೀ'. ಈ ಮಂತ್ರವನ್ನು ಹೇಳುವುದರಿಂದ ರಾಜನು ಶ್ರೀಯನ್ನು ಹೊಂದುತ್ತಾನೆ.

ಪ್ರಸುಲಾಮೀತಿ ತೇ ಪಿತಾ ಗಭೇ ಮುಷ್ಟಿಮತಗ್ಂ ಸಯದಿತ್ಯಾಹ ।

ವಿಡ್ವೈ ಗಭಃ । ರಾಷ್ಟ್ರಂ ಮುಷ್ಟಿಃ । ರಾಷ್ಟ್ರಮೇವ ವಿಶ್ಯಾಹಂತಿ ।

ತಸ್ಮಾದ್ರಾಷ್ಟ್ರಂ ವಿಶಂ ಘಾತುಕಮ್ ॥

'ಗಭ' ವೆಂದರೆ ಪ್ರಜೆ, 'ಮುಷ್ಟಿ' ಯೆಂದರೆ 'ರಾಷ್ಟ್ರ'. ಈ ಮಂತ್ರವನ್ನು ಹೇಳುವುದರಿಂದ ರಾಷ್ಟ್ರವು ಪ್ರಜೆಗಳಲ್ಲಿ ಸ್ಥಿರವಾಗಿ ನೆಲಸುತ್ತದೆ. (ಇಲ್ಲಿ 'ಘಾತುಕ' ವೆಂದರೆ ಗಮನಶೀಲವೆಂದರ್ಥ. ಹನ—ಹಿಂಸಾಗತ್ಯೋಃ. 'ಹನ' ಧಾತುವಿಗೆ ಹಿಂಸಾ ಮತ್ತು ಗತಿ ಎಂಬ ಎರಡು ಅರ್ಥಗಳಿವೆ)



ಹೀಗೆ ಬ್ರಾಹ್ಮಣದಲ್ಲಿಯೇ ಕೊಟ್ಟಿರುವ ತಾತ್ಪರ್ಯವಿವರಣೆಯಿಂದ ಅಶ್ಲೀಲವಾದ ಅರ್ಥವು ಬರುವುದಿಲ್ಲ. ಹಾಗೆಯೇ ಉಪಕ್ರಮದಲ್ಲಿ ಬಂದ ರಾಜ ನಿಗೆ ಶ್ರೀ ರಾಷ್ಟ್ರಹಾನಿಯು ಅಶ್ವಮೇಧದಿಂದ ಆಗುತ್ತದೆಯೆಂಬ ಅರ್ಥವನ್ನನು ಸರಿಸಿದರೆ ಈ ಅನುವಾಕದ ಮಂತ್ರಗಳಿಂದ ಶ್ರೀರಾಷ್ಟ್ರಾಭಿವೃದ್ಧಿಯಾಗುವ ವಿಷಯ ವನ್ನು ಮತ್ತೆ ಮತ್ತೆ ಪ್ರತಿಪಾದಿಸುವ ಉಪಸಂಹಾರವೂ ಸಮಂಜಸವಾಗುತ್ತದೆ.

ಭಾಷ್ಯಕಾರರು ಶಬ್ದಾರ್ಥಗಳನ್ನು ಕೊಟ್ಟಿರುತ್ತಾರೆ. ವ್ಯಾಖ್ಯಾನ ಮಾಡುವಾಗ ಅವುಗಳನ್ನು ಕೊಡುವುದು ಯುಕ್ತವೇ ಆಗಿದೆ. ಆದರೆ ಇಲ್ಲಿ ತಾತ್ಪರ್ಯಾರ್ಥವು ಮುಖ್ಯವೇ ಹೊರತು ಶಬ್ದಾರ್ಥವಲ್ಲವೆಂದು ಶ್ರುತಿಯ ಬ್ರಾಹ್ಮಣದ ವಿವರಣೆಯಿಂದಲೇ ಸ್ಪಷ್ಟವಾಗುತ್ತದೆ.

ಮೇಲೆ ತೋರುವ ಅರ್ಥವು ಅಪೂತವಾಗಿದೆಯೆಂದು (ಗ್ರಾಮ್ಯವಾಗಿದೆ ಎಂದು) ಹೇಳಿ ಶುಧ್ಯರ್ಥವಾಗಿ 'ದಧಿಕ್ರಾವ್ಣ್ಣಃ ಎಂಬ ಋಕ್ಕನ್ನು ಹೇಳಿ, ಆಪೋ ಹಿ ಷ್ಠಾ ಮಯೋಭುವಃ ಎಂಬ ಮೂರು ಮಂತ್ರಗಳಿಂದ ಪ್ರೋಕ್ಷಿಸಿಕೊಳ್ಳಬೇಕು. ಇದರಿಂದ ದೇಹಶುದ್ಧಿಯಾಗುತ್ತದೆ. ಎಂದು ಅನುವಾಕದ ಕೊನೆಯಲ್ಲಿದೆ.

ಈ ಅನುವಾಕದಲ್ಲಿರುವ ಬೇರೆಯ ಕೆಲವು ವಾಕ್ಯಗಳಿಗೂ ಬ್ರಾಹ್ಮಣ ದಲ್ಲಿಯೇ ವಿವರಣೆಯಿದೆ, ಗಮನಿಸಬಹುದು. ಹೀಗೆ ವಿವರಣೆ ಇರುವುದರಿಂದಲೂ ಉಪಕ್ರಮೋಪಸಂಹಾರ, ಲೋಕವ್ಯವಹಾರ ಇದೆಲ್ಲವನ್ನೂ ಗಮನಿಸಿದರೆ ಇಲ್ಲಿ ತಾತ್ಪರ್ಯಾರ್ಥಕ್ಕೇ ಪ್ರಾಧಾನ್ಯವೆಂದು ಸಿದ್ಧವಾಗುತ್ತದೆ.

ಹೀಗೆ ವೇದಮಂತ್ರಗಳಿಗೆ ತಾತ್ಪರ್ಯವೇ ಪ್ರಧಾನವಾಗಿದ್ದು ಈ ತಾತ್ಪರ್ಯ ನಿರ್ಣಯವು ತುಂಬ ಕಷ್ಟವಾದುದರಿಂದ ಹಿಂದಿನ ಅನೇಕ ವಿದ್ವಾಂಸರು ಭಾಷ್ಯಗಳ ಮೂಲಕ ವೇದದ ತಾತ್ಪರ್ಯವನ್ನು ತಿಳಿಸಲು ಶ್ರಮಿಸಿದ್ದಾರೆ. ಪ್ರಸಿದ್ಧವಾದ ಕೆಲವು ವೇದಭಾಷ್ಯಗಳ ಮತ್ತು ಅವುಗಳನ್ನು ಬರೆದವರ ಬಗ್ಗೆ ತಿಳಿಯೋಣ.

## ವೇದಭಾಷ್ಯಗಳು

ವೇದಗಳಿಗೆ ಭಾಷ್ಯವನ್ನು ಬರೆದಿರುವವರಲ್ಲಿ ಪ್ರಮುಖರಾದವರು ಸಾಯ ಣರು. ಸಾಯಣಾಚಾರ್ಯರಿಗಿಂತಲೂ ಮೊದಲು ಅನೇಕರು ವೇದಭಾಷ್ಯವನ್ನು ಬರೆದಿರುವರು. ವೇದಭಾಷ್ಯಕಾರರಲ್ಲಿ ಅನೇಕರು ಋಗ್ವೇದದ ಕೆಲವು ಸೂಕ್ತಗಳಿಗೆ ಮಾತ್ರ ಭಾಷ್ಯವನ್ನು ಬರೆದಿರುವುದೂ ಉಂಟು. ಯಜುರ್ವೇದ ಮತ್ತು ಸಾಮವೇದಗಳಿಗೆ ಕೆಲವರು ಭಾಷ್ಯವನ್ನು ಬರೆದಿರುವರಾದರೂ ಅಥರ್ವವೇದಕ್ಕೆ ಭಾಷ್ಯವನ್ನು ಬರೆದ ಕೀರ್ತಿ ಸಾಯಣಾಚಾರ್ಯರಿಗೇ ಸಲ್ಲುತ್ತದೆ. ಋಗ್ವೇದಕ್ಕೆ ಭಾಷ್ಯವನ್ನು ಬರೆದಿರುವ ಭಾಷ್ಯಕಾರರಲ್ಲಿ ಸ್ಕಂದಸ್ವಾಮಿ, ವೇಂಕಟಮಾಧವ, ಆನಂದತೀರ್ಥ, ಆತ್ಮಾನಂದ, ಸಾಯಣಾಚಾರ್ಯರು ಮುಖ್ಯರು. ಯಜುರ್ವೇದದ



ಭಾಷ್ಯಕಾರರಲ್ಲಿ ಉವಟ, ಭಟ್ಟಭಾಸ್ಕರ, ಸಾಯಣಾಚಾರ್ಯರು ಮುಖ್ಯರು. ಸಾಮವೇದಕ್ಕೆ ಭಾಷ್ಯವನ್ನು ರಚಿಸಿರುವವರಲ್ಲಿ ಸಾಯಣ, ಮಾಧವ, ಭರತಸ್ವಾಮಿ, ಇವರು ಮುಖ್ಯರು. ಈ ಮಾಧವನು ವಿದ್ಯಾರಣ್ಯರೆಂದು ಪ್ರಸಿದ್ಧರಾದ ಮಾಧವನಲ್ಲ. ಅಥರ್ವವೇದಕ್ಕೆ ಸಾಯಣಭಾಷ್ಯವೊಂದೇ ಇದೆ. ಹೀಗೆ ಅನೇಕ ವಿದ್ವಾಂಸರು ವೇದಗಳಿಗೆ ಭಾಷ್ಯವನ್ನು ಬರೆದಿದ್ದರೂ ಸಾಯಣಭಾಷ್ಯವು ನಾನಾದೃಷ್ಟಿಗಳಿಂದ ಇತರ ಭಾಷ್ಯಗಳನ್ನು ಮೀರಿಸುತ್ತದೆ ಎನ್ನಬಹುದು.

## ಭಾಷ್ಯಕಾರ ಸಾಯಣಾಚಾರ್ಯರು

ವೇದಕ್ಕೆ ಅನೇಕರು ಭಾಷ್ಯವನ್ನು ಬರೆದಿರುವರಾದರೂ ಅವರೆಲ್ಲರಿಗಿಂತಲೂ ಸಾಯಣರಿಗೆ ವಿಶೇಷವಾದ ಪೂಜ್ಯಸ್ಥಾನವಿದೆ. ನಾಲ್ಕೂ ವೇದಗಳಿಗೆ ಭಾಷ್ಯವನ್ನು ರಚಿಸಿದ ಕೀರ್ತಿ ಸಾಯಣರಿಗೇ ಸಲ್ಲುತ್ತದೆ. ವೇದಗಳ ಸಂಹಿತೆಗಳಿಗೂ, ಬ್ರಾಹ್ಮಣಗಳಿಗೂ ಬರೆದಿರುವ ಅವರ ಭಾಷ್ಯವು ವೇದರಾಶಿಯಲ್ಲಿ ಇರುವ ಸೂಕ್ಷ್ಮ ವಿಚಾರಗಳನ್ನು ತಿಳಿಯಲು ಸಹಾಯಕವಾಗಿದೆ.

ಸಾಯಣರ ತಂದೆ ಮಾಯಣ. ತಾಯಿ ಶ್ರೀಮತಿ. ಅವರು ಭಾರದ್ವಾಜ ಗೋತ್ರದವರು ಮತ್ತು ಕೃಷ್ಣಯಜುರ್ವೇದದ ಬೋಧಾಯನಶಾಖೆಯವರು. ಸಾಯಣರ ಅಣ್ಣ ಮಾಧವರು. ತಮ್ಮ ಭೋಗನಾಥ. ಸಾಯಣರು ಅಸಾಧಾರಣ ಪಂಡಿತರು ಮಾತ್ರವಲ್ಲದೆ ರಾಜ್ಯವನ್ನು ಮುನ್ನಡೆಸುವ ಮುತ್ಸದ್ದಿಯೂ, ರಣರಂಗದಲ್ಲಿ ಕಾದಬಲ್ಲ ಯೋಧರೂ ಆಗಿದ್ದರೆಂಬುದು ಕುತೂಹಲದ ಸಂಗತಿ.

**ಜಗದ್ವೀರಸ್ಯ ಜಾಗರ್ತಿ ಕೃಪಾಣಃ ಸಾಯಣಪ್ರಭೋಃ ।**
**ಕಿಮಿತ್ಯೇತೇ ವೃಥಾಟೋಪಾ ಗರ್ಜಂತಿ ಪರಿಪಂಥಿನಃ ॥**

ಜಗದ್ವೀರನಾದ ಒಡೆಯ ಸಾಯಣನ ಕತ್ತಿಯು ಝಳಪಿಸುತ್ತಿದೆ. ಈ ಶತ್ರುಗಳು ಏಕೆ ವೃಥಾ ಆಟೋಪ ಮಾಡುತ್ತಾರೆ?

—ಅಲಂಕಾರಸುಧಾನಿಧಿ.

ಸಾಯಣರಿಗೆ ಕಂಪಣ, ಮಾಯಣ ಮತ್ತು ಸಿಂಗಣರೆಂಬ ಮೂವರು ಮಕ್ಕಳಿದ್ದರೆಂದು ತಿಳಿದುಬರುತ್ತದೆ. ಸಾಯಣರ ಕಾಲ 14ನೇ ಶತಮಾನದ ಉತ್ತರಾರ್ಧ.

## ಸಾಯಣರ ಕೃತಿಗಳು

ಸಾಯಣಾಚಾರ್ಯರು ವೇದಭಾಷ್ಯಗಳನ್ನಲ್ಲದೆ ಶಾಸ್ತ್ರೀಯಗ್ರಂಥಗಳನ್ನೂ ರಚಿಸಿದ್ದಾರೆ. 'ಆಯುರ್ವೇದಸುಧಾನಿಧಿ' ಎಂಬುದು ಆಯುರ್ವೇದಕ್ಕೆ ಸಂಬಂಧಿಸಿದ ಅವರ ಗ್ರಂಥ. ಇದಲ್ಲದೆ 'ಸುಭಾಷಿತಸುಧಾನಿಧಿ', 'ಪ್ರಾಯಶ್ಚಿತ್ತಸುಧಾನಿಧಿ',



'ಅಲಂಕಾರಸುಧಾನಿಧಿ', 'ಧಾತುವೃತ್ತಿ', 'ಪುರುಷಾರ್ಥಸುಧಾನಿಧಿ', 'ಯಜ್ಞ ತಂತ್ರಸುಧಾನಿಧಿ' ಇವು ಸಾಯಣರ ಇತರ ಗ್ರಂಥಗಳು. ಕೆಲವು ಗ್ರಂಥಗಳನ್ನು ಅವರು ಅಣ್ಣ ಮಾಧವರ ಹೆಸರಿನಲ್ಲಿ ರಚಿಸಿ ಪ್ರಕಾಶಪಡಿಸಿದರೆಂದೂ ಹೇಳುತ್ತಾರೆ. ಋಗ್ವೇದಸಂಹಿತೆ, ಶುಕ್ಲಯಜುರ್ವೇದದ ಕಾಣ್ವಸಂಹಿತೆ, ತೈತ್ತಿರೀಯಸಂಹಿತೆ, ಸಾಮವೇದಸಂಹಿತೆ ಮತ್ತು ಅಥರ್ವವೇದಸಂಹಿತೆಗಳಿಗೆ ಅವರು ಭಾಷ್ಯ ಬರೆದಿದ್ದಾರಲ್ಲದೆ ತೈತ್ತಿರೀಯಬ್ರಾಹ್ಮಣ, ಆರಣ್ಯಕಗಳಿಗೂ, ಸಾಮವೇದದ ಬ್ರಾಹ್ಮಣಗಳಿಗೂ, ಶುಕ್ಲಯಜುರ್ವೇದದ ಶತಪಥಬ್ರಾಹ್ಮಣಕ್ಕೂ ವಿಸ್ತಾರವಾದ ಭಾಷ್ಯವನ್ನು ರಚಿಸಿದ್ದಾರೆ. ವಿಜಯನಗರದ ದೊರೆಯಾಗಿದ್ದ ಇಮ್ಮಡಿ ಹರಿಹರರಾಯನು ಈ ಭಾಷ್ಯರಚನೆಯ ಕಾರ್ಯಕ್ಕೆ ಆಶ್ರಯನಾಗಿದ್ದನೆಂದು ತಿಳಿದುಬರುತ್ತದೆ.

ಸಾಯಣರು ರಚಿಸಿರುವ ನಾಲ್ಕೂ ವೇದದ ಭಾಷ್ಯಗಳ ಆರಂಭದಲ್ಲಿ ಭಾಷ್ಯ ಭೂಮಿಕೆಯನ್ನು ಬರೆದಿರುತ್ತಾರೆ. ಈ ಭೂಮಿಕೆಗಳಲ್ಲಿ ವೇದಗಳಿಗೆ ಸಂಬಂಧಿಸಿದಂತೆ ತಿಳಿಯಬೇಕಾದ ವಿಪುಲವಾದ ವಿಷಯಗಳಿವೆ. ಜೈಮಿನಿಯ ಸೂತ್ರಗಳ ಆಧಾರದ ಮೇಲೆ ವೇದಗಳ ಪ್ರಾಮಾಣ್ಯ, ಅಪೌರುಷೇಯತ್ವ ಇತ್ಯಾದಿ ವಿಚಾರಗಳು ಮಾತ್ರವಲ್ಲದೆ ಮಂತ್ರ, ಬ್ರಾಹ್ಮಣ ಮೊದಲಾದವುಗಳ ಲಕ್ಷಣ, ವೇದಾಧ್ಯಯನದ ಪ್ರಯೋಜನಗಳನ್ನು ಯುಕ್ತಿಯುಕ್ತವಾಗಿ ನಿರೂಪಿಸಿರುತ್ತಾರೆ. ಸಾಮವೇದದ ಭಾಷ್ಯದ ಭೂಮಿಕೆಯಲ್ಲಿ ಸಾಮಗಾನ, ಗಾನದ ರೀತಿ ಇವುಗಳನ್ನು ಚರ್ಚಿಸಿ, ಸಾಮಗಾನಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರವನ್ನು ನೀಡಿರುತ್ತಾರೆ. ಅಥರ್ವವೇದದ ಭಾಷ್ಯದ ಭೂಮಿಕೆಯಲ್ಲಿ ಅಥರ್ವವೇದದ ವಿನಿಯೋಗ, ಅದಕ್ಕೆ ಬ್ರಹ್ಮವೇದವೆಂಬ ಇನ್ನೊಂದು ಹೆಸರಿರಲು ಕಾರಣ ಇವುಗಳೆಲ್ಲವನ್ನೂ ತಿಳಿಸಿರುತ್ತಾರೆ. ಹೀಗೆ ಸಾಯಣಾಚಾರ್ಯರು ತಮ್ಮ ಅಸಾಧಾರಣವಾದ ಪಾಂಡಿತ್ಯ ಮತ್ತು ಪ್ರತಿಭೆಗಳಿಂದ ಎಲ್ಲ ವೇದಗಳಿಗೆ ಸಾಧಾರಣವಾದ ವಿಷಯಗಳನ್ನೂ ಆಯಾ ವೇದಕ್ಕೆ ಸಂಬಂಧಿಸಿದ ವಿಷಯಗಳನ್ನೂ ಕೂಲಂಕಷವಾಗಿ ವಿವರಿಸಿದ್ದಾರೆ. ಈ ಎಲ್ಲ ಕಾರಣಗಳಿಂದ ಸಾಯಣಭಾಷ್ಯವು ವೇದಭಾಷ್ಯಗಳಲ್ಲಿ ಉನ್ನತಸ್ಥಾನವನ್ನು ಪಡೆದಿದೆ.

ನಮ್ಮ ಪರಂಪರೆಯಲ್ಲಿ ಪರಮಪ್ರಮಾಣಗಳೂ, ಅಪೌರುಷೇಯಗಳೂ ಆದ ವೇದಗಳ ತಾತ್ಪರ್ಯವನ್ನು ತಿಳಿಯಲು ವೇದಭಾಷ್ಯಗಳು ತುಂಬಾ ಉಪಕಾರಕ. ಅವುಗಳ ಮನನ ತುಂಬಾ ಅಗತ್ಯ.

ವೇದದ ಅಧ್ಯಯನಕ್ಕೆ ನಿರ್ದಿಷ್ಟವಾದ ರೀತಿ ಇದೆ. ವೇದವು ಧರ್ಮ ಮತ್ತು ಬ್ರಹ್ಮವನ್ನು ಬೋಧಿಸುತ್ತದೆಯೆಂದು ತಿಳಿದಿದ್ದೇವೆ. ಧರ್ಮವಿಚಾರವೂ ಬ್ರಹ್ಮವಿಚಾರವೂ ಎಲ್ಲರಿಗೂ ಅಗತ್ಯವಾದುದರಿಂದ, ಎಲ್ಲರಿಗೂ ವೇದವನ್ನು ತಿಳಿದುಕೊಳ್ಳುವ ಅಧಿಕಾರವಿರಬೇಕು. ಆದುದರಿಂದ ವೇದಾಧಿಕಾರವು ಕೆಲವರಿಗೆ ಮಾತ್ರ ಇದೆ ಎಂಬ ವಿಚಾರವು ಸಂಕುಚಿತವಾದುದಲ್ಲವೇ? ಎಂದು ಕೆಲವರು ಅಭಿಪ್ರಾಯ



ಪಡುತ್ತಾರೆ. ಈ ವಿಚಾರವು ತುಂಬ ಸೂಕ್ಷ್ಮವಾದುದರಿಂದ ಇದನ್ನು ನಾಜೂಕಾಗಿ ಪರಿಶೀಲಿಸಬೇಕು.

## ವೇದಾಧಿಕಾರದ ರಹಸ್ಯ

ನಿರ್ದಿಷ್ಟರಾದವರಿಗೆ ಮಾತ್ರ ವೇದಾಧಿಕಾರವಿದೆ ಎಂಬ ಮಾತನ್ನು ಕೇಳಿದೊಡನೆ ಉಳಿದವರಿಗೆ ಏಕೆ ಇಲ್ಲ? ಎಂಬ ಪ್ರಶ್ನೆಯು ಹುಟ್ಟುತ್ತದೆ. ಅಧಿಕಾರ ಎಂಬ ಶಬ್ದವು ಪಾತ್ರ, ಯೋಗ್ಯ ಎಂಬ ಅರ್ಥದಲ್ಲಿ ಇಲ್ಲಿ ಬಳಸಲ್ಪಟ್ಟಿದೆ. ಕನ್ನಡದಲ್ಲಿ 'ಅಧಿಕಾರ' ಎಂಬ ಪದದ ಅರ್ಥದೊಡನೆ 'ದರ್ಪ', 'ಅಹಂಕಾರ'—ಈ ಅರ್ಥಗಳ ಛಾಯೆಯೂ ಇದೆ. ಅದನ್ನು ಇಲ್ಲಿ ಅನ್ವಯಿಸಿಕೊಳ್ಳಬಾರದು. ವೇದಕ್ಕೆ ಪಾತ್ರರಾರು? ಎಂಬುದಷ್ಟೇ ಇಲ್ಲಿ ಅಪೇಕ್ಷಿತವಾದ ಅರ್ಥ.

**ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾ**
**ಶೇವಧಿಷ್ಟೇಽಹಮಸ್ಮಿ ।** —ನಿರುಕ್ತ

ಈ ಮಂತ್ರವು ವಿದ್ಯಾಭಿಮಾನಿಯಾದ ದೇವತೆಯು ವಿದ್ಯಾವಂತನ ಬಳಿ ಬಂದು ತಾನು ನಿಧಿ ಎಂದೂ ತನ್ನನ್ನು ಜಾಗರೂಕನಾಗಿ ಕಾಪಾಡಬೇಕೆಂದೂ ಪ್ರಾರ್ಥಿಸಿತೆಂದು ತಿಳಿಸುತ್ತದೆ. ವಿದ್ಯೆಯನ್ನು ಪಾತ್ರರಲ್ಲದವರಲ್ಲಿ ಇಟ್ಟರೆ ಅದು ವೃದ್ಧಿಹೊಂದುವುದಿಲ್ಲ. ಪಾತ್ರರಿಗೇ ವಿದ್ಯೆಯನ್ನು ಕೊಡಬೇಕೆಂಬುದು ವೇದಗಳಿಗೆ ಮಾತ್ರ ಅನ್ವಯವಾಗುವುದಲ್ಲ. ಯಾವುದೇ ವಿದ್ಯೆಯಲ್ಲಿ ಪರಿಣತಿಯನ್ನು ಪಡೆದವನು ಆಲೋಚಿಸುವ ರೀತಿ ಅದು. ಆದುದರಿಂದ ನಿರ್ದಿಷ್ಟರಾದವರೇ ವೇದಾಧ್ಯಯನವನ್ನು ಮಾಡಬೇಕೆಂಬುದರ ಹಿನ್ನೆಲೆಯನ್ನು 'ನ ಹಿ ನಿಂದಾನ್ಯಾಯ' ದಂತೆಯೇ ತಿಳಿಯಬೇಕು. ಜಗತ್ತಿನಲ್ಲಿ ಸೃಷ್ಟಿಯಾಗಿರುವ ಜೀವಿಗಳ ಸಂಸ್ಕಾರಗಳು ಅನೇಕ ಬಗೆಯಾಗಿರುತ್ತವೆ. ಒಬ್ಬನು ಪ್ರಯತ್ನವಿಲ್ಲದೇ ಹಾಡುಗಾರನಾಗಬಲ್ಲ. ಇನ್ನೊಬ್ಬನು ಎಷ್ಟು ಯತ್ನಿಸಿದರೂ ಒಂದು ಪದ್ಯವನ್ನೂ ಹೇಳಲಾರ. ಇದು ಜೀವಿಗಳ ಸನ್ನಿವೇಶ. ಅರ್ಹತೆಯಿರುವವನು ಕಲಿಯುವಾಗ ಆತನ ಮೇಲಿನ ಅಸೂಯೆಯಿಂದ, ಆಗ್ರಹದಿಂದ ನಾವು ಅದನ್ನು ಕಲಿಯಲು ಯತ್ನಿಸಿದರೆ ಸಫಲರಾಗೆವು. ನಮ್ಮ ಪರಿಮಿತಿಯನ್ನು, ನಮ್ಮ ಸಂಸ್ಕಾರಗಳನ್ನು ನಿರ್ವಿಕಾರಮನಸ್ಸಿನಿಂದ ಪರಿಶೀಲಿಸಬೇಕು. ಅಲ್ಲದೆ ವೇದವನ್ನು ಅಧ್ಯಯನ ಮಾಡದೇ ಇದ್ದುದರಿಂದ ಬಹುದೊಡ್ಡ ಕೊರತೆ ಉಂಟಾಯಿತೆಂದು ಭಾವಿಸತಕ್ಕದ್ದಲ್ಲ. ವೇದದ ಸಾರವನ್ನು ತಿಳಿಯಲು ಯತ್ನಿಸುವುದೂ ಅತಿ ಅಗತ್ಯವೇ ಆಗಿದೆ. ಧರ್ಮವು ಅತೀಂದ್ರಿಯವಾದುದರಿಂದ, ಇದು ಧರ್ಮ–ಇದು ಅಧರ್ಮ ಎಂಬ ವಿವೇಚನೆಯನ್ನು ನಾವು ಮಾಡಲು ಅಸಮರ್ಥರಾದುದರಿಂದ ಎಲ್ಲರ ಹಿತವನ್ನೂ ಬಯಸುವ ಶಾಸ್ತ್ರಗಳೇ ನಮಗೆ ಅತೀಂದ್ರಿಯವಿಷಯದಲ್ಲಿ ಪ್ರಮಾಣಗಳಾಗುತ್ತವೆ. ಗೀತೆಯಲ್ಲಿ



**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ**

ಎಂದು, ಇದು ಕಾರ್ಯ–ಇದು ಅಕಾರ್ಯ ಎಂಬ ವಿಷಯದಲ್ಲಿ ಭಗವಂತನು ಶಾಸ್ತ್ರವನ್ನೇ ಪ್ರಮಾಣವನ್ನಾಗಿ ಹೇಳುತ್ತಾನೆ. ವೇದವನ್ನು ಯಾರು ಅಧ್ಯಯನ ಮಾಡಬೇಕೆಂಬ ವಿಷಯದಲ್ಲಿ ಶಾಸ್ತ್ರವು ಯಾವ ನಿರ್ಣಯವನ್ನು ಕೊಟ್ಟಿದೆ? ಮೊದಲನೆಯದಾಗಿ

**ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೀತ**

ಈ ವಾಕ್ಯಗಳಿರುವುದರಿಂದ ಅಧ್ಯಯನವನ್ನು ಮಾಡತಕ್ಕವನು ಉಪನಯನ ಸಂಸ್ಕಾರಸಂಸ್ಕೃತನಾಗಿರಬೇಕು.

**ಗರ್ಭಾಷ್ಟಮೇಷು ಬ್ರಾಹ್ಮಣಮುಪನಯೀತ ಗರ್ಭೈಕಾದಶೇಷು**
**ರಾಜನ್ಯಂ ಗರ್ಭದ್ವಾದಶೇಷು ವೈಶ್ಯಮ್ ।**
**ವಸಂತೋ ಗ್ರೀಷ್ಮಶ್ಶರದಿತ್ಯೃತವೋ ವರ್ಣಾನುಪೂರ್ವ್ಯೇಣ ॥**

ಹೀಗೆ ಮೂರು ವರ್ಣದವರಿಗೆ ಮಾತ್ರ ಉಪನಯನಸಂಸ್ಕಾರವನ್ನು ಹೇಳಿರುತ್ತಾರೆ. ಎರಡನೆಯದಾಗಿ : ವೇದಾಧ್ಯಯನವು ಏತಕ್ಕೆ? ವೇದಾರ್ಥವನ್ನು ತಿಳಿದು ವೇದ ವಿಹಿತವಾದ ಯಜ್ಞಾದಿಗಳನ್ನು ಮಾಡುವುದಕ್ಕೆ.

**ಅಥಾತೋ ಧರ್ಮಜಿಜ್ಞಾಸಾ**

ಅಥ=ವೇದಾಧ್ಯಯನಾನಂತರಂ, ಅತಃ = ಪ್ರಯೋಜನವತ್ತ್ವಾತ್ ಹೇತೋಃ, ಧರ್ಮಜಿಜ್ಞಾಸಾ ಕರ್ತವ್ಯಾ= ಧರ್ಮವಿಚಾರಃ ಕರ್ತವ್ಯಃ ಎಂದು ಜೈಮಿನಿ ಮಹರ್ಷಿಗಳು ಸೂತ್ರವನ್ನು ರಚಿಸಿರುತ್ತಾರೆ.

**ಅಥಾತೋ ಬ್ರಹ್ಮಜಿಜ್ಞಾಸಾ**

ಎಂದು ಬಾದರಾಯಣರು ವೇದಾಂತಸೂತ್ರಗಳನ್ನು ಆರಂಭಿಸಿರುತ್ತಾರೆ.

ವೇದಗಳ ಪೂರ್ವಭಾಗದಲ್ಲಿ ವಿಹಿತವಾಗಿರತಕ್ಕವುಗಳು ಬಗೆಬಗೆಯ ಯಾಗಗಳು, ಅಗ್ನಿಹೋತ್ರ, ದರ್ಶಪೂರ್ಣಮಾಸ–ಚಾತುರ್ಮಾಸ್ಯ, ಅಗ್ನಿಷ್ಟೋಮ ಮೊದಲಾದವುಗಳು. ಇವುಗಳಿಗೆ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿಗಳು ಆವಶ್ಯಕ. ಈ ಅಗ್ನಿಗಳನ್ನು ಆಧಾನದ ಮೂಲಕ ಸಂಪಾದಿಸಿಕೊಳ್ಳಬೇಕು. ಆಧಾನದಲ್ಲಿ ಯಾರು ಅಧಿಕಾರಿಗಳೆಂಬುದನ್ನು ಶ್ರುತಿಯು ಹೀಗೆ ಹೇಳುತ್ತದೆ.

**ವಸಂತಾ ಬ್ರಾಹ್ಮಣೋಗ್ನಿಮಾದಧೀತ.....।**

**ಗ್ರೀಷ್ಮೇ ರಾಜನ್ಯ ಆದಧೀತ......।**



ಶರದಿ ವೈಶ್ಯ ಆದಧೀತ......।

ಯದ್ಯೈವೈನಂ ಯಜ್ಞ ಉಪನಮೇತ್ । ಅಥಾದಧೀತ ।......

ಇಲ್ಲಿ ಶ್ರುತಿಯು ತ್ರೈವರ್ಣಿಕರಿಗೆ ಆಧಾನದ ಕಾಲವನ್ನು ಹೇಳುತ್ತದೆ. 'ರಥಕಾರನು ಮಳೆಗಾಲದಲ್ಲಿ ಆಧಾನವನ್ನು ಮಾಡಬೇಕು ಎಂದು ವಿಶೇಷವಚನವಿದೆ. ಉಳಿದವರಿಗೆ ಆಧಾನದಲ್ಲಿ ಅಧಿಕಾರವಿಲ್ಲ. ಶ್ರೀ ಶ್ರೀ ಶಂಕರ ಭಗವತ್ಪಾದರು ಬ್ರಹ್ಮಜ್ಞಾನದ ವಿಷಯದಲ್ಲಿ

ವೇದಪೂರ್ವಕಸ್ತು ನಾಸ್ತ್ಯಧಿಕಾರಶ್ಶೂದ್ರಾಣಾಮ್ ।

ಎಂದು ಹೇಳಿರುತ್ತಾರೆ. ಮೀಮಾಂಸಾ–ವೇದಾಂತ ಶಾಸ್ತ್ರಗಳಲ್ಲಿಯೂ ಈ ಸಿದ್ಧಾಂತವನ್ನೇ ಪ್ರತಿಪಾದಿಸಿರುತ್ತಾರೆ.

ಉಳಿದವರಿಗೆ ನ್ಯೂನತೆಯಾಯಿತಲ್ಲವೇ? ಖಂಡಿತವಾಗಿಯೂ ಇಲ್ಲ.

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ।

—ಭಗವದ್ಗೀತಾ

ಎಂದು ಶ್ರೀಕೃಷ್ಣನು ಹೇಳಿರುವುದನ್ನು ಇಲ್ಲಿ ಗಮನಿಸಬೇಕು.

ಮಹಾಭಾರತಯುದ್ಧವು ಮುಗಿದ ಮೇಲೆ ರಾಜ್ಯತ್ಯಾಗಮಾಡಿ, ತಪಸ್ಸಿಗೆ ಹೋಗುತ್ತೇನೆಂದು ನಿಶ್ಚಯಿಸಿದ ಧರ್ಮರಾಜನಿಗೆ ವ್ಯಾಸರು, ಶ್ರೀಕೃಷ್ಣ ಮೊದಲಾದವರು ಮಾಡುವ ಹಿತವಾದವನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ.

ಸಾಮಾನ್ಯಧರ್ಮಗಳು ಹಲವು ಸ್ಮೃತಿ–ಪುರಾಣಗಳಲ್ಲಿ ಉಕ್ತವಾಗಿವೆ. ಅವುಗಳನ್ನು ಮಾಡಿ ತನ್ನ ಉನ್ನತಿಯನ್ನು ಸಾಧಿಸಿಕೊಳ್ಳಬೇಕು. ಮಹಾಭಾರತದಲ್ಲಿ ಧರ್ಮವ್ಯಾಧನ ಉಪಾಖ್ಯಾನವಿದೆ. ಆ ಬೇಡನು ಕೌಶಿಕನೆಂಬ ಬ್ರಾಹ್ಮಣನಿಗೆ ಧರ್ಮವನ್ನು ತಿಳಿಸುತ್ತಾನೆ.

ಹಾಗೆಯೇ ಬ್ರಹ್ಮಜ್ಞಾನ–ಆತ್ಮಜ್ಞಾನ ಮೊದಲಾದ ವಿಷಯಗಳೂ ಪುರಾಣ ಗಳಲ್ಲಿ ಪ್ರತಿಪಾದಿತವಾಗಿವೆ. ಅವುಗಳಿಂದ ಜ್ಞಾನವನ್ನು ಪಡೆದುಕೊಳ್ಳಲು ಯತ್ನಿಸಬೇಕು.

**ರಾಷ್ಟ್ರಜೀವನ : ಸಾರ್ವಭೌಮಸ್ಥಾನ**

ಒಂದು ಕಾಲದಲ್ಲಿ ಜಗತ್ತು ಪೂರ್ವದೇಶವಾದ ಭಾರತದ ಕಡೆ ಮುಖ ಮಾಡಿತ್ತು. ಲೋಕಕ್ಕೇ ಬೆಳಕು ನೀಡುವ ಸೂರ್ಯದೇವನು ಪೂರ್ವದಿಕ್ಕಿನಲ್ಲಿ



ಉದಯಿಸುವಂತೆ ಪೂರ್ವದೇಶವಾದ ನಮ್ಮ ಭಾರತದಿಂದಲೇ ಸಂಸ್ಕೃತಿಸೂರ್ಯನ ಉದಯವಾಯಿತು. ಪ್ರಯಾಣಸೌಕರ್ಯವು ಕಷ್ಟತಮವಾಗಿದ್ದ ಆ ಕಾಲದಲ್ಲಿಯೇ ಪ್ರಪಂಚದ ಹಲವು ರಾಷ್ಟ್ರಗಳ ಗಣ್ಯವಿದ್ವಾಂಸರುಗಳು ಭಾರತದೆಡೆಗೆ ಆಕರ್ಷಿತರಾಗಿದ್ದರು. ಭಾರತೀಯಸಂಸ್ಕೃತಿಗೆ ವೇದರಾಶಿಯೇ ಮೂಲಾಧಾರ. ವೇದವೆಂದರೆ ಜ್ಞಾನ. ವೇದರಾಶಿ ಎಂದರೆ ಜ್ಞಾನಭಂಡಾರ. ಜಗತ್ತಿನ ಅಮೂಲ್ಯ ಜ್ಞಾನಭಂಡಾರವೆನಿಸಿರುವ ವೇದರಾಶಿಯಿಂದ ತಮ್ಮ ಜ್ಞಾನಭಂಡಾರವನ್ನು ವೃದ್ಧಿಪಡಿಸಿಕೊಳ್ಳಲು ವಿಶ್ವದ ಹಲವಾರು ಖ್ಯಾತ ಮೇಧಾವಿಗಳು ಜ್ಞಾನದಾಹಿಗಳಾಗಿ, ಶತ-ಶತಮಾನಗಳ ಹಿಂದೆಯೇ ಭಾರತಕ್ಕೆ ಯಾತ್ರಿಗಳಾಗಿ ಬಂದರು.

ಹಿಂದೆ ಒಂದು ಕಾಲದಲ್ಲಿ ತನ್ನ ವೇದೋಪನಿಷತ್ತುಗಳ ಜ್ಞಾನನಿಧಿಯ ಮೂಲಕ ಭಾರತ ದೇಶವು ಜಗತ್ತಿಗೆ ಗುರುಸ್ಥಾನದಲ್ಲಿತ್ತು. ಭಾರತದ ಉಜ್ವಲ ಸಂಸ್ಕೃತಿ, ಆಧ್ಯಾತ್ಮಿಕಶಾಂತಿ ಹಾಗೂ ಜ್ಞಾನದ ಸಂಪಾದನೆಗಾಗಿ ವಿಶ್ವದ ಜ್ಞಾನ ಪಿಪಾಸುಗಳು ಪೂರ್ವರಾಷ್ಟ್ರ ಭಾರತದ ಕಡೆ ನೋಡುತ್ತಿದ್ದರೆ, ದುರ್ದೈವದಿಂದ ಇಂದು ನಾವು ಎಲ್ಲಕ್ಕೂ ಪಶ್ಚಿಮದ ಕಡೆ ಮುಖ ತಿರುಗಿಸಿದ್ದೇವೆ. ಇದೆಂಥ ವಿಪರ್ಯಾಸ! ಇದೆಂಥ ತಿರುವು-ಮುರುವು; ಸ್ವಲ್ಪ ಮಟ್ಟಿಗೆ ಭೌತವಿಜ್ಞಾನಲಾಭಕ್ಕಾಗಿ ಪಶ್ಚಿಮದ ಕಡೆ ಮುಖ ತಿರುಗಿಸುವುದೇನೂ ಅಸಂಗತವಾಗಲಾರದು. ಪಶ್ಚಿಮದ ಕಡೆಯಿಂದ ನಮಗೆ ಅಲ್ಪಸ್ವಲ್ಪ ಭೌತವಿಜ್ಞಾನದ ಬೆಳಕು ತೋರುತ್ತಿರಬಹುದು. ಆದರೆ ಭೌತವಿಜ್ಞಾನವೇ ಮನುಷ್ಯನು ಸಾಧಿಸಬೇಕಾದ ಸಾರಸರ್ವಸ್ವವಲ್ಲ. ಅನೇಕ ಪ್ರಖ್ಯಾತವಿಜ್ಞಾನಿಗಳು ಇಂದಿಗೂ ಆಧ್ಯಾತ್ಮಿಕವಿಜ್ಞಾನಕ್ಕಾಗಿ ಭಾರತವನ್ನೇ ಎದುರು ನೋಡುತ್ತಿದ್ದಾರೆ. ಜ್ಞಾನದ ಗಣಿ ಎನಿಸಿರುವ ವೇದ-ಉಪನಿಷತ್ತು-ಭಗವದ್ಗೀತೆ ಯನ್ನರಿಯಲು ತವಕಪಡುತ್ತಿದ್ದಾರೆ.

ವಿಜ್ಞಾನದಲ್ಲಿ ಎರಡು ವಿಭಾಗ. ಒಂದು ಪ್ರಪಂಚದ ಬಾಹ್ಯವಸ್ತುಗಳ ಸಂಶೋಧನೆ. ಮೂಲಕ ಅದರ ಮೂಲವನ್ನು ಕಂಡುಹಿಡಿಯಲು ಯತ್ನಿಸುವುದು. ಇದೇ ಇಂದಿನ ಭೌತವಿಜ್ಞಾನ. ಎರಡನೆಯದು ಅಧ್ಯಾತ್ಮವಿಜ್ಞಾನ. ನಮ್ಮ ದೃಷ್ಟಿಯನ್ನು ಅಂತರಂಗಕ್ಕೆ ತಿರುಗಿಸಿ ಅಂತರಂಗಸಂಶೋಧನೆಯಿಂದ ಮನಸ್ಸನ್ನು ಏಕಾಗ್ರಗೊಳಿಸಿ ಮನಸ್ಸು ಬುದ್ಧಿ, ಪ್ರಾಣಗಳಿಗೂ ಆಚೆಯಿರುವ ಉಪನಿಷತ್ತು ಗಳಿಂದ ಪ್ರತಿಪಾದ್ಯವಾದ ಶುದ್ಧಚೈತನ್ಯದ ಅನುಭವ ಪಡೆಯುವುದು ಅಥವಾ ಆತ್ಮಸಾಕ್ಷಾತ್ಕಾರ ಪಡೆಯುವುದು—ಇದೇ ಆತ್ಮವಿಜ್ಞಾನ ಅಥವಾ ಅಧ್ಯಾತ್ಮವಿಜ್ಞಾನ.

ಪ್ರಾಚೀನಕಾಲದಿಂದ ಬೆಳೆದು ಬಂದಿರುವ ಆತ್ಮವಿಜ್ಞಾನ, ಅರ್ವಾಚೀನ ಕಾಲದಲ್ಲಿ ಬೆಳೆಯುತ್ತಿರುವ ಭೌತವಿಜ್ಞಾನ ಇವೆರಡಕ್ಕೂ ಹೋರಾಟವಿಲ್ಲ. ಆತ್ಮ ವಿಜ್ಞಾನ—ಭೌತವಿಜ್ಞಾನಗಳು ಒಂದಕ್ಕೊಂದು ಮಾರಕವಲ್ಲ. ಇವೆರಡೂ ಒಂದಕ್ಕೊಂದು ಪೂರಕವಾಗಿಯೇ ಇವೆ. ಮೇಲ್ನೋಟಕ್ಕೆ, ಸಾಮಾನ್ಯದೃಷ್ಟಿಗೆ



ಅಧ್ಯಾತ್ಮವಿಜ್ಞಾನಕ್ಕೂ ಭೌತಿಕವಿಜ್ಞಾನಕ್ಕೂ ವಿರೋಧಾಭಾಸ ತೋರಿ ಬಂದೀತು. ಪೂರ್ವಗ್ರಹವಿಲ್ಲದೇ ವಿಮರ್ಶಿಸಿದಾಗ ವಸ್ತುಸ್ಥಿತಿ ಸ್ಪಷ್ಟವಾಗುತ್ತದೆ. ಭೌತ ವಿಜ್ಞಾನವು ತಾತ್ಕಾಲಿಕವಾಗಿ ಸುಖಭೋಗಗಳ ಸಾಧನಗಳನ್ನು ಹೊಚ್ಚ ಹೊಸದಾಗಿ ಆವಿಷ್ಕರಿಸಬಹುದು. ಆದರೆ ಭೌತವಿಜ್ಞಾನವು ನೀಡುವ ಸುಖ, ಭೋಗ, ಸಂತೋಷಗಳು ಶಾಶ್ವತವಲ್ಲ. ಮನುಷ್ಯನು ಅಲ್ಪವಾದುದಕ್ಕೆ ಆಸೆಪಟ್ಟು ಜೀವಿತ ವನ್ನು ಪೂರ್ತಿಯಾಗಿ ವ್ಯರ್ಥ ಮಾಡದೇ, ತನ್ನ ಜೀವನವನ್ನು ಸಾರ್ಥಕಪಡಿಸಿ ಕೊಂಡು, ಅಲ್ಪಕ್ಕೆ ಬದಲಾಗಿ ಮಹತ್ತಾದುದನ್ನು ಪಡೆಯಬೇಕೆಂಬುದೇ ವೇದದ ಆದೇಶ. ಭೌತವಿಜ್ಞಾನದ ಫಲವಾಗಿ ಕ್ಷಣಿಕಾನಂದಕ್ಕೆ ಬದಲಾಗಿ ಆತ್ಮದರ್ಶನದ ಶಾಶ್ವತಾನಂದವನ್ನು ಪಡೆಯಬೇಕೆಂಬುದೇ ವೇದರಾಶಿಯ ಉಪದೇಶ.

ಭಾರತದ ಪೂರ್ವದ ಋಷಿಮುನಿಗಳು ಬಾಹ್ಯಪದಾರ್ಥಶೋಧನೆಯಿಂದ ಮೂಲಶಕ್ತಿಯ ಸಂದರ್ಶನ ಸಾಧ್ಯವಿಲ್ಲವೆಂಬುದನ್ನು ಬಹುಬೇಗ ಮನಗಂಡು ಅಂತರಂಗಿಕ ಸಾಧನೆಗೆ ತೊಡಗಿದರು. ವೇದೋಪನಿಷತ್ತುಗಳು ಬೋಧಿಸಿದ ರೀತಿಯಿಂದಲೇ ಕ್ರಮವಾಗಿ ಮುನ್ನಡೆದು ಶ್ರವಣ–ಮನನ–ನಿಧಿಧ್ಯಾಸನ ಯುಕ್ತ ರಾದರು. ಧ್ಯಾನ–ಧಾರಣ–ಸಮಾಧಿನಿಷ್ಠರಾಗಿ ತಪೋಮಗ್ನರಾಗಿ ತಮ್ಮ ಸಾಧನೆ ಯಲ್ಲಿ ಜಯಶೀಲರಾಗಿ ಋಷಿ–ಮುನಿಗಳು ಆತ್ಮಸಾಕ್ಷಾತ್ಕಾರವನ್ನು ಹೊಂದಿ, ಶಾಶ್ವತಾನಂದವನ್ನು ಪಡೆದರು. ಮಹರ್ಷಿಗಳು ಲೋಕಾನುಕಂಪವುಳ್ಳವರಾಗಿ ತಾವು ಪಡೆದ ಅದ್ವಿತೀಯಬ್ರಹ್ಮಾನಂದವನ್ನು ಇತರರೂ ಪಡೆಯಲೆಂದು ತಮ್ಮ ಅನುಭವಾಮೃತವನ್ನು ಜಗತ್ತಿಗೆ ಸಾರಿದ್ದಾರೆ. ಪರಮಾನಂದಪ್ರಾಪ್ತಿಯ ಶುಭ ಮಾರ್ಗವನ್ನು ಅನನ್ಯಸಾಧಾರಣರೀತಿಯಲ್ಲಿ ವಿವರಿಸುವುದರಿಂದಲೇ ವೇದೋಪ ನಿಷತ್ತುಗಳಿಗೆ ಮಹತ್ತ್ವದ ಸ್ಥಾನವು ಲಭಿಸಿದೆ.

"ತಸ್ಯ ಹ ವಾ ಏತಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದ್ ಋಗ್ವೇದೋ ಯಜುರ್ವೇದಃ ಸಾಮವೇದಃ" ಎಂದಿರುವಂತೆ ಪರಮಾತ್ಮನ ಮುಖಾರವಿಂದದಿಂದಲೇ ಹೊರಬಂದ ವೇದೋಪನಿಷತ್ತುಗಳೇ ಪರಮಾತ್ಮ ಸ್ವರೂಪಜ್ಞಾನವನ್ನು ಬೋಧಿಸಲು ಸಮರ್ಥಸಾಧನಗಳಾಗಿವೆ. ಯಾವುದನ್ನು ತಿಳಿದರೆ ಇನ್ನೇನನ್ನೂ ತಿಳಿಯಬೇಕಾಗಿಲ್ಲವೋ, ಯಾವುದನ್ನು ಪಡೆದರೆ ಮತ್ತೇನನ್ನೂ ಪಡೆಯಬೇಕಾಗಿಲ್ಲವೋ ಅಂಥ ಜ್ಞಾನವನ್ನು ಉಪದೇಶಿಸುವುದರಿಂದಲೇ ಈ ಜ್ಞಾನರಾಶಿಗೆ ವೇದವೆಂದು ಹೆಸರು.

ಆದ್ದರಿಂದ ಈ ಜ್ಞಾನರಾಶಿಗೆ "ಆಯುರಸ್ಮಿನ್ ವಿದ್ಯತೇ, ಅನೇನ ವಾ ಆಯುರ್ವಿನ್ದತ ಇತಿ ಆಯುರ್ವೇದಃ" ಇದರಿಂದ ಆಯುರ್ಭಾಗ್ಯವನ್ನು ಪಡೆಯುವುದು ಮತ್ತು ತಿಳಿಯುವುದು ಎಂಬುದರಿಂದ ಆಯುರ್ವೇದ ಎಂಬ ಹೆಸರು. ಅಂತೆಯೇ "ನಾಟ್ಯಸ್ಯ ವೇದನಂ, ಸತ್ತಾಲಾಭಃ, ವಿಚಾರಶ್ಚ ಯತ್ರ



ತನ್ನಾಟ್ಯವೇದಶಬ್ದೇನ ಉಚ್ಯತೇ" ನಾಟ್ಯವನ್ನು ಯಾವುದರಿಂದ ಅರಿವರೋ ಅದಕ್ಕೆ ನಾಟ್ಯವೇದವೆಂಬ ಹೆಸರಾಯಿತು. ಇದರಂತೆಯೇ ಧನುರ್ವೇದ, ಜ್ಯೋತಿರ್ವೇದ ಮುಂತಾದವುಗಳೂ ಬಳಕೆಯಲ್ಲಿ ಬಂದಿವೆ.

ಈ ಮೇಲಿನ ಅಂಶಗಳನ್ನು ಪರಿಶೀಲಿಸಿದರೆ ಜನಜೀವನಕ್ಕೆ ಬೇಕಾದ ಕಲಾ–ವಿಜ್ಞಾನ ತತ್ತ್ವಗಳೂ ಸೂತ್ರರೂಪದಿಂದ ವೇದಗಳಲ್ಲಿ ಅಡಕವಾಗಿರುವುದು ಸ್ಪಷ್ಟವಾಗುತ್ತದೆ. ಆರಂಭದ ಲೌಕಿಕವಿಜ್ಞಾನದಿಂದ ಹಿಡಿದು ತುತ್ತತುದಿಯ ಅಧ್ಯಾತ್ಮವಿಜ್ಞಾನದವರೆಗೆ ಮನುಕುಲದ ಶ್ರೇಯಸ್ಸಿನ ಸಕಲ ಸಾಧನೋಪಾಯ ಗಳನ್ನು ಬೋಧಿಸುವ ವೇದದ ಮಹಿಮೆಯನ್ನು ವರ್ಣಿಸಬಲ್ಲವರಾರು?

ಭಾರತದೇಶವು ಜಗತ್ತಿಗೇ ಅತ್ಯಂತ ಗೌರವಾರ್ಹರಾಷ್ಟ್ರವೆಂದು ಪರಿಗಣಿಸಲ್ಪಟ್ಟಿದ್ದರೆ ಆದಕ್ಕೆ ಕಾರಣವೇನೆಂಬುದನ್ನು ನಾವು ಸ್ವಲ್ಪ ವಿಚಾರಿಸುವುದು ಸೂಕ್ತವಾದೀತು. ಭಾರತದಲ್ಲಿ ಉನ್ನತ ಹಿಮಾಲಯವಿರುವುದಾಗಲೀ, ಪವಿತ್ರ ಗಂಗಾನದಿಯು ಹರಿಯುತ್ತಿರುವುದಾಗಲೀ ಅಥವಾ ಕಲಾಕೌಶಲ್ಯಪೂರ್ಣ ಸುಂದರ ದೇವಮಂದಿರಗಳಿರುವುದರಿಂದಾಗಲೀ ಭಾರತಕ್ಕೆ ಘನತೆಯೊದಗಿ ಬಂದಿಲ್ಲ. ಪ್ರಪಂಚದ ಇತರ ದೇಶಗಳಲ್ಲಿ ಅಲಭ್ಯವಾದ, ಅನರ್ಘ್ಯವೇದರಾಶಿಯು ಭಾರತದಲ್ಲಿರುವುದರಿಂದ ಅದು ಜಗತ್ತಿನಲ್ಲಿ ಗೌರವಸ್ಥಾನವನ್ನು ಪಡೆದಿದೆ. ಈ ಮಹತ್ತ್ವದ ಸಂಗತಿಯನ್ನು ಭಾರತೀಯರಾದ ನಾವು ಸದಾ ಹೆಮ್ಮೆಯಿಂದ ಸ್ಮರಿಸುತ್ತಿರಬೇಕು. ಈ ವಿಜ್ಞಾನಯುಗದಲ್ಲಿಯೂ ಮನುಕುಲದ ಪರಿಪೂರ್ಣ ಪ್ರಗತಿಗೆ ವೇದೋಪನಿಷತ್ತುಗಳ ಸಂದೇಶವು ಅನಿವಾರ್ಯವೆಂಬುದನ್ನು ನಾವು ಅರಿತುಕೊಳ್ಳಬೇಕು.

ನಮ್ಮ ದೇಶದಲ್ಲಿ ಸ್ವಲ್ಪಮಟ್ಟಿಗೆ ಲೌಕಿಕ ಸಂಪತ್ತಿನ ಕೊರತೆಯಿರಬಹುದು. ಆದರೆ ನಮ್ಮನ್ನು ಬಡವರೆನ್ನುವರಾರು? ಪ್ರಗತಿಶೀಲಜನತೆಗೆ ಜ್ಞಾನವೇ ಬಂಡವಾಳ. ಜ್ಞಾನವೇ ಸಕಲೈಶ್ವರ್ಯಸಾಧನ. ವೇದೋಪನಿಷತ್ತುಗಳ ಅಪಾರ ಜ್ಞಾನಸಂಪದ್ಭರಿತ ಭಾರತವು ಇಂದೂ—ಮುಂದೂ ಜಗತ್ತಿನ ಅಗ್ರಮಾನ್ಯ ರಾಷ್ಟ್ರವಾಗಿಯೇ ಬೆಳಗೀತು. ಆದ ಕಾರಣವೇ ಪರಮಾತ್ಮನ ಕೃಪೆಯಿಂದಲೂ, ಋಷಿ–ಮುನಿಗಳ ಶ್ರಮಪೂರ್ಣ ಸಾಧನೆಯಿಂದಲೂ ನಮ್ಮ ರಾಷ್ಟ್ರಕ್ಕೆ ಲಭಿಸಿರುವ ವೇದರಾಶಿಯ ರಕ್ಷಣೆ–ಪೋಷಣೆಗೆ ನಾವು ಗಮನ ಹರಿಸಬೇಕು. ವಿಶ್ವಕಲ್ಯಾಣ ದೃಷ್ಟಿಯಿಂದ ವಿಶ್ವಜನತೆಯ ಜ್ಞಾನಭಂಡಾರವಾದ ವೇದರಾಶಿಯ ಪೂರ್ಣ ಪ್ರಯೋಜನವು ವಿಶ್ವವಿಸ್ತಾರವಾಗುವಂತೆ ಮಾಡಲು ನಾವು ಕಟಿಬದ್ಧರಾಗಬೇಕು. ಈ ಶುಭಕಾರ್ಯಕ್ಕಾಗಿ ಬಾಂಧವರೇ, ಏಳಿ, ಎದ್ದೇಳಿ! ಜಾಗೃತರಾಗಿರಿ!!

---



# ಅನುಬಂಧ-೧

## ವೇದಗಳಲ್ಲಿ ವಿಜ್ಞಾನವುಂಟೇ?

ನಾವು ವಾಸಿಸುತ್ತಿರುವ ಈ ಕಾಲದಲ್ಲಿ ವಿಜ್ಞಾನ ಎಂದು ಕರೆಯಲ್ಪಡುವ ಭೌತವಿಜ್ಞಾನ (Science) ಅತ್ಯಂತ ಪ್ರಾಮಾಣಿಕವೆಂದು ಮಾನ್ಯತೆ ಪಡೆದಿದೆ. ಈ ವಿಜ್ಞಾನವು ಎಲ್ಲ ಪ್ರಶ್ನೆಗಳಿಗೂ ಉತ್ತರ ಕೊಡಬಲ್ಲುದು ಎಂದು ಘೋಷಿಸುವವರು ಹೇರಳವಾಗಿದ್ದಾರೆ. ಈ ವಿಜ್ಞಾನಶಾಸ್ತ್ರದ ಪರಿಚಯವಿಲ್ಲದಿದ್ದರೂ ವಿಜ್ಞಾನದಿಂದ ಆಗಿರುವ ಭೌತಿಕಪ್ರಯೋಜನಗಳಿಂದ ಆಕರ್ಷಿತರಾಗಿ ಅದನ್ನು ಪರಮಾಚಾರ್ಯಸ್ಥಾನದಲ್ಲಿ ಕೂರಿಸುವವರೇ ಹೆಚ್ಚು ಮಂದಿ. ಹಾಗೆಯೇ ವೇದಾರ್ಥಜ್ಞಾನವಿಲ್ಲದಿದ್ದರೂ ಶ್ರದ್ಧೆಯಿಂದ ವೇದವು ಎಲ್ಲ ಜ್ಞಾನಗಳ ಆಕರ ಎಂದು ಗೌರವಿಸುವ ಜನರೂ ಬಹುಮಂದಿ ಇದ್ದಾರೆ. ಈ ಎರಡೂ ಪಕ್ಷಗಳಲ್ಲಿಯೂ ಅತಿವಾದ ಮಾಡುವ ಜನರೇ ಹೆಚ್ಚು. ಭೌತಿಕವಿಜ್ಞಾನವನ್ನು ಬಿಟ್ಟರೆ ಬೇರೆ ಜ್ಞಾನವಾಗಲೀ, ಶಾಸ್ತ್ರವಾಗಲೀ, ವೇದವಾಗಲೀ ಯಾವುದೂ ಇಲ್ಲ ಎಂಬುದು ಕೆಲವರ ವಿಚಾರ. ಅಲ್ಲದೆ "ವೇದವು ವಿಜ್ಞಾನಕ್ಕೆ ವಿರೋಧಿ. ಅದು ಮೂಢನಂಬಿಕೆಗಳ ರಾಶಿ. ಆದುದರಿಂದ ಅದನ್ನು ತ್ಯಜಿಸಿ" ಎಂದು ಉಪದೇಶವನ್ನು ನೀಡುತ್ತಾರೆ. ಹಾಗೆಯೇ "ಭೌತವಿಜ್ಞಾನವೂ ಶಾಸ್ತ್ರವೇ ಅಲ್ಲ, ಅದರಲ್ಲಿ ಏನೇನು ಮಹಿಮೆ ಇದೆ ಎಂದು ನೀವು ಹೇಳುತ್ತೀರೋ ಅದೆಲ್ಲಾ ವೇದದಲ್ಲೇ ಇದೆ" ಎಂದು ವೇದವಾದಿಗಳು ಹೇಳುತ್ತಾರೆ. ಆಧುನಿಕ ಭೌತವಿಜ್ಞಾನದಲ್ಲಿ ಬರುವ ನ್ಯೂಕ್ಲಿಯರ್ ಶಕ್ತಿಯ ವಿಷಯವಾಗಲೀ, ಇಂಗಾಲಾಮ್ಲ, ಜಲಜನಕ ಮುಂತಾದ ವಿಷಯಗಳಾಗಲೀ ವೇದದಲ್ಲಿವೆಯೇ? ಎಂದರೆ "ಇದ್ದೇ ಇದೆ. ಇಲ್ಲದೆ ಏನು?" ಎಂದು ವೇದದ ಶಬ್ದ ಮತ್ತು ವಾಕ್ಯಗಳಿಗೆ ಸಂಸ್ಕೃತಭಾಷಾಪಾಂಡಿತ್ಯದಿಂದ ಸರಸ್ವತೀ ಪ್ರಾಣಪೀಡನ ಮಾಡಿ ಕಷ್ಟಪಟ್ಟು ನ್ಯೂಕ್ಲಿಯರ್ ಶಕ್ತಿ ಮುಂತಾದ ಅರ್ಥಗಳು ಬರುವಂತೆ ಯತ್ನಿಸುವ ಮಹಾಮೇಧಾವಿಗಳೂ ಇದ್ದಾರೆ. ಯಾವುದೇ ಪಕ್ಷದ ಪೂರ್ವಗ್ರಹ (Prejudice) ಕ್ಕೂ ಒಳಗಾಗದೆ ಅಂಧಾಭಿಮಾನವನ್ನು ತೊರೆದು ನಾವು ಈ ವಿಷಯವನ್ನು ಪರಿಶೀಲಿಸಬೇಕು.

## ಕ್ಷೇತ್ರಗಳ ಬೇರೆ

ವೇದದಲ್ಲಿ ಭೌತವಿಜ್ಞಾನವಿದೆಯೇ ಎಂಬ ಪ್ರಶ್ನೆಗೆ ಬಲ್ಲವರು ಇಲ್ಲ ಎಂಬ ಸರಳವಾದ ಉತ್ತರವನ್ನು ಕೊಡುತ್ತಾರೆ. ವೇದದಲ್ಲಿ ಭೌತವಿಜ್ಞಾನವಿಲ್ಲದಿದ್ದರೂ ವೇದ ಮತ್ತು ವಿಜ್ಞಾನಗಳು ತಮ್ಮ ತಮ್ಮ ಕ್ಷೇತ್ರದಲ್ಲಿ ಪ್ರಾಮಾಣಿಕವಾದ



ಶಾಸ್ತ್ರಗಳು. 'Science' (ಸೈನ್ಸ್) ಎಂಬ ಹೆಸರಿನಿಂದ ಪ್ರಸಿದ್ಧವಾದ ವಿಜ್ಞಾನ ಶಾಸ್ತ್ರವು ಇಂದ್ರಿಯಗಳ ವ್ಯಾಪ್ತಿಗೆ ಒಳಪಟ್ಟ ಕ್ಷೇತ್ರದಲ್ಲಿ ಸಂಶೋಧನೆಯನ್ನು ನಡೆಸುತ್ತದೆ. ವಿಷಯಗಳನ್ನು ಸಂಗ್ರಹಿಸುತ್ತದೆ. ತರ್ಕಬದ್ಧವಾದ ವಿಚಾರವನ್ನು ಮಾಡುತ್ತದೆ. ಪ್ರಯೋಗಗಳನ್ನು ನಡೆಸುತ್ತದೆ. ಪುನಃ ಪುನಃ ಪ್ರಯೋಗಗಳನ್ನು ನಡೆಸಿ ನಿರ್ಣಯಕ್ಕೆ ಬಂದ ವಿಷಯಗಳನ್ನು ಸಿದ್ಧಾಂತವೆಂದು ಸಾರುತ್ತದೆ. ವೇದವೆಂಬ ಶಾಸ್ತ್ರವು ಮಾಡುವ ಸಂಶೋಧನೆಯ ರೀತಿಯೂ ಇದೇ. ಅದು ಇಂದ್ರಿಯಗಳ ವ್ಯಾಪ್ತಿಗೆ ಮೀರಿದ ಕ್ಷೇತ್ರದಲ್ಲಿ ಸಂಶೋಧನೆಯನ್ನು ನಡೆಸಿ, ವಿಷಯಗಳನ್ನು ಸಂಗ್ರಹಿಸಿ, ತರ್ಕಬದ್ಧವಾಗಿ ವಿಚಾರಮಾಡಿ, ಪ್ರಯೋಗಗಳನ್ನು ನಡೆಸಿ, ಮತ್ತೆ ಮತ್ತೆ ಶೋಧಿಸಿ, ಬಂದ ನಿರ್ಣಯವನ್ನು ಸಾರುತ್ತದೆ. ಭೌತಿಕ ವಿಜ್ಞಾನದ ಸಿದ್ಧಾಂತಗಳನ್ನು ವಿಜ್ಞಾನಿಗಳು ಹೊರಗೆಡಹಿದರೆ ವೇದಗಳ ಸಿದ್ಧಾಂತವನ್ನು ಋಷಿಗಳು ಪ್ರಕಟಿಸುತ್ತಾರೆ. ಇಂತಹ ಋಷಿಸಿದ್ಧಾಂತಗಳನ್ನೇ ವೇದದಲ್ಲಿ ಕಾಣಬಹುದು.

ಈ ಎರಡೂ ಶಾಸ್ತ್ರಗಳಲ್ಲೂ ಇರುವ ಪ್ರಾಮಾಣಿಕತೆ, ಪ್ರಯೋಗಪರತೆ ಮತ್ತು ವಿಚಾರಪರತೆಗಳನ್ನು ನಾವು ಮಾನ್ಯ ಮಾಡಬೇಕಾಗುತ್ತದೆ.

## ಬದಲಾದ ಧೋರಣೆ

ಅತೀಂದ್ರಿಯಜ್ಞಾನವು ವೇದಗಳ ಕ್ಷೇತ್ರ. ಇಂದ್ರಿಯಜ್ಞಾನವು ವಿಜ್ಞಾನದ ಕ್ಷೇತ್ರ. ಆದುದರಿಂದ ಒಂದು ಇನ್ನೊಂದಕ್ಕೆ ವಿರೋಧಿ ಎಂದು ವಾದಿಸುವುದೇ ಸರಿಯಲ್ಲ. ವೇದ ಬಲ್ಲವರು ಇಂದ್ರಿಯಕ್ಷೇತ್ರದ ಸತ್ಯಾಂಶವನ್ನು ಹೊರಗೆಡಹುವ ವಿಜ್ಞಾನವನ್ನೂ, ವಿಜ್ಞಾನ ಬಲ್ಲವರು ಅತೀಂದ್ರಿಯಕ್ಷೇತ್ರದ ಸತ್ಯಾಂಶವನ್ನು ಹೊರಗೆಡಹುವ ವೇದವನ್ನೂ ಪರಸ್ಪರ ಸಮಭಾವನೆಯಿಂದ ಕಾಣಬೇಕು.

ಹಲವು ವರ್ಷಗಳ ಹಿಂದೆ ಇಂದ್ರಿಯಗಳ ಕ್ಷೇತ್ರದ ಜ್ಞಾನವೇ ನಿಜವಾದ ಜ್ಞಾನ, ಅದಲ್ಲದ ಇನ್ನೊಂದು ಜ್ಞಾನವೇ ಇಲ್ಲ ಎಂದು ವಿಜ್ಞಾನಿಗಳು ನಂಬಿದ್ದರು. ಆದರೆ ಈಚೆಗೆ ಅವರ ಧೋರಣೆ ಬದಲಾಯಿಸಿದೆ. ಪ್ರಸಿದ್ಧರಾದ ವಿಜ್ಞಾನಿಗಳು ಅತೀಂದ್ರಿಯಜ್ಞಾನವೂ ಇರಬಹುದೆಂದು ಹೇಳತೊಡಗಿದ್ದಾರೆ. ಪ್ರಖ್ಯಾತ ವಿಜ್ಞಾನಿಯಾದ ಐನ್‌ಸ್ಟೀನ್ "It is a narrow view which limits knowledge to what could be tested by the senses. ಜ್ಞಾನವನ್ನು ಇಂದ್ರಿಯಕ್ಷೇತ್ರಕ್ಕೆ ಸೀಮಿತಗೊಳಿಸುವುದು ಸಂಕುಚಿತ ದೃಷ್ಟಿ" ಎಂದು ಹೇಳುತ್ತಾನೆ. ಅತೀಂದ್ರಿಯ ಕ್ಷೇತ್ರದ ಜ್ಞಾನವೂ ಇರಬಹುದೆಂದು ಮಸ್ತಿಷ್ಕವಿಜ್ಞಾನಿಗಳ ಅಭಿಪ್ರಾಯ. ಅವರು "ನಮ್ಮ ಮೆದುಳಿನಲ್ಲಿ ಅನೇಕ ಕೇಂದ್ರಗಳು ಅಪವ್ಯಯ ವಾಗುತ್ತಿವೆ. ನಮ್ಮ ಉಪಯೋಗಕ್ಕೆ ಬೇಕಾದ ಆಹಾರ, ವಿಹಾರ, ಬುದ್ಧಿಯ ಜ್ಞಾನ,



ಕಲೆಗಳ ಅನುಭವ ಇವುಗಳಲ್ಲದೆ ಇನ್ನೂ ಅನೇಕ ಉಪಯೋಗಗಳಿಗೆ ಬರುವ ಕೇಂದ್ರಗಳು ಮೆದುಳಿ ನಲ್ಲಿ ಇವೆ. ಅವು ಅತೀಂದ್ರಿಯಜ್ಞಾನವನ್ನು ಪಡೆಯಲು ಸಾಧನಗಳಾಗಬಹುದು. ಅವುಗಳನ್ನು ಬಳಸಿಕೊಳ್ಳುವುದು ವಿವೇಕ" ಎಂದು ಅಭಿಪ್ರಾಯಪಡುತ್ತಾರೆ. ಇಂತಹ ಅತೀಂದ್ರಿಯಕ್ಷೇತ್ರದಲ್ಲಿ ದೈವಪ್ರೇರಣೆಯಿಂದ ಪ್ರಯೋಗಗಳನ್ನು ನಡೆಸಿ ದೈವಾನುಗ್ರಹದಿಂದ ಗೋಚರವಾದ ಸತ್ಯಗಳನ್ನು ಋಷಿಗಳು ವೇದದಲ್ಲಿ ಹೇಳಿದ್ದಾರೆ. ಅವುಗಳ ಅನುಸಂಧಾನ ಮತ್ತು ಉಪಯೋಗ ಪಡೆದುಕೊಳ್ಳುವುದು ವಿವೇಕಿಗಳ ಕರ್ತವ್ಯ.

ಜ್ಞಾನ–ವಿಜ್ಞಾನ

ಮೋಕ್ಷೇ ಧೀರ್ಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ

—ಅಮರಕೋಶ, ಧೀವರ್ಗ

ಎಂಬ ಮಾತಿನಂತೆ ಶಿಲ್ಪಶಾಸ್ತ್ರ ಮುಂತಾದವುಗಳಿಗೆ ಸಂಬಂಧಪಟ್ಟ ಅರಿವನ್ನು ವಿಜ್ಞಾನವೆಂದೂ, ಮೋಕ್ಷದ ಅರಿವನ್ನು ಜ್ಞಾನವೆಂದೂ ತಿಳಿಯಬೇಕು. ವಿಶಿಷ್ಟವಾದ ಜ್ಞಾನವನ್ನು ವಿಜ್ಞಾನ ಎಂದೂ ಕೆಲವರು ಹೇಳುತ್ತಾರೆ. ಶಬ್ದಾರ್ಥವ್ಯಾಖ್ಯಾನದ ಕೌಶಲ ಹೇಗಿದ್ದರೂ ಎರಡೂ ಕ್ಷೇತ್ರದ ಅನುಭವವನ್ನು ಎಲ್ಲರೂ ಗೌರವಿಸ ಲೇಬೇಕು. ಏಕೆಂದರೆ ಅನುಭವದಿಂದಲೇ ಅರ್ಥನಿರ್ಣಯವು ನಿಸ್ಸಂಶಯವಾಗಿ ಆಗುತ್ತದೆ.

ಇಂದ್ರಿಯಪ್ರಪಂಚದ ಅರಿವು ಮತ್ತು ಅತೀಂದ್ರಿಯಪ್ರಪಂಚದ ಅರಿವು ಎರಡೂ ಆವಶ್ಯಕವೇ. ಆದುದರಿಂದ ಭೌತವಿಜ್ಞಾನ ಮತ್ತು ವೇದದ ಜ್ಞಾನವನ್ನು ಪಡೆಯಲು ಯತ್ನಿಸುವುದು ವಿವೇಕದ ಲಕ್ಷಣ. ವೇದದಲ್ಲಿ ಭೌತವಿಜ್ಞಾನವನ್ನಾಗಲೀ ಭೌತವಿಜ್ಞಾನದಲ್ಲಿ ವೇದದ ವಿಶೇಷವಿಷಯಗಳನ್ನಾಗಲೀ ಹುಡುಕಲು ಯತ್ನಿಸದೆ ಆಯಾ ಕ್ಷೇತ್ರಗಳಲ್ಲಿ ಸಾಧನೆಮಾಡಿ ಸಿದ್ಧಿ ಪಡೆದ ಸಿದ್ಧಪುರುಷರ ಸಿದ್ಧಾಂತಗಳನ್ನು ನಾವು ಗೌರವದಿಂದ ಸ್ವೀಕರಿಸಿ ಪುರುಷಾರ್ಥಗಳನ್ನು ಪಡೆಯೋಣ.

## ಅನುಬಂಧ–೨

### ನಾಲ್ಕು ವೇದಗಳಲ್ಲದೆ ಬೇರೆ ವೇದಗಳುಂಟೇ?

ಅಖಂಡವಾಗಿದ್ದ ವೇದರಾಶಿಯನ್ನು ಕೃಷ್ಣದ್ವೈಪಾಯನರು ಲೋಕ ಕಲ್ಯಾಣಾರ್ಥವಾಗಿ ಋಕ್, ಯಜುಸ್, ಸಾಮ, ಅಥರ್ವ ಎಂದು ವಿಭಾಗ ಮಾಡಿ ವೇದವ್ಯಾಸರೆಂಬ ಹೆಸರಿನಿಂದ ಪ್ರಸಿದ್ಧರಾದರು.



'ಅನಂತಾ ವೈ ವೇದಾಃ' ಎಂಬ ಮಾತಿನಂತೆ ವೇದಗಳು ಅನಂತವಾಗಿವೆ. ತಪಸ್ಸಿನ ಬಲದಿಂದಲೂ ಭಗವಂತನ ಅನುಗ್ರಹದಿಂದಲೂ ವೇದಮಂತ್ರಗಳು ಯಾವ ಕಾಲದಲ್ಲಿಯಾದರೂ ಗೋಚರವಾಗಬಹುದು. ಅದರಂತೆ ಈಗಿನ ಕಾಲದಲ್ಲಿ ಅಥವಾ ಮುಂದೆ ಹೊಸದಾಗಿ ವೇದಮಂತ್ರಗಳು ಗೋಚರವಾದರೆ ಅವು ಐದನೇ ವೇದವಾಗುವುದಿಲ್ಲವೇ? ವೇದಗಳು ನಾಲ್ಕೇ ಎಂಬ ಪರಿಗಣನೆ ಹೇಗೆ? ಎಂಬ ಅಂಶವು ವಿಚಾರಾರ್ಹವಾಗಿದೆ.

ಹೊಸದಾಗಿ ಗೋಚರವಾಗುವ ಮಂತ್ರಗಳು ನಮಗೆ ಹೊಸತೆಂಬಂತೆ ಕಂಡರೂ ಪ್ರಕೃತಿಯಲ್ಲಿ ಅವು ನಿತ್ಯಸಿದ್ಧಗಳೇ ಆಗಿರುತ್ತವೆ. ಯೋಗಿಗಳು ಹೇಳುವ ಶರೀರದಲ್ಲಿನ ಋಙ್ಮಂಡಲ ಮೊದಲಾದ ಸ್ಥಾನಗಳಲ್ಲಿ ಯಾವ ಕೇಂದ್ರದಿಂದ ಅವು ಹೊರಹೊಮ್ಮಿವೆ ಎಂದು ಯೋಗಿಯ ಅನುಭವಕ್ಕೆ ಬರುವುದೋ ಆ ಮಂತ್ರವು ಆ ವೇದಕ್ಕೆ ಸೇರುವುದು. ಅಲ್ಲದೆ ಗೋಚರವಾಗುವ ಮಂತ್ರಗಳು ಛಂದೋಬದ್ಧವಾಗಿದ್ದರೆ ಋಗ್ವೇದದಲ್ಲಿ ಸೇರುತ್ತದೆ. ಛಂದಸ್ಸಿನ ನಿಯಮಕ್ಕೆ ಒಳಪಡದಿದ್ದರೆ ಅದು ಯಜುರ್ವೇದಕ್ಕೂ, ಗಾನರೂಪವಾಗಿದ್ದರೆ ಸಾಮವೇದಕ್ಕೂ, ಛಂದೋಬದ್ಧವಾಗಿದ್ದು ಶಾಂತಿಕ, ಪೌಷ್ಟಿಕಫಲಸಿದ್ಧಿಗಳಿಗೆ ಅನುಕೂಲವಾಗಿದ್ದರೆ ಅಥರ್ವವೇದಕ್ಕೂ ಸೇರುವುದೆಂದು ತಿಳಿಯಬಹುದು.

ಪ್ರತಿಯೊಂದು ವೇದಕ್ಕೂ ಸ್ವರವ್ಯವಸ್ಥೆಯು ಇರುವುದರಿಂದ ಹೊಸದಾಗಿ ಕಂಡ ಮಂತ್ರಗಳು ಯಾವ ಸ್ವರಸಹಿತವಾಗಿ ಗೋಚರಾಗಿರುತ್ತವೆಯೋ ಆ ಸ್ವರವನ್ನು ಗಮನಿಸಿಯೂ ಮಂತ್ರವು ಯಾವ ವೇದಕ್ಕೆ ಸೇರಿದೆ ಎಂದು ನಿರ್ಣಯಿಸಬಹುದು. ಅಲ್ಲದೆ ಮಂತ್ರದರ್ಶನವು ದೇವತಾನುಗ್ರಹದಿಂದ ಆಗುವುದರಿಂದ ಮಂತ್ರವನ್ನು ಅನುಗ್ರಹಿಸಿದ ದೇವತೆಯು ಮಂತ್ರವು ಯಾವ ವರ್ಗಕ್ಕೆ ಸೇರಿದೆ ಎಂಬುದನ್ನು ಪರಿಚಯ ಮಾಡಿಸದಿರಲಾರದೇ?

ಯಾವ ಹೊಸ ಮಂತ್ರವಾದರೂ ವೇದವ್ಯಾಸರು ವಿಶ್ಲೇಷಣೆ ಮಾಡಿದ ನಾಲ್ಕು ವೇದಗಳಲ್ಲಿ ಯಾವುದಾದರೂ ಒಂದು ವರ್ಗಕ್ಕೆ ಸೇರಲೇಬೇಕು. ಐದನೆಯ ಅಥವಾ ಆರನೆಯ ವೇದದ ಕಲ್ಪನೆಯ ಆವಶ್ಯಕತೆ ಇಲ್ಲ. ಅಂತಹ ಕಲ್ಪನೆಯು ವೈದಿಕ ಸಂಪ್ರದಾಯಕ್ಕೂ, ವೇದವಿಜ್ಞಾನಕ್ಕೂ ವಿರೋಧವಾಗುತ್ತದೆ.

## ರಾಮಾಯಣ–ಮಹಾಭಾರತ

ವೈದಿಕಸಂಪ್ರದಾಯದಲ್ಲಿಯೇ ರಾಮಾಯಣ ಮತ್ತು ಮಹಾಭಾರತಗಳನ್ನು ವೇದಕ್ಕೆ ಸಮಾನವೆಂದು ಗೌರವಿಸುತ್ತೇವೆ. ವೇದವೇದ್ಯನಾದ ಪರಮಾತ್ಮನು ದಶರಥನ ಪುತ್ರನಾದ ರಾಮನ ರೂಪದಲ್ಲಿ ಅವತಾರ ಮಾಡಿದ ನಂತರ ವೇದವೂ ಶ್ರೀಮದ್ರಾಮಾಯಣರೂಪದಲ್ಲಿ ಅವತಾರ ಮಾಡಿತು ಎಂಬ ಅರ್ಥದ



**ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ ।**
**ವೇದಃ ಪ್ರಾಚೇತಸಾದಾಸೀತ್ ಸಾಕ್ಷಾತ್ ರಾಮಾಯಣಾತ್ಮನಾ ॥**

ಎಂಬ ಶ್ಲೋಕವನ್ನೂ

**ರಾಮಾಯಣಂ ವೇದಸಮಂ ಪವಿತ್ರಮ್ ।**

ಎಂಬ ಸ್ತುತಿಯನ್ನೂ ಮಾಡುತ್ತೇವೆ.

**ಇದಂ ಪವಿತ್ರಂ ಪಾಪಘ್ನಂ ಪುಣ್ಯಂ ವೇದೈಶ್ಚ ಸಮ್ಮಿತಮ್ ।**

ಎಂದು ರಾಮಾಯಣವೇ ತನ್ನ ಬಗೆಗೆ ಹೇಳಿಕೊಳ್ಳುತ್ತದೆ. ಬ್ರಹ್ಮನಿಂದ ವರ ಪಡೆದ ವಾಲ್ಮೀಕಿಗೆ

**ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ ।**

ಓ! ಮಹರ್ಷಿಯೇ, ನಿನ್ನ ಕಾವ್ಯದಲ್ಲಿ ಸ್ವಲ್ಪವೂ ಅಸತ್ಯವು ಇರುವುದಿಲ್ಲ ಎಂದು ಬ್ರಹ್ಮನೇ ಹೇಳುತ್ತಾನೆ. ಹೀಗೆ ಸತ್ಯವಾದ ಮಾತುಳ್ಳ ರಾಮಾಯಣವು ವೇದಸಮವಾದುದರಿಂದ ಅದು ಐದನೆಯ ವೇದವಾಗಲಾರದೇ?

'**ಭಾರತಂ ಪಂಚಮೋ ವೇದಃ**' ಎಂದು ಮಹರ್ಷಿವ್ಯಾಸರೇ ಹೇಳುತ್ತಾರೆ. ಈ ವಚನವು ಪ್ರಕ್ಷಿಪ್ತವೆಂದು ಮಹಾಭಾರತದ ಯಾವ ವಿದ್ವಾಂಸರ ಸಂಸ್ಕರಣದಲ್ಲಿಯೂ ಇಲ್ಲ. ಅಂದಮೇಲೆ ನಾಲ್ಕು ವೇದಗಳಲ್ಲದೆ ರಾಮಾಯಣ–ಭಾರತಗಳೂ ಐದನೆಯ ವೇದಗಳಲ್ಲವೇ?

ರಾಮಾಯಣ–ಮಹಾಭಾರತಗಳು ವೇದದಷ್ಟೇ ಗೌರವಕ್ಕೆ ಅರ್ಹವಾದ ಗ್ರಂಥಗಳು ಎಂಬುದು ನಿಸ್ಸಂಶಯ. ಅವು ಧರ್ಮದ ವಿಜಯವನ್ನೂ, ಅಧರ್ಮದ ಸೋಲನ್ನೂ, ಪರಮಾತ್ಮನ ಮಹಿಮೆಯನ್ನೂ ಮನವರಿಕೆ ಮಾಡಿಕೊಡುತ್ತವೆ. ವೇದಗಳಿಂದ ದೊರೆಯುವ ನಾಲ್ಕು ಪುರುಷಾರ್ಥಗಳು ಇವುಗಳಿಂದಲೂ ದೊರೆಯುವುದರಿಂದ ಗೌಣವಾದ ಅರ್ಥದಲ್ಲಿ ಇವುಗಳನ್ನು ವೇದಗಳೆಂದು ಕರೆಯುವುದು ನ್ಯಾಯವೇ ಆಗಿದೆ.

ಈ ಗ್ರಂಥಗಳೂ ಮೂಲಭೂತವಾದ ವೇದಗಳನ್ನು ಗೌರವಿಸುತ್ತವೆ.

**ಹೃದಯೇಷ್ವವತಿಷ್ಠಂತೇ ವೇದಾ ಯೇ ನಃ ಪರಂ ಧನಮ್ ।**

ನಮಗೆ ಪರಮಧನವಾದ ವೇದಗಳು ನಮ್ಮ ಹೃದಯದಲ್ಲಿ ಅಡಕವಾಗಿರುತ್ತವೆ.

—ರಾಮಾಯಣ, ಅಯೋಧ್ಯಾಕಾಂಡ

**ಋಗ್ಯಜುಃಸಾಮಭಿಃ ಪೂತೋ ಬ್ರಹ್ಮಲೋಕೇ ಮಹೀಯತೇ ।**



ಈ ಮಹಾಭಾರತವನ್ನು ಅನುಸಂಧಾನ ಮಾಡುವವನು ಮೂರು ವೇದಗಳಿಂದ ಹೇಗೋ ಹಾಗೆ ಪವಿತ್ರನಾಗಿ ಬ್ರಹ್ಮಲೋಕದಲ್ಲಿ ಪೂಜಿಸಲ್ಪಡುತ್ತಾನೆ.

—ಮಹಾಭಾರತ; ಆದಿಪರ್ವ

ಹೀಗೆ ತಮಗೆ ಮೌಲಿಕವಾದ ವೇದಗಳ ಬಗ್ಗೆ ಗೌರವದ ಮಾತು ಈ ಗ್ರಂಥದಲ್ಲಿಯೇ ಬರುತ್ತದೆ. ಅಲ್ಲದೆ ಮೌಲಿಕವಾದ ಚತುರ್ವೇದಗಳಲ್ಲಿ ಅಧಿಕಾರವಿಲ್ಲದವರು ವೇದಗಳ ಸ್ಥಾನದಲ್ಲಿ ಇವುಗಳ ಮೂಲಕ ಧರ್ಮ–ಬ್ರಹ್ಮಗಳ ವಿಷಯವನ್ನು ತಿಳಿಯಬಹುದಾಗಿದೆ. ಉಳಿದವರೂ ವೇದಾರ್ಥವನ್ನು ವಿಸ್ತರಿಸಿಕೊಳ್ಳಲು ಇವುಗಳನ್ನು ಬಳಸಿಕೊಳ್ಳಬೇಕು.

ವೇದದ ಸ್ಮರಣೆಯಿಂದ ಈ ಗ್ರಂಥಗಳು ರಚಿತವಾಗಿವೆ ಎಂದು ಹಿಂದಿನ ಆಚಾರ್ಯರು ಇವುಗಳನ್ನು 'ಅನುಮಿತಶ್ರುತಿ' ಎಂದು ಗೌರವಿಸಿದ್ದಾರೆ. ಈ ಅಭಿಪ್ರಾಯಗಳಿಂದ ಇವುಗಳನ್ನು ಐದನೆಯ ವೇದವೆಂದು ಕರೆಯಬಹುದೇ ಹೊರತು ಮೂಲಭೂತವಾಗಿ ವೇದಗಳು ನಾಲ್ಕು ಎಂದೇ ಪರಿಗಣನೆ.

### ಭಕ್ತದರ್ಶನ

ತಮಿಳುದೇಶದಲ್ಲಿ ಇದ್ದ 'ಆಳ್ವಾರುಗಳು' ಮತ್ತು 'ನಾಯನ್ಮಾರರು' ವೈಷ್ಣವ ಮತ್ತು ಶೈವ ಸಂಪ್ರದಾಯದ ಪರಮೈಕಾಂತಭಕ್ತರು. ಅವರು ಭಗವಂತನನ್ನು ಸಾಕ್ಷಾತ್ಕರಿಸಿ ದಿವ್ಯಗೀತೆಗಳನ್ನು ರಚಿಸಿದ್ದಾರೆ. ಇವುಗಳನ್ನು 'ತಮಿಳುವೇದ' ಎಂದು ಭಕ್ತರು ಗೌರವಿಸುತ್ತಾರೆ. ಕರ್ನಾಟಕದ ಭಕ್ತಶ್ರೇಷ್ಠ ಪುರಂದರದಾಸರ ಭಕ್ತಿಗೀತೆಗಳನ್ನು 'ಪುರಂದರೋಪನಿಷತ್' ಎಂದೂ ರಮಣಮಹರ್ಷಿಗಳ ವಚನಗಳನ್ನು 'ರಮಣೋಪನಿಷತ್' ಎಂದೂ ಗೌರವಿಸುವುದುಂಟು.

ಸಾತ್ತ್ವಿಕವಾದ ಸ್ವಭಾವವುಳ್ಳ ಈ ಮಹನೀಯರ ದಿವ್ಯವಚನಗಳು ವೇದಪ್ರತಿಪಾದ್ಯನಾದ ಪರಮಾತ್ಮನೆಡೆಗೆ ನಮ್ಮನ್ನು ಒಯ್ಯುವುದರಿಂದಲೂ ವೇದಗಳಂತೆಯೇ ಇರುವುದರಿಂದ ಇವುಗಳನ್ನು 'ವೇದ' ವೆಂದು ಕರೆಯಬಹುದು. ಅಲ್ಲದೆ 'ವೇದವನ್ನು ಬಲ್ಲವರಿಗೆ ನಮ್ಮ ನಮನಗಳು', 'ವೇದವನ್ನು ತಮಿಳಿನಲ್ಲಿ ರಚಿಸಿದ ಶಠಾರಿ' ಮುಂತಾದ ಮಾತುಗಳು ದಿವ್ಯಪ್ರಬಂಧದಲ್ಲಿ ಬರುತ್ತವೆ. ಆದ್ದುದರಿಂದ ದಿವ್ಯಪ್ರಬಂಧಗಳನ್ನೂ, ಪುರಂದರ–ರಮಣೋಪನಿಷತ್ತುಗಳನ್ನೂ ದಿವ್ಯಜ್ಞಾನದ ವಾಙ್ಮಯವೆಂದೂ, ವೇದಕ್ಕೆ ಸಮಾನವಾದವುಗಳೆಂದು ನಾವು ಗೌರವಿಸಿದರೂ ಮೌಲಿಕ ವೇದಗಳು ನಾಲ್ಕು ಎಂದು ಪರಿಗಣನೆಗೆ ಯಾವ ಅಪೋಹವೂ ಇಲ್ಲ.

---



ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ ಸಂಪುಟ–೧

ಭಾಗ–೨

# ಕೃಷ್ಣಯಜುರ್ವೇದ ಪರಿಚಯ

ಸಂಪಾದಕ

ವಿದ್ವಾನ್ ಪಿ. ಎಸ್. ರಾಮೇಶ್ವರಾವಧಾನೀ

ಪ್ರಕಾಶನ

ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ

ಬೆಂಗಳೂರು



॥ ಶ್ರೀಃ ॥

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥

ಅಜ್ಞಾನವೆಂಬ ಕತ್ತಲೆಯಿಂದ ಅಂಧನಾದವನ ಕಣ್ಣನ್ನು
ಜ್ಞಾನವೆಂಬ ಅಂಜನಶಲಾಕೆಯಿಂದ ತೆರೆಸಿದ ಶ್ರೀಗುರುವಿಗೆ ನಮಸ್ಕಾರ.



ಜಗದ್ಗುರು ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರು



# ಆಶೀರ್ವಚನ

## ಶ್ರೀ ಗುರುಭ್ಯೋ ನಮಃ

ಚತುರ್ವೇದ ಭಾಷ್ಯಕಾರರಾದ ಶ್ರೀ ಸಾಯಣಾಚಾರ್ಯರು ಕೃಷ್ಣಯಜುರ್ವೇದಭಾಷ್ಯಭೂಮಿಕೆಯಲ್ಲಿ "ನನು ಕೋಽಯಂ ವೇದೋಽನಾಮ" ಎಂದು ಪ್ರಶ್ನೆ ಮಾಡಿ ಅದಕ್ಕೆ ಸಮಾಧಾನವನ್ನು "ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋಃ ಅಲೌಕಿಕ-ಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ" ಎಂದು ಸಮಾಧಾನವನ್ನು ತಿಳಿಸಿದರು. ಇಷ್ಟಪ್ರಾಪ್ತಿ ಮತ್ತು ಅನಿಷ್ಟಪರಿಹಾರಗಳ ಅಲೌಕಿಕೋಪಾಯವನ್ನು ತಿಳಿಸುವ ಗ್ರಂಥವೇ ವೇದ. ಅಲೌಕಿಕೋಪಾಯವು ಧರ್ಮವು. ನಮ್ಮ ಶ್ರೇಯಃಪ್ರೇಯಸ್ಸುಗಳಿಗೂ ದುಃಖಪರಿಹಾರಕ್ಕೂ ಸಾಧಕವಾದ ಧರ್ಮವನ್ನು ವೇದಗಳಿಂದಲೇ ತಿಳಿಯಬೇಕು.

ನಾವು ವೇದಾಧ್ಯಯನವನ್ನು ಮಾಡುತ್ತೇವೆ. ಅರ್ಥಜ್ಞಾನವಿಲ್ಲದೆ ಮಾಡಿದ ಅಧ್ಯಯನವು ವಿಶಿಷ್ಟವಾದ ಫಲವನ್ನು ಕೊಡಲು ಅಸಮರ್ಥ. ಅರ್ಥಜ್ಞಾನಕ್ಕಾಗಿ ಭಾಷ್ಯಗಳನ್ನು ಪರಿಶೀಲಿಸಬೇಕು. ಈ ಪರಿಶೀಲನೆಗೆ ಸಂಸ್ಕೃತಭಾಷಾಪಾಂಡಿತ್ಯ, ಮೀಮಾಂಸಾಪರಿಚಯ ಎರಡೂ ಬೇಕು. ಇವೆರಡನ್ನೂ ಸಾಧಿಸುವದಕ್ಕೆ ನಾಲ್ಕಾರು ವರುಷಗಳ ಸತತ ಪ್ರಯತ್ನ ಅವಶ್ಯಕ. ಸರ್ವರಿಂದಲೂ ಸುಲಭವಾಗಿ ಸಾಧಿಸಲಶಕ್ಯ.

ನಮ್ಮ ಶಿಷ್ಯರಾದ ಶ್ರೀ ಬಿ. ಎನ್. ವಿ. ಸುಬ್ರಹ್ಮಣ್ಯಂ ಅವರು "ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ" ವೆಂಬ ಸಂಸ್ಥೆಯನ್ನು ಸ್ಥಾಪಿಸಿ ತನ್ಮೂಲಕ ವೇದಮಂತ್ರಗಳ ತಾತ್ಪರ್ಯವನ್ನು ಎಲ್ಲರೂ ಸುಲಭವಾಗಿ ಅರಿಯಲು ಅನುಕೂಲವಾಗಲೆಂಬ ಉದ್ದೇಶದಿಂದ ಯಜುರ್ವೇದ ಕನ್ನಡಪ್ರಕಾಶನವನ್ನು ಆರಂಭಿಸಿದ್ದಾರೆ. ಈ ಕಾರ್ಯವು ಬೃಹತ್ತರವಾದುದು. ಶ್ರೀಸುಬ್ರಹ್ಮಣ್ಯಂ ಅವರು ಪರಹಿತಮತಿಯಿಂದ ಆರಂಭಿಸಿರುವ ಈ ಪ್ರಕಾಶನಕಾರ್ಯವು ಸುಲಭವಾಗಿ ಮುಂದುವರಿಯಲಿ. ಆಸ್ತಿಕಜನಸ್ತೋಮದ ಸಹಾಯ ಸಹಕಾರಗಳು ನಿರಂತರವಾಗಿ ಪ್ರವಹಿಸಲಿ. ಪ್ರಕಾಶನ ಗ್ರಂಥಗಳು ಆಸ್ತಿಕರ ಹೃದಯಗಳಲ್ಲಿ ಪ್ರಕಾಶವನ್ನು ಬೀರಲಿ. ತಮೋಗ್ರಂಥಿಗಳು ನಿರ್ಮೂಲಗೊಳ್ಳಲಿ ಮತ್ತು ಪ್ರಕಾಶಕರು ಭವಭಯಪ್ರಶಮನಕರನಾದ ಪರಮೇಶ್ವರನ ಕೃಪೆಯಿಂದ ಮಂಗಲಪರಂಪರೆಗಳನ್ನು ಅನುಭವಿಸಲೆಂದು ಹಾರೈಸುತ್ತೇವೆ.

ಪ್ರಭವ ಫಾಲ್ಗುನ ಶುಕ್ಲ ದಶಮೀ
27-2-88
ಶೃಂಗಗಿರಿ.

ಇತೀ ನಾರಾಯಣಸ್ಮರಣಂ
ವಿದ್ಯಾತೀರ್ಥಃ



# ಸಂಪಾದಕನ ಬಿನ್ನಹ

ಮಾನ್ಯ ಸಹೃದಯ ವಾಚಕರಲ್ಲಿ ಸವಿನಯ ಪ್ರಾರ್ಥನೆಗಳು.

ಪ್ರಿಯ ಬಂಧುಗಳೇ,

ಕೃಷ್ಣಯಜುರ್ವೇದದ ಭಾಷ್ಯಾನುವಾದದ ಮೊದಲನೆಯ ಸಂಪುಟದ ಎರಡನೆಯ ಮತ್ತು ಮೂರನೆಯ ಭಾಗಗಳನ್ನು ಸರ್ವಶಕ್ತನಾದ ಪರಮಾತ್ಮನ ಅನುಗ್ರಹದಿಂದ ಇಂದು ತಮ್ಮ ಕೈಗಳಲ್ಲಿ ಇಡುತ್ತಿದ್ದೇವೆ. ಆದಷ್ಟು ಬೇಗನೆ ಪ್ರಕಾಶನದ ಕಾರ್ಯವನ್ನು ನಿರ್ವಹಿಸಬೇಕೆಂದು ನಮ್ಮ ಆಶಯವಿದ್ದರೂ ಅನೇಕ ಜನರ ಹಲವು ಬಗೆಯ ಸಹಕಾರದಿಂದ ಮಾತ್ರವೇ ನೆರವೇರ ಬೇಕಾಗಿರುವ ಇಂತಹ ಮಹಾಕಾರ್ಯದಲ್ಲಿ ವಿಲಂಬವಾಗುವುದು ಸಹಜವೇ. ಸಹೃದಯ ವಾಚಕರು ಈ ಕಾರ್ಯವು ಬೇಗನೆ ಮುಂದುವರಿಯಬೇಕೆಂದು ಆಶಿಸುವುದು ನಿಸ್ಸಂದೇಹವೇ. ಆದುದರಿಂದ ಈಗ ಆಗಿರುವ ವಿಲಂಬಕ್ಕಾಗಿ ಸಹೃದಯರ ಕ್ಷಮೆಯನ್ನು ಕೇಳುತ್ತೇನೆ.

ಈ ಸಂಪುಟದ ಒಂದೆರಡು ವಿಷಯಗಳಲ್ಲಿ ಕೆಲವು ಮಾತುಗಳನ್ನು ಮಾತ್ರ ಹೇಳಬಯಸುತ್ತೇನೆ.

೧. ಶುಕ್ಲ - ಕೃಷ್ಣಯಜುರ್ವೇದ ವಿಚಾರ

ಈ ವಿಷಯದಲ್ಲಿ ಹಲವು ಉಪಾಖ್ಯಾನಗಳು ವೇದಗಳಲ್ಲಿಯೂ ಪುರಾಣಾದಿಗಳಲ್ಲಿಯೂ ಕಂಡುಬರುತ್ತವೆ. ಅವುಗಳ ತಾತ್ಪರ್ಯಾರ್ಥಕ್ಕೆ ಪ್ರಾಧಾನ್ಯವೇ ಹೊರತು ಅಕ್ಷರಾರ್ಥಕ್ಕಲ್ಲ. ಇದು ಶಾಸ್ತ್ರಕಾರರ ಮತ. ಇದನ್ನು ಗಮನಿಸಬೇಕು.

ಕೃಷ್ಣಯಜುರ್ವೇದವು ಯಾತಯಾಮವಾಗುವುದರಿಂದ ಅಂದರೆ ತನ್ನ ಶಕ್ತಿಯನ್ನು ಕಳೆದುಕೊಳ್ಳುವುದರಿಂದ ಪುನಃ ಅದರ ಪರಿಹಾರಕ್ಕಾಗಿ ಕೃಷ್ಣಯಜುರ್ವೇದಿಗಳೇ ಅಧ್ಯಾಯೋಪಾಕರ್ಮವನ್ನು ಮಾಡಿಕೊಳ್ಳ ಬೇಕೆಂದು ಕೆಲವರು ಹೇಳುತ್ತಾರೆ. ಆದರೆ ಇದು ಸರಿಯಲ್ಲ. ಋಗ್ವೇದಿಗಳೂ, ಸಾಮವೇದಿಗಳೂ, ಶುಕ್ಲಯಜುರ್ವೇದಿಗಳೂ ಅಧ್ಯಾಯೋಪಾಕರ್ಮವನ್ನು



ಮಾಡುವಾಗ ಕೃಷ್ಣಯಜುರ್ವೇದಿಗಳಂತೆಯೇ ಸಂಕಲ್ಪವನ್ನು ಮಾಡುತ್ತಾರೆ. ಆದುದರಿಂದ ಮಂತ್ರದ್ರಷ್ಟಾರರಾದ ಋಷಿ... ಅನುಗ್ರಹದಿಂದ ನಾವು ಅಧ್ಯಯನ ಮಾಡಿರುವ ಮಂತ್ರಗಳಿಗೆ ವಿಶೇಷವಾದ ಶಕ್ತಿ ಬರಬೇಕೆಂ...ದೇ ಅಧ್ಯಾಯೋಪಾಕರ್ಮದ ಉದ್ದೇಶ.

ಕೃಷ್ಣಯಜುರ್ವೇದದಲ್ಲಿ ಸಾರಸ್ವತಪಾಠದಂತೆ ವಿನಿಯೋಗಗಳನ್ನು ತಿಳಿಯುವುದು ಕಷ್ಟವಾದರೂ ಕಾಂಡಾನುಕ್ರಮಣಿಕೆಯನ್ನು ಅನುಸರಿಸಿ ಅವುಗಳ ವಿಭಾಗವನ್ನು ತಿಳಿದುಕೊಳ್ಳಬಹುದು.

ಕೃಷ್ಣಯಜುರ್ವೇದವನ್ನು ಬಿಟ್ಟರೆ ಉಳಿದ ಶಾಖೆಗಳಲ್ಲಿ ಆಯಾ ಶಾಖೆಯ ಬ್ರಾಹ್ಮಣಗಳ ಸ್ವಲ್ಪ ಭಾಗವನ್ನು ಮಾತ್ರ ಅಧ್ಯಯನ ಮಾಡುವುದರಿಂದ ಮಂತ್ರಗಳ ಸಂಪೂರ್ಣ ವಿನಿಯೋಗವನ್ನು ತಿಳಿಯುವುದು ಕೊಂಚ ಕಷ್ಟವೇ. **ಮಂತ್ರಬ್ರಾಹ್ಮಣಯೋಃ ವೇದನಾಮಧೇಯಮ್** ಎಂಬ ವಚನದಂತೆಯೇ ಬ್ರಾಹ್ಮಣಗಳಿಗೆ ಶ್ರುತಿತ್ವವು ಸುಪ್ರಸಿದ್ಧವಾಗಿದೆ.

**ಯದ್ಬ್ರಾಹ್ಮಣಾನೀತಿಹಾಸಾನ್... ...**

ಎಂಬ ಸ್ವಾಧ್ಯಾಯಬ್ರಾಹ್ಮಣವು ಬ್ರಾಹ್ಮಣಗಳ ಅಧ್ಯಯನವು ಆಗತ್ಯವೆಂದು ವಿಧಿಸುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಸಾರಸ್ವತಪಾಠವು ಒಂದು ರೀತಿಯಲ್ಲಿ ಸಮಸ್ತವೇದವನ್ನು (ಮಂತ್ರ-ಬ್ರಾಹ್ಮಣ) ಅಧ್ಯಯನ ಮಾಡಲು ಸೌಕರ್ಯವನ್ನೇ ಕಲ್ಪಿಸಿದೆಯೆಂದರೆ ತಪ್ಪಲ್ಲ.

## ೨. ಯಜ್ಞಪರಿಚಯ

ಇಂದು ಭಾರತದಲ್ಲಿ ವೈದಿಕ ಯಜ್ಞಾನುಷ್ಠಾನಗಳು ವಿರಳವಾಗಿವೆ. ಕರ್ನಾಟಕವು ಹಿಂದೆ ಈ ಕ್ಷೇತ್ರದಲ್ಲಿ ಅಗ್ರಪಂಕ್ತಿಯಲ್ಲಿದ್ದರೂ ಇಂದು ಬೆರಳಿನಲ್ಲಿ ಎಣಿಸುವಷ್ಟು ಮಾತ್ರವೇ ಅಗ್ನಿಹೋತ್ರಿಗಳಿರುತ್ತಾರೆ. ಶ್ರೌತಪ್ರಯೋಗವನ್ನು ಚೆನ್ನಾಗಿ ತಿಳಿದಿರುವವರ ಸಂಖ್ಯೆಯೂ ಅಷ್ಟೇ. ಆದುದರಿಂದ ಈ ಭಾಗವು ಅತ್ಯಂತವಾಗಿ ಉಪಯುಕ್ತವಾಗಿದೆ. ಮುಂದೆ ವೇದಾರ್ಥವನ್ನು ತಿಳಿಯಲೂ ಇದು ಸಹಕಾರಿಯಾಗುತ್ತದೆ. ಈ ಭಾಗವನ್ನು ಶ್ರೌತಪ್ರಯೋಗದಲ್ಲಿ ನಿಷ್ಣಾತರಾಗಿರುವ ನಮ್ಮ ಮಾನ್ಯ ಮಿತ್ರರಾದ ವೇ।।ಬ್ರ।। ಶ್ರೀ ವಿದ್ವಾನ್ ರಾಮಚಂದ್ರ



ಶ್ರೌತಿಗಳು ಬರೆದುಕೊಟ್ಟಿರುತ್ತಾರೆ. ನನ್ನ ಸನ್ಮಿತ್ರರಾದ ದಿ||ತಿಪ್ಪಾಭಟ್ಟರ ಸತ್ಪುತ್ರ, ಶ್ರೀ ನಾಗರಾಜರು ಅದನ್ನು ಮತ್ತಷ್ಟು ಸ್ಪಷ್ಟವಾಗಿ ತಿಳಿಯುವಂತೆ ಸಂಕಲನ ಮಾಡಿರುತ್ತಾರೆ. ದೈವಾನುಗ್ರಹದಿಂದ ಎಲ್ಲಿಯಾದರೂ ಶ್ರೌತ ಯಜ್ಞಗಳು ನಡೆದರೆ ಅದನ್ನು ನೋಡುವಾಗ ಯಜ್ಞಪರಿಚಯ ಭಾಗವು ನಿಸ್ಸಂಶಯವಾಗಿ ಮಾರ್ಗದರ್ಶನ ಮಾಡುತ್ತದೆ. ದರ್ಶ-ಪೂರ್ಣಮಾಸ, ಜ್ಯೋತಿಷ್ಟೋಮ ಸೋಮಯಾಗ ಮೊದಲಾದ ಯಜ್ಞಗಳ ಪರಿಚಯವನ್ನು ಮಾಡಿಕೊಡುವ ಈ ಭಾಗವು ಸಹೃದಯರು ಗಮನಿಸಬೇಕಾದ ಮುಖ್ಯ ವಿಷಯವಾಗಿದೆ.

ಒಟ್ಟಿನಲ್ಲಿ ವೇದಗಳಲ್ಲಿ ಉತ್ತಮ ಮಧ್ಯಮಗಳೆಂಬ ಭೇದವಿಲ್ಲ. ತಮ್ಮ ವೇದವೇ ಶ್ರೇಷ್ಠವೆಂದು ಹೋರಾಡುವುದು ಶಾಸ್ತ್ರಾನುಮತವಲ್ಲ. ಇದನ್ನು ಸಹೃದಯರು ಗಮನಿಸಬೇಕು.

ಮುಂದೆಯೂ ಸಹೃದಯರು ತಮ್ಮ ಪ್ರೋತ್ಸಾಹವನ್ನು ಇತೋಪ್ಯತಿಶಯವಾಗಿ ನೀಡಿ ಈ ಮಹಾಕಾರ್ಯವು ಸಫಲವಾಗುವುದಕ್ಕೆ ಬೆಂಬಲ ನೀಡಲಿ ಎಂದು ಪ್ರಾರ್ಥಿಸಿ ನನ್ನ ವಿನಮ್ರ ವಿಜ್ಞಾಪನೆಯನ್ನು ತಮ್ಮ ಮುಂದಿಟ್ಟು ವಿರಮಿಸುತ್ತೇನೆ.

ಬೆಂಗಳೂರು
3.7.1989
ಶುಕ್ಲ ಸಂವತ್ಸರ
ಜ್ಯೇಷ್ಠ ಬಹುಳ ಅಮಾವಾಸ್ಯೆ

ಇಂತು ತಮ್ಮವ,
**ರಾಮೇಶ್ವರಾವಧಾನೀ**



# ಗ್ರಂಥಾರ್ಪಣೆ



ದಿ|| ಮಲ್ಲಿಕಾರ್ಜುನ ಶಾಸ್ತ್ರಿಯವರು

ಅಧ್ಯಕ್ಷರು, ಶ್ರೀಚಾಮರಾಜೇಂದ್ರ ವೇದಮಹಾಪಾಠಶಾಲೆ, ಬೆಂಗಳೂರು

* * *

ವೇದಶಾಸ್ತ್ರಪಾರಂಗತರೂ, ಸದಾಚಾರಸಂಪನ್ನರೂ,

ಧಾರ್ಮಿಕಕಾರ್ಯಗಳಿಗೆ ಪ್ರೇರಕರೂ ಆಗಿದ್ದ

ಪೂಜ್ಯ ಮಾವನವರ ದಿವ್ಯಸ್ಮೃತಿಗೆ.

–ಬಿ. ಎನ್. ಎ. ಸುಬ್ರಹ್ಮಣ್ಯಂ



# ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ

ಸಂಪುಟ–೧

## ಭಾಗ–೨ ಕೃಷ್ಣಯಜುರ್ವೇದ ಪರಿಚಯ

## ಭಾಗ–೩ ಯಜ್ಞಗಳ ಪರಿಚಯ



# ನಿವೇದನೆ

ಒಂದು ವಿಶಿಷ್ಟವಾದ ಸನ್ನಿವೇಶದಲ್ಲಿ ನಾವು ಕೃಷ್ಣಯಜುರ್ವೇದದ ಕನ್ನಡ ಪ್ರಕಾಶನದ ಕಾರ್ಯಕ್ಕೆ ಕೈ ಹಾಕಿದ್ದೇವೆ.

ಇಂದು ನಮ್ಮ ಸಮಾಜದ ರೀತಿ, ನೀತಿ, ಆಚಾರ ಮತ್ತು ವಿಚಾರಗಳನ್ನು ಗಮನಿಸಿದಾಗ, ಒಂದು ಅಂಶವು ಎದ್ದುಕಾಣುತ್ತದೆ. ಪರಂಪರಾಗತವಾಗಿ ಬಂದ ನಡವಳಿಕೆಯನ್ನೂ, ಚಿಂತನೆಯನ್ನೂ ಕೈ ಬಿಡಲಾಗದ ಅತ್ಯಂತ, ನವೀನವಾದ ಪಾಶ್ಚಾತ್ಯ ನಡವಳಿಕೆ ಮತ್ತು ಚಿಂತನೆಯೊಡನೆಯೂ ಪೂರ್ಣ ಬೆರೆಯಲಾಗದ ಮಧ್ಯಮಸ್ಥಿತಿ ಅದು. ಸಮಾಜದ ಚಿತ್ತವನ್ನು ಹೀಗೆ ಹಿಂದಕ್ಕೂ ಮುಂದಕ್ಕೂ ಎಳೆಯುತ್ತಾ ಎರಡು ಶಕ್ತಿಗಳೂ ಸ್ಪರ್ಧಿಸುವಂತೆ ಕಾಣುತ್ತಿವೆ. ಆದರೆ ಭಾವನಾತ್ಮಕ ಸಂದರ್ಭಗಳಲ್ಲಿ ನಮ್ಮ ಸಮಾಜದ ಚಿಂತನೆಯು ಪರಂಪರೆಯನ್ನೇ ಬಹುತೇಕ ಅವಲಂಬಿಸುತ್ತದೆ. ಹೊರದೃಷ್ಟಿಯಿಂದ ಸಮಾಜದಲ್ಲಿ ನಮ್ಮತನದ ಕೊರತೆ ಕಾಣುವುದಾದರೂ ಚಿರಂತನವಾದ ನಂಬಿಕೆ ಮತ್ತು ನಡವಳಿಕೆಯ ವಿಚಾರಗಳು ಅಂತರಗಂಗೆಯಂತೆ ಪ್ರವಹಿಸುತ್ತಲೇ ಇವೆ. ಈ ರೀತಿಯ ಅಂತಃಪ್ರವಾಹದ ಸೆಲೆಯು ಋಷಿಗಳು ಕಂಡುಕೊಂಡ ಆರ್ಷಸಾಹಿತ್ಯವಾದ ವೇದಗಳೇ.

ವ್ಯಕ್ತಿಜೀವನದಲ್ಲಿ ಮಾತ್ರವಲ್ಲದೆ ರಾಷ್ಟ್ರಜೀವನ ಮತ್ತು ರಾಷ್ಟ್ರೀಯ ಚಿಂತನವು ವೇದದ ಪ್ರಭಾವಕ್ಕೆ ಹೊರತಲ್ಲ. ಭಾರತ ಎಂದೊಡನೆ ಪ್ರಪಂಚದ ಜನಮಾನಸದಲ್ಲಿ ಮೂಡುವುದು ವೇದೋಪನಿಷತ್ತಿನ ಸಂದೇಶದ ಚಿತ್ರಗಳೇ. ಪ್ರಪಂಚದ ಉಳಿದ ಜನಾಂಗದವರು ಬದುಕು, ಜೀವನದ ಗುರಿ ಇವುಗಳ ಬಗ್ಗೆ ತಳೆದಿರುವ ಅಭಿಪ್ರಾಯಗಳಿಗಿಂತ ತೀರ ಭಿನ್ನವಾದ ಅಭಿಪ್ರಾಯಗಳು ನಮ್ಮವು. ಆ ಅಭಿಪ್ರಾಯಕ್ಕೆ ವೇದವೇ ಮೂಲ. ಅಂತೆಯೇ ನಮ್ಮತ್ತ ಪಾಶ್ಚಾತ್ಯರ ದೃಷ್ಟಿ. ಜೀವನದ ಬಗ್ಗೆ ಇರುವ ನಮ್ಮ ದೃಷ್ಟಿಕೋನವು ನಮ್ಮದಿ ತಂದೀತೆಂದು ಅವರ ಹಂಬಲ. ಇಂದಿಗೂ ಅನೇಕ ಸಾಧುಗಳು ವಿದೇಶಗಳಲ್ಲಿ ಗೌರವಕ್ಕೆ ಪಾತ್ರರಾಗುವ ಹಿನ್ನೆಲೆಯೂ ಇದೇ ಆಗಿದೆ. ಇಂತಹ ರಾಷ್ಟ್ರೀಯಸಂಪತ್ತು ನಮ್ಮ ಪೂರ್ವಜರಿಂದ ನಮಗೆ ಒದಗಿ ಬಂದಿದೆ. ವೇದವು ಅನೇಕ ಸಾವಿರ ವರ್ಷಗಳ ಕಾಲದಿಂದ ನಾವು ನಡೆಸಿಕೊಂಡು ಬರುತ್ತಿರುವ ಜೀವನನೌಕೆಯನ್ನು ಸರಿಯಾದ ದಿಕ್ಕಿಗೆ ಒಯ್ಯಬಲ್ಲ ಚುಕ್ಕಾಣಿ.

ಇಂತಹ ವೇದಗಳ ಬಗ್ಗೆ ನಾವೆಲ್ಲರೂ ತಿಳಿಯಲೇಬೇಕು. ಕಾಲದ ಪರಿಮಿತಿ, ಜೀವನಸಂದರ್ಭಗಳ ಬದಲಾವಣೆ ಇವುಗಳ ದೆಸೆಯಿಂದ ಸಂಸ್ಕೃತಭಾಷೆಯನ್ನು



ಅರಿತು ವೇದಗಳ ವ್ಯಾಸಂಗ ಮಾಡುವುದು ಕೊಂಚ ಕಷ್ಟಸಾಧ್ಯವೇ. ಅಲ್ಲದೆ ನಮ್ಮವರೇ ಆದ ಕೆಲವರು ವೇದಗಳು ವಿಚ್ಛಿದ್ರಕಾರಕಗಳೆಂಬ ಮುದ್ರೆಯನ್ನೊತ್ತಿದ್ದಾರೆ. ಒಂದೆಡೆ ಗಾಢನಂಬಿಕೆಗೂ ಮತ್ತೊಂದೆಡೆ ಅಪವಾದಕ್ಕೂ ಗುರಿಯಾಗಿರುವ ವೇದಗಳಲ್ಲಿರುವ ಸತ್ಯಾಂಶವನ್ನು ಹೊರತರುವುದು ಪ್ರಸಕ್ತವೇ ಹೌದು. ತಾಯ್ನುಡಿಯಲ್ಲಿ ವೇದವನ್ನು ಕನ್ನಡಿಗರಿಗೆ ನೀಡಬೇಕೆಂಬ ಹಂಬಲಕ್ಕೆ ಇದೇ ಪ್ರೇರಕ. ಹೀಗೆ ವೇದದ ಬಗೆಗಿನ ಭಕ್ತಿಮಿಶ್ರಿತ ಅಮೂರ್ತಭಾವನೆಗೆ ಆಕಾರವನ್ನು ಕೊಡಲು, ಭೌತಿಕ ಆಕರ್ಷಣೆಗೂ ಶಾಶ್ವತವಾದ ಸುಖಸಮೃದ್ಧಿಗಳಿಗೂ ನಡುವೆ ಇರುವ ಅಂತರದ ವಿವೇಕವನ್ನು ಮನಗಾಣಿಸಲು ಈ ಯತ್ನವನ್ನು ಕೈಗೊಳ್ಳಲಾಗಿದೆ.

ಒಂದಾನೊಂದು ಕಾಲದಲ್ಲಿ ಜಗಜ್ಜೀವನದ ಸಾರ್ವಭೌಮಸ್ಥಾನವನ್ನು ಅಲಂಕರಿಸಿದ ನಮ್ಮ ಸಮಾಜಜೀವನವನ್ನು ಹಸನುಗೊಳಿಸಲು ಈ ಪ್ರಕಾಶನವು ನೆರವಾಗುವುದಾದರೆ ನಮ್ಮ ಯತ್ನವು ಸಾರ್ಥಕ. ಈ ಬಗ್ಗೆ ಸಹೃದಯರಾದ ವಾಚಕರ ಹೃದಯವೇ ನಮಗೆ ರನ್ನಗನ್ನಡಿ.

ಈ ಗ್ರಂಥವನ್ನು ಮತ್ತಷ್ಟು ಉಪಯುಕ್ತಗೊಳಿಸುವತ್ತ ಸಹೃದಯರಾದ ವಾಚಕರ ಸಲಹೆ ಸೂಚನೆಗಳಿಗೆ ಸದಾ ಸ್ವಾಗತ.

ಪ್ರಕಾಶಕರು.



## ಕೃಷ್ಣಯಜುರ್ವೇದ ಪರಿಚಯ

## ಪರಿವಿಡಿ


| | | | |
|---|---|---|---|
| ಹಿನ್ನೋಟ | ... | ... | 1 |
| ಯಜುರ್ವೇದದ ಹಿರಿಮೆ | ... | ... | 1 |
| ಅಧ್ವರ್ಯುರ್ವೇದ | ... | ... | 9 |
| ಯಜುರ್ವೇದದ ಶಾಖೆಗಳು | ... | ... | 10 |
| ತೈತ್ತಿರೀಯಶಾಖೆಯು ಕೃಷ್ಣ ಏಕೆ? | ... | ... | 15 |
| ಯಾಜ್ಞವಲ್ಕ್ಯರ ಮಂತ್ರದರ್ಶನ | ... | ... | 18 |
| ವೇದವು ಯಾತಯಾಮ ಏಕೆ? ಹೇಗೆ? | | ... | 22 |
| ತೈತ್ತಿರೀಯಶಾಖೆಯ ಪರಿಮಾಣ | ... | ... | 24 |
| ತೈತ್ತಿರೀಯಶಾಖೆಯ ಅಧ್ಯಯನಕ್ರಮ | | ... | 25 |
| ಸಾರಸ್ವತಪಾಠ-ಕಾಂಡಪಾಠ | ... | ... | 28 |
| ಪ್ರಪಾಠಕಗಳ ಸ್ವರೂಪವಿವರಣೆ | ... | ... | 31 |
| ಪ್ರಾಜಾಪತ್ಯಕಾಂಡ | ... | ... | 47 |
| ಸೌಮ್ಯಕಾಂಡ | ... | ... | 54 |
| ಆಗ್ನೇಯಕಾಂಡ | ... | ... | 67 |
| ವೈಶ್ವದೇವಕಾಂಡ | ... | ... | 129 |
| ಸ್ವಾಯಂಭುವಕಾಂಡ | ... | ... | 208 |
| ಉಪಾಖ್ಯಾನಗಳು | ... | ... | 210 |
| ಕೃಷ್ಣಯಜುರ್ವೇದದ ಸ್ವರಗಳು | ... | ... | 218 |
| ಕೃಷ್ಣಯಜುರ್ವೇದದಲ್ಲಿ ಉಕ್ತರಾಗಿರುವ ಋಷಿಗಳು | | | 223 |
| ಕೃಷ್ಣಯಜುರ್ವೇದಕ್ಕಿರುವ ಭಾಷ್ಯಗಳು | | ... | 227 |
| ಉಪಸಂಹಾರ | ... | ... | 233 |




ಯಜ್ಞಗಳ ಪರಿಚಯ

## ಪರಿವಿಡಿ


| | | | |
|---|---|---|---|
| ಯಜ್ಞವೆಂದರೇನು? | ... | ... | 1 |
| ಯಜ್ಞ-ಶ್ರುತಿ-ಸ್ಮೃತಿ ಮೂಲ | ... | ... | 2 |
| ಯಜ್ಞಗಳ ಅಗತ್ಯ | ... | ... | 3 |
| ಯಜ್ಞಗಳ ಆರಂಭ | ... | ... | 5 |
| ಯಜ್ಞಗಳ ಪರಿಣಾಮ | ... | ... | 7 |
| ಯಜ್ಞಗಳು ಸಹಜ | ... | ... | 9 |
| ನಿತ್ಯ-ನೈಮಿತ್ತಿಕ ಯಜ್ಞಗಳು | ... | ... | 10 |
| ಹೋಮ ಮತ್ತು ಯಜ್ಞಗಳು | ... | ... | 14 |
| ಯಜ್ಞಗಳ ಇನ್ನೂ ಕೆಲವು ಭೇದಗಳು... | | ... | 16 |
| ಋತ್ವಿಜರು | ... | ... | 20 |
| ಯಜ್ಞಪಾತ್ರೆಗಳು | ... | ... | 26 |
| ಮಥಿತ | ... | ... | 32 |
| ಅಗ್ನ್ಯಾಧಾನ | ... | ... | 35 |
| ಪುನರಾಧಾನ | ... | ... | 44 |
| ಅಗ್ನಿಹೋತ್ರ | ... | ... | 46 |
| ಐಷ್ಟಿಕ-ದರ್ಶ-ಪೂರ್ಣಮಾಸೇಷ್ಟಿ | ... | ... | 51 |
| ಚಾತುರ್ಮಾಸ್ಯೇಷ್ಟಿ | ... | ... | 88 |
| ಪಾಶುಕ-ನಿರೂಢಪಶುಬಂಧಯಾಗ ... | | ... | 94 |
| ಸೌಮಿಕ-ಜ್ಯೋತಿಷ್ಟೋಮ-ಅಗ್ನಿಷ್ಟೋಮ | | ... | 96 |
| ಚಯನಗಳು | ... | ... | 110 |
| ಉಪಸಂಹಾರ | ... | ... | 111 |
| ಅನುಬಂಧಗಳು | ... | ... | 118 |




# ಕೃಷ್ಣಯಜುರ್ವೇದ ಪರಿಚಯ

ಈ ಸಂಪುಟದ ಮೊದಲನೆಯ ಭಾಗದಲ್ಲಿ ವೇದಗಳ ಬಗ್ಗೆ ಸಾಮಾನ್ಯವಾದ ಪರಿಚಯವನ್ನು ಪಡೆಯಲು ಕೆಲವು ಸಂಗತಿಗಳನ್ನು ತಿಳಿಸಲು ಯತ್ನಿಸಿದೆವು. ಆ ಸಂಗತಿಗಳನ್ನು ಪುನಃ ಸ್ಮರಣೆ ಮಾಡಿ ಎರಡನೆಯ ಭಾಗಕ್ಕೆ ಹೆಜ್ಜೆಯನ್ನಿಡೋಣ.

## ಹಿನ್ನೋಟ

ವೇದಗಳೆಂದರೇನು ? ಅವು ಯಾರಿಗೆ ಮತ್ತು ಏಕೆ? ವೇದಗಳೇ ಏಕೆ ಮತ್ತು ಹೇಗೆ ಅಪೌರುಷೇಯವಾದ ಗ್ರಂಥಗಳು ? ವೇದಗಳಿಗೇ ಏಕೆ ಪ್ರಾಮಾಣ್ಯ ? ವೇದಗಳ ಶಾಖೆಗಳೆಷ್ಟು ? ವೇದಗಳನ್ನು ಅಧ್ಯಯನ ಮಾಡುವ ಕ್ರಮ ಯಾವುದು ? ವೇದಾರ್ಥವನ್ನು ತಿಳಿಯುವ ಬಗೆ ಹೇಗೆ ? ವೇದಗಳು ಮತ್ತು ರಾಷ್ಟ್ರೀಯ ಜೀವನಕ್ಕೆ ಇರುವ ಸಂಬಂಧ ಏನು ? ಈ ಎಲ್ಲಾ ವಿಷಯಗಳನ್ನೂ ಗಮನಿಸಿರುವೆವು.

ಪ್ರಥಮ ಸಂಪುಟದ ಈ ಎರಡನೆಯ ಭಾಗದಲ್ಲಿ ಕೃಷ್ಣಯಜುರ್ವೇದದ ವಿಸ್ತೃತ ಪರಿಚಯವನ್ನು ನೀಡಲು ಪ್ರಯತ್ನಿಸಲಾಗಿದೆ.

## ಯಜುರ್ವೇದದ ಹಿರಿಮೆ

ಛಂದಸ್ಸಿನಿಂದ ಕೂಡಿ ನಿಯತವಾದ ಅಕ್ಷರಗಳನ್ನೊಳಗೊಂಡ ಪಾದ ವ್ಯವಸ್ಥೆಯಿರುವ ಮಂತ್ರಗಳು 'ಋಕ್' ಎನ್ನಿಸಿಕೊಳ್ಳುತ್ತವೆ. ಗಾನದಿಂದ ಒಳಗೊಂಡ ಋಕ್‌ಗಳು 'ಸಾಮ' ಎನ್ನಿಸಿಕೊಳ್ಳುತ್ತವೆ. ಇವೆರಡೂ ಇಲ್ಲದ ಮಂತ್ರಗಳು 'ಯಜುಸ್ಸುಗಳು.'



**ನೃತ್ತಗೀತಿವರ್ಜಿತತ್ವೇನ ಪ್ರಶ್ಲಿಷ್ಟಪಠಿತಾಃ ಮಂತ್ರಾಃ ಯಜೂಗ್ಂಷಿ ।**

ಎಂಬ ಲಕ್ಷಣವೂ ಇದೇ ಅಭಿಪ್ರಾಯವನ್ನು ಒಳಗೊಂಡಿದೆ.

ನಾಲ್ಕು ವೇದಗಳಿಗೂ ಭಾಷ್ಯವನ್ನು ರಚಿಸಿ ಲೋಕೋಪಕಾರವನ್ನು ಮಾಡಿದ ಮಹಾಮಹಿಮರೂ ಪೂಜ್ಯರೂ ಆದ ಶ್ರೀಸಾಯಣಾಚಾರ್ಯರು ತಮ್ಮ ಋಗ್ವೇದದ ಭಾಷ್ಯಭೂಮಿಕೆಯಲ್ಲಿ ಯಜುರ್ವೇದದ ಹಿರಿಮೆಯನ್ನು ಕೊಂಡಾಡಿರುತ್ತಾರೆ. ಹಾಗೆ ನೋಡಿದರೆ ಎಲ್ಲ ವೇದಗಳೂ ಭಗವಂತನ ನಿಃಶ್ವಾಸರೂಪಗಳೇ ಆಗಿವೆ.

**ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮ್ ಏತದ್ ಯತ್ ಋಗ್ವೇದೋ ಯಜುರ್ವೇದಸ್ಸಾಮವೇದಃ....**

—ಬೃ. ಉ. ೨-೪-೧೦

ಆದುದರಿಂದ ಯಾವ ವೇದವು ಮೇಲು ಅಥವಾ ಯಾವ ವೇದವು ಕೀಳು ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಆದರೆ ಪ್ರತಿಯೊಂದು ವೇದಕ್ಕೂ ನಿರ್ದಿಷ್ಟವಾದ ಉದ್ದೇಶವಿರುವುದರಿಂದ ಆ ಉದ್ದೇಶಗಳನ್ನು ಮಾತ್ರ ಗಮನದಲ್ಲಿರಿಸಿಕೊಂಡು ಯಾವ ವೇದಕ್ಕೂ ಗೌಣ-ಮುಖ್ಯ ಭಾವನೆಯನ್ನು ಕಲ್ಪಿಸದೇ ನಿರ್ವಿಕಾರವಾಗಿ ಆಲೋಚಿಸಿ ಶ್ರೀ ಸಾಯಣರು ಯಜುರ್ವೇದದ ಹಿರಿಮೆಯನ್ನು ವಿವರಿಸಿದ್ದಾರೆ. ಭಾಷ್ಯಭೂಮಿಕೆಯಲ್ಲಿ ನಿರೂಪಿತವಾದ ಸಂದರ್ಭವು ಈ ರೀತಿ ಇದೆ.

ಶ್ರೀಸಾಯಣಾಚಾರ್ಯರು ಎಲ್ಲಾ ವೇದಗಳಿಗೂ ಭಾಷ್ಯವನ್ನು ಬರೆಯಲು ತೊಡಗಿದಾಗ ಮೊಟ್ಟಮೊದಲು ಯಜುರ್ವೇದಕ್ಕೇ ಭಾಷ್ಯವನ್ನು ಬರೆದರು. ಅನಂತರ ಋಗ್ವೇದಕ್ಕೂ, ಬಳಿಕ ಸಾಮವೇದಕ್ಕೂ, ಅದಾದ ನಂತರ ಅಥರ್ವಣವೇದಕ್ಕೂ ಭಾಷ್ಯವನ್ನು ಬರೆದರು. ಋಗ್ವೇದವು ವೇದಗಳಲ್ಲಿ ಪ್ರಥಮವಾದುದರಿಂದ ಅದಕ್ಕೇ ಮೊದಲು ಭಾಷ್ಯವನ್ನು ರಚಿಸುವುದು ಯುಕ್ತವಾಗಿರುವಾಗ ಯಜುರ್ವೇದಕ್ಕೇ ತಾವು ಮೊದಲು ಭಾಷ್ಯವನ್ನು ಏಕೆ ರಚಿಸುತ್ತಿರುವರೆಂದು ಯುಕ್ತಿಪೂರ್ವಕವಾಗಿ ಸಮರ್ಥಿಸುತ್ತಾರೆ.



ಕೇಚಿದಾಹುಃ। ಋಗ್ವೇದಸ್ಯ ಪ್ರಾಥಮ್ಯೇನ ಸರ್ವತ್ರಾಮ್ನಾ-ತತ್ವಾತ್ ಅಭ್ಯರ್ಹಿತಂ ಪೂರ್ವಮಿತಿ ನ್ಯಾಯೇನ ಅಭ್ಯರ್ಹಿತತ್ವಾತ್ ತದ್ವ್ಯಾಖ್ಯಾನಮಾದೌ ಯುಕ್ತಮ್।

"ಎಲ್ಲೆಡೆ ಋಗ್ವೇದವನ್ನೇ ಮೊದಲು ಹೇಳುವುದರಿಂದ, ಗೌರವವಾದುದಕ್ಕೆ ಪ್ರಥಮ ಸ್ಥಾನವಿರುವುದರಿಂದ ಪ್ರಥಮವಾದ ಋಗ್ವೇದವನ್ನು ಮೊದಲು ವ್ಯಾಖ್ಯಾನಿಸುವುದು ಯುಕ್ತ" ಎಂದು ಕೆಲವರು ಹೇಳುತ್ತಾರೆ. ಅಲ್ಲದೆ ಶ್ರುತಿಯೇ

ಋಚಸ್ಸಾಮಾನಿ ಯಜೂಗ್‌ಂಷಿ। ಸಾ ಹಿ ಶ್ರೀರಮೃತಾ ಸತಾಮ್॥

—ತೈ. ಬ್ರಾ. ೧-೨-೨೬

ಋಕ್, ಸಾಮ, ಯಜುಸ್ಸುಗಳೆಂಬುದೇ ಅನುಷ್ಠಾತೃಗಳ ಅಮೃತತ್ವಕ್ಕೆ ಕಾರಣವಾದ ಸಂಪತ್ತು.

ಋಚಸ್ಸಾಮಾನಿ ಜಜ್ಞಿರೇ। ಛಂದಾಗ್‌ಂಸಿ ಜಜ್ಞಿರೇ ತಸ್ಮಾತ್।

ಯಜುಸ್ತಸ್ಮಾದಜಾಯತ।

—ತೈ. ಆ. ೩-೧೨

ಆ ಯಜ್ಞದಿಂದ ಋಕ್, ಸಾಮ, ಛಂದಸ್ಸು ಮತ್ತು ಯಜುಸ್ಸುಗಳು ಹುಟ್ಟಿದವು.

ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮವೇದ-ಮಾಥರ್ವಣಂ ಚತುರ್ಥಮ್....

ಛಾ. ಉ. ೭-೧-೩

ಭಗವನ್! ಋಗ್ವೇದವನ್ನು ಸ್ಮರಿಸಿಕೊಳ್ಳುವೆನು. ಯಜುರ್ವೇದವನ್ನೂ, ಸಾಮವೇದವನ್ನೂ ನಾಲ್ಕನೆಯದಾದ ಅಥರ್ವಣವೇದವನ್ನೂ ಸ್ಮರಿಸುವೆನು. ಎಂದು ಋಗ್ವೇದದ ಪ್ರಾಥಮ್ಯವನ್ನು ಹೇಳಿದೆ. ಅಲ್ಲದೆ ಯಜುರ್ವೇದದಲ್ಲೇ ಋಕ್‌ಗಳಿಗೆ ಪ್ರಾಶಸ್ತ್ಯವನ್ನು ಹೇಳಲಾಗಿದೆ.



ಯದ್ವೈ ಯಜ್ಞಸ್ಯ ಸಾಮ್ನಾ ಯಜುಷಾ ಕ್ರಿಯತೇ ಶಿಥಿಲಂ

ತದ್ಯದೃಚಾ ತದ್ದೃಢಂ....

—ತೈ. ಸಂ. ೬-೫-೧೦

ಎಂಬ ವಾಕ್ಯವು 'ಯಜ್ಞದ ಅಂಗವಾದ ಸೋಮಗ್ರಹಗ್ರಹಣವು ಋಕ್ ಗಳಿಂದ ಅನುಷ್ಠಿಸಿದಾಗ ದೃಢವಾಗುವುದು. ಯಜುಸ್ಸುಗಳಿಂದಲೂ ಸಾಮದಿಂದಲೂ ಅಷ್ಟು ದೃಢವಾಗಲಾರದು' ಎಂದು ತಿಳಿಸಿದೆ

ಹೀಗೆ ವೇದಗಳಲ್ಲಿಯೇ ಋಗ್ವೇದಕ್ಕೆ ಪ್ರಾಥಮ್ಯ-ಪ್ರಾಶಸ್ತ್ಯಗಳಿರುವಾಗ ಮೊದಲು ಯಜುರ್ವೇದಕ್ಕೇ ಭಾಷ್ಯವನ್ನು ರಚಿಸುತ್ತಿರುವ ಔಚಿತ್ಯವನ್ನು ಸಾಯಣರು ಹೀಗೆ ವಿವರಿಸುತ್ತಾರೆ.

ಅಸ್ತ್ವೇವಂ ಸರ್ವವೇದಾಧ್ಯಯನತತ್ಪಾರಾಯಣಬ್ರಹ್ಮಯಜ್ಞಜಪಾದಾವೃಗ್ವೇದಸ್ಯೈವ ಪ್ರಾಥಮ್ಯಮ್। ಅರ್ಥಜ್ಞಾನಸ್ಯ ತು ಯಜ್ಞಾನುಷ್ಠಾನಾರ್ಥತ್ವಾತ್ತತ್ರ ತು ಯಜುರ್ವೇದಸ್ಯೈವ ಪ್ರಧಾನತ್ವಾತ್ತದ್ವ್ಯಾಖ್ಯಾನಮೇವಾದೌ ಯುಕ್ತಮ್ ।

ಎಲ್ಲ ವೇದಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿಯೂ, ಅವುಗಳನ್ನು ಪಾರಾಯಣ ಮಾಡುವಾಗಲೂ, ಬ್ರಹ್ಮಯಜ್ಞದಲ್ಲಿಯೂ ಋಗ್ವೇದಕ್ಕೇ ಪ್ರಾಥಮ್ಯವಿರಲಿ. ಆದರೆ ಯಜ್ಞಗಳನ್ನು ಅನುಷ್ಠಿಸುವುದಕ್ಕಾಗಿ ವೇದಾರ್ಥವನ್ನು ತಿಳಿಯುವುದರಿಂದ ಯಜ್ಞದಲ್ಲಿ ಯಜುರ್ವೇದಕ್ಕೇ ಪ್ರಾಧಾನ್ಯವಿರುವುದರಿಂದ ಮೊದಲು ಯಜುರ್ವೇದವನ್ನೇ ವ್ಯಾಖ್ಯಾನಿಸುವುದು ಯುಕ್ತ.

ವೇದಾ ಹಿ ಯಜ್ಞಾರ್ಥಮಭಿಪ್ರವೃತ್ತಾಃ ।

—ವೇದಾಂಗ ಜ್ಯೋತಿಷ್ಯ-ಲಗಧಮುನಿ.

ವೇದಗಳು ಯಜ್ಞಗಳನ್ನು ತಿಳಿಸುವುದಕ್ಕಾಗಿಯೇ ಹೊರಟಿವೆ ಎಂಬ ಮಾತಿನಂತೆ ಯಜ್ಞಗಳ ಅನುಷ್ಠಾನ ಮಾಡಲು ವೇದಾರ್ಥವನ್ನು ಅರಿಯಲೇ ಬೇಕು. ಯಜ್ಞಗಳ ವಿಧಿಯೆಲ್ಲವೂ ಹೆಚ್ಚು ಪಾಲು ಯಜುರ್ವೇದದಲ್ಲಿಯೇ ಹೇಳಲ್ಪಟ್ಟಿದೆ. ಯಜುರ್ವೇದದ ಮಂತ್ರಗಳನ್ನು ಚೆನ್ನಾಗಿ ಅರಿಯದೆ



ಯಜ್ಞವನ್ನು ಚೆನ್ನಾಗಿ ಅನುಷ್ಠಿಸಲು ಸಾಧ್ಯವಿಲ್ಲ. ಆದುದರಿಂದ ಯಜ್ಞಗಳ ಸ್ವರೂಪವನ್ನು ನಿರ್ಧರಿಸಲು ಯಜುರ್ವೇದದ ಅರ್ಥವನ್ನು ಮೊದಲು ತಿಳಿಯಬೇಕಾದುದರಿಂದ ಸಾಯಣರು ಮೊದಲು ಯಜುರ್ವೇದಕ್ಕೇ ಭಾಷ್ಯ ವನ್ನು ರಚಿಸಿರುವುದಾಗಿ ಸಮರ್ಥಿಸಿದ್ದಾರೆ.

## ಅಧ್ವರ್ಯುವೇದ

ಯಜುರ್ವೇದಕ್ಕೆ 'ಅಧ್ವರ್ಯುವೇದ'ವೆಂಬ ಹೆಸರೂ ಇದೆ. ಯಜ್ಞ ಗಳನ್ನು ಅನುಷ್ಠಿಸುವ ಋತ್ವಿಜರಲ್ಲಿ ಪ್ರಧಾನನಾದವನು ಅಧ್ವರ್ಯು. ಅವನು ಹೇಳಬೇಕಾದ ಮಂತ್ರಗಳೇ ಈ ವೇದದಲ್ಲಿ ಹೆಚ್ಚು ಇರುವುದರಿಂದ ಈ ವೇದವನ್ನು 'ಅಧ್ವರ್ಯುವೇದ' ಎನ್ನುತ್ತಾರೆ. ಅಧ್ವರ್ಯು ಎಂಬ ಶಬ್ದಕ್ಕೆ ಈ ರೀತಿಯ ವಿವರಣೆ ಇದೆ :

**ಅಧ್ವರಂ ಯುನಕ್ತಿ ಇತಿ ಅಧ್ವರಯುಃ, ಅಧ್ವರ್ಯುಃ [1] ।**

ಯಾಗವನ್ನು ರೂಪಿಸುವವನು (ನಿರ್ವಹಿಸುವವನು) ಅಧ್ವರ್ಯು. ಅವನು ಎಲ್ಲ ಋತ್ವಿಜರ ಪೈಕಿ ಮುಖ್ಯನಾದವನು. ಅವನೇ ಉಳಿದ ಋತ್ವಿಜರಿಗೆ ಯಜ್ಞದಲ್ಲಿ ಕಾರ್ಯವನ್ನು ಹಂಚುವವನು.

**ಅಧ್ವರ್ಯುರ್ವಾ ಋತ್ವಿಜಾಂ ಪ್ರಥಮೋ ಯುಜ್ಯತೇ ತೇನ**
**ಸ್ತೋಮೋ ಯೋಕ್ತವ್ಯ ಇತ್ಯಾಹುಃ ....**

—ತೈ. ಸಂ. ೩-೧-೧೦

ಋತ್ವಿಜರಲ್ಲಿ ಅಧ್ವರ್ಯುವನ್ನೇ ಮೊದಲು ನಿಯಮಿಸಬೇಕು. ಅವನೇ ಪ್ರಥಮನಾದ್ದುದರಿಂದ ಅವನು ಉಳಿದ ಋತ್ವಿಜರನ್ನು ಆರಿಸುವನು.

---

1. ಈ ವಿವರಣೆಯು ನಿರುಕ್ತವನ್ನು ಬರೆದ ಯಾಸ್ಕಾಚಾರ್ಯರಿಗೆ ಸಮ್ಮತ ವಾದುದು. ಸಿದ್ಧಾಂತ ಕೌಮುದಿಯ ಕರ್ತೃಗಳಾದ ಭಟ್ಟೋಜಿ ದೀಕ್ಷಿತರು 'ಅಧ್ವರಮ್ ಇಚ್ಛತಿ, ಅಧ್ವರಂ ಯಾತಿ (ಯಜ್ಞವನ್ನು ಬಯಸುವವನು, ಯಜ್ಞಕ್ಕೆ ಹೋಗುವವನು.) ಇತಿ ಅಧ್ವರ್ಯುಃ' ಎಂಬ ವಿವರಣೆಯನ್ನು ನೀಡುತ್ತಾರೆ.



ಅಧ್ವರ್ಯುವಿಗೆ ಸಂಬಂಧಿಸಿದ ಮಂತ್ರಗಳು ಯಜುರ್ವೇದದಲ್ಲಿ ಇರುವುದರಿಂದ ಯಜ್ಞವೆಂಬ ಪುರುಷನಿಗೆ ಯಜುರ್ವೇದವೇ ಶರೀರ. ಋಗ್ವೇದ ಮತ್ತು ಸಾಮವೇದಗಳು ಆ ಶರೀರದ ಅವಯವಗಳಿದ್ದಂತೆ. ಯಜ್ಞವು ಒಂದು ಗೋಡೆ ಇದ್ದಂತೆ. ಋಗ್ವೇದದ ಮಂತ್ರಗಳಾದ ಶಸ್ತ್ರಗಳೂ, ಸಾಮವೇದದ ಸ್ತೋತ್ರಗಳೂ[1] ಆ ಗೋಡೆಯಲ್ಲಿ ಬರೆದ ಚಿತ್ರಗಳಂತೆ. ಗೋಡೆ ಇಲ್ಲದೆ ಚಿತ್ರವನ್ನು ಬರೆಯಲಾಗದು. ಶರೀರವಿಲ್ಲದೆ ಅವಯವಗಳು ಇರಲಾರವು. ಆದುದರಿಂದ ಯಜ್ಞದ ಸ್ವರೂಪವನ್ನು ವಿವರಿಸುವ ವೇದವು 'ಅಧ್ವರ್ಯುವೇದ' ವೆಂದೆನಿಸಿಕೊಂಡಿದೆ.

ಹೀಗೆ ಎಲ್ಲ ವೇದಗಳಿಗೂ ಸಮಾನವಾದ ಸ್ಥಾನವಿದ್ದರೂ ಗೊತ್ತಾದ ಕಾರ್ಯದಲ್ಲಿ ನಿರ್ದಿಷ್ಟವ್ಯಕ್ತಿಗೆ ಪ್ರಾಧಾನ್ಯವು ಇರುವಂತೆ ವೇದಗಳಲ್ಲಿ ಯಜುರ್ವೇದಕ್ಕೆ ಪ್ರಾಧಾನ್ಯವಿದೆ.[2]

## ಯಜುರ್ವೇದದ ಶಾಖೆಗಳು

ವ್ಯಾಕರಣ ಮಹಾಭಾಷ್ಯದ ಪ್ರಾರಂಭದಲ್ಲಿ ಪತಂಜಲಿ ಮಹರ್ಷಿಯು "ಏಕಶತಮಧ್ವರ್ಯುಶಾಖಾಃ" — ಯಜುರ್ವೇದದ ಶಾಖೆಗಳು ೧೦೧— ಎಂದು ಹೇಳಿದ್ದಾನೆ. ಆದರೆ ಇಂದು ತೈತ್ತಿರೀಯ, ಮೈತ್ರಾಯಣೀಯಮತ್ತು ಕಾಠಕಗಳೆಂಬ ಮೂರು ಶಾಖೆಗಳು ಮಾತ್ರ ಉಳಿದಿವೆ. ಈ ಮೂರು ಶಾಖೆಗಳೂ ಕೃಷ್ಣಯಜುರ್ವೇದಕ್ಕೆ ಸೇರಿದವುಗಳು. ಶುಕ್ಲ ಯಜುರ್ವೇದದಲ್ಲಿ ಕಾಣ್ವ ಮತ್ತು ಮಾಧ್ಯಂದಿನ ಎಂಬ ಎರಡು ಶಾಖೆಗಳಿವೆ.

---

1. ಋಕ್ಕುಗಳನ್ನು ಏಕಶ್ರುತಿಯಿಂದ ಹೇಳಿದಾಗ ಅವುಗಳಿಗೆ ಶಸ್ತ್ರಗಳೆಂಬ ಹೆಸರಿದೆ. ಸಾಮಗಳಿಗೆ ಸ್ತೋತ್ರಗಳೆಂಬ ಹೆಸರಿದೆ.

2. ನಿತ್ಯವ್ಯವಹಾರದಲ್ಲಿಯೂ ಇದನ್ನು ಕಾಣಬಹುದು. ರಾಜನು ರಾಜ್ಯಕ್ಕೆ ಮುಖ್ಯನಾದರೂ ರಾಜಕುಮಾರನ ವಿವಾಹದಲ್ಲಿ ರಾಜಕುಮಾರನೇ ಪ್ರಧಾನ. ಆದರ್ಶ ಕುಟುಂಬದಲ್ಲಿ ಎಲ್ಲರಿಗೂ ಪ್ರಾಧಾನ್ಯವಿದ್ದರೂ ಕನ್ಯೆಯನ್ನು ಇನ್ನೊಂದು ಮನೆಗೆ ಕೊಡುವ ಸಂದರ್ಭದಲ್ಲಿ ತಾಯಿಗೆ ಕೊಂಚ ಹೆಚ್ಚು ಪ್ರಾಧಾನ್ಯ. ಕಾಳಿದಾಸನು "ಪ್ರಾಯೇಣ ಗೃಹಿಣೀನೇತ್ರಾಃ ಕನ್ಯಾರ್ಥೇಷು ಕುಟುಂಬಿನಃ" ಎಂದು ಹೇಳಿದ್ದಾನೆ.






ಅಂತೂ ಯಜುರ್ವೇದದ ಐದು ಶಾಖೆಗಳು ಮಾತ್ರ ಉಳಿದಿವೆ ಎನ್ನಬಹುದು. ಈ ಶಾಖೆಗಳ ಪೈಕಿ ತೈತ್ತಿರೀಯಶಾಖೆಯ ಬಗ್ಗೆ 'ಚರಣವ್ಯೂಹ' ಗ್ರಂಥದಲ್ಲಿ ಹೀಗೆ ಹೇಳಲಾಗಿದೆ.

**ತೈತ್ತಿರೀಯಕಾ ನಾಮ ದ್ವಿಭೇದಾ ಭವಂತಿ । ಔಖ್ಯಾಃ, ಖಾಂಡಿಕೇಯಾಶ್ಚೇತಿ । ತತ್ರ ಖಾಂಡಿಕೇಯಾ ನಾಮ ಪಂಚಭೇದಾ ಭವಂತಿ । ಆಪಸ್ತಂಬಾಃ, ಬೋಧಾಯನಾಃ, ಸತ್ಯಾಷಾಢಾಃ, ಹೈರಣ್ಯಕೇಶಾಃ, ಕಾಣ್ವಾಯನಾಃಶ್ಚೇತಿ ।**

ತೈತ್ತಿರೀಯ ಶಾಖೆಯನ್ನು ಅನುಸರಿಸುವವರಲ್ಲಿ ಎರಡು ಭೇದಗಳು. ಔಖ್ಯರು ಮತ್ತು ಖಾಂಡಿಕೇಯರು. ಖಾಂಡಿಕೇಯರಲ್ಲಿ ಐದು ಬಗೆ. ಆಪಸ್ತಂಬ, ಬೋಧಾಯನ, ಸತ್ಯಾಷಾಢ, ಹಿರಣ್ಯಕೇಶ ಮತ್ತು ಕಾಣ್ವಾಯನ—ಈ ಮುನಿಗಳನ್ನು ಅನುಸರಿಸುವವರು. ಈ ಮುನಿಗಳು ರಚಿಸಿರುವ ಗೃಹ್ಯ ಮತ್ತು ಶ್ರೌತಸೂತ್ರಗಳನ್ನು ಅನುಸರಿಸಿ ಕರ್ಮಾನುಷ್ಠಾನವನ್ನು ಮಾಡುವವರು. ತೈತ್ತಿರೀಯ ಶಾಖೆಯ ಈ ಭೇದಗಳು ಶ್ರೌತ ಮತ್ತು ಗೃಹ್ಯ ಸೂತ್ರಗಳಿಗೆ ಸಂಬಂಧಿಸಿದಂತೆ ಮಾತ್ರ. ಸಂಹಿತಾ, ಬ್ರಾಹ್ಮಣ ಮತ್ತು ಆರಣ್ಯಕ ಗ್ರಂಥಗಳು ಈ ಐವರಿಗೂ ಒಂದೇ ಆಗಿವೆ.

### ಶುಕ್ಲ-ಕೃಷ್ಣ ಏಕೆ?

ಯಜ್ಞಗಳನ್ನು ಅನುಷ್ಠಾನ ಮಾಡುವಾಗ ವೇದದಲ್ಲಿ ಬರುವ ಮಂತ್ರಗಳನ್ನು ಋತ್ವಿಜರು ಬಳಸುತ್ತಾರಷ್ಟೆ. ವೇದದಲ್ಲಿ ಬರುವ ಎಲ್ಲ ವಾಕ್ಯಗಳೂ ಯಜ್ಞದಲ್ಲಿ ನೇರವಾಗಿ ವಿನಿಯೋಗವಾಗುವುವು ಎಂದೇನೂ



ಇಲ್ಲ. ರೂಢಿಯಲ್ಲಿ ವೇದದಲ್ಲಿ ಬರುವ ಎಲ್ಲ ವಾಕ್ಯಗಳನ್ನೂ ನಾವು ಮಂತ್ರ ಎಂದು ಹೆಸರಿಸುತ್ತೇವಾದರೂ 'ಮಂತ್ರ' ಎಂಬ ಶಬ್ದಕ್ಕೆ ಪಾರಿಭಾಷಿಕವಾದ ಅರ್ಥವಿದೆ. ಸಾಮಾನ್ಯವಾಗಿ ಮಂತ್ರಗಳು ಛಂದೋಬದ್ಧವಾಗಿರುತ್ತವೆ. ಇವುಗಳ ವಿನಿಯೋಗವನ್ನೂ, ಯಜ್ಞದ ವಿಧಿಯನ್ನೂ ವಿವರಿಸುವ ವಾಕ್ಯಗಳು ಬ್ರಾಹ್ಮಣವಾಕ್ಯಗಳು. ಇವು ಮಂತ್ರಗಳಲ್ಲ. ಮಂತ್ರಗಳೊಡನೆ ಪಾಠವಿರುವುದರಿಂದ ಇವುಗಳನ್ನು ಮಂತ್ರಗಳೆಂದು ವ್ಯವಹರಿಸುತ್ತೇವಷ್ಟೆ. ಉದಾಹರಣೆಗೆ ತೈತ್ತಿರೀಯ ಶಾಖೆಯಲ್ಲಿ ಮೊದಲ ಮಂತ್ರ

ಇಷೇ ತ್ವಾ[1] ।

ಎಂದಿದೆ. ಈ ಮಂತ್ರದಿಂದ ಮಾಡುವ ಕ್ರಿಯೆಯ ಫಲವನ್ನು

ಇಷಮೇವೋರ್ಜಂ ಯಜಮಾನೇ ದಧಾತಿ[2] ।

ಎಂಬ ವಾಕ್ಯವು ತಿಳಿಸುತ್ತದೆ. ಈ ರೀತಿಯ ಅಸಂಖ್ಯ ಮಂತ್ರಗಳೂ, ಬ್ರಾಹ್ಮಣವಾಕ್ಯಗಳೂ ವೇದಗಳಲ್ಲಿ ಇವೆ. ಋಗ್ವೇದದಲ್ಲಿ ಮಂತ್ರಗಳು[3] ಸಂಹಿತಾಗ್ರಂಥದಲ್ಲಿ ಇವೆ. ಅವುಗಳ ಬ್ರಾಹ್ಮಣವಾಕ್ಯಗಳು 'ಐತರೇಯ ಬ್ರಾಹ್ಮಣ' ಗ್ರಂಥದಲ್ಲಿ ಇವೆ. ಸಾಮವೇದದಲ್ಲಿಯೂ ಮಂತ್ರಗಳು 'ಸಂಹಿತೆ' ಎಂದು ಪ್ರಸಿದ್ಧವಾಗಿರುವ ಗ್ರಂಥದಲ್ಲಿಯೂ, ಬ್ರಾಹ್ಮಣವಾಕ್ಯಗಳು 'ತಾಂಡ್ಯ ಮಹಾಬ್ರಾಹ್ಮಣ' ಮೊದಲಾಗಿ ಪ್ರಸಿದ್ಧವಾಗಿರುವ ಗ್ರಂಥದಲ್ಲಿಯೂ ಇವೆ. ಯಜುರ್ವೇದದ ಶಾಖೆಯಾದ ಶುಕ್ಲಯಜುರ್ವೇದದಲ್ಲಿಯೂ ಮಂತ್ರಗಳು

---

1. ಈ ಮಂತ್ರದಿಂದ ದರ್ಶೇಷ್ಟಿಯಲ್ಲಿ ಹವಿಸ್ಸಿಗಾಗಿ ಮುತ್ತುಗಮರದ ಶಾಖೆಯನ್ನು ಕತ್ತರಿಸಬೇಕು.

ತೈ. ಸಂ. ೧-೧

2. ಹೀಗೆ ಮಾಡುವುದರಿಂದ ಯಜ್ಞಮಾಡುವವನಿಗೆ ಅನ್ನವನ್ನು ಇತ್ತಂತೆಯೇ.

ತೈ. ಬ್ರಾ. ೩-೨-೧

3. 'ಮಂತ್ರ' ಎಂಬ ಶಬ್ದಕ್ಕೆ ಪಾರಿಭಾಷಿಕ ಅರ್ಥವನ್ನೇ ಗ್ರಹಿಸಬೇಕು. ರೂಢಿಯ ಅರ್ಥವನ್ನು ಮರೆತುಬಿಡಬೇಕು.



ಸಂಹಿತೆಯಲ್ಲಿಯೂ, ಬ್ರಾಹ್ಮಣವಾಕ್ಯಗಳು 'ಶತಪಥ ಬ್ರಾಹ್ಮಣ' ಎಂದು ಪ್ರಸಿದ್ಧವಾಗಿರುವ ಗ್ರಂಥಭಾಗದಲ್ಲಿಯೂ ಇವೆ. ಕೃಷ್ಣಯಜುರ್ವೇದದಲ್ಲಿ ಮಾತ್ರ ಈ ಕ್ರಮವು ವ್ಯತ್ಯಾಸಗೊಂಡಿದೆ. ಮಂತ್ರಗಳೇ ಒಂದೆಡೆ, ಬ್ರಾಹ್ಮಣವಾಕ್ಯಗಳೇ ಒಂದೆಡೆ ಇಲ್ಲ. ಮಂತ್ರಗಳಿದ್ದು 'ತೈತ್ತಿರೀಯ ಸಂಹಿತೆ' ಎಂದು ಪ್ರಸಿದ್ಧವಾಗಿರುವ ಗ್ರಂಥದಲ್ಲಿ ಬ್ರಾಹ್ಮಣವಾಕ್ಯಗಳೂ, ಬ್ರಾಹ್ಮಣವಾಕ್ಯಗಳಿದ್ದು 'ತೈತ್ತಿರೀಯ ಬ್ರಾಹ್ಮಣ' ಎಂದು ಪ್ರಸಿದ್ಧಿ ಪಡೆದಿರುವ ಗ್ರಂಥಭಾಗದಲ್ಲಿ ಮಂತ್ರಗಳೂ, 'ತೈತ್ತಿರೀಯ ಆರಣ್ಯಕ' ಎಂದು ಪ್ರಸಿದ್ಧಿ ಪಡೆದಿರುವ ಗ್ರಂಥಭಾಗದಲ್ಲಿ ಮಂತ್ರಗಳೂ ಮತ್ತು ಬ್ರಾಹ್ಮಣವಾಕ್ಯಗಳೂ ಸೇರಿಕೊಂಡಿವೆ. ಹೀಗೆ ಪಾಠಕ್ರಮದಲ್ಲಿ ಮಂತ್ರ-ಬ್ರಾಹ್ಮಣಗಳು ಮಿಶ್ರವಾಗಿರುವುದರಿಂದ ಯಜುರ್ವೇದದಲ್ಲಿ 'ಕೃಷ್ಣ ಯಜುರ್ವೇದ' ಎಂಬ ಭಾಗವು ಉಂಟಾಯಿತು. ಕೃಷ್ಣಯಜುರ್ವೇದದ ತೈತ್ತಿರೀಯ, ಮೈತ್ರಾಯಣೀಯ ಮತ್ತು ಕಾಠಕ ಈ ಮೂರು ಶಾಖೆಗಳಲ್ಲಿಯೂ ಮಂತ್ರ-ಬ್ರಾಹ್ಮಣಗಳು ಮಿಶ್ರವಾಗಿಯೇ ಇವೆ.

**ಬುದ್ಧಿಮಾಲಿನ್ಯಹೇತುತ್ವಾತ್ ತದ್ಯಜುಃ ಕೃಷ್ಣಮೀರ್ಯತೇ ।**
**ವ್ಯವಸ್ಥಿತಪ್ರಕರಣಂ ತದ್ಯಜುಃ ಶುಕ್ಲಮೀರ್ಯತೇ ॥**

ಮಂತ್ರಬ್ರಾಹ್ಮಣಗಳು ಬೆರೆತಿರುವ ಯಜುಸ್ಸುಗಳಿಂದ ಕೂಡಿ ತಿಳಿಯಲು ಕಷ್ಟವಾಗುವುದರಿಂದ ಕೃಷ್ಣಯಜುಸ್ಸುಗಳೆಂದೂ, ಮಂತ್ರಬ್ರಾಹ್ಮಣಗಳು ಬೆರೆಯದೆ ಪ್ರಕರಣದ ವ್ಯವಸ್ಥೆಯಿಂದ ಕೂಡಿ ತಿಳಿಯಲು ಸುಲಭವಾದ ಯಜುಸ್ಸುಗಳಾದುದರಿಂದ ಶುಕ್ಲಯಜುಸ್ಸುಗಳೆಂದೂ ಹೇಳಲ್ಪಟ್ಟಿವೆ.

ಯಜುಸ್ಸುಗಳಿಂದ ಕೂಡಿ 'ಯಜುರ್ವೇದ' ಎನ್ನಿಸಿಕೊಂಡು ಮಂತ್ರ ಬ್ರಾಹ್ಮಣಗಳನ್ನು ಒಡನೆಯೇ ತಿಳಿಯಲಾಗದ ಕಾರಣದಿಂದ 'ಕೃಷ್ಣ ಯಜುರ್ವೇದ' ಎಂಬ ಹೆಸರು ರೂಢಿಯಲ್ಲಿ ಬಂದಿದೆ.[1]

---

1. ಹೀಗೆ ಇವು ರೂಢಿಯಿಂದ ಬಂದ ಹೆಸರುಗಳು. ಶುಕ್ಲಯಜುರ್ವೇದವನ್ನು 'White' ಎಂದೂ, ಕೃಷ್ಣಯಜುರ್ವೇದವನ್ನು 'Black' ಎಂದೂ ಕರೆಯುವುದು ಮೇಲಿನ ಅಭಿಪ್ರಾಯವನ್ನು ತಿಳಿಸಲಾರದು. ರೂಢನಾಮಗಳನ್ನು ಬೇರೆ ಭಾಷೆಗೆ ಅನುವಾದ ಮಾಡಲು ಬರುವುದಿಲ್ಲ.



ಈ ವೇದಕ್ಕೆ ಕೃಷ್ಣ ಯಜುರ್ವೇದವೆಂದು ಕರೆಯಲು ಇನ್ನೂ ಕೆಲವು ಕಾರಣಗಳಿವೆಯೆಂದು ವಿದ್ವಾಂಸರ ಅಭಿಪ್ರಾಯವಿದೆ. 'ಚರಣವ್ಯೂಹ' ಗ್ರಂಥದ ವ್ಯಾಖ್ಯಾನಕಾರನಾದ ಮಹಿದಾಸನು ಕೃಷ್ಣ ಯಜುರ್ವೇದವೆಂಬ ಹೆಸರು ಬರಲು ಈ ಕಾರಣವನ್ನು ಹೇಳುತ್ತಾನೆ.

**ವೇದೋಪಕ್ರಮಣೇ ಚತುರ್ದಶೀಯುಕ್ತಪೂರ್ಣಿಮಾಗ್ರಹಣಾತ್ ಶುಕ್ಲಯಜುಃ, ' ಪ್ರತಿಪದ್ಯುಕ್ತಪೂರ್ಣಿಮಾಗ್ರಹಣಾತ್ ಕೃಷ್ಣ ಯಜುರಿತಿ ವಾ ।**

ವೇದಾರಂಭವನ್ನು ಮಾಡಲು ಆಚರಿಸುವ ಉಪಾಕರ್ಮವನ್ನು ಶ್ರಾವಣ ಪೂರ್ಣಿಮೆಯಂದು ಆಚರಿಸಬೇಕು. ಒಂದು ವೇಳೆ ಪೂರ್ಣಿಮೆಯು ಮಧ್ಯಾಹ್ನಕ್ಕಿಂತಲೂ ಮೊದಲೇ ಮುಗಿಯುವುದಾದರೆ ಆಗ ಕೆಲವರು ವೇದಾರಂಭವನ್ನು ಹಿಂದಿನ ದಿನವೇ ಅಂದರೆ ಚತುರ್ದಶಿಯಿಂದ ಕೂಡಿದ ಪೂರ್ಣಿಮೆಯಂದು ಆಚರಿಸುತ್ತಾರೆ. ಕೆಲವರು ಆ ದಿನವೇ ಅಂದರೆ ಪ್ರತಿಪತ್‌ನಿಂದ (ಪಾಡ್ಯ) ಕೂಡಿದ ಪೂರ್ಣಿಮೆಯಂದು ಆಚರಿಸುತ್ತಾರೆ. ಹಿಂದಿನ ದಿನ ಆಚರಿಸುವವರು ಶುಕ್ಲ ಪಕ್ಷದಲ್ಲಿಯೇ ವೇದಾರಂಭವನ್ನು ಮಾಡಿದಂತಾಗುವುದರಿಂದ ಅವರು ಶುಕ್ಲಯಜುರ್ವೇದೀಯರೆಂದೂ, ಅದೇ ದಿನ ಆಚರಿಸುವವರು ಕೃಷ್ಣ ಪಕ್ಷದ ಸ್ಪರ್ಶದಿಂದ ವೇದಾರಂಭವನ್ನು ಮಾಡಿದಂತಾಗುವುದರಿಂದ ಅವರು ಕೃಷ್ಣ ಯಜುರ್ವೇದೀಯರೆಂದೂ ಕರೆಯಲ್ಪಡುತ್ತಾರೆ. ಆದುದರಿಂದ ಅವರು ಅಧ್ಯಯನ ಮಾಡುವ ಆ ವೇದಗಳು ಶುಕ್ಲ–ಕೃಷ್ಣ ಯಜುರ್ವೇದಗಳಾಗಿವೆ.

ಅಗ್ನಿಯ ಆಧಾನವನ್ನು[1] ಮಾಡಿದ ನಂತರ ದರ್ಶ ಮತ್ತು ಪೂರ್ಣ ಮಾಸಗಳೆಂಬ ಇಷ್ಟಿಗಳನ್ನು ಆಚರಿಸಬೇಕು. ಕೃಷ್ಣ ಯಜುರ್ವೇದದ ಶಾಖೆಯವರು ಕೃಷ್ಣಪಕ್ಷದ ಪ್ರತಿಪತ್ತಿನಿಂದ ಪೂರ್ಣಮಾಸೇಷ್ಟಿಯನ್ನು ಆರಂಭಿಸುವರು. ದರ್ಶ ಮತ್ತು ಪೂರ್ಣಮಾಸೇಷ್ಟಿಗಳು ಅಮಾವಾಸ್ಯೆ ಮತ್ತು ಪೂರ್ಣಿಮೆಗಳಂದು ಮಾಡಬೇಕಾದ ಇಷ್ಟಿಗಳು. ಹೊಸದಾಗಿ ಇಷ್ಟಿಯನ್ನು ಆರಂಭಿಸುವವನು ದರ್ಶದಿಂದಲೇ ಆರಂಭಿಸಬೇಕು. ಏಕೆಂದರೆ

---

1. ಅಗ್ನಿಯ ಆಧಾನ ಮತ್ತು ಇಷ್ಟಿಗಳ ವಿಚಾರವನ್ನು ಈ ಸಂಪುಟದ ಮೂರನೆಯ ಭಾಗದಲ್ಲಿ ವಿವರಿಸಲಾಗುವುದು.



ಅಮಾವಾಸ್ಯೆಯ ನಂತರ ಶುಕ್ಲಪಕ್ಷವು ಬರುವುದರಿಂದ ಶುಕ್ಲಪಕ್ಷದಲ್ಲಿ ಚಂದ್ರನು ವೃದ್ಧಿಹೊಂದುವುದರಿಂದ ಇಷ್ಟಿಯನ್ನು ಮಾಡುವ ಯಜಮಾನನೂ ಕೂಡ ವೃದ್ಧಿ ಹೊಂದುವನು. ಪೂರ್ಣಮಾಸೇಷ್ಟಿಯಿಂದ ಆರಂಭಿಸಿದರೆ ಪೂರ್ಣಿಮೆಯ ನಂತರ ಕೃಷ್ಣಪಕ್ಷವು ಬರುವುದರಿಂದ ಕೃಷ್ಣಪಕ್ಷದಲ್ಲಿ ಚಂದ್ರನು ಕ್ಷಯಿಸುವುದರಿಂದ ಯಜಮಾನನಿಗೂ ಹಾನಿಯಾಗುವುದು. ಆದುದರಿಂದ ದರ್ಶೇಷ್ಟಿಯಿಂದಲೇ ಪ್ರಾರಂಭಿಸಬೇಕು. ಆದರೆ ಕೃಷ್ಣಯಜುರ್ವೇದದ ಶಾಖೆಯವರು ಪೂರ್ಣಮಾಸೇಷ್ಟಿಯಿಂದಲೇ ಇಷ್ಟಿಯನ್ನು ಆರಂಭಿಸುವರು. ದೋಷನಿವೃತ್ತಿಗಾಗಿ ಸಾರಸ್ವತಹೋಮವನ್ನು ಮಾಡುವರು. ಹೀಗೆ ಪೂರ್ಣಮಾಸೇಷ್ಟಿಯಿಂದಲೇ ಇಷ್ಟಿಗಳನ್ನು ಈ ಶಾಖೆಯವರು ಪ್ರಾರಂಭಿಸುವುದರಿಂದ ಪೂರ್ಣಮಾಸೇಷ್ಟಿಯ ನಂತರ ಕೃಷ್ಣಪಕ್ಷವು ಬರುವುದರಿಂದ ಈ ಶಾಖೆಯು ಕೃಷ್ಣಯಜುರ್ವೇದವೆನಿಸಿದೆ.[1]

ಹೀಗೆ ಪೂರ್ಣಮಾಸೇಷ್ಟಿಯಿಂದಲೇ ಆರಂಭಿಸಬೇಕೆಂಬುದು ತೈತ್ತಿರೀಯ ಸಂಹಿತೆಯಲ್ಲಿ ಮೊದಲು ಪೂರ್ಣಮಾಸೇಷ್ಟಿಯ ಮಂತ್ರವನ್ನು ಹೇಳಿದುದರಿಂದ ತಿಳಿದುಬರುತ್ತದೆ.

**ಪೂರ್ಣಾ ಪಶ್ಚಾತ್........ಅದಧುಃ ।**

—ತೈ. ಸಂ. ೩–೫–೧

## ತೈತ್ತಿರೀಯ ಶಾಖೆಯು ಕೃಷ್ಣ ಏಕೆ ?

ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಯಲ್ಲಿ ಮಂತ್ರ ಮತ್ತು ಬ್ರಾಹ್ಮಣಗಳು ಮಿಶ್ರವಾಗಿವೆ. ಹೀಗೆ ಮಂತ್ರ ಮತ್ತು ಬ್ರಾಹ್ಮಣಗಳು ಪಾಠದಲ್ಲಿ ಮಿಶ್ರವಾಗಲು ಕಾರಣ ಏನು ? ಇದಕ್ಕೆ ಸಂಬಂಧಿಸಿದ ಆಖ್ಯಾನ

1. ಕೃಷ್ಣದ್ವೈಪಾಯನನ (ವ್ಯಾಸರ) ಶಿಷ್ಯರಿಂದಲೂ ಅವರ ಶಿಷ್ಯರಿಂದಲೂ ಪ್ರವಚನ ಮಾಡಲ್ಪಟ್ಟಂತಹ ಶಾಖೆಯಾದುದರಿಂದ 'ಕೃಷ್ಣಯಜುರ್ವೇದ'ವೆಂದೂ, ಯಾಜ್ಞವಲ್ಕ್ಯ ಮತ್ತು ಅವನ ಶಿಷ್ಯಪರಂಪರೆಯಲ್ಲಿ ಪಾಠ ಮಾಡಲ್ಪಟ್ಟುದುದರಿಂದ 'ಶುಕ್ಲಯಜುರ್ವೇದ'ವೆಂದೂ ಹೆಸರು ಬಂದಿದೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ.



ವೊಂದು 'ಸಂಸ್ಕಾರ ರತ್ನಮಾಲಾ' ಗ್ರಂಥದಲ್ಲಿ ಉಲ್ಲೇಖವಾಗಿದೆ. ಮಹಾ ಭಾರತದಲ್ಲಿಯೂ ಈ ಪ್ರಸಂಗದ ಉಲ್ಲೇಖ ಬರುತ್ತದೆ.

ಮಹರ್ಷಿ ವೇದವ್ಯಾಸರು ವೇದಗಳನ್ನು ವಿಭಾಗ ಮಾಡಿದ ನಂತರ ವೇದಗಳ ಒಂದೊಂದು ಶಾಖೆಯನ್ನು ರಕ್ಷಿಸಿಕೊಂಡು ಬರುವ ಸಲುವಾಗಿ ಒಬ್ಬೊಬ್ಬ ಶಿಷ್ಯರನ್ನು ನಿಯೋಜಿಸಿದರು. ಯಜುರ್ವೇದವನ್ನು ಶಿಷ್ಯನಾದ ವೈಶಂಪಾಯನನಿಗೆ ಬೋಧಿಸಿದರು. ಆ ಸಂದರ್ಭದಲ್ಲಿ ಬ್ರಹ್ಮಲೋಕದಲ್ಲಿ ನಡೆದ ಘಟನೆಯೊಂದು ಮಂತ್ರ-ಬ್ರಾಹ್ಮಣಗಳ ಮಿಶ್ರವಾದ ಅಧ್ಯಯನ ಪದ್ಧತಿಗೆ ಮೂಲವಾಯಿತು.

ಬ್ರಹ್ಮನ ಸಭೆಯಲ್ಲಿ ದೂರ್ವಾಸರು ಸಾಮಗಾನವನ್ನು ಮಾಡುತ್ತಿದ್ದರು. ಅನುಪಮವಾದ ಶರೀರವನ್ನು ಪಡೆದ ಅವರು ತೇಜಸ್ವಿಗಳಾಗಿದ್ದರು. ಕೆಂಗಣ್ಣುಗಳಿಂದ ಕೂಡಿದ್ದ ಅವರನ್ನು ಕಂಡು ಸರಸ್ವತಿಯು ನಕ್ಕಳು. ಇದರಿಂದ ಕುಪಿತರಾದ ದೂರ್ವಾಸರು ಮನುಷ್ಯಜಾತಿಯಲ್ಲಿ ಜನ್ಮ ಪಡೆಯುವಂತೆ ಶಾಪವಿತ್ತರು. ಸರಸ್ವತಿಯು ಪ್ರಾರ್ಥನೆ ಮಾಡಿದ ನಂತರ ಬ್ರಾಹ್ಮಣ ಗೃಹದಲ್ಲಿ ಜನಿಸುವಂತೆ ಹೇಳಿ ದೂರ್ವಾಸರು ಬ್ರಹ್ಮಸಭೆಯಿಂದ ತೆರಳಿದರು. ಬಳಿಕ ಸರಸ್ವತಿಯು ಅತ್ರೇಯನ ಮನೆಯಲ್ಲಿ ಮಗಳಾಗಿ ಜನ್ಮವೆತ್ತಿದಳು. ಬಳಿಕ ವೇದಾಧ್ಯಯನಸಂಪನ್ನನಾದವನಿಗೆ ಆಕೆಯನ್ನು ಧಾರೆಯೆರೆದು ಇತ್ತರು. ಕೊಂಚಕಾಲದ ನಂತರ ಸರಸ್ವತಿಯು ಗಂಡು ಮಗುವನ್ನು ಹೆತ್ತಳು. ಅವನೇ 'ಸಾರಸ್ವತ'. ಸಾರಸ್ವತನಿಗೆ ಯೋಗ್ಯಸಮಯದಲ್ಲಿ ತಂದೆಯು ಉಪನಯನವನ್ನು ಮಾಡಿ ವೇದಾಧ್ಯಯನವನ್ನು ಹೇಳಿ ಕೊಟ್ಟರು. ಅಧ್ಯಯನ ಮಾಡಿಸುವ ಸಮಯದಲ್ಲಿ ತಂದೆಯು ಮಗನಿಗೆ ಎರಡು ಏಟನ್ನು ಕೊಟ್ಟನು. ಸಾರಸ್ವತನು ಅಳುತ್ತಳುತ್ತ ತಾಯಿಯನ್ನು ತಬ್ಬಿಕೊಂಡ. ವಿದ್ಯಾದೇವಿಯಾದ ತನ್ನ ಮಗನಿಗೆ ಈ ದೆಶೆ ಬಂದುದನ್ನು ಕಂಡು ಸರಸ್ವತಿಯು ದುಃಖಿತಳಾಗಿ ಮಗನನ್ನು ಸಾಂತ್ವನಗೊಳಿಸುತ್ತಾ ಅವನಿಗೆ ನಾಲ್ಕು ವೇದಗಳನ್ನೂ, ವೇದಾಂಗಗಳನ್ನೂ, ಅರವತ್ತನಾಲ್ಕು ಕಲೆಗಳನ್ನೂ ಮತ್ತು ಬ್ರಹ್ಮವಿದ್ಯೆಯನ್ನೂ ಉಪದೇಶಿಸಿದಳು. ಅಲ್ಲದೆ ವಾಯುವಿನ ಬಂಧನದಿಂದ ಹಸಿವು ಮತ್ತು ನೀರಡಿಕೆಗಳನ್ನು ತಡೆಯುವ ವಿದ್ಯೆಯನ್ನು ಉಪದೇಶಿಸಿದಳು. ಸಕಲ ವಿದ್ಯೆಗಳಲ್ಲಿಯೂ ಪರಿಣತನಾದ



ಸಾರಸ್ವತನು ಕುರುಕ್ಷೇತ್ರದಲ್ಲಿ ಉಗ್ರವಾದ ತಪಸ್ಸನ್ನು ಆಚರಿಸಿ ಮುನಿ ಎನಿಸಿಕೊಂಡನು. ಅವನೇ 'ಸಾರಸ್ವತಮುನಿ'.

ಹೀಗಿರುವಾಗ ಒಮ್ಮೆ ತೀವ್ರವಾದ ಕ್ಷಾಮವು ತಲೆದೋರಿ ಎಲ್ಲೆಲ್ಲಿಯೂ ಆಹಾರವಿಲ್ಲದೆ ಹಾಹಾಕಾರವೆದ್ದಿತು. ಅರಣ್ಯದಲ್ಲಿ ವಾಸವಾಗಿದ್ದ ಋಷಿಗಳೆಲ್ಲರೂ ಆಹಾರವಿಲ್ಲದೆ ಬಳಲಿ ಹೋದರು. ಆದರೆ ಕುರುಕ್ಷೇತ್ರದಲ್ಲಿದ್ದ ಸಾರಸ್ವತಮುನಿಯು ತಾಯಿಯು ಉಪದೇಶಿಸಿದ ವಿದ್ಯೆಯ ಬಲದಿಂದ ಆಹಾರವಿಲ್ಲದಿದ್ದರೂ ದೃಢಕಾಯನಾಗಿದ್ದನು. ಅವನನ್ನು ಕಂಡು ಉಳಿದ ಋಷಿಗಳು ಅವನಲ್ಲಿ ಆಹಾರವಿದೆಯೆಂದು ಭಾವಿಸಿ ತಮಗೂ ನೀಡಬೇಕೆಂದು ಕೇಳಿಕೊಂಡರು. ಸಾರಸ್ವತನು ದೇವಿಯನ್ನು ಪ್ರಾರ್ಥಿಸಿ ಅವರಿಗೆ ಶಾಕ (ಕಾಯಿ, ಪಲ್ಲೆ) ಗಳನ್ನು ಅನುಗ್ರಹಿಸುವಂತೆ ಮಾಡಿದನು. ಶಾಕಂಭರೀ ದೇವಿಯ ಅನುಗ್ರಹದಿಂದ ಋಷಿಗಳು ಬದುಕುಳಿದರು.

ದುರ್ಭಿಕ್ಷವು ಕಳೆಯಿತು. ಸುಭಿಕ್ಷವು ಬಂದಿತು. ಆದರೆ ಋಷಿಗಳಿಗೆ ತಾವು ಕಲಿತ ವೇದವೆಲ್ಲವೂ ಮರೆತುಹೋಗಿತ್ತು. ಆಗ ನಾರದಮಹರ್ಷಿಯ ಉಪದೇಶದ ಮಾತಿನಂತೆ ಆ ಋಷಿಗಳೆಲ್ಲರೂ ಪುನಃ ವೇದಾಧ್ಯಯನವನ್ನು ಹೊಸದಾಗಿ ಮಾಡುವ ಸಲುವಾಗಿ ಸಾರಸ್ವತಮುನಿಯ ಬಳಿಗೆ ಬಂದರು. ಸಾರಸ್ವತಮುನಿಯು ಅವರಿಗೆ ಸಕಲ ವೇದಗಳನ್ನೂ ಮತ್ತೊಮ್ಮೆ ಉಪದೇಶಿಸಿದನು. ವೇದದ ಎಲ್ಲ ಶಾಖೆಯವರೂ ತಮ್ಮ ತಮ್ಮ ಶಾಖೆಗಳನ್ನು ಅಧ್ಯಯನ ಮಾಡಿದರು. ಯಜುರ್ವೇದದ ಶಾಖೆಯವರು ಮಾತ್ರ ತಮ್ಮ ಶಾಖೆಯಲ್ಲಿ ಮಂತ್ರ-ಬ್ರಾಹ್ಮಣಗಳು ಮಿಶ್ರವಾದುದನ್ನು ಕಂಡು ಅದು ವೇದವೇ ಅಲ್ಲವೆಂದು ಸಾರಸ್ವತಮುನಿಗೆ ಹೇಳಿದರು. ಇದನ್ನು ಕೇಳಿ ಸಾರಸ್ವತನು

**ಯದ್ಯಯಂ ನ ಭವೇದ್ವೇದಃ ಪ್ರತಿಜ್ಞಾಂ ತು ಕರೋಮ್ಯಹಮ್ ।**
**ಅಗ್ನಿಪ್ರವೇಶನಂ ಕುರ್ಯಾಮ್ ....**

ನಾನು ಉಪದೇಶಿಸಿದುದು ವೇದವಲ್ಲವೆಂದಾದರೆ ಅಗ್ನಿಪ್ರವೇಶವನ್ನು ಮಾಡುತ್ತೇನೆಂದು ಪ್ರತಿಜ್ಞೆಯನ್ನು ಮಾಡುತ್ತಾನೆ. ಋಷಿಗಳೂ ಸಹ ಅದು ವೇದವಲ್ಲವೆಂದು ವಾದಿಸುತ್ತಾರೆ. ಅದರ ನಿರ್ಣಯಕ್ಕಾಗಿ ಅನೇಕ ಮುನಿಗಳನ್ನು ಕೇಳಿದರೂ ನಿರ್ಣಯವಾಗದೆ ಎಲ್ಲರೂ ಬ್ರಹ್ಮನ ಬಳಿ

2



ತೆರಳುತ್ತಾರೆ. ಬ್ರಹ್ಮದೇವನು ಆ ವಿಷಯಗಳೆಲ್ಲವನ್ನೂ ಕೇಳಿ ಸಾರಸ್ವತ ಮುನಿಯಿಂದ ಹೇಳಲ್ಪಟ್ಟ ವೇದಪಾಠವು ಪ್ರಾಮಾಣಿಕವಾದುದೆಂದೂ ಅವನ ಹೆಸರಿನಿಂದಲೇ ಆ ಪಾಠವು ಪ್ರಸಿದ್ಧವಾಗುವುದೆಂದೂ ತಿಳಿಸಿದನು. ಕೃಷ್ಣಯಜುರ್ವೇದದ ತೈತ್ತಿರೀಯಶಾಖೆಯಲ್ಲಿ ಪರಂಪರೆಯಿಂದ ನಡೆದು ಬಂದಿರುವ ಈ ಪಾಠವನ್ನು 'ಸಾರಸ್ವತ ಪಾಠ' ಎಂದು ಹೇಳುತ್ತಾರೆ. ತೈತ್ತಿರೀಯ ಶಾಖೆಯ ಈ ಸಾರಸ್ವತಪಾಠದಲ್ಲಿ ಮಂತ್ರ-ಬ್ರಾಹ್ಮಣಗಳ ಮಿಶ್ರಣವಿರುವಂತೆ ಕೃಷ್ಣಯಜುರ್ವೇದದ ಉಳಿದ ಶಾಖೆಗಳಾದ ಮೈತ್ರಾಯಣೀಯ ಮತ್ತು ಕಾಠಕ ಶಾಖೆಗಳಲ್ಲಿಯೂ ಮಂತ್ರ-ಬ್ರಾಹ್ಮಣಗಳ ಮಿಶ್ರಣವಿದೆ. ತೈತ್ತಿರೀಯ ಶಾಖೆಯ ಈ ಸಾರಸ್ವತಪಾಠದಲ್ಲಿರುವ ಪ್ರಪಾಠಕಗಳು ಮತ್ತು ಅಷ್ಟಕಗಳ ಸನ್ನಿವೇಶದ ಬಗ್ಗೆ ನಡೆದು ಬಂದಿರುವ ಪಾಠಕ್ರಮವನ್ನು ಬಿಟ್ಟು ಬೇರಾವ ಪ್ರಮಾಣವೂ ದೊರೆಯುವುದಿಲ್ಲ.[1]

## ಯಾಜ್ಞವಲ್ಕ್ಯರ ಮಂತ್ರದರ್ಶನ

ಯಜುರ್ವೇದದ ಶಾಖೆಗಳನ್ನು ವೈಶಂಪಾಯನರು ವ್ಯಾಸರಿಂದ ಪಡೆದು ಶಿಷ್ಯರಿಗೆ ಅಧ್ಯಾಪನ ಮಾಡುವ ಸಮಯದಲ್ಲಿ ಬ್ರಹ್ಮರಾತನ ಮಗನಾದ ಯಾಜ್ಞವಲ್ಕ್ಯನು ಅವರ ಬಳಿ ಅಧ್ಯಯನ ಮಾಡುತ್ತಿದ್ದನು. ಯಾಜ್ಞವಲ್ಕ್ಯನು ಸೂರ್ಯನ ಉಪಾಸನೆಯನ್ನು ಮಾಡಿ ಹೊಸದಾಗಿ ಪಡೆದ ಯಜುಸ್ಸುಗಳಿಂದ ಕೂಡಿದ ವೇದವೇ ಶುಕ್ಲಯಜುರ್ವೇದ. ಹೀಗೆ ಯಾಜ್ಞವಲ್ಕ್ಯರು ಮಂತ್ರದರ್ಶನವನ್ನು ಮಾಡಿದ ಪ್ರಸಂಗವು ವಿಷ್ಣುಪುರಾಣದಲ್ಲಿ ವರ್ಣಿತವಾಗಿದೆ. ಅಲ್ಲಿ ಬಂದಿರುವ ಪ್ರಸಂಗ ಹೀಗಿದೆ :

ವೈಶಂಪಾಯನರ ಬಳಿ ಯಾಜ್ಞವಲ್ಕ್ಯರು ಯಜುರ್ವೇದವನ್ನು ಅಧ್ಯಯನ ಮಾಡುತ್ತಿದ್ದರು. ಒಮ್ಮೆ ಮಹಾಮೇರುವಿನಲ್ಲಿ ನಡೆದ ಋಷಿಗಳ ಸಭೆಗೆ ವೈಶಂಪಾಯನರು ಹೋಗಲೇಬೇಕಿತ್ತು. ಆದರೆ ಅಕಸ್ಮಾತ್ತಾಗಿ ಆಶ್ರಮದಲ್ಲಿ ಅವರ ಸೋದರಿಯ ಮಗು ಅವರ ಕಾಲಿಗೆ ಸಿಕ್ಕಿ ಸತ್ತು ಹೋಯಿತು. ಆದರಿಂದ ಆವರಿಗೆ ಶಿಶುಹತ್ಯಾದೋಷವು ಒದಗಿ ಬಂದಿತು.

1. ಸಾರಸ್ವತಪಾಠಕ್ಕೂ, ಕಾಂಡಪಾಠಕ್ಕೂ ಇರುವ ವ್ಯತ್ಯಾಸಗಳನ್ನು ಮುಂದೆ ತೋರಿಸಲಾಗುವುದು.



ಋಷಿಗಳ ಸಭೆಗೆ ಹೋಗಬೇಕಾದುದು ಅತ್ಯಂತ ಅನಿವಾರ್ಯವಾದುದರಿಂದ ತಮಗೆ ಒದಗಿದ ದೋಷದ ನಿವೃತ್ತಿಗಾಗಿ ತಮ್ಮ ಸರವಾಗಿ ವ್ರತವನ್ನಾಚರಿಸಲು ತಮ್ಮ ಶಿಷ್ಯರಿಗೆ ವೈಶಂಪಾಯನರು ಹೇಳಿದರು. ಶಿಷ್ಯನಾದ ಯಾಜ್ಞವಲ್ಕ್ಯನು ಸಾಮರ್ಥ್ಯ ಸಾಲದ ಉಳಿದ ಶಿಷ್ಯರಿಗೆ ಕಷ್ಟವನ್ನು ಕೊಡುವುದು ಬೇಡವೆಂದುಕೊಂಡು ತಾನೇ ವ್ರತವನ್ನಾಚರಿಸುವೆನೆಂದು ಗುರುಗಳಿಗೆ ತಿಳಿಸಿದನು. ವೈಶಂಪಾಯನರು ಯಾಜ್ಞವಲ್ಕ್ಯನು ಉಳಿದ ಶಿಷ್ಯರನ್ನು ಅಸಮರ್ಥರೆಂದು ಅವಮಾನಿಸುತ್ತಿರುವನೆಂದು ತಪ್ಪಾಗಿ ಭಾವಿಸಿ ತಮ್ಮಿಂದ ಕಲಿತ ವೇದವೆಲ್ಲವನ್ನೂ ಕಕ್ಕಿಬಿಡುವಂತೆ ಕುಪಿತರಾಗಿ ನುಡಿದರು. ಯಾಜ್ಞವಲ್ಕ್ಯನೂ ಸಹ ತನ್ನ ಉದ್ದೇಶವನ್ನು ಗುರುಗಳು ಸರಿಯಾಗಿ ಗ್ರಹಿಸದೇ ಇದ್ದುದರಿಂದ ನೊಂದು ಅವರಿಂದ ಕಲಿತ ಮಂತ್ರಗಳೆಲ್ಲವನ್ನೂ ವಮನ ಮಾಡಿದನು. ಆ ವಮನ ಮಾಡಿದ ಯಜುಸ್ಸುಗಳನ್ನು ಇತರ ಶಿಷ್ಯರು ತಿತ್ತಿರಿ ಪಕ್ಷಿಗಳ ರೂಪದಿಂದ ಪರಿಗ್ರಹಿಸಿದರು.[1]

ಆದುದರಿಂದ ಈ ಶಾಖೆಗೆ ತೈತ್ತಿರೀಯಶಾಖೆ ಎಂಬ ಹೆಸರು ಬಂದಿತು. ವೈಶಂಪಾಯನರನ್ನು ಬಿಟ್ಟು ಹೊರಟ ಯಾಜ್ಞವಲ್ಕ್ಯರು ಭಗವಂತನಾದ ಸೂರ್ಯನನ್ನು ಕುರಿತು ಉಗ್ರವಾದ ತಪಸ್ಸನ್ನಾಚರಿಸಿದರು. ಪ್ರಾಣಾಯಾಮನಿಷ್ಠೆಯಿಂದ ತಪಸ್ಸನ್ನಾಚರಿಸುತ್ತಿದ್ದ ಯಾಜ್ಞವಲ್ಕ್ಯರಿಗೆ ಸೂರ್ಯನು ಪ್ರತ್ಯಕ್ಷನಾಗಿ ಅಯಾತಯಾಮವಾದ (ಇತರರಿಗೆ ಗೊತ್ತಿಲ್ಲದ) ಯಜುಸ್ಸುಗಳನ್ನು ಉಪದೇಶಿಸಿದನು. ಸೂರ್ಯನು ವಾಜಿ (ಅಶ್ವ)ಯ

---

1. ಮಂತ್ರಗಳನ್ನು ವಾಂತಿ ಮಾಡುವುದೆಂದರೆ ಪುನಃ ಉಚ್ಚರಿಸುವುದಿಲ್ಲವೆಂಬ ದೃಢಪ್ರತಿಜ್ಞೆ ಮಾಡಿದನೆಂಬುದೇ ಅರ್ಥ. ವಮನ ಮಾಡಿದ ಪದಾರ್ಥವನ್ನು ಪರಿಗ್ರಹಿಸುವುದು ಎಷ್ಟು ಅಸಂಭವವೋ ವೈಶಂಪಾಯನರಿಂದ ಕಲಿತ ಮಂತ್ರಗಳನ್ನು ಪುನಃ ಹೇಳುವುದೂ ಅಷ್ಟೇ ಅಸಂಭವ ಎಂದು ಅರ್ಥ. ಉಳಿದ ಶಿಷ್ಯರು ಪರಿಗ್ರಹಿಸಿದರೆಂದರೆ ಆ ಯಾಜ್ಞವಲ್ಕ್ಯನು ಬಿಟ್ಟ ಮಂತ್ರಗಳನ್ನು ಅವರು ಮುಂದುವರಿಸಿಕೊಂಡು ಬಂದರೆಂದರ್ಥ. ಪುರಾಣಗಳಲ್ಲಿ ವಿಷಯವನ್ನು ನಿರೂಪಿಸುವಾಗ ಆಲಂಕಾರಿಕವಾಗಿ ಹೇಳುವುದುಂಟು. ಇಲ್ಲಿಯೂ ಜಿಗುಪ್ಸೆಯನ್ನೂ ಅಸಂಭವವನ್ನೂ ದೃಢವಾಗಿ ತಿಳಿಸಲು ಈ ರೀತಿ ಪುರಾಣವು ಹೇಳುತ್ತದೆ. ಶಬ್ದಗಳು ಪದಾರ್ಥಗಳಲ್ಲವಾದುದರಿಂದ ಅವುಗಳನ್ನು ವಾಂತಿ ಮಾಡಿದನೆಂಬ ನೇರವಾದ ಅರ್ಥವು ಎಷ್ಟು ಮಾತ್ರಕ್ಕೂ ಹೊಂದಿಕೆಯಾಗುವುದಿಲ್ಲ.



ರೂಪದಲ್ಲಿ ಈ ಯಜುಸ್ಸುಗಳನ್ನು ಉಪದೇಶಿಸಿದುದರಿಂದ ಆ ಶಾಖೆಗೆ 'ವಾಜಸನೇಯ' ಎಂದು ಕರೆಯುತ್ತಾರೆ. ಈ ಯಜುಸ್ಸುಗಳಲ್ಲಿ ಮಂತ್ರ-ಬ್ರಾಹ್ಮಣಗಳ ಮಿಶ್ರಣವಿಲ್ಲವಾದುದರಿಂದ ಇದು 'ಶುಕ್ಲಯಜುರ್ವೇದ' ಎನ್ನಿಸಿದೆ.[1]

ಯಜುರ್ವೇದತರೋಃ ಶಾಖಾಃ ಸಪ್ತವಿಂಶನ್ಮಹಾಮುನಿಃ ।
ವೈಶಂಪಾಯನನಾಮಾಸೌ ವ್ಯಾಸಶಿಷ್ಯಶ್ಚಕಾರ ವೈ ॥೧॥
ಶಿಷ್ಯಾನಾಹ ಸ ಭೋಃ ಶಿಷ್ಯಾ ಬ್ರಹ್ಮಹತ್ಯಾಪಹಂ ವ್ರತಮ್ ।
ಚರಧ್ವಂ ಮತ್ಕೃತೇ ಸರ್ವೇ ನ ವಿಚಾರ್ಯಮಿದಂ ತಥಾ ॥೬॥
ತತಃ ಕ್ರುದ್ಧೋ ಗುರುಃ ಪ್ರಾಹ ಯಾಜ್ಞವಲ್ಕ್ಯಂ ಮಹಾಮುನಿಮ್ ।
ಮುಚ್ಯತಾಂ ಯತ್ತ್ವಯಾಧೀತಂ ಮತ್ತೋ ವಿಪ್ರಾವಮಾನಕ ॥೮॥
ಇತ್ಯುಕ್ತೋ ರುಧಿರಾಕ್ತಾನಿ ಸರೂಪಾಣಿ ಯಜೂಂಷಿ ಸಃ ।
ಛರ್ದಯಿತ್ವಾ ದದೌ ತಸ್ಮೈ ಯಯೌ ಸ ಸ್ವೇಚ್ಛಯಾ ಮುನಿಃ ॥
ಏವಮುಕ್ತೋ ದದೌ ತಸ್ಮೈ ಯಜೂಂಷಿ ಭಗವಾನ್ ರವಿಃ ।
ಅಯಾತಯಾಮಸಂಜ್ಞಾನಿ ಯಾನಿ ವೇತ್ತಿ ನ ತದ್ಗುರುಃ ॥೨೫॥
........ಯಾಜ್ಞವಲ್ಕ್ಯಾಃ ಪ್ರಕೀರ್ತಿತಾಃ ॥೨೯॥

—ವಿಷ್ಣುಪುರಾಣ ೩-೫

ಶುಕ್ಲಯಜುರ್ವೇದವು ಯಾತಯಾಮವಿಲ್ಲದ್ದು (ಮಂತ್ರ-ಬ್ರಾಹ್ಮಣಗಳ ಮಿಶ್ರಣವಿಲ್ಲದ್ದು) ಎಂದು 'ಚರಣವ್ಯೂಹ'ದಲ್ಲಿ ಬರುವ ಈ ವಾಕ್ಯವು ತಿಳಿಸುತ್ತದೆ.

ಸತ್ವಪ್ರಧಾನಾಚ್ಛುಕ್ಲಾಖ್ಯೋ ಯಾತಯಾಮವಿವರ್ಜಿತಾತ್ ।

1. ವೇದವ್ಯಾಸರು ವೈಶಂಪಾಯನರಿಗೆ ಬೋಧಿಸಿದ ಯಜುರ್ವೇದದ ಶಾಖೆಯಲ್ಲಿ ಮಂತ್ರ-ಬ್ರಾಹ್ಮಣಗಳ ಮಿಶ್ರಣದಿಂದ ಕೂಡಿದ ಸಾರಸ್ವತಪಾಠವು ಇದ್ದುದರಿಂದ ಯಾಜ್ಞವಲ್ಕ್ಯರು ಅದನ್ನು ಬಿಟ್ಟು ಮಂತ್ರದರ್ಶನದ ಸಾಮರ್ಥ್ಯವಿದ್ದುದರಿಂದ ಸೂರ್ಯನನ್ನು ಉಪಾಸಿಸಿ ಅಯಾತಯಾಮ (ಮಂತ್ರ-ಬ್ರಾಹ್ಮಣಗಳ ಮಿಶ್ರಣವಿಲ್ಲದ) ಶುಕ್ಲಯಜುಸ್ಸುಗಳನ್ನು ಪಡೆದರು ಎಂಬುದು ಈ ಆಖ್ಯಾನದ ಸಾರಾಂಶವೆಂದು ಮಹರ್ಷಿ ದೈವರಾತರು ಅಭಿಪ್ರಾಯಪಡುತ್ತಾರೆ.



## ಆಚಾರ್ಯ ತಿತ್ತಿರಿ

ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಗೆ 'ತೈತ್ತಿರೀಯ' ಎಂದು ಹೆಸರು ಬರಲು ಇನ್ನೊಂದು ಕಾರಣವಿದೆ. ತಿತ್ತಿರಿ ಎಂಬುದು ಒಬ್ಬ ಋಷಿಯ ಹೆಸರು. ಆತನಿಂದ ಪ್ರವಚನ ಮಾಡಲ್ಪಟ್ಟ ಯಜುರ್ವೇದದ ಶಾಖೆಯಾದುದರಿಂದ ಈ ಶಾಖೆಗೆ 'ತೈತ್ತಿರೀಯ' ಎಂಬ ಹೆಸರು ಬಂದಿದೆ.

**ತೇನ ಪ್ರೋಕ್ತಮ್ ।**

—ಪಾಣಿನಿಯ ಸೂತ್ರ ೪-೩-೧೦೧

ಅವನಿಂದ ಹೇಳಲ್ಪಟ್ಟದ್ದು ಎಂಬ ಅರ್ಥದಲ್ಲಿ

**ತಿತ್ತಿರಿ-ವರತಂತು....ಖಂಡಿಕೋಖಾಚ್ಛಣ್ ।**

—ಪಾಣಿನಿಯ ಸೂತ್ರ ೪-೩-೧೦೨

ಎಂಬ ಸೂತ್ರದಿಂದ ತಿತ್ತಿರಿ ಎಂಬ ಶಬ್ದದ ಮೇಲೆ 'ಛಣ್' ಪ್ರತ್ಯಯವನ್ನು ಹೇಳಲಾಗಿದೆ. ಇದರಿಂದ ತೈತ್ತಿರೀಯ ಎಂಬ ಶಬ್ದವು ಋಷಿಯ ಮೂಲಕವಾಗಿ ಬಂದಿದೆಯೆಂಬುದು ಉಚಿತವಾಗಿ ತೋರುತ್ತದೆ. ಈ ತಿತ್ತಿರಿ ಮಹರ್ಷಿಯ ಹೆಸರು 'ಕಾಂಡಾನುಕ್ರಮಣಿಕೆ'ಯಲ್ಲಿಯೂ ಉಲ್ಲೇಖವಾಗಿದೆ.

**ವೈಶಂಪಾಯನೋ ಯಾಸ್ಕಾಯೈತಾಂ ಶಾಖಾಂ ಪ್ರಾಹ ಪೈಂಗಯೇ ।**
**ಯಾಸ್ಕಃ ಪೈಂಗಿಸ್ತಿತ್ತಿರಯೇ ಉಖಾಯ ಪ್ರಾಹ ತಿತ್ತಿರಿಃ ॥**
**ಉಖಃ ಶಾಖಾಮಿಮಾಂ ಪ್ರಾಹ ಆತ್ರೇಯಾಯ ಯಶಸ್ವಿನೇ ।**
**ತೇನ ಶಾಖಾ ಪ್ರಣೀತೇಯಮಾತ್ರೇಯೀ ಇತಿ ಪ್ರೋಚ್ಯತೇ[1] ॥**

---

1. ತೈತ್ತಿರೀಯಸಂಹಿತೆಯ ಭಟ್ಟಭಾಸ್ಕರಭಾಷ್ಯದಲ್ಲಿ ಪ್ರಾರಂಭದಲ್ಲಿಯೇ ಈ ಋಷಿಗಳ ಹೆಸರನ್ನು ಹೇಳಿ ಈ ಋಷಿಗಳನ್ನು ವೇದಾಧ್ಯಯನ ಮಾಡುವವರು ಸ್ಮರಿಸಬೇಕೆಂದು ಹೇಳಿದೆ.

"ಏತಾನೃಷೀನ್ ಯಜುರ್ವೇದೇ ಯಃ ಪಠೇತ್ತು ಸ ವೇದವಿತ್ ।
ಋಷೀಣಾಮೇತಿ ಸಾಲೋಕ್ಯಂ ಸ್ವಯಂಭೋರೇತಿ ಸಾಮ್ಯತಾಮ್ ॥



ವ್ಯಾಸರ ಶಿಷ್ಯನಾದ ವೈಶಂಪಾಯನನು ಪಿಂಗನ ಮಗನಾದ ಯಾಸ್ಕನಿಗೂ, ಯಾಸ್ಕನು ತಿತ್ತಿರಿಗೂ, ತಿತ್ತಿರಿಯು ಉಖನಿಗೂ, ಉಖನು ಆತ್ರೇಯನಿಗೂ ಈ ಶಾಖೆಯನ್ನು ಉಪದೇಶಿಸಿದರು. ಆತ್ರೇಯನೇ ಈ ಶಾಖೆಯ ಮಂತ್ರಗಳಿಗೆ ಪದವಿಭಾಗವನ್ನು ಮಾಡಿದುದರಿಂದ ಈ ಶಾಖೆಯನ್ನು 'ಆತ್ರೇಯೀ' ಎಂದು ಕರೆಯುತ್ತಾರೆ.

ಕೃಷ್ಣಯಜುರ್ವೇದದ ಉಳಿದ ಶಾಖೆಗಳಾದ ಮೈತ್ರಾಯಣೀಯ, ಕಾಠಕ ಇವುಗಳಿಗೂ ಋಷಿಗಳ ಮೂಲಕವಾಗಿಯೇ ಆಯಾ ಹೆಸರುಗಳು ಬಂದಿರುವುದರಿಂದ ಈ ಶಾಖೆಗೂ ಋಷಿಯ ಮೂಲಕವಾಗಿಯೇ ಹೆಸರು ಬಂದಿದೆಯೆಂದು ತಿಳಿಯುವುದು ಸೂಕ್ತವಾಗಿಯೇ ಇದೆ.

## ವೇದವು 'ಯಾತಯಾಮ' ಏಕೆ? ನಿವೃತ್ತಿ ಹೇಗೆ?

ಯಾತಯಾಮ ಎಂಬ ಶಬ್ದಕ್ಕೆ—'ಯಾತಯಾಮಂ ಗತರಸಮ್' ಎಂಬ ಕೋಶದ ಮಾತಿನಂತೆ—ಸಾರವಿಲ್ಲದ್ದು ಎಂದರ್ಥ. ವೇದವು ಯಾತಯಾಮವಾದುದರಿಂದ ಅಯಾತಯಾಮವಾದ ಯಜುಸ್ಸುಗಳನ್ನು ಸೂರ್ಯನು ಯಾಜ್ಞವಲ್ಕ್ಯನಿಗೆ ಇತ್ತನೆಂದು ಹಿಂದೆ ಉಲ್ಲೇಖಿಸಲಾಗಿದೆ. ವೇದವೂ ಸಹ ಸಾರವಿಲ್ಲದಂತೆ ಆಗಬಹುದೇ? ಎಂಬ ಸಂದೇಹ ಮೂಡದಿರದು. ಆದರೆ ವೇದಮಂತ್ರಗಳನ್ನು ಹೇಗೆ ಹೇಳಬೇಕೋ ಹಾಗೆ ಹೇಳದಿದ್ದರೆ, ಹೇಗೆ ತಿಳಿಯಬೇಕೋ ಹಾಗೆ ತಿಳಿಯದಿದ್ದರೆ ವೇದವೂ ಸಹ ಯಾತಯಾಮವಾಗುತ್ತದೆ.

**ಯೋ ಹ ವಾ ಅವಿದಿತಾರ್ಷೇಯಚ್ಛಂದೋಬ್ರಾಹ್ಮಣೇನ ಮಂತ್ರೇಣ ಯಾಜಯತಿ ವಾಧ್ಯಾಪಯತಿ ವಾ ಸ್ಥಾಣುಂ ವರ್ಛತಿ ಗರ್ತಂ ವಾ ಪದ್ಯತೇ........ಯಾತಯಾಮಾನ್ಯಸ್ಯ ಛಂದಾಂಸಿ ಭವಂತಿ ||**

—ಛಂದೋಗಬ್ರಾಹ್ಮಣ.

ಯಾವ ಋತ್ವಿಜನು ಮಂತ್ರಗಳ ಋಷಿಗಳನ್ನೂ, ದೇವತೆಗಳನ್ನೂ, ಛಂದಸ್ಸನ್ನೂ, ವಿನಿಯೋಗವಾಕ್ಯಗಳಾದ ಬ್ರಾಹ್ಮಣವನ್ನೂ ತಿಳಿಯದೆ ಯಾಗವನ್ನು ಮಾಡಿಸುತ್ತಾನೆಯೋ ಅಥವಾ ಅಧ್ಯಾಪನವನ್ನು ಮಾಡಿಸುತ್ತಾನೆಯೋ ಅವನ ಪಾಲಿಗೆ ವೇದಗಳು ಯಾತಯಾಮಗಳೇ. ಆದ್ದರಿಂದ



ಪ್ರತಿಯೊಂದು ಮಂತ್ರಕ್ಕೂ ಇವೆಲ್ಲವನ್ನೂ ತಿಳಿಯಬೇಕು. ಹೀಗೆ ಮಂತ್ರಗಳಿಗೆ ಋಷಿ, ದೇವತೆ ಇತ್ಯಾದಿಗಳನ್ನು ತಿಳಿಯುವುದು ಅತ್ಯವಶ್ಯಕವಾಗಿದೆ. ತೈತ್ತಿರೀಯ ಶಾಖೆಯಲ್ಲಿ ಮಂತ್ರ-ಬ್ರಾಹ್ಮಣಗಳಿಗೆ ಮಿಶ್ರಣವಿರುವ ಸಾರಸ್ವತಪಾಠವೇ ಅನೂಚಾನವಾಗಿ ಬಂದಿರುವುದರಿಂದ ಬೋಧಾಯನರೇ ಮೊದಲಾದ ಮಹರ್ಷಿಗಳು ಆ ಪಾಠವನ್ನು ಅಂಗೀಕರಿಸಿರುವುದರಿಂದ ಆ ಪಾಠಕ್ರಮವನ್ನು ಉಲ್ಲಂಘಿಸುವಂತಿಲ್ಲ. ಹೀಗಾಗಿ ಸಾರಸ್ವತಪಾಠದಲ್ಲಿ ಋಷಿ-ದೇವತೆಗಳ ವಿಭಾಗವು ಒಡನೆಯೇ ತಿಳಿಯದೆ ಯಾತಯಾಮತೆಯು ಒದಗುತ್ತದೆ. ಭಗವಾನ್ ಬೋಧಾಯನರೂ, ಆಪಸ್ತಂಬರೂ ಈ ಯಾತಯಾಮತೆಯನ್ನು ತಪ್ಪಿಸಲು ಕಾಂಡವಿಭಾಗವನ್ನು ಮಾಡಿಕೊಟ್ಟಿದ್ದಾರೆ. ಅವರು ಮಾಡಿಕೊಟ್ಟಿರುವ ಪ್ರಾಜಾಪತ್ಯ ಮುಂತಾದ ಕಾಂಡಗಳ ವಿಭಾಗವನ್ನು ನಾವು ತಿಳಿಯುವುದರಿಂದ ಸಾರಸ್ವತಪಾಠದಿಂದ ಕೂಡಿರುವ ತೈತ್ತಿರೀಯ ಶಾಖೆಯ ಮಂತ್ರಗಳಿಗೆ ಯಾತಯಾಮತೆಯು ಉಂಟಾಗುವುದಿಲ್ಲ.

**ಅಪಿ ಸಾರಸ್ವತೇ ಪಾಠೇ ಜ್ಞಾನಮಾತ್ರಮಿಹೇಷ್ಯತೇ ।**

ಅನೂಚಾನವಾಗಿ ಸಾರಸ್ವತಪಾಠಕ್ರಮದಂತೆ ಅಧ್ಯಯನ ಮಾಡಿದರೂ ಸಹ ಕಾಂಡರ್ಷಿ, ಯಜುಶ್ಛಂದ ಮತ್ತು ಆಯಾ ಮಂತ್ರಗಳ ದೇವತೆಗಳನ್ನು ತಿಳಿಯುವ ಮಾತ್ರದಿಂದಲೇ ಯಾತಯಾಮತೆಯು ಉಂಟಾಗುವುದಿಲ್ಲ.

'ಸಂಸ್ಕಾರರತ್ನಮಾಲಾ' ಗ್ರಂಥದಲ್ಲಿ ಕಾತ್ಯಾಯನನು ವೇದಗಳಿಗೆ ಯಾತಯಾಮತೆಯು ಒದಗುವ ಇನ್ನೊಂದು ರೀತಿಯನ್ನೂ, ಅದನ್ನು ತಪ್ಪಿಸುವ ಕ್ರಮವನ್ನೂ ಹೇಳಿದ್ದಾನೆ.

**ಅಸ್ಥಾನೋಚ್ಛ್ವಾಸವಿಚ್ಛೇದೋ ಘೋಷಣಾಧ್ಯಾಪನಾದಿಷು ।**
**ಪ್ರಾಮಾದಿಕಃ ಶ್ರುತೌ ಯಃ ಸ್ಯಾತ್ ಯಾತಯಾಮತ್ವಕಾರಿ ಸಃ ॥**

ವೇದಘೋಷವನ್ನು ಮಾಡುವಾಗಲೂ, ವೇದವನ್ನು ಅಧ್ಯಾಪನ ಮಾಡುವಾಗಲೂ ಅರ್ಥಕ್ಕೆ ಅನುಗುಣವಾಗದಂತೆ ಪದಗಳನ್ನು ನಿಲ್ಲಿಸುವುದರಿಂದಲೂ, ವೇದದ ವಿಷಯದಲ್ಲಿ ಪ್ರಮಾದವಾದಂತಾಗಿ ಅದು ವೇದಗಳಿಗೆ ಯಾತಯಾಮತೆಯನ್ನು ತರುತ್ತದೆ. ಇದನ್ನು ಹೋಗಲಾಡಿಸಲು



**ಪ್ರತ್ಯಬ್ದಂ ಯದುಪಾಕರ್ಮ ಸೋತ್ಸರ್ಗಂ ವಿಧಿವದ್ದ್ವಿಜೈಃ ।**
**ಕ್ರಿಯತೇ ಛಂದಸಾಂ ತೇನ ಪುನರಾಪ್ಯಾಯನಂ ಭವೇತ್ ॥**

ವಿಧಿಯನ್ನರಿತು ಪ್ರತಿವರ್ಷವೂ ಮಾಡುವ ಉತ್ಸರ್ಜನ–ಉಪಾಕರ್ಮಗಳಿಂದ ವೇದಗಳು ಇನ್ನೊಮ್ಮೆ ಮೈದುಂಬಿದಂತಾಗುತ್ತವೆ. ಆದುದರಿಂದಲೇ ಉಪಾಕರ್ಮದ ಅನುಷ್ಠಾನಸಂದರ್ಭದಲ್ಲಿ "ಅಧೀತಾನಾಂ ಛಂದಸಾಂ ಆಯಾತಯಾಮತ್ವಾಯ ಅಧ್ಯೇಷ್ಯಮಾಣಾನಾಂ ಸವೀರ್ಯತ್ವಾಯ" ಎಂದು ಸಂಕಲ್ಪವನ್ನು ಮಾಡಲಾಗುತ್ತದೆ. ಹೀಗೆ ಸತ್ತ್ವಯುತವಾಗಿರುವ ಮಂತ್ರಗಳಿಂದಲೇ ಕರ್ಮಾನುಷ್ಠಾನವನ್ನು ಮಾಡಬೇಕು.

**ಅಯಾತಯಾಮೈಃ ಛಂದೋಭಿಃ ಯತ್ಕರ್ಮ ಕ್ರಿಯತೇ ದ್ವಿಜೈಃ ।**
**ಕ್ರೀಡಮಾನೈರಪಿ ಸದಾ ತತ್ತೇಷಾಂ ಸಿದ್ಧಿಕಾರಕಮ್[1] ॥**

ಸತ್ತ್ವಯುತವಾಗಿರುವ ವೇದಮಂತ್ರಗಳಿಂದ ಕರ್ಮಾನುಷ್ಠಾನವನ್ನು ಮಾಡಿದರೆ ಆಡುತ್ತಾ ಅನುಷ್ಠಾನವನ್ನು ಮಾಡಿದರೂ ಮಂತ್ರಗಳು ಸಿದ್ಧಿಯನ್ನುಂಟು ಮಾಡುತ್ತವೆ.

## ತೈತ್ತಿರೀಯ ಶಾಖೆಯ ಪರಿಮಾಣ

ಚರಣವ್ಯೂಹ ಗ್ರಂಥದಲ್ಲಿ ತೈತ್ತಿರೀಯಶಾಖೆಯ ಮಂತ್ರಗಳ ಸಂಖ್ಯೆಯ ಬಗ್ಗೆ ಹೀಗೆ ಹೇಳಲಾಗಿದೆ.

**ತೇಷಾಮಧ್ಯಯನಮ್ ಅಷ್ಟಾದಶ ಯಜುಸ್ಸಹಸ್ರಾಣಿ ।**

ತೈತ್ತಿರೀಯಶಾಖೆಯ ಅಧ್ಯಯನವೆಂದರೆ ಹದಿನೆಂಟು ಸಾವಿರ ಯಜುಸ್ಸುಗಳ ಅಧ್ಯಯನ.[2] ಚರಣವ್ಯೂಹದ ಭಾಷ್ಯಕಾರನಾದ ಆಚಾರ್ಯ ಮಹಿದಾಸನು ಈ ಶಾಖೆಯ ಪರಿಮಾಣದ ಬಗ್ಗೆ ಹೀಗೆ ಹೇಳಿದ್ದಾನೆ.

---

1. ಉಪಾಕರ್ಮವು ಪ್ರಶಸ್ತವೆಂದೂ ಅದನ್ನು ತಪ್ಪದೇ ಅನುಷ್ಠಿಸಬೇಕೆಂಬುದು ಇಲ್ಲಿಯ ತಾತ್ಪರ್ಯ.

2. ಈ ಸಂಖ್ಯೆಯು ತೈತ್ತಿರೀಯ ಶಾಖೆಯದೇ ಎಂಬುದು ಸಂದಿಗ್ಧವಾಗಿದೆ.



ಕಾಂಡಾಸ್ತು ಸಪ್ತ ವಿಜ್ಞೇಯಾಃ ಪ್ರಶ್ನಾಶ್ಚಾಧಿಕ್ಯಕಾಶ್ಚತುಃ ।
ಚತ್ವಾರಿಂಶತ್ತು ವಿಜ್ಞೇಯಾ ಅನುವಾಕಾಃ ಶತಾನಿ ಷಟ್ ॥ ೧ ॥

ಏಕಪಂಚಾಶದಧಿಕಾಃ ಸಂಖ್ಯಾಃ ಪಂಚಾಶದುಚ್ಯತೇ ।
ದ್ವಿಸಹಸ್ರಂಚೈಕಶತಮಷ್ಟಾನವತಿ ಚಾಧಿಕಾ ॥ ೨ ॥

ಲಕ್ಷೈಕಂ ತು ದ್ವಿನವತಿಸಹಸ್ರಾಣಿ ಪ್ರಕೀರ್ತಿತಮ್ ।
ಪದಾನಿ ನವತಿಶ್ಚೈವ ತಥೈವಾಕ್ಷರಮುಚ್ಯತೇ ॥ ೩ ॥

ಲಕ್ಷದ್ವಯಂ ತ್ರಿಪಂಚಾಶತ್ಸಹಸ್ರಾಣಿ ಶತಾಷ್ಟಕಮ್ ।
ಅಷ್ಟಷಷ್ಟ್ಯಧಿಕಂ ಚೈವ ಯಜುರ್ವೇದಪ್ರಮಾಣಕಮ್ ॥ ೪ ॥

ಯಜುರ್ವೇದದ ಈ ತೈತ್ತಿರೀಯಶಾಖೆಯಲ್ಲಿ 7 ಕಾಂಡಗಳಿರುತ್ತವೆ, 44 ಪ್ರಶ್ನೆಗಳಿರುತ್ತವೆ, 651 ಅನುವಾಕಗಳಿರುತ್ತವೆ, 2198 ಹನಸ್ಸುಗಳಿರುತ್ತವೆ, 1,92,090 ಪದಗಳಿರುತ್ತವೆ ಮತ್ತು 2,53,868 ಅಕ್ಷರಗಳಿರುತ್ತವೆ. ಹಾಗೆಯೇ

ಶಾಖಾವಾಕ್ಯಾನ್ಯಯುತಾನಿ ಸಹಸ್ರಾಣಿ ನವಾನಿ ಚ ।
ಚತುಃಶತಾನ್ಯಶೀತಿಶ್ಚ ಅಷ್ಟೌ ವಾಕ್ಯಾನಿ ಗಣ್ಯತೇ[1] ॥

ತೈತ್ತಿರೀಯಬ್ರಾಹ್ಮಣ ಗ್ರಂಥದಲ್ಲಿ 19,488 ವಾಕ್ಯಗಳಿವೆ ಎಂದು ಪರಿಗಣಿಸಿದ್ದಾನೆ.

## ತೈತ್ತಿರೀಯ ಶಾಖೆಯ ಅಧ್ಯಯನ ಕ್ರಮ

ತೈತ್ತಿರೀಯ ಶಾಖೆಯ ಅಧ್ಯಯನವನ್ನು ಸಾರಸ್ವತಪಾಠಕ್ರಮದಲ್ಲಿಯೇ ಮಾಡಲಾಗುತ್ತಿದೆ. ಈ ಸಾರಸ್ವತಪಾಠವು ಪರಂಪರೆಯಲ್ಲಿ ಬಂದ ಬಗ್ಗೆ ಇತಿಹಾಸವನ್ನು ಹಿಂದೆಯೇ ತಿಳಿಸಲಾಗಿದೆಯಷ್ಟೆ. ಈ

1. ಮಹಿದಾಸನು ತನ್ನ ಚರಣವ್ಯೂಹಭಾಷ್ಯದಲ್ಲಿ ಹೀಗೆ ಪರಿಗಣಿಸಿದ್ದರೂ, ತೈತ್ತಿರೀಯ ಸಂಹಿತೆಯಲ್ಲಿ ಕಾಂಡ, ಪ್ರಶ್ನೆ, ಅನುವಾಕ ಮತ್ತು ಹನಸ್ಸುಗಳ ಸಂಖ್ಯೆಯು ಸರಿ ಇದ್ದರೂ, ಪದಗಳ ಸಂಖ್ಯೆಯು ಮಾತ್ರ 1,09,308 ಇರುವುದು ಕಂಡುಬರುತ್ತದೆ. ಹೀಗೆಯೇ ಬ್ರಾಹ್ಮಣವಾಕ್ಯದಲ್ಲಿಯೂ ಸಂಖ್ಯೆಯಲ್ಲಿ ವ್ಯತ್ಯಾಸ ಇದೆ.



ಸಾರಸ್ವತ ಪಾಠದಲ್ಲಿ ಮಂತ್ರ–ಬ್ರಾಹ್ಮಣ ಮತ್ತು ಪ್ರಕರಣಗಳು ಪರಸ್ಪರ ಸಂಕೀರ್ಣವಾಗಿವೆ. ಹೀಗಾಗಿ ಪ್ರಚಲಿತವಾದ ಸಾರಸ್ವತಪಾಠಕ್ರಮದಂತೆ ಅಧ್ಯಯನವನ್ನು ಮಾಡಿದರೂ ಸಹ ಮಂತ್ರಗಳ ವಿನಿಯೋಗವನ್ನು ಸ್ಫುಟ ವಾಗಿ ಅರಿಯಬೇಕಾದರೆ ಪ್ರಕರಣವನ್ನನುಸರಿಸಿದ ಕಾಂಡಗಳ ವಿಭಾಗವನ್ನು ಅರಿಯುವುದು ಅತ್ಯವಶ್ಯಕವಾಗಿದೆ.

### ಕಾಂಡ ವಿಭಾಗ

ತೈತ್ತಿರೀಯ ಶಾಖೆಯಲ್ಲಿ ಒಂಬತ್ತು ಕಾಂಡಗಳು ಇವೆ. ಅವು
1) ಪ್ರಾಜಾಪತ್ಯಕಾಂಡ 2) ಸೌಮ್ಯಕಾಂಡ 3) ಆಗ್ನೇಯಕಾಂಡ 4) ವೈಶ್ವದೇವಕಾಂಡ 5) ಸ್ವಾಯಂಭುವಕಾಂಡ 6) ಅರುಣಕಾಂಡ 7) ಸಾಂಹಿತ್ಯದೇವತಾಉಪನಿಷತ್‌ಕಾಂಡ 8) ವಾರುಣ್ಯದೇವತಾ ಉಪನಿಷತ್‌ಕಾಂಡ 9) ಯಾಜ್ಞಿಕ್ಯದೇವತಾ ಉಪನಿಷತ್‌ಕಾಂಡ.

ಹಿರಣ್ಯಕೇಶೀಯ ಸೂತ್ರಾನುಸಾರವಾಗಿ ಈ ರೀತಿ ಒಂಬತ್ತು ಕಾಂಡ ಗಳನ್ನಾಗಿ ವಿಂಗಡಿಸಲಾಗಿದೆ. ಪ್ರಜಾಪತಿ ಮುಂತಾದ ಋಷಿಗಳಿಂದ ಕಂಡು ಕೊಂಡ ಮಂತ್ರಗಳಿಂದ ಕೂಡಿದ ಕಾಂಡಗಳಾದುದರಿಂದ ಆಯಾ ಋಷಿಗಳ ಹೆಸರೇ ಆಯಾ ಕಾಂಡಗಳಿಗೆ ಬಂದಿದೆ. ಕಾಂಡವೆಂದರೆ ವಿಭಾಗ ಎಂದರ್ಥ ತೈತ್ತಿರೀಯ ಶಾಖೆಯ ಈ ಕಾಂಡ ವಿಭಾಗಕ್ರಮದಲ್ಲಿ ಮೂರು ನಾಲ್ಕು ಮತಗಳಿವೆ. ಸಾಂಹಿತ್ಯ ಮೊದಲಾದ ಮೂರು ಉಪನಿಷತ್ ಕಾಂಡಗಳನ್ನು ವೈಶ್ವದೇವಕಾಂಡದಲ್ಲಿಯೇ ಸೇರಿಸಿ ಪ್ರಾಜಾಪತ್ಯ, ಸೌಮ್ಯ, ಆಗ್ನೇಯ, ವೈಶ್ವದೇವ, ಅರುಣ ಮತ್ತು ಸ್ವಾಯಂಭುವಗಳೆಂಬ ಆರು ಕಾಂಡಗಳೆಂದು ಒಂದು ಮತ. ಭಗವಾನ್ ಬೋಧಾಯನರು ಅರುಣಕಾಂಡವನ್ನು ಆಗ್ನೇಯ ಕಾಂಡದಲ್ಲಿಯೇ ಅಂತರ್ಗತಗೊಳಿಸಿ ಪ್ರಾಜಾಪತ್ಯ, ಸೌಮ್ಯ, ಆಗ್ನೇಯ, ವೈಶ್ವದೇವ ಮತ್ತು ಸ್ವಾಯಂಭುವಗಳೆಂಬ ಐದು ಕಾಂಡ ಗಳೆಂದು ತಿಳಿಸಿರುತ್ತಾರೆ. ಆಪಸ್ತಂಬರು ಸ್ವಾಯಂಭುವಕಾಂಡವನ್ನು ವೈಶ್ವ ದೇವಕಾಂಡದಲ್ಲಿಯೇ ಅಂತರ್ಗತಗೊಳಿಸಿ ಪ್ರಾಜಾಪತ್ಯ, ಸೌಮ್ಯ, ಆಗ್ನೇಯ ಮತ್ತು ವೈಶ್ವದೇವಗಳೆಂಬ ನಾಲ್ಕೇ ಕಾಂಡಗಳೆಂದು ಹೇಳು ತ್ತಾರೆ. ಈ ಕಾಂಡರ್ಷಿಗಳ ಬಗ್ಗೆ ಕಾಂಡಾನುಕ್ರಮಣಿಕೆಯಲ್ಲಿ ಹೀಗೆ ಹೇಳಲಾಗಿದೆ,



**ಅಥ ಕಾಂಡಋಷೀನ್ ಏತಾನ್ ಉದಕಾಂಜಲಿಭಿಃ ಶುಚಿಃ ।**
**ಅವ್ಯಗ್ರಸ್ತರ್ಪಯೇನ್ನಿತ್ಯಮ್ ಅನ್ನೈಃ ಪರ್ವಾಷ್ಟಮೀಷು ಚ ॥೧॥**
**ಕಾಂಡೋಪಾಕರಣೇಷ್ವೇತಾನ್ ಪುರಸ್ತಾತ್ ಸದಸಸ್ಪತೇಃ ।**
**ಜುಹುಯಾತ್ ಕಾಂಡಸಮಾಪ್ತೌ ಚ ಶ್ರುತಿರೇಷಾ ಸನಾತನೀ ॥೨॥**

**ಈ ಕಾಂಡಋಷಿಗಳಿಗೆ ನಿತ್ಯವೂ ಜಲತರ್ಪಣವನ್ನು ಕೊಡಬೇಕು. ಪರ್ವಕಾಲದಲ್ಲಿಯೂ ಅಷ್ಟಮಿಯಲ್ಲಿಯೂ ಈ ಋಷಿಗಳಿಗಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಕಾಂಡೋಪಾಕರಣದಲ್ಲಿ ಸದಸಸ್ಪತಿಯ ಹೋಮಕ್ಕೆ ಮೊದಲು ಈ ಋಷಿಗಳನ್ನುದ್ದೇಶಿಸಿ ಹೋಮವನ್ನು ಮಾಡಬೇಕು. ಕಾಂಡಸಮಾಪ್ತಿಯಲ್ಲಿಯೂ ಹಾಗೆಯೇ ಹೋಮವನ್ನು ಮಾಡಬೇಕು. ಇದು ಸನಾತನ ಶ್ರುತಿ[1]. ಇದನ್ನೇ ಆಪಸ್ತಂಬರು ಹೀಗೆ ಹೇಳಿದ್ದಾರೆ.**

**ಉಪಾಕರಣೇ ಸಮಾಪನೇ ಚ ಋಷಿರ್ಯಃ ಪ್ರಜ್ಞಾಯತೇ ಸದಸಸ್ಪತಿರ್ದ್ವಿತೀಯಃ ।**

—ಆಪಸ್ತಂಬ ಗೃಹ್ಯಸೂತ್ರ

ತೈತ್ತಿರೀಯ ಸಂಹಿತೆಗೆ ಭಾಷ್ಯವನ್ನು ಬರೆದಿರುವ ಭಟ್ಟಭಾಸ್ಕರರು ಪ್ರಾರಂಭದಲ್ಲಿ ಈ ಕಾಂಡವಿಭಾಗವನ್ನು ತೋರಿಸಿ ಈ ಕಾಂಡಗಳಲ್ಲಿ ಬರುವ ಉಪ–ವಿಭಾಗಗಳನ್ನೂ ಕಾಂಡಗಳೆಂದೇ ನಿರ್ದೇಶಿಸಿರುತ್ತಾರೆ. ಅದರಂತೆ ಒಂದನೆಯ ಪ್ರಾಜಾಪತ್ಯ ಕಾಂಡದಲ್ಲಿ ಬರುವ ಉಪವಿಭಾಗಗಳಾದ ಪೌರೋಡಾಶಿಕ ಮುಂತಾದ ಐದನ್ನು ಪೌರೋಡಾಶಿಕ ಕಾಂಡ, ಯಾಜಮಾನಕಾಂಡ ಹೋತೃಕಾಂಡ, ಹೌತ್ರಕಾಂಡ ಮತ್ತು ಪಿತೃಮೇಧಕಾಂಡವೆಂದು ಅವರು ನಿರ್ದೇಶಿಸಿರುತ್ತಾರೆ. ಕಾಂಡವಿಭಾಗವು ಹೀಗಿದ್ದರೂ ಪ್ರಚಲಿತವಾಗಿರುವುದು ಸಾರಸ್ವತಪಾಠವೇ. ಅದರಂತೆ ಸಂಹಿತೆಯಲ್ಲಿ 44 ಪ್ರಶ್ನೆಗಳು,

1. ಆಪಸ್ತಂಬಸೂತ್ರವನ್ನನುಸರಿಸುವವರು ನಾಲ್ಕು ಕಾಂಡಗಳ ಉಪಾಕರಣ–ಸಮಾಪನಗಳನ್ನೂ, ಬೋಧಾಯನಸೂತ್ರವನ್ನನುಸರಿಸುವವರು ಐದು ಕಾಂಡಗಳ ಉಪಾಕರಣ–ಸಮಾಪನಗಳನ್ನೂ ಮಾಡುತ್ತಾರೆ.



ಬ್ರಾಹ್ಮಣಗ್ರಂಥದಲ್ಲಿ 28 ಪ್ರಶ್ನೆಗಳು, ಆರಣ್ಯಕೋಪನಿಷತ್ತಿನಲ್ಲಿ 10 ಪ್ರಶ್ನೆಗಳು ಹೀಗೆ 82 ಪ್ರಶ್ನೆಗಳನ್ನು (ಪ್ರಪಾಠಕ) ಅಧ್ಯಯನ ಮಾಡುತ್ತಾರೆ.[1]

## ಸಾರಸ್ವತಪಾಠ–ಕಾಂಡಪಾಠ

ತೈತ್ತಿರೀಯ ಸಂಹಿತೆಯಲ್ಲಿಯೂ, ಬ್ರಾಹ್ಮಣದಲ್ಲಿಯೂ, ಆರಣ್ಯಕದಲ್ಲಿಯೂ ಹೇಳಲ್ಪಟ್ಟಿರುವ ವಿಷಯವನ್ನು ಚೆನ್ನಾಗಿ ಅರಿಯಲು ಕಾಂಡ ವಿಭಾಗವನ್ನು ತಿಳಿಯುವುದು ಅನಿವಾರ್ಯ. ಯಜುರ್ವೇದದ ಮಂತ್ರಗಳು ಯಜ್ಞಗಳಲ್ಲಿಯೇ ಪ್ರಧಾನವಾಗಿ ವಿನಿಯೋಗವಾಗುವುದರಿಂದ ಅಧ್ವರ್ಯುವು ಹೇಳಬೇಕಾದ ಮಂತ್ರಗಳೂ, ಕೆಲವೆಡೆ ಹೋತೃವು[2] ಹೇಳಬೇಕಾದ ಮಂತ್ರಗಳೂ ಯಜುರ್ವೇದದಲ್ಲಿವೆ. ಆದರೆ ಈಗ ಪ್ರಚಲಿತವಿರುವ ಸಾರಸ್ವತಪಾಠದಲ್ಲಿ ಮಂತ್ರಗಳು ಮತ್ತು ಬ್ರಾಹ್ಮಣಗಳು ಪ್ರಕರಣವನ್ನನುಸರಿಸಿ ವ್ಯವಸ್ಥಿತವಾಗಿ ಇರದೆ ಹಂಚಿಹೋಗಿವೆ. ಉದಾಹರಣೆಗೆ ಐಷ್ಟಿಕಯಾಗಗಳಲ್ಲಿ ಮೊದಲನೆಯದಾದ ದರ್ಶೇಷ್ಟಿಯನ್ನು[3] ಅನುಷ್ಠಿಸುವ ಮಂತ್ರಗಳನ್ನು ತೈತ್ತಿರೀಯ ಸಂಹಿತೆಯ ಒಂದನೆಯ ಕಾಂಡದಲ್ಲಿ ನಾವು ಕಂಡರೆ ಈ ಮಂತ್ರಗಳ ಬ್ರಾಹ್ಮಣವನ್ನು ತೈತ್ತಿರೀಯ ಬ್ರಾಹ್ಮಣದ ಮೂರನೆಯ ಅಷ್ಟಕದಲ್ಲಿ ಕಾಣುತ್ತೇವೆ. ಅಲ್ಲದೆ ಪುನಃ ಸಂಹಿತೆಯ ಎರಡನೆಯ ಕಾಂಡದಲ್ಲಿಯೂ ಈ ಮಂತ್ರಗಳಿಗೆ ಸಂಬಂಧಿಸಿದ ಬ್ರಾಹ್ಮಣವು ಬರುತ್ತದೆ. ದರ್ಶೇಷ್ಟಿಯಲ್ಲಿ ಹೋತೃವು ಹೇಳಬೇಕಾದ ಮಂತ್ರಗಳು

---

1. ಇದನ್ನು "ಆಶೀತಿದ್ವಯ" ಎಂದು ನಿರ್ದೇಶಿಸುತ್ತಾರೆ. ಆಪಸ್ತಂಬರು ಏಕಾಗ್ನಿಕಾಂಡದ ಎರಡು ಪ್ರಪಾಠಕಗಳನ್ನು ಅಧ್ಯಯನಕ್ರಮದಲ್ಲಿ ಸೇರಿಸಿರುವುದರಿಂದ ಆರಣ್ಯಕದ ಕಡೆಯಲ್ಲಿರುವ ಮೊದಲ ಮೂರು ಉಪನಿಷತ್ತುಗಳನ್ನು ಒಂದೆಂದು ಪರಿಗಣಿಸಿದರೆ ಆಗ ಎಂಭತ್ತು ಪ್ರಪಾಠಕಗಳಾಗುವುದರಿಂದ ಏಕಾಗ್ನಿಕಾಂಡದ ಎರಡು ಪ್ರಪಾಠಕಗಳನ್ನು ಸೇರಿಸಿ ಎಂಭತ್ತೆರಡು ಪ್ರಪಾಠಕಗಳೆಂಬ ಪರಿಗಣನೆಯೂ ಇದೆ.

2. ಯಜ್ಞವನ್ನು ನಿರ್ವಹಿಸುವ ಮುಖ್ಯವಾದ ನಾಲ್ಕು ಋತ್ವಿಜರಿಗೆ ಅಧ್ವರ್ಯು, ಹೋತಾ, ಉದ್ಗಾತಾ, ಬ್ರಹ್ಮ ಎಂದು ಹೆಸರು.

3. ಯಾಗಗಳನ್ನು ಐಷ್ಟಿಕ, ಸೌಮಿಕ, ಪಾಶುಕ ಎಂದು ವಿಂಗಡಿಸಲಾಗಿದೆ. ಮೂರನೆಯ ಭಾಗದಲ್ಲಿ ಇದರ ವಿಸ್ತೃತವಿವರಣೆಯು ಬರುತ್ತದೆ.



ತೈತ್ತಿರೀಯ ಬ್ರಾಹ್ಮಣದ ಮೂರನೆಯ ಅಷ್ಟಕದಲ್ಲಿ ಬರುತ್ತವೆ. ಆ ಮಂತ್ರಗಳ ಬ್ರಾಹ್ಮಣವು ತೈತ್ತಿರೀಯಸಂಹಿತೆಯ ಎರಡನೆಯ ಕಾಂಡದಲ್ಲಿ ಬರುತ್ತದೆ. ಅಲ್ಲದೆ ಸೋಮಯಾಗದಲ್ಲಿ ಬರುವ ಪ್ರವರ್ಗ್ಯವೆಂಬ ವಿಧಿಗೆ ಉಪಯುಕ್ತವಾಗುವ ಮಂತ್ರಗಳು ತೈತ್ತಿರೀಯ ಆರಣ್ಯಕದಲ್ಲಿ ಹೇಳಲ್ಪಡುತ್ತವೆ. ಹೀಗೆ ಸಾರಸ್ವತಪಾಠದಂತೆ ಸಂಹಿತಾಗ್ರಂಥದಲ್ಲಿ ಮಂತ್ರಗಳೇ ಇವೆ ಎಂದಾಗಲೀ, ಬ್ರಾಹ್ಮಣಗ್ರಂಥದಲ್ಲಿ ಬ್ರಾಹ್ಮಣವೇ ಇದೆ ಎಂದಾಗಲೀ ಹೇಳುವಂತಿಲ್ಲ. ಅಲ್ಲದೆ ತೈತ್ತಿರೀಯಸಂಹಿತೆಯ ಮೂರನೆಯ ಕಾಂಡದಲ್ಲಿ ಬ್ರಾಹ್ಮಣಗಳ ನಡುವೆ ಮಂತ್ರಗಳೂ, ಮಂತ್ರಗಳ ನಡುವೆ ಬ್ರಾಹ್ಮಣವೂ ಹೇಳಲ್ಪಡುತ್ತದೆ. ಹೀಗೆ ಮಂತ್ರ-ಬ್ರಾಹ್ಮಣಗಳು ಮಿಶ್ರವಾಗಿಯೂ ಮತ್ತು ಹಂಚಿಹೋಗಿಯೂ ಇರುವುದರಿಂದ ಸಾರಸ್ವತಪಾಠದಂತೆ ಅರ್ಥವನ್ನು ಅನುಸಂಧಾನ ಮಾಡುವುದು ಕಷ್ಟವಾಗಿದೆ. ಆದರೆ ವೇದಾಧ್ಯಯನದ ವಿಷಯದಲ್ಲಿ ಪರಂಪರೆಯೇ ಪ್ರಮಾಣವಾದುದರಿಂದ ಸಾರಸ್ವತಪಾಠಕ್ರಮದಂತೆಯೇ ಅಧ್ಯಯನ ಮಾಡುವುದು ಸರಿಯಾಗಿದೆ. ಭಟ್ಟಭಾಸ್ಕರರು ತಮ್ಮ ಭಾಷ್ಯದ ಪ್ರಾರಂಭದಲ್ಲಿ

**ಅತ್ರ ಚ ಕಾಂಡಾನಾಂ ಸಂಕೀರ್ಣತ್ವೇಽಪಿ ಯಥಾಮ್ನಾಯಮೇವ ಅಧ್ಯೇಯಮ್ । ಸಾರಸ್ವತತ್ವಾತ್ ಅಸ್ಯ ಪಾಠಸ್ಯ । ಸರಸ್ವತೀ ಹಿ ಸ್ವಸುತಾಯ ಸಾರಸ್ವತಾಯ ಇಮಂ ಪಾಠಮ್ ಉಪದಿದೇಶ । ಸ ಚ ಸರ್ವವಿದ್ಯಾನಿಧಿಃ ಅಮುಮೇವ ಪಾಠಮಧ್ಯೈಷ್ಟ । ತಸ್ಮಾತ್ ಅನತಿಕ್ರಮಣೀಯಃ ।**

ತೈ. ಸಂ. ೧-೧.

'ಈ ಶಾಖೆಯಲ್ಲಿ ಕಾಂಡಗಳು ಮಿಶ್ರವಾಗಿದ್ದರೂ ಪರಂಪರೆಯಂತೆಯೇ ಅಧ್ಯಯನ ಮಾಡತಕ್ಕದ್ದು. ಹೀಗೆ ಪಾಠ ಮಾಡುವುದು ಸಾರಸ್ವತಕ್ರಮ. ಸರಸ್ವತಿಯು ತನ್ನ ಮಗನಾದ ಸಾರಸ್ವತನಿಗೆ ಹೀಗೆಯೇ ಉಪದೇಶಿಸಿದಳು. ಎಲ್ಲ ವಿದ್ಯೆಗಳಿಗೂ ನಿಧಿಯಂತಿದ್ದ ಅವನು ಈ ರೀತಿಯ ಪಾಠವನ್ನೇ ಅಭ್ಯಸಿಸಿದನು. ಆದುದರಿಂದ ಈ ಪಾಠಕ್ರಮವನ್ನು ಮೀರತಕ್ಕದ್ದಲ್ಲ' ಎಂದಿದ್ದಾರೆ. ಬೋಧಾಯನರೇ ಮೊದಲಾದ ಮಹರ್ಷಿಗಳು ಈ ಪಾಠವು ರೂಢಿಯಲ್ಲಿದ್ದರೂ ಕಾಂಡವಿಭಾಗವನ್ನು ಅರಿಯುವುದು ಅವಶ್ಯಕವೆಂದು "ಅಪಿ ಸಾರಸ್ವತೇ ಪಾಠೇ ಜ್ಞಾನಮಾತ್ರಮಿಹೇಷ್ಯತೇ" ಎಂದಿದ್ದಾರೆ. ಆದುದರಿಂದ



ಸಾರಸ್ವತಪಾಠಕ್ರಮದಂತೆ ಕಲಿತು ಕಾಂಡವಿಭಾಗವನ್ನು ಅರಿತು ತೈತ್ತಿರೀಯಶಾಖೆಯ ವಿನಿಯೋಗವನ್ನು ಮನಗಾಣುವುದು ಉಚಿತವಾಗಿದೆ

ತೈತ್ತಿರೀಯ ಶಾಖೆಯಲ್ಲಿ ಪ್ರಚಲಿತವಿರುವ ಸಾರಸ್ವತಪಾಠಕ್ರಮ ಮತ್ತು ಕಾಂಡಾಧ್ಯಯನಕ್ರಮ ಇವೆರಡನ್ನೂ ಸ್ಪಷ್ಟವಾಗಿ ಅರಿಯುವುದು ಅವಶ್ಯಕ. ಅಲ್ಲದೆ ಸಾರಸ್ವತಪಾಠದಂತೆ ಮಂತ್ರ ಮತ್ತು ಬ್ರಾಹ್ಮಣಗಳು ಯಾವ ಯಾವ ಪ್ರಪಾಠಕದಲ್ಲಿ ಮಿಶ್ರವಾಗಿವೆಯೆಂಬುದನ್ನೂ, ಕೇವಲ ಮಂತ್ರಗಳೇ ಯಾವ ಪ್ರಪಾಠಕದಲ್ಲಿವೆ, ಕೇವಲ ಬ್ರಾಹ್ಮಣಗಳೇ ಯಾವ ಪ್ರಪಾಠಕದಲ್ಲಿವೆ ಎಂಬುದನ್ನೂ ತಿಳಿಯುವುದು ಅತ್ಯವಶ್ಯಕ. ಆದುದರಿಂದ ಪ್ರಾರಂಭದಲ್ಲಿ ಸಾರಸ್ವತಪಾಠದಂತೆ ಮಂತ್ರ–ಬ್ರಾಹ್ಮಣಗಳ ಕೋಷ್ಟಕಗಳನ್ನೂ, ಅಶೀತಿದ್ವಯದ ಸಾರಾಂಶವನ್ನೂ, ನಂತರ ತೈತ್ತಿರೀಯ ಶಾಖೆಯ ಕಾಂಡವಿಭಾಗವನ್ನೂ ಆದರಲ್ಲಿ ಸಾರಸ್ವತಪಾಠದ ಅಧ್ಯಯನಪರಂಪರೆಯಂತೆ ಮಂತ್ರಬ್ರಾಹ್ಮಣಗಳ ಸ್ಥಾನವನ್ನು ನಿರ್ದೇಶಿಸುವ ಪರಿಷ್ಕೃತ ಕೋಷ್ಟಕವನ್ನೂ ನೀಡಲಾಗಿದೆ.



# ತೈತ್ತಿರೀಯ ಶಾಖೆಯಲ್ಲಿ ಸಾರಸ್ವತಪಾಠದಂತೆ ಪ್ರಪಾಠಕಗಳ ಸ್ವರೂಪ ವಿವರಣೆ

## ಅ. ತೈತ್ತಿರೀಯ ಸಂಹಿತೆ

### ಕಾಂಡ ೧

### ೮ ಪ್ರಪಾಠಕಗಳು

| ಪ್ರಾರಂಭ .... ಸಮಾಪ್ತಿ | ಸ್ವರೂಪ |
|---|---|
| ಇಷೇ ತ್ವಾ .... ಋತುಭಿಃ ಕಲ್ಪಯಾತಿ । | ಮಂತ್ರಗಳು |
| ಆಪ ಉಂದಂತು .... ಪರಿಬಾಧೋ ಅದೇವೀಃ । | ಮಂತ್ರಗಳು |
| ದೇವಸ್ಯ .... ಜ್ಯೋತೀಗ್‌ಸ್ಯರ್ಜಯಃ । | ಮಂತ್ರಗಳು |
| ಆದದೇ ಗ್ರಾವಾಸಿ .... ತವ ವಿ ಜ್ಯೋತಿಷಾ । | ಮಂತ್ರಗಳು |
| ದೇವಾಸುರಾಃ .... ಪಾರಯಿಷ್ಣುವ್ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಸಂತ್ವಾ ಸಿಂಚಾಮಿ ..... ದಸ್ಯೂನ್ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಪಾಕಯಜ್ಞಂ .... ಧನ್ವಸು । | ಮಂತ್ರಗಳು ಮತ್ತು ಬ್ರಾಹ್ಮಣಗಳು |



| ಪ್ರಾರಂಭ | .... | ಸಮಾಪ್ತಿ | ಸ್ವರೂಪ |
|---|---|---|---|

ಅನುಮತ್ಯೈ .... ಉಸ್ರಿಯಾಸು ।

ಮಂತ್ರಗಳು ಮತ್ತು ಬ್ರಾಹ್ಮಣಗಳು

* * *

ಕಾಂಡ ೨

೬ ಪ್ರಪಾಠಕಗಳು (೯ ರಿಂದ ೧೪)[1]

ವಾಯವ್ಯಂ .... ಪ್ರವೋಷೀಃ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಪ್ರಜಾಪತಿಃ ಪ್ರಜಾಃ .... ಶ್ರುತಸ್ಯ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಆದಿತ್ಯೇಭ್ಯಃ .... ಜಿಗಾಯ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ದೇವಾಃ .... ಮಾದಯಧ್ವಮ್ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ವಿಶ್ವರೂಪಃ .... ಅನು ತೇ ದಾಯಿ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಸಮಿಧಃ .... ಸೌಮನಸೇ ಸ್ಯಾಮ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

---

1. ಆವರಣದಲ್ಲಿ ತೈತ್ತಿರೀಯಸಂಹಿತಾ ಗ್ರಂಥದ ಪ್ರಾರಂಭದಿಂದ ಒಟ್ಟು ಎಣಿಸಿದಾಗಿನ ಸಂಖ್ಯೆಯನ್ನು ಸೂಚಿಸಲಾಗಿದೆ.



## ಕಾಂಡ ೩

### ೫ ಪ್ರಪಾಠಕಗಳು (೧೫ ರಿಂದ ೧೯)

| ಪ್ರಾರಂಭ .... | ಸಮಾಪ್ತಿ | ಸ್ವರೂಪ |
| --- | --- | --- |
| ಪ್ರಜಾಪತಿಃ .... | ಸಮುದ್ರವಾಸಸಮ್ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಯೋ ವೈ .... | ವಿಕ್ರಮುಸ್ವ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಅಗ್ನೇ .... | ದಧಾತು । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ವಿವಾ ವಿತಸ್ಯ .... | ವರುಣ ಪ್ರಿಯಾಸಃ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಪೂರ್ಣಾ .... | ಸಂತಿದೇವಾಃ । | ಮಂತ್ರಗಳು ಮತ್ತು ಬ್ರಾಹ್ಮಣಗಳು |

* * *

## ಕಾಂಡ ೪

### ೭ ಪ್ರಪಾಠಕಗಳು (೨೦ ರಿಂದ ೨೬)

| ಪ್ರಾರಂಭ .... | ಸಮಾಪ್ತಿ | ಸ್ವರೂಪ |
| --- | --- | --- |
| ಯುಞ್ಜಾನಃ .... | ವಾಜೇ ವಾಜೇ । | ಮಂತ್ರಗಳು |
| ವಿಷ್ಣೋಃ ಕ್ರಮೋಽಸಿ .... | ಸ ತ್ವಂ ನೋ ಅಗ್ನೇ । | ಮಂತ್ರಗಳು |





| ಪ್ರಾರಂಭ .... ಸಮಾಪ್ತಿ | ಸ್ವರೂಪ |
|---|---|
| ಅಪಾಂ .... ವರ್ಧನೇನ । | ಮಂತ್ರಗಳು |
| ರಶ್ಮಿರಸಿ .... ಕೋ ಅದ್ಯ ಯುಂಕ್ತೇ । | ಮಂತ್ರಗಳು |
| ನಮಸ್ತೇ .... ಜಂಭೇ ದಧಾಮಿ । | ಮಂತ್ರಗಳು |
| ಅಶ್ಮನ್ನೂರ್ಜಂ .... ಹವಿಷ್ಮಾನ್ । | ಮಂತ್ರಗಳು |
| ಅಗ್ನಾವಿಷ್ಣೂ .... ನ ಆಯುಃ । | ಮಂತ್ರಗಳು |

* * *

## ಕಾಂಡ ೫

### ೭ ಪ್ರಪಾಠಕಗಳು (೨೭ ರಿಂದ ೩೩)

| | |
|---|---|
| ಸಾವಿತ್ರಾಣಿ .... ದೇವಾಃ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ವಿಷ್ಣುಮುಖಾಃ .... ಭುವತ್ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಉಥ್ಸನ್ನಯಜ್ಞಃ .... ಸರ್ವತ್ವಾಯ । | ಬ್ರಾಹ್ಮಣಗಳು |



ಪ್ರಾರಂಭ .... ಸಮಾಪ್ತಿ ಸ್ವರೂಪ

ದೇವಾಸುರಾಃ .... ಸರ್ವಂ ಜಯತಿ ।

ಬ್ರಾಹ್ಮಣಗಳು

ಯದೇಕೇನ .... ಏಕಶಿತಿಪಾತ್ಪೇತ್ವಃ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಹಿರಣ್ಯವರ್ಣಾಃ .... ನಿವಕ್ಷಸಃ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಯೋ ವಾ .... ಯದ್ಯವ ಜಿಘ್ರಸಿ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

* * *

## ಕಾಂಡ ೬

### ೬ ಪ್ರಪಾಠಕಗಳು (೩೪ ರಿಂದ ೩೯)

ಪ್ರಾಚೀನವಗ್ಂಶಂ .... ಪರಿಚರತಿ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಯದುಭೌ .... ಏವೈನಾವ್ ।

ಬ್ರಾಹ್ಮಣಗಳು

ಚಾತ್ವಾಲಾತ್ .... ಪಶುಷು ದಧಾತಿ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಯಜ್ಞೇನ ವೈ .... ನಿವರ್ತತೇ ।

ಬ್ರಾಹ್ಮಣಗಳು



ಪ್ರಾರಂಭ .... ಸಮಾಪ್ತಿ ಸ್ವರೂಪ

ಇನ್ದ್ರೋ ವೃತ್ರಾಯ .... ಪ್ರಾಂಕ್ತ್ವಮ್।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಸುವರ್ಗಾಯ ... ಸಮೃದ್ಧ್ಯೈ।

ಮಂತ್ರಗಳು ಮತ್ತು ಬ್ರಾಹ್ಮಣಗಳು

* * *

ಕಾಂಡ ೭

೫ ಪ್ರಪಾಠಕಗಳು (೪೦ ರಿಂದ ೪೪)[1]

ಪ್ರಜನನಂ .... ಪರಿಜ್ಮಾ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಸಾಧ್ಯಾ ವೈ .... ಸ್ವಾಹಾ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಪ್ರಜವಮ್.... ಸ್ವಾಹಾ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಬೃಹಸ್ಪತಿರಕಾಮಯತ ..... ಸ್ವಾಹಾ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಗಾವೋ ವೈ .... ಬಂಧುಃ।

ಮಂತ್ರಗಳು ಮತ್ತು ಬ್ರಾಹ್ಮಣಗಳು

---

1. ಹೀಗೆ ತೈತ್ತಿರೀಯಸಂಹಿತೆಯಲ್ಲಿ ಒಟ್ಟು 44 ಪ್ರಶ್ನೆಗಳಿವೆ.



## ಆ. ತೈತ್ತಿರೀಯ ಬ್ರಾಹ್ಮಣ

### *ಅಷ್ಟಕ ೧

### ೮ ಪ್ರಪಾಠಕಗಳು (೪೫ ರಿಂದ ೫೨)[1]

ಪ್ರಾರಂಭ .... ಸಮಾಪ್ತಿ ಸ್ವರೂಪ

ಬ್ರಹ್ಮಸಂಧತ್ತಂ .... ಋಧ್ನೋತ್ಯೇನೇನ ।
ಮಂತ್ರಗಳು ಮತ್ತು ಬ್ರಾಹ್ಮಣಗಳು

ಉದ್ಧನ್ಯಮಾನಂ .... ಸಂವಿನ್ದನ್ತೇ ।
ಮಂತ್ರಗಳು ಮತ್ತು ಬ್ರಾಹ್ಮಣಗಳು

ದೇವಾಸುರಾಃ .... ಯಜಮಾನಃ ।
ಮಂತ್ರಗಳು ಮತ್ತು ಬ್ರಾಹ್ಮಣಗಳು

ಉಭಯೇ ವಾ .... ವೈಷಃ ।
ಮಂತ್ರಗಳು ಮತ್ತು ಬ್ರಾಹ್ಮಣಗಳು

ಅಗ್ನೇಃ ಕೃತ್ತಿಕಾಃ .... ವೇದ ।
ಮಂತ್ರಗಳು ಮತ್ತು ಬ್ರಾಹ್ಮಣಗಳು

ಅನುಮತ್ಯೈ .... ಪ್ರತಿತಿಷ್ಠನ್ತಿ ।
ಮಂತ್ರಗಳು ಮತ್ತು ಬ್ರಾಹ್ಮಣಗಳು

---

* ತೈತ್ತಿರೀಯಬ್ರಾಹ್ಮಣದಲ್ಲಿ ಪ್ರಪಾಠಕಗಳ ಗುಂಪನ್ನು 'ಅಷ್ಟಕ'ವೆಂದು ವ್ಯವಹರಿಸುತ್ತಾರೆ.

1. ತೈತ್ತಿರೀಯಸಂಹಿತೆಯ ಪ್ರಪಾಠಕಗಳನ್ನು ಸೇರಿಸಿಕೊಂಡು ಸಂಖ್ಯೆಯನ್ನು ನಿರ್ದೇಶಿಸಲಾಗಿದೆ.



| ಪ್ರಾರಂಭ | .... | ಸಮಾಪ್ತಿ | ಸ್ವರೂಪ |
|---|---|---|---|

ಏತದ್ವಾ ಬ್ರಹ್ಮಣಾನ್ಯೇವ .... ಪ್ರತಿತಿಷ್ಠತಿ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ವರುಣಸ್ಯ .... ಪ್ರತಿತಿಷ್ಠತಿ ।

ಬ್ರಾಹ್ಮಣಗಳು

* * *

ಅಷ್ಟಕ ೨

೮ ಪ್ರಪಾಠಕಗಳು (೫೩ ರಿಂದ ೬೦)

ಅಂಗಿರಸಃ .... ವೇದ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಪ್ರಜಾಪತಿಃ .... ನಿದಾನವಾನ್ಭವತಿ ।

ಬ್ರಾಹ್ಮಣಗಳು

ಬ್ರಹ್ಮವಾದಿನಃ .... ವೇದ ।

ಬ್ರಾಹ್ಮಣಗಳು

ಜುಷ್ಟಃ .... ಸುದಾನವಃ ।

ಮಂತ್ರಗಳು

ಪ್ರಾಣಃ .... ಹುವೇಮ ।

ಮಂತ್ರಗಳು

ಸ್ವಾದ್ವೀಂ ತ್ವಾ .... ಯಂಜ ।

ಮಂತ್ರಗಳು



| ಪ್ರಾರಂಭ .... | ಸಮಾಪ್ತಿ | ಸ್ವರೂಪ |
|---|---|---|

ತ್ರಿವೃಥ್ಸ್ತೋಮಃ .... ಸುದತೇ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಶೀರ್ವೋನ್ನಾನ್ .... ಸದಾ ನಃ ।

ಮಂತ್ರಗಳು

* * *

ಅಷ್ಟಕ ೩

೧೨ ಪ್ರಪಾಠಕಗಳು (೬೧ ರಿಂದ ೭೨)

ಅಗ್ನಿರ್ನಃ .... ಸ್ವಾಹೇತಿ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ತೃತೀಯಸ್ಯಾಮ್ .... ಯಜಮಾನಃ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಪ್ರತ್ಯುಷ್ಟಮ್ .... ಅರ್ಪಯತಿ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಬ್ರಹ್ಮಣೇ .... ಕುಮಾರೀಮ್ ।

ಬ್ರಾಹ್ಮಣಗಳು

ಸತ್ಯಮ್ .... ಉಪಹೂತಾ ।

ಮಂತ್ರಗಳು

ಅಞ್ಜನ್ತಿ .... ಸೂಕ್ತಾ ಬ್ರೂಹಿ ।

ಮಂತ್ರಗಳು



| ಪ್ರಾರಂಭ | .... | ಸಮಾಪ್ತಿ | ಸ್ವರೂಪ |
|---|---|---|---|
| ಸರ್ವಾನ್ ವೈ | .... | ಶಚೀಪತಿಃ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಸಾಂಗ್ರಹಣ್ಯೇಷ್ಟ್ಯಾ | .... | ಸಗ್ಂ ಶ್ರಯಂತಿ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಪ್ರಜಾಪತಿಃ | .... | ಜುಹ್ವತಿ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಸಂಜ್ಞಾನಂ | .... | ಸಾವಿತ್ರಃ[1] । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಲೋಕೋಽಸಿ | .... | ವೇದ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ತುಭ್ಯಮ್ | .... | ಓಮ್ । | ಮಂತ್ರಗಳು ಮತ್ತು ಬ್ರಾಹ್ಮಣಗಳು |

* * *

---

1. ತೈತ್ತಿರೀಯಬ್ರಾಹ್ಮಣದಲ್ಲಿ ಈ ಪ್ರಪಾಠಕವೂ ಸೇರಿದಂತೆ ಮುಂದಿನ ಮೂರು ಪ್ರಪಾಠಕಗಳನ್ನು (10, 11, 12) 'ಕಾಠಕ'ಗಳೆಂದು ಪರಿಗಣಿಸಿದ್ದಾರೆ. ಅಧ್ಯಯನಕ್ರಮದಲ್ಲಿ ತೈತ್ತಿರೀಯಬ್ರಾಹ್ಮಣದ ಮೂರನೆಯ ಅಷ್ಟಕದಲ್ಲಿಯೇ ಇವುಗಳನ್ನು ಪರಿಗಣಿಸುವುದೂ ಉಂಟು.



## ಇ. ತೈತ್ತಿರೀಯ ಆರಣ್ಯಕ

### ೧೦ ಪ್ರಪಾಠಕಗಳು[1] (೭೩ ರಿಂದ ೮೨)[2]

| ಪ್ರಾರಂಭ .... ಸಮಾಪ್ತಿ | ಸ್ವರೂಪ |
|---|---|
| ಭದ್ರಂ .... ಭವತಿ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಸಹ .... ಮುನಿಭ್ಯಶ್ಚ ನಮಃ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಚಿತ್ತಿಃ .... ಕೋಶ್ಯಾಭ್ಯಾವತ್ । | ಮಂತ್ರಗಳು |
| ನಮೋ ವಾಚೇ .... ಮಾಹಾಸೀತ್ । | ಮಂತ್ರಗಳು |
| ದೇವಾಃ .... ತಪತಿ । | ಮಂತ್ರಗಳು ಮತ್ತು ಬ್ರಾಹ್ಮಣಗಳು |
| ಪರೇಯುವಾಗ್ಂಸಂ .... ಉತ್ಸೃಜತ । | ಮಂತ್ರಗಳು |

1. ತೈತ್ತಿರೀಯ ಆರಣ್ಯಕ ಮತ್ತು ಉಪನಿಷತ್ತುಗಳನ್ನು ಪ್ರಪಾಠಕಗಳನ್ನಾಗಿಯೇ ಅಧ್ಯಯನ ಮಾಡುವುದು ರೂಢಿಯಲ್ಲಿದೆ. ಸಂಹಿತೆ ಅಥವಾ ಬ್ರಾಹ್ಮಣದಲ್ಲಿ ಇದ್ದಂತೆ ಕಾಂಡ ಮುಂತಾದ ಪ್ರಪಾಠಕಗಳ ಗುಂಪಿಗೆ ಬೇರೆ ಹೆಸರು ಇಲ್ಲ.

2. ತೈತ್ತಿರೀಯ ಸಂಹಿತೆ ಮತ್ತು ಬ್ರಾಹ್ಮಣಗಳ ಪ್ರಪಾಠಕಗಳನ್ನು ಸೇರಿಸಿಕೊಂಡು ಸಂಖ್ಯೆಯನ್ನು ನಿರ್ದೇಶಿಸಲಾಗಿದೆ.



ಪ್ರಾರಂಭ .... ಸಮಾಪ್ತಿ ಸ್ವರೂಪ

ಶಂ ನಃ .... ಶಾಂತಿಃ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಬ್ರಹ್ಮವಿದಾಪ್ನೋತಿ .... ಉಪನಿಷತ್ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಭೃಗುರ್ವೈ .... ಉಪನಿಷತ್[1] ।

ಮಂತ್ರಗಳು ಮತ್ತು ಬ್ರಾಹ್ಮಣಗಳು

ಅಂಭಸ್ಯ .... ಮಹಿಮಾನಮ್ ।

ಮಂತ್ರಗಳು ಮತ್ತು ಬ್ರಾಹ್ಮಣಗಳು

* * *

## ಈ. ಏಕಾಗ್ನಿಕಾಂಡ

೨ ಪ್ರಪಾಠಕಗಳು (೮೧, ೮೨)

ಪ್ರಸುಗ್ಮನ್ತಾ .... ಶಗ್ಂಸತಿ ।

ಮಂತ್ರಗಳು

ಉಷ್ಣೇನ .... ಪರ್ವತೇನ ।

ಮಂತ್ರಗಳು

1. ಈ ಮೂರು ಉಪನಿಷತ್ತುಗಳನ್ನೂ ಒಂದೆಂದು ಪರಿಗಣಿಸಿ ನಾಲ್ಕನೆಯ ಉಪನಿಷತ್ತು ಮತ್ತು ಏಕಾಗ್ನಿಕಾಂಡದ ಎರಡು ಪ್ರಪಾಠಕಗಳನ್ನು ಸೇರಿಸಿ 'ಅಶೀತಿದ್ವಯ'ವಾಗುತ್ತದೆ (೮೨) ಎಂಬುದು ಆಪಸ್ತಂಬರ ಮತ.



## ಅಶೀತಿದ್ವಯದ ಸಾರಾಂಶ

ತೈತ್ತಿರೀಯಶಾಖೆಯು ಯಜುರ್ವೇದದ ಶಾಖೆಯಾದುದರಿಂದ ಈ ಶಾಖೆಯಲ್ಲಿ ಮುಖ್ಯವಾಗಿ ಅಧ್ವರ್ಯುವಿಗೆ ಸಂಬಂಧಿಸಿದ ಮಂತ್ರಗಳೇ ಹೆಚ್ಚು ಇವೆ. ಯಜುರ್ವೇದಕ್ಕೆ 'ಅಧ್ವರ್ಯುವೇದ' ಎಂಬುದು ಇನ್ನೊಂದು ಹೆಸರು. ಯಜ್ಞಗಳ ವಿಧಿಯನ್ನು ಯಜುರ್ವೇದವು ಮುಖ್ಯವಾಗಿ ಪ್ರತಿಪಾದಿಸುತ್ತದೆ. ಆದುದರಿಂದ ತೈತ್ತಿರೀಯಶಾಖೆಯಲ್ಲಿ ಯಜ್ಞಗಳ ಅನೇಕ ಪ್ರಕಾರಗಳು ತಿಳಿಸಲ್ಪಟ್ಟಿವೆ.

ಯಜ್ಞಗಳನ್ನು ಅನುಷ್ಠಿಸಲು ಗೃಹಸ್ಥನಾದವನು ಅಗ್ನಿಯನ್ನು ಆಧಾನಮಾಡಿ ಅದನ್ನು ಸಂರಕ್ಷಿಸಿಕೊಂಡು ನಿತ್ಯವೂ ಅಗ್ನಿಹೋತ್ರವನ್ನು ಆಚರಿಸಬೇಕು.[1] ಹೀಗೆ ಆಚರಿಸುತ್ತಾ ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿಗಳೆಂಬ ಮೂರು ಅಗ್ನಿಗಳಲ್ಲಿ ಪ್ರತಿಯೊಂದು ಪಕ್ಷದಲ್ಲಿಯೂ ಇಷ್ಟಿಗಳನ್ನು ಅನುಷ್ಠಿಸಬೇಕಾಗುತ್ತದೆ. ಈ ಇಷ್ಟಿಗಳಿಗೆ ದರ್ಶ ಮತ್ತು ಪೂರ್ಣಮಾಸಗಳೆಂದು ಹೆಸರು. ಈ ಇಷ್ಟಿಗಳನ್ನು ವಿಸ್ತರಿಸಿ ಅನೇಕ ಬಗೆಯ ಇಷ್ಟಿಗಳನ್ನು ಅನುಷ್ಠಿಸಬಹುದು. ಇದಲ್ಲದೆ ಅಗ್ನಿಷ್ಟೋಮ ಮತ್ತು ಪಶುಬಂಧಗಳಂತಹ ಯಾಗಗಳನ್ನೂ ಯಾಜ್ಞಿಕರು ಅನುಷ್ಠಿಸುತ್ತಾರೆ. ಹೀಗಾಗಿ ತೈತ್ತಿರೀಯಶಾಖೆಯಲ್ಲಿ ಅಗ್ನಿಯನ್ನು ಆಧಾನ ಮಾಡುವುದರಿಂದ ಮೊದಲುಗೊಂಡು ಅಗ್ನಿಹೋತ್ರ, ದರ್ಶಪೂರ್ಣಮಾಸೇಷ್ಟಿಗಳು, ಅನೇಕ ಫಲಗಳನ್ನಪೇಕ್ಷಿಸಿ ಮಾಡುವ ಕಾಮ್ಯೇಷ್ಟಿಗಳು, ನಕ್ಷತ್ರೇಷ್ಟಿಗಳು, ಅಗ್ನಿಷ್ಟೋಮ, ವಾಜಪೇಯ, ರಾಜಸೂಯ, ನಿರೂಢ ಪಶುಬಂಧ ಮತ್ತು ಅನೇಕ ಬಗೆಯ ಚಯನಯಾಗಗಳು ನಿರೂಪಿತವಾಗಿವೆ. ಹೀಗೆ ಯಜ್ಞಗಳನ್ನು ನಿರೂಪಿಸುವಾಗ ಅವುಗಳ ಅನುಷ್ಠಾನದಲ್ಲಿ ಅಧ್ವರ್ಯುವು ಹೇಳಬೇಕಾದ ಮಂತ್ರಗಳೂ, ಆ ಮಂತ್ರಗಳ ವಿಧಿಯ ವಿವರಣೆಯನ್ನು ನೀಡುವ ಬ್ರಾಹ್ಮಣಗಳೂ ಈ ಶಾಖೆಯಲ್ಲಿ ಹೇಳಲ್ಪಟ್ಟಿವೆ. ತೈತ್ತಿರೀಯ ಶಾಖೆಯು ಯಜುರ್ವೇದದ ಶಾಖೆಯಾದರೂ ಇದರಲ್ಲಿ

1. ಅಗ್ನ್ಯಾಧಾನ ಮುಂತಾದವುಗಳನ್ನು ಮೂರನೆಯ ಭಾಗದಲ್ಲಿ ವಿಸ್ತಾರವಾಗಿ ತಿಳಿಸಲಾಗುವುದು.



ದರ್ಶಪೂರ್ಣಮಾಸೇಷ್ಟಿ, ಕಾಮ್ಯೇಷ್ಟಿ, ಪಶುಬಂಧ, ಚಾತುರ್ಮಾಸ್ಯ ಮತ್ತು ಸೌತ್ರಾಮಣಿ ಯಾಗದವರೆಗೆ ಋಗ್ವೇದದ ಋತ್ವಿಜನಾದ ಹೋತೃವು ಹೇಳಬೇಕಾದ ಮಂತ್ರಗಳೂ ಸಹ ಹೇಳಲ್ಪಟ್ಟಿವೆ. ಮಂತ್ರ ಮತ್ತು ಬ್ರಾಹ್ಮಣಗಳು ಮಾತ್ರವಲ್ಲದೆ ವಿಧಿಯ ಪ್ರಶಂಸೆಯನ್ನು ತಿಳಿಸುವ ಅರ್ಥವಾದಗಳೂ, ಉಪಾಖ್ಯಾನಗಳೂ ಈ ಶಾಖೆಯಲ್ಲಿ ಬಂದಿವೆ.

ಮೇಲೆ ಹೇಳಿದ ಎಲ್ಲ ಕರ್ಮಗಳೂ ಶ್ರುತಿಯಿಂದಲೇ ನೇರವಾಗಿ ವಿಧಿಸಲ್ಪಟ್ಟು, ಬೋಧಾಯನ ಮುಂತಾದ ಮಹರ್ಷಿಗಳ ಶ್ರೌತಸೂತ್ರಗಳಿಂದಲೂ ತಿಳಿಸಲ್ಪಟ್ಟು ಮೂರು ಅಗ್ನಿಗಳಲ್ಲಿ ಮಾಡಬೇಕಾದ ಕರ್ಮಗಳಾದುದರಿಂದ ಅವು ಶ್ರೌತಕರ್ಮಗಳು. ಇವಲ್ಲದೆ ಬೋಧಾಯನ ಮುಂತಾದ ಮಹರ್ಷಿಗಳು ತಮ್ಮ ಗೃಹ್ಯಸೂತ್ರದಲ್ಲಿ ತಿಳಿಸಿದ ಕರ್ಮಗಳಾದ ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ ಮತ್ತು ವಿವಾಹವೇ ಮೊದಲಾದ ಸಂಸ್ಕಾರಕರ್ಮಗಳನ್ನು ಅನುಷ್ಠಿಸಲು ಅಗತ್ಯವಾದ ಮಂತ್ರಗಳೂ ಈ ಶಾಖೆಯ ಏಕಾಗ್ನಿಕಾಂಡದಲ್ಲಿ ಉಕ್ತವಾಗಿವೆ. ಈ ಕರ್ಮಗಳು 'ಔಪಾಸನಾಗ್ನಿ'ಯೆಂಬ ಒಂದೇ ಅಗ್ನಿಯನ್ನಿಟ್ಟುಕೊಂಡು ಮಾಡಬೇಕಾದ್ದರಿಂದ ಈ ಮಂತ್ರಗಳಿರುವ ಕಾಂಡವನ್ನು 'ಏಕಾಗ್ನಿಕಾಂಡ' ಎನ್ನುತ್ತಾರೆ.

ಹೀಗೆ ಈ ಶಾಖೆಯಲ್ಲಿ ಶ್ರೌತ, ಗೃಹ್ಯಕರ್ಮಗಳು ಹೇಳಲ್ಪಟ್ಟಿದ್ದು ಕರ್ಮಗಳನ್ನು ಅನುಷ್ಠಿಸುವ ಪ್ರಕಾರವು ಮಾತ್ರವಲ್ಲದೆ ಕರ್ಮಗಳ ಜೊತೆಯಲ್ಲಿಯೇ ಮಾಡಬೇಕಾದ ಉಪಾಸನಾಭಾಗವೂ ಸ್ವಲ್ಪ ಮಟ್ಟಿಗೆ ತಿಳಿಸಲ್ಪಟ್ಟಿದೆ. ಉಪಾಸನೆಯ ನಂತರ ಮನುಷ್ಯನ ಕಡೆಯ ಲಕ್ಷ್ಯವಾದ ಮೋಕ್ಷವನ್ನು ಪಡೆಯಲು ಅಗತ್ಯವಾದ ಜ್ಞಾನಮಾರ್ಗವನ್ನು ತಿಳಿಸುವ ಉಪನಿಷದ್ಭಾಗವೂ ಈ ಶಾಖೆಯಲ್ಲಿ ಬರುತ್ತದೆ. ಹೀಗೆ ಕರ್ಮಗಳು-ಉಪಾಸನೆ-ಜ್ಞಾನ ಈ ಮೂರೂ ವಿಷಯಗಳು ಇಲ್ಲಿ ನಿರೂಪಿತವಾಗಿವೆ.

ತೈತ್ತಿರೀಯ ಶಾಖೆಯಲ್ಲಿ ಒಟ್ಟು ಈ ವಿಷಯಗಳು ನಿರೂಪಿತವಾದರೂ ಸಹ ವೇದದ ಇತರ ಶಾಖೆಗಳಂತೆ ಕರ್ಮಾನುಷ್ಠಾನಕ್ಕೆ ಅಗತ್ಯವಾದ ಮಂತ್ರಗಳೇ ಒಂದೆಡೆ ಅವುಗಳ ವಿಧಿಯನ್ನು ಹೇಳುವ ಬ್ರಾಹ್ಮಣಭಾಗವೇ ಒಂದೆಡೆ ಬಂದಿಲ್ಲ. ಕೆಲವೆಡೆ ಮಂತ್ರಗಳ ನಂತರ ಅಲ್ಲಿಯೇ ಅದರ



ಬ್ರಾಹ್ಮಣಭಾಗವು ಬಂದಿರುವುದೂ ಉಂಟು. ಅಲ್ಲದೆ ವೇದದ ಇತರ ಶಾಖೆಗಳಲ್ಲಿ ಮಂತ್ರಗಳನ್ನು ಹೇಳುವಾಗಲೇ ಋಷಿ, ದೇವತೆ, ಛಂದಸ್ಸು ಮತ್ತು ವಿನಿಯೋಗಗಳನ್ನು ಪ್ರಾರಂಭದಲ್ಲಿ ಹೇಳಿಕೊಂಡೇ ಮಂತ್ರಗಳನ್ನು ಹೇಳುತ್ತಾರೆ. ತೈತ್ತಿರೀಯ ಶಾಖೆಯಲ್ಲಿ ಮಂತ್ರಗಳ ಸಮೂಹದ ಮಧ್ಯೆ ಬ್ರಾಹ್ಮಣಭಾಗವು ಸೇರಿಬಿಡುವುದರಿಂದ ವ್ಯವಸ್ಥಿತವಾಗಿ ಋಷಿ, ದೇವತೆ, ಛಂದಸ್ಸು ಮತ್ತು ವಿನಿಯೋಗಗಳನ್ನು ಹೇಳುವುದು ಕೊಂಚ ಕಷ್ಟ. ಆದರೂ ತೈತ್ತಿರೀಯ ಶಾಖೆಯಲ್ಲಿ ಋಷಿ, ದೇವತೆ, ಛಂದಸ್ಸು ಮತ್ತು ವಿನಿಯೋಗವನ್ನು ತಿಳಿಯುವುದು ಅತ್ಯವಶ್ಯಕ. ಈ ಶಾಖೆಯ ಮಂತ್ರಗಳಿಗೆ ಪ್ರಜಾಪತಿಯೇ ಮೊದಲಾದ ಋಷಿಗಳು, ಅನುಷ್ಟುಪ್ ಮೊದಲಾದ ಛಂದಸ್ಸುಗಳು ಅಗ್ನಿಯೇ ಮೊದಲಾದ ದೇವತೆಗಳು ಇರುವುದನ್ನು ತಿಳಿಯಬೇಕು. ಮಂತ್ರ ಬ್ರಾಹ್ಮಣಗಳು ಮಿಶ್ರವಾಗಿ ಬಂದಿರುವುದರಿಂದ ಪ್ರಾರಂಭದಲ್ಲಿ ಈ ಶಾಖೆಯ ಮಂತ್ರ-ಬ್ರಾಹ್ಮಣಗಳ ವಿಭಾಗವನ್ನು ತಿಳಿಯಲು ಸಹಾಯವಾಗುವಂತೆ ಈ ಕೆಳಗಿನ ಕೋಷ್ಟಕವನ್ನು ನೀಡಲಾಗಿದೆ.

ಈ ಕೋಷ್ಟಕದಲ್ಲಿ ಮಂತ್ರ-ಬ್ರಾಹ್ಮಣಗಳನ್ನು ವಿಭಾಗಿಸಿ ನಿರ್ದೇಶಿಸಿದ್ದರೂ ಪದ ಮತ್ತು ಸಣ್ಣ ವಾಕ್ಯರೂಪವಾದ ಒಂದೊಂದು ಮಂತ್ರಗಳು ಬ್ರಾಹ್ಮಣಗಳ ನಡುವೆ ಸೇರಿರುವ ಸಂಭವವಿದೆ.

ಕಾಂಡಪಾಠ ಮತ್ತು ಸಾರಸ್ವತಪಾಠಗಳ ಕ್ರಮಸೂಚಿಯೊಡನೆ ನೀಡಿರುವ ಕೋಷ್ಟಕದಲ್ಲಿ ತೈತ್ತಿರೀಯಸಂಹಿತೆಯ ಮುಂದೆ ನಿರ್ದೇಶಿಸಿರುವ ಸಂಖ್ಯೆಗಳು ಕ್ರಮವಾಗಿ ಕಾಂಡ, ಪ್ರಪಾಠಕ ಮತ್ತು ಅನುವಾಕಗಳ ದ್ದಾಗಿರುತ್ತವೆ. ತೈತ್ತಿರೀಯಬ್ರಾಹ್ಮಣದ ಮುಂದಿರುವ ಸಂಖ್ಯೆಗಳು ಕ್ರಮವಾಗಿ ಅಷ್ಟಕ, ಪ್ರಪಾಠಕ ಮತ್ತು ಅನುವಾಕಗಳ ಸಂಖ್ಯೆಯನ್ನು ಸೂಚಿಸುತ್ತವೆ. ತೈತ್ತಿರೀಯಆರಣ್ಯಕದ ಮುಂದಿರುವ ಸಂಖ್ಯೆಗಳು ಕ್ರಮವಾಗಿ ಪ್ರಪಾಠಕ ಮತ್ತು ಅನುವಾಕಗಳದ್ದಾಗಿರುತ್ತವೆ.



# ಕೃಷ್ಣ ಯಜುರ್ವೇದ

## ತೈತ್ತಿರೀಯ ಶಾಖೆ

| ಕಾಂಡ ವಿಭಾಗ | ಸಾರಸ್ವತಪಾಠ |
|---|---|
| ೧) ಪ್ರಾಜಾಪತ್ಯಕಾಂಡ | ೧) ತೈ. ಸಂ. ೭ ಕಾಂಡಗಳು |
| ೨) ಸೌಮ್ಯಕಾಂಡ | ೪೪ ಪ್ರಪಾಠಕಗಳು |
| ೩) ಆಗ್ನೇಯಕಾಂಡ | ೨) ತೈ. ಬ್ರಾ. ೩ ಅಷ್ಟಕಗಳು ೨೮ ಪ್ರ. |
| ೪) ವೈಶ್ವದೇವಕಾಂಡ | ೩) ತೈ. ಆ. ೧೦ ಪ್ರ. ಅಥವಾ ೮ ಪ್ರ. |
| ೫) ಸ್ವಾಯಂಭುವಕಾಂಡ | ೪) ಏಕಾಗ್ನಿಕಾಂಡ ೨ ಪ್ರಪಾಠಕಗಳು |

ಪ್ರಾಜಾಪತ್ಯವೇ ಮೊದಲಾದ ಕಾಂಡಗಳಲ್ಲಿ ಬರುವ ವಿಭಾಗಗಳನ್ನು ಬೋಧಾಯನ ಗೃಹ್ಯಸೂತ್ರದಲ್ಲಿ ನಿರ್ದೇಶಿಸಲಾಗಿದೆ.

**ಪೌರೋಡಾಶಿಕಂ ಯಾಜಮಾನಂ ಹೋತಾರಃ ಹೌತ್ರಂ ಪಿತೃಮೇಧಃ ಇತಿ ಸಬ್ರಾಹ್ಮಣಾನಿ ಸಾನುಬ್ರಾಹ್ಮಣಾನಿ ಪ್ರಾಜಾಪತ್ಯಾನಿ.**

—ಬೋಧಾಯನ ಗೃಹ್ಯಸೂತ್ರ 3–3

ಮೊದಲನೆಯ ಪ್ರಾಜಾಪತ್ಯಕಾಂಡದಲ್ಲಿ ೧) ಪೌರೋಡಾಶಿಕ, ೨) ಯಾಜಮಾನ, ೩) ಹೋತೃ, ೪) ಹೌತ್ರ ೫) ಪಿತೃಮೇಧಗಳ ಮಂತ್ರಗಳೂ ಮತ್ತು ಇವೆಲ್ಲದರ ಬ್ರಾಹ್ಮಣಗಳೂ, ಅನುಬ್ರಾಹ್ಮಣಗಳೂ ಸೇರಿವೆ.[1]

ಕಾಂಡವಿಭಾಗದಂತೆ ಮಂತ್ರಗಳೇ ಒಂದೆಡೆ ಮತ್ತು ಅವುಗಳ ವಿನಿಯೋಗವನ್ನು ತಿಳಿಸುವ ಬ್ರಾಹ್ಮಣಗಳೇ ಒಂದೆಡೆಯೆಂದು ವಿಭಾಗಿಸಬಹುದು. ಆದುದರಿಂದ ಈ ಕೆಳಗಿನ ಕೋಷ್ಟಕದಲ್ಲಿ ಕಾಂಡ ವಿಭಾಗವನ್ನು ತೋರಿಸಿ ಸಾರಸ್ವತಪಾಠದ ಅಧ್ಯಯನಪರಂಪರೆಯಂತೆ ಆಯಾ ಮಂತ್ರ-ಬ್ರಾಹ್ಮಣಭಾಗಗಳ ಸ್ಥಾನವನ್ನು ನಿರ್ದೇಶಿಸಲಾಗಿದೆ.

1. ಪೌರೋಡಾಶಿಕ ಮುಂತಾದ ಅಂತರ್ವಿಭಾಗಗಳನ್ನೂ ಭಟ್ಟಭಾಸ್ಕರರು ಪ್ರಾಜಾಪತ್ಯ ಮೊದಲಾದವುಗಳನ್ನು ಹೇಗೋ ಹಾಗೇ ಕಾಂಡಗಳೆಂದೇ ನಿರ್ದೇಶಿಸಿದ್ದಾರೆ.



# ತೈತ್ತಿರೀಯ ಶಾಖೆಯಲ್ಲಿ
# ಕಾಂಡಪಾಠ ಮತ್ತು ಸಾರಸ್ವತಪಾಠಗಳ ಕ್ರಮಸೂಚಿ

## ಅ. ಪ್ರಾಜಾಪತ್ಯಕಾಂಡ

### ೧. ಪೌರೋಡಾಶಿಕ

ಮಂತ್ರ

ಇಷೇ ತ್ವಾ .... ವಾತೇಧಾಃ ।

ಸಾರಸ್ವತಪಾಠ :
ತೈ. ಸಂ. ೧-೧-೧ ರಿಂದ ೧೩ ಅನುವಾಕಗಳು ಪೂರ್ಣ.

ಬ್ರಾಹ್ಮಣ

1. ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ ।

....ಪ್ರತಿತಿಷ್ಠತಿ ಪ್ರಜಯಾ ಪಶುಭಿರ್ಯಜಮಾನಃ ।

ಸಾರಸ್ವತಪಾಠ :
ತೈ. ಬ್ರಾ. ೩-೨-೧ ರಿಂದ ೧೦ ಅನುವಾಕಗಳು ಪೂರ್ಣ.

2. ಪ್ರತ್ಯುಷ್ಟಗ್ಂ ರಕ್ಷಃ ಪ್ರತ್ಯುಷ್ಟಾ ಅರಾತಯ ಇತ್ಯಾಹ ।

....ಶುಚ್ಯೈವೈನಮರ್ಪಯತಿ ।

ಸಾರಸ್ವತಪಾಠ :
ತೈ. ಬ್ರಾ. ೩-೩-೧ ರಿಂದ ೧೧ ಅನುವಾಕಗಳು ಪೂರ್ಣ.

---

ತೈ. ಸಂ. ತೈತ್ತಿರೀಯ ಸಂಹಿತೆ
ತೈ. ಬ್ರಾ. ತೈತ್ತಿರೀಯ ಬ್ರಾಹ್ಮಣ



3. ವಿಶ್ವರೂಪೋ ವೈ ತ್ವಾಷ್ಟ್ರಃ

....ಹನ್ತಿ ಕ್ಷುಧಂ ಭ್ರಾತೃವ್ಯವಾ । (ಅನುಬ್ರಾಹ್ಮಣ)[1]

ಸಾರಸ್ವತಪಾಠ :
ತೈ. ಸಂ. ೨–೫–೧ ರಿಂದ ೬ ಅನುವಾಕಗಳು ಪೂರ್ಣ.

4. ಸಮಿದ್ಧೋ ಯಜತಿ....

....ಪಶೂನಾಂ ಗೋಪೀಥಾಯ । (ಅನು)

ಸಾರಸ್ವತಪಾಠ :
ತೈ. ಸಂ. ೨–೬–೧ ರಿಂದ ೬ ಅನುವಾಕಗಳು ಪೂರ್ಣ.

5. ದೇವಾ ವೈ ಸಾಮಿಧೇನೀರನೂಚ್ಯ

ಯಜ್ಞಂ ನಾನ್ವಪಶ್ಯನ್....

....ತಸ್ಮಾದ್ಬ್ರಾಹ್ಮಣೋ ನ ಪರೋಚ್ಯಃ । (ಅನು)

ಸಾರಸ್ವತಪಾಠ :
ತೈ. ಸಂ. ೨–೫–೧೧ ನೆಯ ಅನುವಾಕದಲ್ಲಿ
ಮನುಷ್ಯಲೋಕಂ ಚಾಭಿಜಯತಿ
ಎಂಬುದರ ನಂತರ ಅನುವಾಕ ಮುಗಿಯುವವರೆಗಿನ ಭಾಗ.

---

1. ಮಂತ್ರಗಳ ವಿನಿಯೋಗವನ್ನು ಹೇಳುವ ಬ್ರಾಹ್ಮಣದಲ್ಲಿ ಅರ್ಥವಾದಗಳು ಸೇರಿದ್ದರೆ ಅದು 'ಅನುಬ್ರಾಹ್ಮಣ.'

(ಅನು) = ಅನುಬ್ರಾಹ್ಮಣ.



೯. ಇಂದ್ರೋ ವೃತ್ರಗ್ಂ ಹತ್ವಾ । ....

....ನಾರ್ತಿಮಾರ್ಛತಿ ಯಜಮಾನಃ ।

ಸಾರಸ್ವತಪಾಠ :
ತೈ. ಬ್ರಾ. ೧-೩-೧೦ ನೆಯ ಅನುವಾಕ ಪೂರ್ಣ.

* * *

## ೨. ಯಾಜಮಾನ

ಮಂತ್ರ

1. ಪಯಸ್ವತೀರೋಷಧಯಃ ....

.... ಸ್ವಾಹಾ ಘರ್ಮೋ ದೇವಾಗ್ಂ ಅಪ್ಯೇತು ।

ಸಾರಸ್ವತಪಾಠ :
ತೈ. ಸಂ. ೧-೫-೧೦ ನೆಯ ಅನುವಾಕದಲ್ಲಿ
ಸಂದಧಾಮಿ ಹವಿಷಾ ಘೃತೇನ
ಎಂಬುದರ ನಂತರ ಆ ಅನುವಾಕ ಪೂರ್ಣ.

2. ಸಂ ತ್ವಾ ಸಿಂಚಾಮಿ ಯಜುಷಾ ಪ್ರಜಾಮಾಯುರ್ಧನಂ ಚ।

.... ದೀರ್ಘೋ ರಯಿಃ ಪೃಥುಬುಧ್ನಃ ಸಭಾವಾನ್ ।

ಸಾರಸ್ವತಪಾಠ :
ತೈ. ಸಂ. ೧-೬-೧ ರಿಂದ ೬ ಅನುವಾಕಗಳು ಪೂರ್ಣ.

4



ಬ್ರಾಹ್ಮಣ

1. ಯಥಾ ವೈ ಸಮೃತಸೋಮಾಃ ....

ಆಯುರೇವಾತ್ಮನ್ಧತ್ತೇ ಪ್ರತಿ ಯಜ್ಞೇನ ತಿಷ್ಠತಿ ।

ಸಾರಸ್ವತಪಾಠ :
ತೈ. ಸಂ. ೧-೬-೭ ರಿಂದ ೧೧ ನೆಯ ಅನುವಾಕ ಪೂರ್ಣ.

2. ಪಾಕಯಜ್ಞಂ ವಾ ಅನ್ವಾಹಿತಾಗ್ನೇಃ ಪಶವ ಉಪತಿಷ್ಠನ್ತೇ

.... ಕುರ್ವತೋ ಮೇ ಮೋಪದಸದಿತ್ಯಾಹ ಭೂಮಾನ-

ಮೇವೋಪೈತಿ ।

ಸಾರಸ್ವತಪಾಠ :
ತೈ. ಸಂ. ೧-೭-೧ ನೆಯ ಅನುವಾಕ ಪೂರ್ಣ.

3. ಪರೋಕ್ಷಂ ವಾ ಅನ್ಯೇ ದೇವಾ ಇಜ್ಯನ್ತೇ ....

.... ಅಸ್ಯ ಪ್ರಜಾಯಾಂ ವಾಜೀ ಜಾಯತೇ ।

ಸಾರಸ್ವತಪಾಠ :
ತೈ. ಸಂ. ೧-೭-೩ ರಿಂದ ೬ನೆಯ ಅನುವಾಕಪೂರ್ಣ.

* * *



## ೩. ಹೋತೃ

### ಮಂತ್ರ

1. ಚಿತ್ತಿಃ ಸ್ರುಕ್ । ....

.... ಸರ್ವಂ ಮನಿಷಾಣ ।

ಸಾರಸ್ವತಪಾಠ :
ತೈ. ಆ. ೩–೧ ರಿಂದ ೧೩ ಅನುವಾಕಗಳು ಪೂರ್ಣ.

### ಬ್ರಾಹ್ಮಣ

1. ಪ್ರಜಾಪತಿರಕಾಮಯತ ಪ್ರಜಾಃ ಸೃಜೇಯೇತಿ ।

.... ನಿದಾನವಾನ್ಭವತಿ ।

ಸಾರಸ್ವತಪಾಠ :
ತೈ. ಬ್ರಾ. ೨–೨–೧ ರಿಂದ ೧೧ ಅನುವಾಕಗಳು ಪೂರ್ಣ.

2. ಬ್ರಹ್ಮವಾದಿನೋ ವದನ್ತಿ ।

.... ಯ ಏವಂ ವೇದ ।

ಸಾರಸ್ವತಪಾಠ :
ತೈ. ಬ್ರಾ. ೨–೩–೧ ರಿಂದ ೧೧ ಅನುವಾಕಗಳು ಪೂರ್ಣ.

* * *

---

ತೈ. ಆ. = ತೈತ್ತಿರೀಯ ಆರಣ್ಯಕ.



## ೪. ಹೌತ್ರ

### ಮಂತ್ರ

1. ಸತ್ಯಂ ಪ್ರಪದ್ಯೇ । ....

.... ವಿಶ್ವಸ್ಯ ಪ್ರಿಯಸ್ಯೋಽಪಹೂತಸ್ಯೋಽಪಹೂತಾ ।

ಸಾರಸ್ವತಪಾಠ :

ತೈ. ಬ್ರಾ. ೩–೫–೧ ರಿಂದ ೧೩ ಅನುವಾಕಗಳು ಪೂರ್ಣ.

### ಬ್ರಾಹ್ಮಣ

1. ದೇವಾ ವೈ ನರ್ಚಿ ನ ಯಜುಷ್ಯಶ್ರಯನ್ತ ....

.... ದೇವಲೋಕಂ ಚೈವ

ಮನುಷ್ಯಲೋಕಂ ಚಾಭಿಜಯತಿ .... (ಅನು)

ಸಾರಸ್ವತಪಾಠ :

ತೈ. ಸಂ. ೨–೫–೭ ರಿಂದ ೧೧ ನೆಯ ಅನುವಾಕದಲ್ಲಿ

ದೇವಾ ವೈ ಸಾಮಿಧೇನೀರನೂಚ್ಯ ಯಜ್ಞಂ ನಾನ್ವಪಶ್ಯನ್

ಎಂಬುದು ಪ್ರಾರಂಭವಾಗುವವರೆಗೆ.

2. ಮನುಃ ಪೃಥಿವ್ಯಾ ಯಜ್ಞಿಯಮೈಚ್ಛತ್ ....

.... ಪಙ್ಕ್ತಿಮನೂದ್ಯನ್ತಿ । (ಅನು)

ಸಾರಸ್ವತಪಾಠ :

ತೈ. ಸಂ. ೨–೬–೭ ರಿಂದ ೧೦ ನೆಯ ಅನುವಾಕ ಪೂರ್ಣ.



3. ಸಗ್ಂ ಶ್ರವಾ ಹ ಸೌವರ್ಚನಸಸ್ಸುಸೀಂ ಜ್ಞಾವಮೌಪೋದಿತಿ

ಮುವಾಚ ....

.... ಯ ಏವಂ ವೇದ ಪ್ರೈವ ಜಾಯತೇಽನ್ನಾದೋ ಭವತಿ ।

ಸಾರಸ್ವತಪಾಠ :
ತೈ. ಸಂ. ೧-೭-೨ ನೆಯ ಅನುವಾಕ ಪೂರ್ಣ.

* * *

## ೫. ಪಿತೃಮೇಧ*

ಮಂತ್ರ

1. ಪರೇಯುವಾಗ್ಂಸಂ ಪ್ರವತೋ ಮಹೀರನು ಬಹುಭ್ಯಃ

ಪನ್ಥಾಮನಪಸ್ಪಶಾನಮ್ । ...

.... ಓಮುತ್ಸೃಜತ ।

ಸಾರಸ್ವತಪಾಠ :
ತೈ. ಆ. ೬-೧ ರಿಂದ ೧೨ ಅನುವಾಕಗಳು.



* ಇದರ ಮಂತ್ರಗಳ ವಿನಿಯೋಗವನ್ನು ತಿಳಿಸುವ ಬ್ರಾಹ್ಮಣವು ತೈತ್ತಿರೀಯ ಶಾಖೆಯಲ್ಲಿ ಪ್ರತ್ಯೇಕವಾಗಿ ಪಠಿತವಾಗಿಲ್ಲ. ಆದುದರಿಂದ ಬೋಧಾಯನ ಕಲ್ಪಸೂತ್ರದಲ್ಲಿಯೂ, ಭರದ್ವಾಜ ಕಲ್ಪಸೂತ್ರದಲ್ಲಿಯೂ "ಅಥ ಗಾರ್ಹಪತ್ಯ..." ಎಂಬುದಾಗಿಯೂ, "ಅನ್ವಾರಬ್ಧೇ ಮೃತ ಆಹವನೀಯೇ..." ಎಂದು ಈ ಮಂತ್ರಗಳ ವಿನಿಯೋಗವು ಪ್ರಾರಂಭಗೊಳ್ಳುವುದು.



ಆಧ್ವರ್ಯವಂ ಗ್ರಹಾಃ ದಾಕ್ಷಿಣಾನಿ ಸಮಿಷ್ಟಯಜೂಗ್‌ಂಷಿ ಅವ-ಭೃಥಯಜೂಗ್‌ಂಷಿ ವಾಜಪೇಯಃ ಶುಕ್ರಿಯಾಣಿ ಸವಾಃ ಇತಿ ಸಬ್ರಾಹ್ಮಣಾನಿ ಸಾನುಬ್ರಾಹ್ಮಣಾನಿ ಸೌಮ್ಯಾನಿ.

—ಬೋಧಾಯನ ಗೃಹ್ಯಸೂತ್ರ

ಎರಡನೆಯ ಸೌಮ್ಯಕಾಂಡದಲ್ಲಿ 1) ಆಧ್ವರ್ಯವ 2) ಗ್ರಹ. 3) ದಾಕ್ಷಿಣ 4) ಸಮಿಷ್ಟ ಯಜೂಗ್‌ಂಷಿ 5) ಅವಭೃಥ ಯಜೂಗ್‌ಂಷಿ 6) ವಾಜ-ಪೇಯ 7) ಶುಕ್ರಿಯ 8) ಸವ ಇವುಗಳ ಮಂತ್ರಗಳೂ ಮತ್ತು ಇವೆಲ್ಲದರ ಬ್ರಾಹ್ಮಣಗಳೂ, ಅನುಬ್ರಾಹ್ಮಣಗಳೂ ಸೇರಿವೆ.

## ಆ. ಸೌಮ್ಯಕಾಂಡ

### ೧. ಆಧ್ವರ್ಯವ

ಮಂತ್ರ

1. ಆಪ ಉಂದನ್ತು ಜೀವಸೇ ದೀರ್ಘಾಯುತ್ವಾಯ ವರ್ಚಸೇ ।

.... ವೈಷ್ಣವಮಸಿ ವಿಷ್ಣವೇ ತ್ವಾ ।

ಸಾರಸ್ವತಪಾಠ :

ತೈ. ಸಂ. ೧–೨–೧ ರಿಂದ ೧೩ ಅನುವಾಕಗಳು ಪೂರ್ಣ.

2. ದೇವಸ್ಯ ತ್ವಾ ಸವಿತುಃ ಪ್ರಸವೇಽಶ್ವಿನೋರ್ಬಾಹುಭ್ಯಾಂ

ಪೂಷ್ಣೋ ಹಸ್ತಾಭ್ಯಾಮಾದದೇ । ....

.... ಸ ಯಂತಾ ಶಶ್ವತೀ ರಿಷಃ ।

ಸಾರಸ್ವತಪಾಠ :

ತೈ. ಸಂ. ೧–೩–೧ ರಿಂದ ೧೩ ಅನುವಾಕಗಳು ಪೂರ್ಣ



3. ಪವಮಾನಸ್ಸುವರ್ಜನಃ । ....

.... ಜಾತವೇದಾ ಮೋರ್ಜಯನ್ತ್ಯಾ ಪುನಾತು ।

ಸಾರಸ್ವತಪಾಠ :
ತೈ. ಬ್ರಾ. ೧-೪-೮ ನೆಯ ಅನುವಾಕ ಪೂರ್ಣ.

4. ಬ್ರಹ್ಮ ಸನ್ಧತ್ತಂ ತನ್ಮೇ ಜಿನ್ವತಮ್ । ....

.... ತಸ್ಮಾ ಇನ್ದ್ರಾಯ ಸುತಮಾಜುಹೋಮಿ ।

ಸಾರಸ್ವತಪಾಠ :
ತೈ. ಬ್ರಾ. ೧-೧-೧ ನೆಯ ಅನುವಾಕ ಪೂರ್ಣ.

ಬ್ರಾಹ್ಮಣ

1. ಪ್ರಾಚೀನವಗ್ಂಶಂ ಕರೋತಿ ದೇವಮನುಷ್ಯಾ

ದಿಶೋ ವ್ಯಭಜನ್ತ ....

.... ವಾರುಣ್ಯರ್ಚಾ ಪರಿಚರತಿ ಸ್ವಯೈವೈನಂ

ದೇವತಯಾ ಪರಿಚರತಿ ।

ಸಾರಸ್ವತಪಾಠ :
ತೈ. ಸಂ. ೬-೧-೧ ರಿಂದ ೧೧ ಅನುವಾಕಗಳು ಪೂರ್ಣ.

2. ಯದುಭೌ ವಿಮುಚ್ಯಾತಿಥ್ಯಂ ಗೃಹ್ಣೀಯಾತ್ ....

.... ಯ ಏವಂ ವೇದ ದುಹ ಏವೈನಾಮ್ ।

ಸಾರಸ್ವತಪಾಠ :
ತೈ. ಸಂ. ೬-೨-೧ ರಿಂದ ೧೧ ಅನುವಾಕಗಳು ಪೂರ್ಣ.



3. ಚಾತ್ವಾಲಾದ್ಧಿಷ್ಣಿಯಾನುಪವಪತಿ ಯೋನಿರ್ವೈ ಯಜ್ಞಸ್ಯ

ಚಾತ್ವಾಲಂ ಯಜ್ಞಸ್ಯ ಸಯೋನಿತ್ವಾಯ ....

.... ಪ್ರಾಣಾಪಾನಾವೇವ ಪಶುಷು ದಧಾತಿ ।

ಸಾರಸ್ವತಪಾಠ :
ತೈ. ಸಂ. ೬–೩–೧ ರಿಂದ ೧೧ ಅನುವಾಕಗಳು ಪೂರ್ಣ.

4. ಯಜ್ಞೇನ ವೈ ಪ್ರಜಾಪತಿಃ ಪ್ರಜಾ ಅಸೃಜತ ....

.... ಯದ್ಯತಿರಾತ್ರೋ ಯಜುರ್ವದನ್ತ್ಯಪದ್ಯತೇ

ಯಜ್ಞಕ್ರತೂನಾಂ ವ್ಯಾವೃತ್ತ್ಯೈ ।

ಸಾರಸ್ವತಪಾಠ :
ತೈ. ಸಂ. ೬–೪–೧ ರಿಂದ ೩ ಅನುವಾಕಗಳು ಪೂರ್ಣ.

5. ಸ್ಫ್ಯೇನ ವೇದಿಮುದ್ಧಂತಿ ರಥಾಕ್ಷೇಣ ವಿಮಿಮೀತೇ ....

.... ಅಥೋ ಛಂದಃಸ್ವೇವ ರಸಂ ದಧಾತಿ[1] ।

ಸಾರಸ್ವತಪಾಠ :
ತೈ. ಸಂ. ೬–೬–೪ ರಿಂದ ೭ನೆಯ ಅನುವಾಕ ಪೂರ್ಣ.

---

1. ಇದರಲ್ಲಿ ಮಂತ್ರವೂ ಸೇರಿದೆ. ಕೋಷ್ಟಕದಲ್ಲಿ ನೀಡಿರುವ ಬ್ರಾಹ್ಮಣ ಭಾಗದಲ್ಲಿ ಒಂದೊಂದು ಸಣ್ಣ ಮಂತ್ರವೂ ಸೇರಿರುವ ಸಂಭವವಿದೆ. ತೈತ್ತಿರೀಯ ಶಾಖೆಯಲ್ಲಿ ಬರುವ ಮಂತ್ರಗಳ ಮತ್ತು ಬ್ರಾಹ್ಮಣಗಳ ಪರಿಷ್ಕೃತ ಸೂಚಿಯನ್ನು ಈ ಸಂಪುಟದ ನಂತರ ನೀಡಲಾಗುವುದು. ಈ ಕೋಷ್ಟಕದಲ್ಲಿ ಬಹುತೇಕ ಮಂತ್ರ–ಬ್ರಾಹ್ಮಣಗಳ ವಿಭಾಗವಿದ್ದೇ ಇದೆ.



6. ದೇವಾಸುರಾಃ ಸಂಯತ್ತಾ ಆಸನ್ । ....

.... ಯ ಉ ಚೈನಮೇವಂ ವೇದ ।

ಸಾರಸ್ವತಪಾಠ :
ತೈ. ಬ್ರಾ. ೧-೫-೯ ರಿಂದ ೧೨ನೆಯ ಅನುವಾಕ ಪೂರ್ಣ.

7. ಪ್ರಜನನಂ ಜ್ಯೋತಿಃ ....

.... ಯ ಏವಂ ವೇದ ಪರಮಾಂ ತಾಮೇವ ಗಚ್ಛತಿ ।

ಸಾರಸ್ವತಪಾಠ :
ತೈ. ಸಂ. ೭-೧-೧ ರಿಂದ ೩ ಅನುವಾಕಗಳು ಪೂರ್ಣ.

* * *

## ೨. ಗ್ರಹ

ಮಂತ್ರ

1. ಆ ದದೇ ....

.... ಏಷ ತೇ ಯೋನಿರಿಂದ್ರಾಯ ತ್ವಾ ಷೋಡಶಿನೇ ।

ಸಾರಸ್ವತಪಾಠ :
ತೈ. ಸಂ. ೧-೪-೧ ರಿಂದ ೪೨ ಅನುವಾಕಗಳು ಪೂರ್ಣ.

ಬ್ರಾಹ್ಮಣ

1. ದೇವಸ್ಯ ತ್ವಾ ಸವಿತುಃ ಪ್ರಸವ ಇತಿ ಗ್ರಾವಾಣಮಾದತ್ತೇ ....

.... ತಸ್ಮಾದ್ವತ್ಸಮುಪಾಕೃತಂ ಗೌರಭಿನಿವರ್ತತೇ ।

ಸಾರಸ್ವತಪಾಠ :
ತೈ. ಸಂ. ೬-೪-೪ ರಿಂದ ೧೧ನೆಯ ಅನುವಾಕ ಪೂರ್ಣ.



2. ಇಂದ್ರೋ ವೃತ್ರಾಯ ವಜ್ರಮುದಯಚ್ಛತ್ ....

.... ತೇನ ಪಙ್ಕ್ತಿರಾಪ್ಯತೇ ತದ್ಯಜ್ಞಸ್ಯ ಪಾಂಕ್ತತ್ವಮ್ ॥

ಸಾರಸ್ವತಪಾಠ :

ತೈ. ಸಂ. ೬-೫-೧ ರಿಂದ ೧೧ ಅನುವಾಕಗಳು ಪೂರ್ಣ.

3. ದೇವಾ ವಾ ಇಂದ್ರಿಯಂ ವೀರ್ಯಾಂ೩ ವ್ಯಭಜನ್ತ ....

.... ಏತದ್ವೈ ವಜ್ರಸ್ಯ ರೂಪಗ್ಂ ಸಮೃದ್ಧ್ಯೈ ।

ಸಾರಸ್ವತಪಾಠ :

ತೈ. ಸಂ. ೬-೬-೮ ರಿಂದ ೧೧ನೆಯ ಅನುವಾಕ ಪೂರ್ಣ.

4. ಉಭಯೇ ವಾ ಏತೇ ಪ್ರಜಾಪತೇರಧ್ಯಸೃಜ್ಯನ್ತ ।

.... ಅಥೋ ವ್ಯಾವೃತಮೇವ ತದ್ಯಜಮಾನೋ ಗಚ್ಛತಿ ॥

ಸಾರಸ್ವತಪಾಠ :

ತೈ. ಬ್ರಾ. ೧-೪-೧ ನೆಯ ಅನುವಾಕ ಪೂರ್ಣ.

5. ಬ್ರಹ್ಮವಾದಿನೋ ವದಂತಿ । ಕತಿ ಪಾತ್ರಾಣಿ ಯಜ್ಞಂ ವಹಂತೀತಿ ।....ಯಜ್ಞಸ್ಯ ಧೃತ್ಯಾ ಅಸಂವ್ಲಯಾಯ ।

ಸಾರಸ್ವತಪಾಠ :

ತೈ. ಬ್ರಾ-೧-೫-೪ನೆಯ ಅನುವಾಕ ಪೂರ್ಣ.

* * *



## ೩. ದಾಕ್ಷಿಣ

ಮಂತ್ರ

1. ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ।

.... ಸುಕೃತಾಂ ಲೋಕೇ ಸೀದತ ತನ್ನಸ್ಸಗ್ಂಸ್ಕೃತಮ್ ।

ಸಾರಸ್ವತಪಾಠ :

ತೈ. ಸಂ. ೧-೪-೪೩ ನೆಯ ಅನುವಾಕ ಪೂರ್ಣ.

ಬ್ರಾಹ್ಮಣ

1. ಸುವರ್ಗಾಯ ವಾ ಏತಾನಿ ಲೋಕಾಯ ಹೂಯನ್ತೇ ....

.... ಆತ್ಮಾನಮೇವ ಯಜ್ಞಸ್ಯ ದಕ್ಷಿಣಾಭಿಃ ಸಮರ್ಧಯತಿ ।

ಸಾರಸ್ವತಪಾಠ :

ತೈ. ಸಂ. ೬-೬-೧ ನೆಯ ಅನುವಾಕ ಪೂರ್ಣ.

* * *

## ೪. ಸಮಿಷ್ಟಯಜೂಗ್ಂಷಿ

ಮಂತ್ರ

1. ಧಾತಾ ರಾತಿಃ ಸವಿತೇದಂ ಜುಷಂತಾಂ ಪ್ರಜಾಪತಿರ್ನಿಧಿ

ಪತಿರ್ನೋ ಅಗ್ನಿಃ ....

.... ವಾಚಿ ಸ್ವಾಹಾ ವಾತೇ ಧಾಃ ।

ಸಾರಸ್ವತಪಾಠ :

ತೈ. ಸಂ. ೧-೪-೪೪ ನೆಯ ಅನುವಾಕ ಪೂರ್ಣ.



ಬ್ರಾಹ್ಮಣ

1. ಸಮಿಷ್ಟಯಜೂಗ್ಂಷಿ ಜುಹೋತಿ ....

.... ಯಜಮಾನಸ್ಯಾಪರಾಭಾವಾಯ ।

ಸಾರಸ್ವತಪಾಠ :
ತೈ. ಸಂ. ೬–೬–೨ನೆಯ ಅನುವಾಕ ಪೂರ್ಣ.

* * *

೫. ಅವಭೃಥ ಯಜೂಗ್ಂಷಿ

ಮಂತ್ರ

1. ಉರುಗ್ಂ ಹಿ ರಾಜಾ ವರುಣಶ್ಚಕಾರ ....

.... ತಂ ಮಾ ಸಗ್ಂಸೃಜ ವರ್ಚಸಾ ।

ಸಾರಸ್ವತಪಾಠ :
ತೈ. ಸಂ. ೧–೪–೪೫ ನೆಯ ಅನುವಾಕ ಪೂರ್ಣ.

ಬ್ರಾಹ್ಮಣ

1. ಅವಭೃಥಯಜೂಗ್ಂಷಿ ಜುಹೋತಿ ....

.... ತೇಜ ಏವಾತ್ಮನ್ಧತ್ತೇ ।

ಸಾರಸ್ವತಪಾಠ :
ತೈ. ಸಂ. ೬–೬–೩ನೆಯ ಅನುವಾಕ ಪೂರ್ಣ.



## ೬. ವಾಜಪೇಯ

### ಮಂತ್ರ

1. ದೇವ ಸವಿತಃ ಪ್ರಸುವ ಯಜ್ಞಂ ಪ್ರಸುವ ಯಜ್ಞಪತಿಂ

ಭಗಾಯ ದಿವ್ಯೋ ಗಂಧರ್ವಃ । ....

.... ಏಷ ತೇ ಯೋನಿಃ ಪ್ರಜಾಪತಯೇ ತ್ವಾ ।

ಸಾರಸ್ವತಪಾಠ :
ತೈ. ಸಂ. ೧-೭-೭ ರಿಂದ ೧೨ ನೆಯ ಅನುವಾಕ ಪೂರ್ಣ.

### ಬ್ರಾಹ್ಮಣ

1. ದೇವಾ ವೈ ಯಥಾದರ್ಶಂ ಯಜ್ಞಾನಾಹರನ್ತ್ । ....

.... ಸೂರ್ಯರಶ್ಮಿಗ್ಂ ಸಮಾಭೃತಮಿತ್ಯಾಹ

ಸಶುಕ್ರತ್ವಾಯ ।

ಸಾರಸ್ವತಪಾಠ :
ತೈ. ಬ್ರಾ-೧-೩-೨ರಿಂದ ೯ನೆಯ ಅನುವಾಕ ಪೂರ್ಣ.

* * *



## ೭. ಶುಕ್ರಿಯ

### ಮಂತ್ರ

1. ನಮೋ ವಾಚೇ ಯಾಚೋದಿತಾ ಯಾಚಾನುದಿತಾ ....

..... ಬ್ರಹ್ಮ ಪ್ರಾವಾದಿಷ್ಟ ತನ್ಮೋ ಮಾಹಾಸೀತ್ ।

ಸಾರಸ್ವತಪಾಠ :
ತೈ. ಆ. ೪-೧ ರಿಂದ ೪೩ ಅನುವಾಕಗಳು.

### ಬ್ರಾಹ್ಮಣ

1 ದೇವಾ ವೈ ಸತ್ರಮಾಸತ । ....

.... ಏವ ತಪತಿ ।

ಸಾರಸ್ವತಪಾಠ :
ತೈ. ಆ. ೫-೧ ರಿಂದ ೧೩ ಅನುವಾಕಗಳು ಪೂರ್ಣ.

* * *

## ೮. ಸವ

### ಮಂತ್ರ

1. ಅಷಾಢಂ ಯುತ್ಸು ಪೃತನಾಸು ಪಪ್ರಿಮ್ । ....

..... ಜಯಂತಂ ತ್ವಾಮನುಮದೇಮ ಸೋಮ ।

ಸಾರಸ್ವತಪಾಠ :
ತೈ. ಬ್ರಾ. ೩-೭-೪ ನೆಯ ಅನುವಾಕದಲ್ಲಿನ ಕಡೆಯ ನಾಲ್ಕು ವಾಕ್ಯಗಳು.



2. ಯೇ ವೇ ಪಂಚಾಶತಂ ದದುಃ ।

.... ನ್ಯವದವ್ಯೃತ ನ್ಯೃಷಾವ್ ।

ಸಾರಸ್ವತಪಾಠ :
ತೈ. ಬ್ರಾ. ೨-೭-೫ನೆಯ ಅನುವಾಕದಲ್ಲಿ ಕಡೆಯ ಐದು ವಾಕ್ಯಗಳು.

3. ರೇವಜ್ಜಾತಸ್ಸಹಸಾ ವೃದ್ಧಃ ।

.... ಪ್ರಜಾಪತೇಸ್ತ್ವಾ ಪರಮೇಷ್ಠಿನಸ್ಸ್ವಾರಾಜ್ಯೇ-

ನಾಭಿಷಿಂಚಾಮಿ । ....

ಸಾರಸ್ವತಪಾಠ :
ತೈ. ಬ್ರಾ. ೨-೭-೬ ನೆಯ ಅನುವಾಕದಲ್ಲಿ

ಷಟ್‌ತ್ರಿಗ್‌ಂಶಸ್ಸರ್ವಃ

ಎಂಬ ವಾಕ್ಯದ ನಂತರ

ಇತ್ಯಾಹ

ಎಂಬ ಪದಗಳು ಬರುವವರೆಗಿನ ಭಾಗ.

4. ಸಿಗ್‌ಂಹೇ ವ್ಯಾಘ್ರ ಉತ ಯಾ ಪೃದಾಕೌ । ....

.... ಆಯಂ ಪೃಣಕ್ತು ರಜಸೀ ಉಪಸ್ಥಮ್ ।

ಸಾರಸ್ವತಪಾಠ :
ತೈ. ಬ್ರಾ. ೨-೭-೭ ಮತ್ತು ೮ ನೆಯ ಅನುವಾಕಗಳು ಪೂರ್ಣ.



5. ಅಸ್ಯಾ ಜರಾಸೋ ದಮಾ ಮರಿತ್ರಾಃ । ....

.... ಇಂದ್ರಂ ದೇವಾಸಃ ಶವಸಾವಮುದನ್ನನು ।

ಸಾರಸ್ವತಪಾಠ :
ತೈ. ಬ್ರಾ. ೨-೭-೧೨ ಮತ್ತು ೧೩ನೆಯ ಅನುವಾಕಗಳು ಪೂರ್ಣ.

6. ವ್ಯಾಘ್ರೋಽಯಮಗ್ನೌ ಚರತಿ ಪ್ರವಿಷ್ಟಃ ।

.... ಪೌಗ್ಂಸ್ಯೇನೇಮಗ್ಂ ಸಗ್ಂಸೃಜಾಥೋ ವೀರ್ಯೇಣ।

ಸಾರಸ್ವತಪಾಠ :
ತೈ. ಬ್ರಾ. ೨-೭-೧೫ ರಿಂದ ೧೭ನೆಯ ಅನುವಾಕ ಪೂರ್ಣ.

## ಬ್ರಾಹ್ಮಣ

1. ತ್ರಿವೃತ್ಸ್ತೋಮೋ ಭವತಿ । ....

.... ಯತ್ಕಿಂಚ ರಾಜಸೂಯಮೃತೇ ಸೋಮಮ್ ।

ತತ್ಸರ್ವಂ ಭವತಿ ।

ಸಾರಸ್ವತಪಾಠ :
ತೈ. ಬ್ರಾ. ೨-೭-೧ನೆಯ ಅನುವಾಕದಿಂದ ೮ನೆಯ ಅನುವಾಕದಲ್ಲಿ

**ಅಷಾಢಂ ಯುತ್ಸು**

**ಎಂಬುದು ಪ್ರಾರಂಭಗೊಳ್ಳುವವರೆಗೆ.**



2. ಯೋ ವೈ ಸೋಮೇನ ಸೂಯತೇ । ....

.... ಯತ್ಕಿಂಚ ರಾಜಸೂಯಮನುತ್ತರವೇದೀಕಮ್ ।

ತತ್ಸರ್ವಂ ಭವತಿ ।

ಸಾರಸ್ವತಪಾಠ :
ತೈ. ಬ್ರಾ. ೨-೭-೫ನೆಯ ಅನುವಾಕದಲ್ಲಿ

ಯೋ ವೋ ಪಂಚಾಶತಂ ದದುಃ ।

ಎಂದು ಪ್ರಾರಂಭಗೊಳ್ಳುವವರೆಗೆ.

3. ಏಷ ಗೋಸವಃ । ....

.... ಷಟ್ತ್ರಿಗ್ಂಶಸ್ಸರ್ವಃ ।

ಸಾರಸ್ವತಪಾಠ :
ತೈ. ಬ್ರಾ. ೨-೭-೬ನೆಯ ಅನುವಾಕದಲ್ಲಿ ಪ್ರಾರಂಭದಿಂದ

ಷಟ್ತ್ರಿಗ್ಂಶಸ್ಸರ್ವಃ ।

ಎಂಬ ವಾಕ್ಯವು ಪೂರ್ತಿಯಾಗುವವರೆಗೆ.

4. ಇತ್ಯಾಹ । ಸ್ವಾರಾಜ್ಯಮೇವೈನಂ ಗಮಯತಿ[1] ।

ಸಾರಸ್ವತಪಾಠ :
ತೈ. ಬ್ರಾ. ೨-೭-೬ ರಲ್ಲಿ ಕಡೆಯ ವಾಕ್ಯಕ್ಕಿಂತಲೂ ಹಿಂದಿನ

ವಾಕ್ಯದ ಇತ್ಯಾಹ ಎಂಬ ಪದಗಳು ಮತ್ತು ಕಡೆಯ ವಾಕ್ಯ.

1. 'ಶೇಷೇಬ್ರಾಹ್ಮಣಶಬ್ದಃ' ಎಂಬ ವಚನದಂತೆ ಈ ಖಂಡವೂ ಬ್ರಾಹ್ಮಣವೇ. ಈ ಕೋಷ್ಟಕದಲ್ಲಿ ಆಯಾ ಪ್ರಕರಣದ ಮಂತ್ರವೂ, ಅದರದ್ದೇ ಬ್ರಾಹ್ಮಣವಿದ್ದರೂ, ಕೆಲವೆಡೆ ಬೇರೆ ಪ್ರಕರಣದ ಒಂದೊಂದು ಬ್ರಾಹ್ಮಣವೂ ಇದೆ.





5. ಪ್ರಜಾಪತಿಃ ಪ್ರಜಾ ಅಸೃಜತ ।

.... ಪ್ರಜಾಪತೇರೇವ ನೈತಿ ।

ಸಾರಸ್ವತಪಾಠ :
ತೈ. ಬ್ರಾ. ೨–೭–೯ರಿಂದ ೧೧ನೆಯ ಅನುವಾಕ ಪೂರ್ಣ.

6. ಪ್ರಜಾಪತಿಃ ಪಶೂನಸೃಜತ । ....

.... ತಮೇತೇನಾಪ್ನೋತಿ ।

ಸಾರಸ್ವತಪಾಠ :
ತೈ. ಬ್ರಾ. ೨–೭–೧೪ನೆಯ ಅನುವಾಕ ಪೂರ್ಣ.

7. ಇಂದ್ರಂ ವೈ ಸ್ವಾವಿಶೋ ಮರುತೋ ನಾಪಾಚಾಯನ್।

.... ವ್ಯತಿಷಕ್ತಾಭಿರೇವಾಸ್ಯ ಪಾಪ್ಮನೋ ನುದತೇ ।

ಸಾರಸ್ವತಪಾಠ :
ತೈ. ಬ್ರಾ. ೨–೭–೧೮ನೆಯ ಅನುವಾಕ ಪೂರ್ಣ.

—



ಆಗ್ನ್ಯಾಧೇಯಮಗ್ನಿಹೋತ್ರಮಗ್ನ್ಯುಪಸ್ಥಾನಮಗ್ನಿಚಯನಂ ಸಾವಿತ್ರಂ ನಾಚಿಕೇತಂ ಚಾತುರ್ಹೋತ್ರಿಯಂ ವೈಶ್ವಸೃಜ-ಮಾರುಣಾ ಇತಿ ಸಬ್ರಾಹ್ಮಣಾನಿ ಸಾನುಬ್ರಾಹ್ಮಣಾನ್ಯಾಗ್ನೇ-ಯಾನಿ ।

—ಬೋಧಾಯನ ಗೃಹ್ಯಸೂತ್ರ

ಮೂರನೆಯ ಆಗ್ನೇಯಕಾಂಡದಲ್ಲಿ 1) ಅಗ್ನ್ಯಾಧೇಯ 2) ಅಗ್ನಿಹೋತ್ರ 3) ಅಗ್ನ್ಯುಪಸ್ಥಾನ 4) ಅಗ್ನಿಚಯನ 5) ಸಾವಿತ್ರ 6) ನಾಚಿಕೇತ 7) ಚಾತುರ್ಹೋತ್ರಿಯ 8) ವೈಶ್ವ-ಸೃಜ 9) ಆರುಣ–ಇವುಗಳ ಮಂತ್ರಗಳೂ ಮತ್ತು ಇವೆಲ್ಲದರ ಬ್ರಾಹ್ಮಣಗಳೂ, ಅನುಬ್ರಾಹ್ಮಣಗಳೂ ಸೇರಿವೆ.

## ೩. ಆಗ್ನೇಯಕಾಂಡ

### ೧. ಅಗ್ನ್ಯಾಧೇಯ

ಮಂತ್ರ

1. ಉದ್ಧನ್ಯಮಾನಮಸ್ಯಾ ಅಮೇಧ್ಯಮ್ ।....

.... ಯೋನಿರಗ್ನೇಃ ಪ್ರತಿಷ್ಠಿತಿಃ ।

ಸಾರಸ್ವತಪಾಠ :
ತೈ. ಬ್ರಾ. ೧–೨–೧ ನೇ ಅನುವಾಕ ಪೂರ್ಣ.

2. ಘರ್ಮಶ್ಶಿರಸ್ತದಯಮಗ್ನಿಃ । ....

.... ತಾಭಿರಮುಂ ಗಚ್ಛ ।

ಸಾರಸ್ವತಪಾಠ :
ತೈ. ಬ್ರಾ. ೧–೧–೭ ನೇ ಅನುವಾಕ ಪೂರ್ಣ.



## ಬ್ರಾಹ್ಮಣ

1. ಕೃತ್ತಿಕಾಸ್ವಗ್ನಿಮಾದಧೀತ ।....

.... ಅಪರಿಮಿತಸ್ಯಾವರುದ್ಧ್ಯೈ ॥ ೩ ।

ಸಾರಸ್ವತಪಾಠ :
ತೈ. ಬ್ರಾ. ೧–೧–೨ ರಿಂದ ೬ ನೆಯ ಅನುವಾಕ ಪೂರ್ಣ.
(ಈ ಬ್ರಾಹ್ಮಣಭಾಗದಲ್ಲಿ
ಭೃಗೂಣಾಂ ತ್ವಾಂಗಿರಸಾಂ .... ಭೂರ್ಭುವಸ್ಸುವಃ ।
ಮುಂತಾದ ವಾಕ್ಯರೂಪವಾದ ಮಂತ್ರಗಳಿವೆ.)

2. ಇಮೇ ವಾ ಏತೇ ಲೋಕಾ ಅಗ್ನಯಃ ।

.... ಋಧ್ನೋತ್ಯೇನೇನ ।

ಸಾರಸ್ವತಪಾಠ :
ತೈ. ಬ್ರಾ. ೧–೧–೮ ರಿಂದ ೧೦ ಅನುವಾಕಗಳು ಪೂರ್ಣ.

* * *



# ಪುನರಾಧೇಯ *

## ಮಂತ್ರ

1. ಭೂಮಿರ್ಭೂಮ್ನಾ ದ್ಯೌರ್ವರಿಣಾಂತರಿಕ್ಷಂ ಮಹಿತ್ವಾ ।....

... ತೇನ ಆದಿತ್ಯಾ ಆಜ್ಯಂ ಜುಷಾಣಾ ವಿಯನ್ತು ।

ಸಾರಸ್ವತಪಾಠ :

ತೈ. ಸಂ. ೧-೫-೩ ನೆಯ ಅನುವಾಕ ಪೂರ್ಣ.

## ಬ್ರಾಹ್ಮಣ

1. ದೇವಾಸುರಾಸ್ಸಂಯತ್ತಾ ಆಸನ್....

.... ನಾರ್ತಿಮಾರ್ಛತಿ ಯಜಮಾನಃ ।

ಸಾರಸ್ವತಪಾಠ :

ತೈ. ಸಂ. ೧-೫-೧ ಮತ್ತು ೨ನೆಯ ಅನುವಾಕಗಳು ಪೂರ್ಣ.

2. ಭೂಮಿರ್ಭೂಮ್ನಾ ದ್ಯೌರ್ವರಿಣೇತ್ಯಾಹ ....

.... ಆದಿತ್ಯಾ ಋದ್ಧಿಮಾರ್ಧ್ನುವನ್ತಾಮೇವರ್ಧ್ನೋತಿ ।

ಸಾರಸ್ವತಪಾಠ :

ತೈ. ಸಂ. ೧-೫-೪ನೆಯ ಅನುವಾಕ ಪೂರ್ಣ.

---

* ಸೂತ್ರದಲ್ಲಿ ಪುನರಾಧೇಯವನ್ನು ಪ್ರತ್ಯೇಕವಾಗಿ ನಿರ್ದೇಶಿಸಿಲ್ಲ. ಪುನರಾಧೇಯಕ್ಕೆ ಅಗ್ನ್ಯಾಧೇಯವು ಪ್ರಕೃತಿಯಾದುದರಿಂದ ಅಗ್ನ್ಯಾಧೇಯವನ್ನು ಮಾತ್ರ ನಿರ್ದೇಶಿಸಲಾಗಿದೆ. ಯಾಗಗಳಲ್ಲಿ ಪ್ರಕೃತಿ–ವಿಕೃತಿ ಎಂಬ ವಿಭಾಗವಿದ್ದು ಇದನ್ನು ಸಂಪುಟದ ಮೂರನೆಯ ಭಾಗದಲ್ಲಿ ವಿವರಿಸಲಾಗುವುದು.



3. ದೇವಾಸುರಾಸ್ಸಂಯತ್ತಾ ಆಸನ್ ।....

.... ತೇನ ಸಮೃದ್ಧಂ ಕ್ರಿಯತ ಇತಿ ।

ಸಾರಸ್ವತಪಾಠ :

ತೈ. ಬ್ರಾ. ೧-೩-೧ನೆಯ ಅನುವಾಕ ಪೂರ್ಣ.

* * *

## ೨. ಅಗ್ನಿಹೋತ್ರ

ಮಂತ್ರ

1. ಅಗ್ನಿರ್ಜ್ಯೋತಿರ್ಜ್ಯೋತಿಸ್ಸೂರ್ಯಃ ಸ್ವಾಹಾ ।

2. ಸೂರ್ಯೋ ಜ್ಯೋತಿರ್ಜ್ಯೋತಿರಗ್ನಿಸ್ಸ್ವಾಹಾ ।

3. ಋತಂ ತ್ವಾ ಸತ್ಯೇನ ಪರಿಷಿಂಚಾಮಿ ।

ಇತ್ಯಾದಿ ವಾಕ್ಯಗಳು.

ಸಾರಸ್ವತಪಾಠ :

ತೈ. ಬ್ರಾ. ೨-೧-೨ನೆಯ ಅನುವಾಕದಲ್ಲಿಯೂ ಮತ್ತು ೧೧ ನೆಯ ಅನುವಾಕದಲ್ಲಿಯೂ ಬಂದಿವೆ.



ಬ್ರಾಹ್ಮಣ

1. ಅಂಗಿರಸೋ ವೈ ಸತ್ರಮಾಸತ । ....

.... ಯ ಉ ಚೈನದೇವಂ ವೇದ[1] ।

ಸಾರಸ್ವತಪಾಠ :

ತೈ. ಬ್ರಾ. ೨-೧-೧ ರಿಂದ ೧೧ ಅನುವಾಕಗಳು ಪೂರ್ಣ.

2. ಉದಸ್ಥಾದ್ದೇವ್ಯದಿತಿರ್ವಿಶ್ವರೂಪೀ ।

.... ಮಹೀ ಹ್ಯೇಷ ಸಮೃದ್ಧ್ಯೈ ।

ಸಾರಸ್ವತಪಾಠ :

ತೈ. ಬ್ರಾ. ೧-೪-೩ ಮತ್ತು ೪ನೆಯ ಅನುವಾಕ ಪೂರ್ಣ.

* * *

## ೩. ಅಗ್ನ್ಯುಪಸ್ಥಾನ

ಮಂತ್ರ

1. ಉಪಪ್ರಯನ್ತೋ ಅಧ್ವರಂ ಮಂತ್ರಂ

ವೋಚೇಮಾಗ್ನಯೇ । ....

.... ತಾಮಾಶಿಷಮಾಶಾಸೇಽಮುಷ್ಮೈ ಜ್ಯೋತಿಷ್ಮತೀಮ್।

ಸಾರಸ್ವತಪಾಠ :

ತೈ. ಸಂ. ೧-೫-೫ ಮತ್ತು ೬ ನೆಯ ಅನುವಾಕಗಳು ಪೂರ್ಣ.

---

1. ಅಗ್ನಿಹೋತ್ರ ಬ್ರಾಹ್ಮಣವನ್ನು ತಿಳಿಸುವ ಈ ಪ್ರಪಾಠಕದಲ್ಲಿ ಮತ್ತು 'ಉದಸ್ಥಾತ್' ಎಂಬ ಎರಡನೆಯ ಬ್ರಾಹ್ಮಣದಲ್ಲಿಯೂ ವಾಕ್ಯರೂಪವಾದ ಇನ್ನೂ ಕೆಲವು ಮಂತ್ರಗಳು ಇವೆ. ಮಂತ್ರ–ಬ್ರಾಹ್ಮಣಗಳ ಪರಿಷ್ಕೃತಸೂಚಿಯಲ್ಲಿ ಅದನ್ನು ತಿಳಿಸಲಾಗುವುದು.



2. ಮಮ ನಾಮ ಪ್ರಥಮಂ ಜಾತವೇದಃ ....

.... ತಾಸ್ಸಂದಧಾಮಿ ಹವಿಷಾ ಘೃತೇನ ।

ಸಾರಸ್ವತಪಾಠ :

ತೈ. ಸಂ. ೧-೫-೧೦ ನೆಯ ಅನುವಾಕದ ಪ್ರಾರಂಭದಿಂದ

ಪಯಸ್ವತೀರೋಷಧಯಃ ಎಂಬಲ್ಲಿಯವರೆಗೆ.

ಬ್ರಾಹ್ಮಣ

1. ಅಯಜ್ಞೋ ವಾ ಏಷ ಯೋಽಸಾಮೋಪಪ್ರಯನ್ತೋ

ಅಧ್ವರಮಿತ್ಯಾಹ .... ನ ವಿಷ್ವಙ್ಪ್ರಜಯಾ ಪಶುಭಿರೇತಿ।

ಸಾರಸ್ವತಪಾಠ :

ತೈ. ಸಂ. ೧-೫-೭ ರಿಂದ ೯ನೆಯ ಅನುವಾಕ ಪೂರ್ಣ.

* * *

## ೪. ಅಗ್ನಿಚಯನ *

ಮಂತ್ರ

1. ಯುಞ್ಜಾನಃ ಪ್ರಥಮಂ ಮನಸ್ತತ್ತ್ವಾಯ ಸವಿತಾ ಧಿಯಃ ।

.... ದಿವಂ ಗಚ್ಛ ಸುವಃ ಪತ ।

ಸಾರಸ್ವತಪಾಠ :

ತೈ. ಸಂ. ೪-೧-೧ ರಿಂದ ೧೦ ಅನುವಾಕಗಳು ಪೂರ್ಣ.

---

* ಅಗ್ನಿಚಯನವು ಮಹಾಗ್ನಿಚಯನವೆಂದೂ ಕ್ಷುದ್ರಚಯನವೆಂದೂ ಎರಡು ಬಗೆ. ಮೇಲಿನ ಅಗ್ನಿಚಯನದ ಮಂತ್ರ-ಬ್ರಾಹ್ಮಣಗಳು ಮಹಾಗ್ನಿಚಯನಕ್ಕೆ ಸೇರಿದವು. ಮುಂದೆ ಬರುವ ಸಾವಿತ್ರ ಮುಂತಾದವುಗಳು ಕ್ಷುದ್ರಚಯನಗಳು. ಕ್ಷುದ್ರ ಎಂದರೆ ಸಣ್ಣದು ಎಂದರ್ಥ. ಈ ಚಯನಗಳ ಬಗ್ಗೆ ಮೂರನೆಯ ಭಾಗದಲ್ಲಿ ವಿವರಿಸಲಾಗುವುದು.



2. ವಿಷ್ಣೋಃ ಕ್ರಮೋಽಸ್ಯಭಿಮಾತಿಹಾ ಗಾಯತ್ರಂ ಛಂದ

ಆರೋಹ ....

.... ದಿವಿ ಶ್ರವಾಗ್‌ಸ್ಯುತ್ತಮಾ ನಿಧಿಷ್ವ ।

ಸಾರಸ್ವತಪಾಠ :
ತೈ. ಸಂ. ೪-೨-೧ ರಿಂದ ೭ ಅನುವಾಕಗಳು ಪೂರ್ಣ

3. ಆಪ್ಯಾಯಸ್ವ ಸಮೇತು ತೇ .....

.... ಸಪ್ರಥಸ್ತಮಃ ।

ಸಾರಸ್ವತಪಾಠ :
ತೈ. ಆ. ౩-೧೭ನೆಯ ಅನುವಾಕ ಪೂರ್ಣ.

4. ಅಭ್ಯಸ್ಥಾದ್ವಿಶ್ವಾಃ ಪೃತನಾ ಅರಾತೀಃ ....

.... ತೇನ ಚಿನ್ವಾನಸ್ತನುವೋ ನಿಷೀದ ।

ಸಾರಸ್ವತಪಾಠ :
ತೈ. ಸಂ. ೪-೨-೮ ರಿಂದ ೧೦ನೆಯ ಅನುವಾಕ ಪೂರ್ಣ.

5. ಅಪಾಂ ತ್ವೇಮನ್ಸಾದಯಾಮಿ ....

.... ತ್ವಂ ಜರಯಸಿ ಸರ್ವಮನ್ಯತ್ ।

ಸಾರಸ್ವತಪಾಠ :
ತೈ. ಸಂ. ೪-೩-೧ ರಿಂದ ೧೧ ನೆಯ ಅನುವಾಕ ಪೂರ್ಣ.



6. ಈಯುಷ್ಟೇ ಯೇ ಪೂರ್ವತರಾಮಪಶ್ಯನ್....

.... ಪಶ್ಯಾನ್ ।

ಸಾರಸ್ವತಪಾಠ :
ತೈ. ಆ. ೩–೧೮ ನೆಯ ಅನುವಾಕ ಪೂರ್ಣ.

7. ಅಗ್ನೇ ಜಾತಾನ್ಪ್ರಣುದಾನಸ್ಸಪತ್ನಾನ್ ....

.... ಅಜ್ಯಾಕ್ಷ್ಕಂ ಛಂದಃ ।

ಸಾರಸ್ವತಪಾಠ :
ತೈ. ಸಂ. ೪–೩–೧೨ ನೆಯ ಅನುವಾಕ ಪೂರ್ಣ.

8. ರಶ್ಮಿರಸಿ ಕ್ಷಯಾಯ ತ್ವಾ ಕ್ಷಯಂ ಜಿನ್ವ ....

.... ಸುವರುದೃಚಂ ಗತಃ ।

ಸಾರಸ್ವತಪಾಠ :
ತೈ. ಸಂ. ೪–೪–೧ ರಿಂದ ೯ನೆಯ ಅನುವಾಕ ಪೂರ್ಣ

9. ಜ್ಯೋತಿಷ್ಮತೀಂ ತ್ವಾ ಸಾದಯಾಮಿ ....

.... ಜಾಗ್ರತೀಂ ತ್ವಾ ಸಾದಯಾಮಿ ।

ಸಾರಸ್ವತಪಾಠ :
ತೈ. ಆ. ೩–೧೯ ನೆಯ ಅನುವಾಕ ಪೂರ್ಣ.

10. ನಮಸ್ತೇ ರುದ್ರ ಮನ್ಯವ ಉತೋತ ಇಷವೇ ನಮಃ । .....

.... ಯಶ್ಚ ನೋ ದ್ವೇಷ್ಟಿ ತಂ ವೋ ಜಂಭೇ ದಧಾಮಿ ।

ಸಾರಸ್ವತಪಾಠ :
ತೈ. ಸಂ. ೪–೫–೧ ರಿಂದ ೧೧ ಅನುವಾಕಗಳು ಪೂರ್ಣ.



11. ಅಶ್ಮನ್ನೂರ್ಜಂ ಪರ್ವತೇ ಶಿಶ್ರಿಯಾಣಾಮ್ ....

.... ಮಾನುಷೀಶ್ಚಾನುವರ್ತ್ಮಾನೋ ಭವಂತು ।

ಸಾರಸ್ವತಪಾಠ :

ತೈ. ಸಂ. ೪–೬–೧ ರಿಂದ ೫ ಅನುವಾಕಗಳು ಪೂರ್ಣ.

12. ಅಗ್ನಾವಿಷ್ಣೂ ಸಜೋಷಸೇಮಾ ವರ್ಧಂತು ವಾಂ ಗಿರಃ ।

.... ಅಸ್ಯ ಕುರ್ಮೋ ಹರಿವೋ ಮೇದಿನಂ ತ್ವಾ ।

ಸಾರಸ್ವತಪಾಠ .

ತೈ. ಸಂ. ೪–೭–೧ ರಿಂದ ೧೪ ಅನುವಾಕಗಳು ಪೂರ್ಣ.

13. ಆಯುಷಃ ಪ್ರಾಣಗ್‌ಂ ಸಂತನು । ....

.... ದಿವಸ್ಸುವಸ್ಸಂತನು ।

14. ಇಂದ್ರೋ ದಧೀಚೋ ಅಸ್ಥಭಿಃ । ....

.... ವವಕ್ಷುರುಗ್ರೋ ಅಸ್ತೃತಃ ।

ಸಾರಸ್ವತಪಾಠ :

ತೈ. ಬ್ರಾ. ೧–೫–೭ರಿಂದ ೮ನೆಯ ಅನುವಾಕ ಪೂರ್ಣ.

ಬ್ರಾಹ್ಮಣ

1. ಸಾವಿತ್ರಾಣಿ ಜುಹೋತಿ ಪ್ರಸೂತ್ಯೈ ....

.... ಸುವರ್ಗಮೇವೈನಂ ಲೋಕಂ ಗಮಯತಿ ।

ಸಾರಸ್ವತಪಾಠ :

ತೈ. ಸಂ. ೫–೧–೧ರಿಂದ ೧೦ ಅನುವಾಕಗಳು ಪೂರ್ಣ.



2. ವಿಷ್ಣುಮುಖಾ ವೈ ದೇವಾಃ ....

.... ತಸ್ಮಾದಯಗ್ಂ ಸರ್ವತಃ ಪವತೇ ।

ಸಾರಸ್ವತಪಾಠ :
ತೈ. ಸಂ. ೫–೨–೧ರಿಂದ ೧೦ ಅನುವಾಕಗಳು ಪೂರ್ಣ.

3. ಉತ್ಸನ್ನಯಜ್ಞೋ ವಾ ಏಷ ಯದಗ್ನಿಃ ....

.... ಸಂವತ್ಸರಸ್ಯೈವ ಪ್ರಿಯಂ ಧಾಮೋಪಾಪ್ನೋತಿ ।

ಸಾರಸ್ವತಪಾಠ :
ತೈ. ಸಂ. ೫–೩–೧ರಿಂದ ೧೧ ಅನುವಾಕಗಳು ಪೂರ್ಣ.

4. ದೇವಾಸುರಾಃ ಸಂಯತ್ತಾ ಆಸನ್ ....

.... ಋತೂನೇವ ದೇವಾನ್ಪಿತೄನ್ ಪ್ರೀಣಾತಿ ।

ಸಾರಸ್ವತಪಾಠ :
ತೈ. ಸಂ. ೫–೪–೧ರಿಂದ ೧೧ ಅನುವಾಕಗಳು ಪೂರ್ಣ.

5. ಯದೇಕೇನ ಸಗ್ಂಸ್ಥಾಪಯತಿ[1] ....

.... ವಸೀಯಾನ್ಭವತಿ ।

ಸಾರಸ್ವತಪಾಠ :
ತೈ. ಸಂ. ೫–೫–೧ರಿಂದ ೧೦ ಅನುವಾಕಗಳು ಪೂರ್ಣ.

---

1. ಈ ಬ್ರಾಹ್ಮಣಭಾಗದಲ್ಲಿ ಕೆಲವು ಮಂತ್ರಗಳೂ ಸೇರಿವೆ.



೨. ಯಸ್ಯ ಪ್ರಾತಃಸವನೇ ಸೋಮೋಽತಿರಿಚ್ಯತೇ ।....

.... ಸರ್ವಾಭ್ಯ ಏವ ದೇವತಾಭ್ಯಃ ಸರ್ವೇಭ್ಯಃ

ಪೃಷ್ಠೇಭ್ಯ ಆತ್ಮಾನಂ ನಿಷ್ಕ್ರೀಣೀತೇ [1] ॥

ಸಾರಸ್ವತಪಾಠ :

ತೈ. ಬ್ರಾ. ೧-೪-೫ ರಿಂದ ೭ ನೆಯ ಅನುವಾಕ ಪೂರ್ಣ.

* * *

## ೭. ಉಪಹೋಮಾಃ

ಮಂತ್ರ

1. ಜುಷ್ಟೋ ದಮೂನಾ ಅತಿಥಿರ್ದುರೋಣೇ ।

.... ಕೀನಾಶಾ ಆಸನ್ಮರುತಃ ಸುದಾನವಃ ।

ಸಾರಸ್ವತಪಾಠ :

ತೈ ಬ್ರಾ. ೨-೪-೧ ರಿಂದ ೮ ಅನುವಾಕಗಳು (ಪ್ರಪಾಠಕ) ಪೂರ್ಣ.

2. ಪ್ರಾಣೋ ರಕ್ಷತಿ ವಿಶ್ವಮೇಜತ್ ।....

.... ವಯಮಿಂದ್ರ ತ್ವಾ ಶುನಗ್ಂ ಹುವೇಮ ।

ಸಾರಸ್ವತಪಾಠ :

ತೈ. ಬ್ರಾ. ೨-೫-೧ ರಿಂದ ೮ ಅನುವಾಕಗಳು (ಪ್ರಪಾಠಕ) ಪೂರ್ಣ.

* * *

1. ಈ ಬ್ರಾಹ್ಮಣವು ಸೌಮ್ಯಕಾಂಡದ ಅಧ್ವರ್ಯವಬ್ರಾಹ್ಮಣಕ್ಕೆ ಸೇರುವುದೆಂದು ಭಟ್ಟಭಾಸ್ಕರರ ಅಭಿಪ್ರಾಯ. ಕೋಷ್ಟಕದಲ್ಲಿ ಕಾಂಡಾನುಕ್ರಮಣಿಕೆಯನ್ನು ಅನುಸರಿಸಿದೆ.



## ೮. ಕೌಕಿಲೀ ಸೌತ್ರಾಮಣೀ

### ಮಂತ್ರ

1. ಸ್ವಾದ್ವೀಂ ತ್ವಾ ಸ್ವಾದುನಾ ।....

.... ವಸುವನೇ ವಸುಧೇಯಸ್ಯ ವೇತು ಯಜ ।

ಸಾರಸ್ವತಪಾಠ :

ತೈ. ಬ್ರಾ. ೨-೬-೧ ರಿಂದ ಪ್ರಪಾಠಕವು ಮುಗಿಯುವವರೆಗೆ.

2. ಯುವಗ್ಂ ಸುರಾಮಮಶ್ವಿನಾ ।....

.... ತಂ ತ ಏತೇನಾವಯಜೇ ।

ಸಾರಸ್ವತಪಾಠ :

ತೈ. ಬ್ರಾ. ೧-೪-೨ ರಲ್ಲಿ ಪ್ರಾರಂಭದಿಂದ

ಸೋಮೋ ವಾ ಏತಸ್ಯ ರಾಜ್ಯಮಾದತ್ತೇ ।

ಎಂಬ ವಾಕ್ಯದವರೆಗೆ.

### ಬ್ರಾಹ್ಮಣ

1. ಸೋಮೋ ವಾ ಏತಸ್ಯ ರಾಜ್ಯಮಾದತ್ತೇ ।

.... ದೇವಸೂ ರಾಜಾ ಭವತಿ ।

ಸಾರಸ್ವತಪಾಠ :

ತೈ. ಬ್ರಾ. ೧-೪-೨ ರಲ್ಲಿ

ಯಸ್ತೇ ದೇವ ವರುಣ ಜಗತೀಛಂದಾಃ ಪಾಶಃ ।

ತಂ ತ ಏತೇನಾವಯಜೇ ।  ಎಂಬಲ್ಲಿಂದ ಅನುವಾಕ ಪೂರ್ಣ.

* * *



## ೯. ಸೂಕ್ತಗಳು

ಮಂತ್ರ

1. ಪೀವೋಽನ್ನಾಗ್ಂ ರಯಿವೃಧಃ ಸುಮೇಧಾಃ ।....

.... ಉಪೇನ್ದ್ರ ತವ ವೀರ್ಯೇ ।

ಸಾರಸ್ವತಪಾಠ :
ತೈ. ಬ್ರಾ. ೨-೮-೧ ರಿಂದ ೮ ಅನುವಾಕಗಳು ಪೂರ್ಣ.

2. ಭರ್ತಾ ಸನ್ಭ್ರಿಯಮಾಣೋ ಬಿಭರ್ತಿ ।

.... ವೃತ್ಯಂ ಯಜೇ ಪ್ರಥಮಜಾವೃತಸ್ಯ ।

ಸಾರಸ್ವತಪಾಠ :
ತೈ. ಆ. ೩-೧೪ ಮತ್ತು ೧೫ ನೇ ಅನುವಾಕಗಳು.

3. ತಾ ಸೂರ್ಯಾಚಂದ್ರಮಸಾ ವಿಶ್ವಭೃತ್ತಮಾ ಮಹತ್ ।

.... ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ।

ಸಾರಸ್ವತಪಾಠ :
ತೈ. ಬ್ರಾ. ೨-೮-೯ ನೇ ಅನುವಾಕ ಪೂರ್ಣ.

* * *



## ೧೦. ಔಪಾನುವಾಕ್ಯ

### ಬ್ರಾಹ್ಮಣ

1. ಪ್ರಜಾಪತಿರಕಾಮಯತ ಪ್ರಜಾಃ ಸೃಜೇಯೇತಿ

.... ತದೇವಾಸ್ಯೈತೇನಾಪ್ಯಾಯಯತಿ ।

ಸಾರಸ್ವತಪಾಠ :
ತೈ. ಸಂ. ೩-೧-೧ ರಿಂದ ೧೦ ಅನುವಾಕಗಳು ಪೂರ್ಣ.[1]

2. ಯೋ ವೈ ಪವಮಾನಾನಾಮನ್ವಾರೋಹಾನ್....

.... ಯಥೇನಾಡ್ಹ್ರಹಮುತ್ತಮುಶ್ಚೇತಯಾನಿ ।

ಸಾರಸ್ವತಪಾಠ :
ತೈ. ಸಂ. ೩-೨-೧ ರಿಂದ ೧೦ ಅನುವಾಕಗಳು ಪೂರ್ಣ.

3. ಅಗ್ನೇ ತೇಜಸ್ವಿನ್ತ್ತೇಜಸ್ವೀ....

.... ಪಿಪೃತಾಂ ನೋ ಭರೀಮಭಿಃ ।

ಸಾರಸ್ವತಪಾಠ :
ತೈ. ಸಂ. ೩-೩-೧ ರಿಂದ ೧೦ ಅನುವಾಕಗಳು ಪೂರ್ಣ.

---

1. ಈ ಔಪಾನುವಾಕ್ಯಕಾಂಡದಲ್ಲಿ ಐದು ಪ್ರಪಾಠಕಗಳಿದ್ದು ಪ್ರತಿಯೊಂದರ ಕಡೆಯ ಅನುವಾಕಗಳು ಕೇವಲ ಮಂತ್ರಗಳೇ ಆಗಿವೆ. ಉಳಿದ ಅನುವಾಕಗಳಲ್ಲಿ ಮಂತ್ರ–ಬ್ರಾಹ್ಮಣಗಳು ತುಂಬಾ ಮಿಶ್ರವಾಗಿದ್ದು ಅವುಗಳ ನಿರ್ದಿಷ್ಟವಾದ ಸೂಚಿಯನ್ನು ಮುಂದೆ ನೀಡಲಾಗುವುದು. ಈ ಕೋಷ್ಟಕದಲ್ಲಿ ಎರಡನ್ನೂ ಬ್ರಾಹ್ಮಣಭಾಗವೆಂಬುದಾಗಿಯೇ ನಿರ್ದೇಶಿಸಿದೆ.



4. ವಿ ವಾ ಏತಸ್ಯ ಯಜ್ಞ ಋಧ್ಯತೇ....

.... ಸ್ವಾಯಾವೇವೈನಂ ಯೋನ್ಯಾಗ್ಂ

ಸಮಾರೋಹಯತೇ ।

ಸಾರಸ್ವತಪಾಠ :

ತೈ. ಸಂ. ೩-೪-೧ ರಿಂದ ೧೦ ಅನುವಾಕಗಳು ಪೂರ್ಣ.

5. ಪೂರ್ಣಾ ಪಶ್ಚಾದುತ ಪೂರ್ಣಾ ಪುರಸ್ತಾತ್....

.... ಪ್ರಾಣೇಭ್ಯ ಏವ ತತ್ಪ್ರಜಾ ನಯನ್ತಿ ।

ಸಾರಸ್ವತಪಾಠ :

ತೈ. ಸಂ. ೩-೫-೧ ರಿಂದ ೧೦ ಅನುವಾಕಗಳು ಪೂರ್ಣ

* * *

## ೧೧. ಯಾಜ್ಯಾ

ಮಂತ್ರ

1. ಉಭಾ ವಾಮಿನ್ದ್ರಾಗ್ನೀ ಆಹುವಧ್ಯೈ....

.... ಋತುಭಿಃ ಕಲ್ಪಯಾತಿ ।

ಸಾರಸ್ವತಪಾಠ :

ತೈ. ಸಂ. ೧-೧-೧೪ ನೆಯ ಅನುವಾಕ ಪೂರ್ಣ.

2. ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ....

.... ನ ವರನ್ತೇ ಪರಿಬಾಧೋ ಅದೇವೀಃ ।

ಸಾರಸ್ವತಪಾಠ :

ತೈ. ಸಂ. ೧-೨-೧೪ ನೆಯ ಅನುವಾಕ ಪೂರ್ಣ.



3. ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಃ....

.... ತವ ಜ್ಯೋತೀಗ್ಂಷ್ಯರ್ಚಯಃ ।

ಸಾರಸ್ವತಪಾಠ :
ತೈ. ಸಂ. ೧-೩-೧೪ ನೆಯ ಅನುವಾಕ ಪೂರ್ಣ.

4. ಯಸ್ತ್ವಾ ಹೃದಾ ಕೀರಿಣಾ ಮನ್ಯಮಾನಃ ....

.... ತವ ವಿ ಜ್ಯೋತಿಷಾ ।

ಸಾರಸ್ವತಪಾಠ :
ತೈ. ಸಂ. ೧-೪-೪೬ ನೆಯ ಅನುವಾಕ ಪೂರ್ಣ.

5. ವೈಶ್ವಾನರೋ ನ ಊತ್ಯಾ ಪ್ರಯಾತು....

.... ಅಚ್ಛಿದ್ರಾಂ ಪಾರಯಿಷ್ಣುಮ್ ।

ಸಾರಸ್ವತಪಾಠ :
ತೈ. ಸಂ. ೧-೫-೧೧ ನೆಯ ಅನುವಾಕ ಪೂರ್ಣ.

6. ಇನ್ದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ ।....

.... ಇನ್ದ್ರೇಷಿತಾ ಅಭ್ಯವರ್ತನ್ತ ದಸ್ಯೂನ್ ।

ಸಾರಸ್ವತಪಾಠ :
ತೈ. ಸಂ. ೧-೬-೧೨ ನೆಯ ಅನುವಾಕ ಪೂರ್ಣ.



7. ಅನ್ವಹ ಮಾಸಾ ಅನ್ವಿದ್ವನಾನಿ ....

.... ಜ್ಯಾಕಾ ಅಧಿ ಧನ್ವಸು ।

ಸಾರಸ್ವತಪಾಠ :
ತೈ. ಸಂ. ೧-೭-೧೩ ನೆಯ ಅನುವಾಕ ಪೂರ್ಣ.

8. ಅಗ್ನಾವಿಷ್ಣೂ ಮಹಿ ತದ್ವಾಂ ಮಹಿತ್ವಮ್ ....

.... ಸೋಮಾಪೂಷಭ್ಯಾಂ ಜನದುಸ್ರಿಯಾಸು ।

ಸಾರಸ್ವತಪಾಠ :
ತೈ. ಸಂ. ೧-೮-೨೨ ನೆಯ ಅನುವಾಕ ಪೂರ್ಣ.

9. ಇನ್ದ್ರಂ ವೋ ವಿಶ್ವತಸ್ಪರೀನ್ದ್ರಂ ನರಃ ।....

.... ಮಾ ನ ಆಯುಃ ಪ್ರಮೋಷೀಃ ।

ಸಾರಸ್ವತಪಾಠ :
ತೈ. ಸಂ. ೨-೧-೧೧ ನೆಯ ಅನುವಾಕ ಪೂರ್ಣ.

10. ಹಿರಣ್ಯಗರ್ಭ ಆಪೋ ಹ ಯತ್ಪ್ರಜಾಪತೇ ।....

.... ಪ್ರೇದು ಹರಿವಃ ಶ್ರುತಸ್ಯ ।

ಸಾರಸ್ವತಪಾಠ :
ತೈ. ಸಂ. ೨-೨-೧೨ ನೆಯ ಅನುವಾಕ ಪೂರ್ಣ.



11. ಸಪ್ರತ್ನವನ್ನಿಕಾವ್ಯಾ ....

.... ಸುವರಪ್ರೋ ಜಿಗಾಯ ।

ಸಾರಸ್ವತಪಾಠ :
ತೈ. ಸಂ. ೨-೩-೧೪ ನೆಯ ಅನುವಾಕ ಪೂರ್ಣ.

12. ನವೋ ನವೋ ಭವತಿ ಜಾಯಮಾನಃ ....

.... ಅಸ್ಮಿನ್ತ್ಸರ್ಹಿಷಿ ಮಾದಯಧ್ವಮ್ ।

ಸಾರಸ್ವತಪಾಠ :
ತೈ. ಸಂ. ೨–೪–೧೪ ನೆಯ ಅನುವಾಕ ಪೂರ್ಣ.

13. ಆಯುಷ್ಟ ಆಯುರ್ದಾ ಅಗ್ನೇ....

.... ಶತಕ್ರತೋಽನು ತೇ ದಾಯಿ ।

ಸಾರಸ್ವತಪಾಠ :
ತೈ. ಸಂ. ೨–೫–೧೨ ನೆಯ ಅನುವಾಕ ಪೂರ್ಣ.

14. ಯುಕ್ಷ್ವಾ ಹಿ ದೇವಹೂತಮಾನ್

.... ಅಪಿ ಭದ್ರೇ ಸೌಮನಸೇ ಸ್ಯಾಮ ।

ಸಾರಸ್ವತಪಾಠ :
ತೈ. ಸಂ. ೨-೬-೧೧ ಮತ್ತು ೧೨ ನೆಯ ಅನುವಾಕ ಪೂರ್ಣ.



15. ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇ ದಿವೇ |....

.... ಅಗ್ನಿಗ್ಂ ಸಮುದ್ರವಾಸಸಮ್ |

ಸಾರಸ್ವತಪಾಠ :
ತೈ. ಸಂ. ೩-೧-೧೧ ನೆಯ ಅನುವಾಕ ಪೂರ್ಣ.

16. ಪ್ರಸೋ ಅಗ್ನೇ ತವೋತಿಭಿಃ ....

.... ಸಖೇ ವಿಷ್ಣೋ ವಿತರಂ ವಿಕ್ರಮಸ್ವ |

ಸಾರಸ್ವತಪಾಠ :
ತೈ. ಸಂ. ೩-೨-೧೧ ನೆಯ ಅನುವಾಕ ಪೂರ್ಣ.

17. ಇದಂ ವಾಮಾಸ್ಯೇ ಹವಿಃ ಪ್ರಿಯಮ್ ....

.... ರಾಯಸ್ಪೋಷಂ ಚಿಕಿತುಷೇ ದಧಾತು |

ಸಾರಸ್ವತಪಾಠ :
ತೈ. ಸಂ. ೩-೩-೧೧ ನೆಯ ಅನುವಾಕ ಪೂರ್ಣ.

18. ತ್ವಮಗ್ನೇ ಬೃಹದ್ವಯೋ ದಧಾಸಿ ...

.... ಅಧಾ ತೇ ಸ್ಯಾಮ ವರುಣ ಪ್ರಿಯಾಸಃ |

ಸಾರಸ್ವತಪಾಠ :
ತೈ. ಸಂ. ೩-೪-೧೧ ನೆಯ ಅನುವಾಕ ಪೂರ್ಣ.





19. ಪ್ರದೇವಂ ದೇವ್ಯಾ ಧಿಯಾ ಭರತಾ ಜಾತವೇದಸಮ್ ।

.... ಸಾಧ್ಯಾಃ ಸನ್ತಿ ದೇವಾಃ ।

ಸಾರಸ್ವತಪಾಠ :
ತೈ. ಸಂ. ೩-೫-೧೧ ನೆಯ ಅನುವಾಕ ಪೂರ್ಣ.

20. ಅಗ್ನೇ ಯಂ ಯಜ್ಞಮಧ್ವರಂ....

.... ಶಂ ನೋ ಭವನ್ತು ವಾಜೇ ವಾಜೇ ।

ಸಾರಸ್ವತಪಾಠ :
ತೈ. ಸಂ. ೪-೧-೧೧ ನೆಯ ಅನುವಾಕ ಪೂರ್ಣ.

21. ಇನ್ದ್ರಾಗ್ನೀ ರೋಚನಾ ದಿವಃ ....

.... ಸ ತ್ವಂ ನೋ ಅಗ್ನೇ ।

ಸಾರಸ್ವತಪಾಠ :
ತೈ. ಸಂ. ೪-೨-೧೧ ನೆಯ ಅನುವಾಕ ಪೂರ್ಣ.

22. ಅಗ್ನಿರ್ವೃತ್ರಾಣಿ ಜಙ್ಘನತ್ ....

.... ವಿಶ್ವಕರ್ಮನ್ ಹವಿಷಾ ವರ್ಧನೇನ ।

ಸಾರಸ್ವತಪಾಠ :
ತೈ. ಸಂ. ೪-೩-೧೩ ನೆಯ ಅನುವಾಕ ಪೂರ್ಣ.

* * *



## ೧೨. ಅಶ್ವಮೇಧ

ಮಂತ್ರ

1. ದೇವಸ್ಯ ತ್ವಾ ಸವಿತುಃ ಪ್ರಸವೇ ....

.... ಪಶುಂ ನ ಗೋಪಾ ಇರ್ಯಃ ಪರಿಜ್ಮಾ ।

ಸಾರಸ್ವತಪಾಠ :
ತೈ. ಸಂ. ೭-೧-೧೧ ರಿಂದ ಪ್ರಪಾಠಕ ಪೂರ್ಣ.

2. ಏಕಸ್ಮೈ ಸ್ವಾಹಾ ....

.... ಸುವರ್ಗಾಯ ಲೋಕಾಯ ಸ್ವಾಹಾ

ಸರ್ವಸ್ಮೈ ಸ್ವಾಹಾ ।

ಸಾರಸ್ವತಪಾಠ :
ತೈ. ಸಂ. ೭-೨-೧೧ ರಿಂದ ಪ್ರಪಾಠಕ ಪೂರ್ಣ.

3. ಆರ್ವಾಜ್ಯೈಜ್ಞಸ್ಸಂಕ್ರಾಮತು ....

.... ಉದ್ರಿಕ್ತಾಯ ಸ್ವಾಹಾ ಸರ್ವಸ್ಮೈ ಸ್ವಾಹಾ ।

ಸಾರಸ್ವತಪಾಠ :
ತೈ. ಸಂ. ೭-೩-೧೧ ರಿಂದ ಪ್ರಪಾಠಕ ಪೂರ್ಣ.

4. ಮೇಷಸ್ತ್ವಾ ಪಚತೈರವತು....

.... ತಿಷ್ಕೃತೇ ಸ್ವಾಹಾ ಸರ್ವಸ್ಮೈ ಸ್ವಾಹಾ ।

ಸಾರಸ್ವತಪಾಠ :
ತೈ. ಸಂ. ೭-೪-೧೨ ರಿಂದ ಪ್ರಪಾಠಕ ಪೂರ್ಣ.



5. ಪೃಥಿವ್ಯೈ ಸ್ವಾಹಾನ್ತರಿಕ್ಷಾಯ ಸ್ವಾಹಾ ....

.... ಪ್ರಚ್ಯುತ್ಯೈ ತ್ವಾ ।

ಸಾರಸ್ವತಪಾಠ :
ತೈ. ಸಂ. ೭–೫–೧೧ ರಿಂದ ೧೩ ನೆಯ ಅನುವಾಕ ಪೂರ್ಣ.

6. ಯಃ ಪ್ರಾಣತೋ ನಿಮಿಷತಃ ....

.... ಶಾಂತಃ ಸಂವಥ್ಸರಃ ।

ಸಾರಸ್ವತಪಾಠ :
ತೈ. ಸಂ. ೭–೫–೧೭ ರಿಂದ ೨೦ ನೆಯ ಅನುವಾಕ ಪೂರ್ಣ.

7. ಅಗ್ನಯೇ ಸಮನಮತ್ ....

.... ಅಸ್ಮೈ ಯಜಮಾನಾಯ ದೇಹಿ ।

ಸಾರಸ್ವತಪಾಠ :
ತೈ. ಸಂ. ೭–೫–೨೩ ರಿಂದ ೨೪ ನೆಯ ಅನುವಾಕ ಪೂರ್ಣ.

8. ಸಮಿದ್ಧಿಶಾಮಾಶಯಾನಃ ....

.... ಕೋ ಅದ್ಯ ಯುಂಕ್ತೇ ।

ಸಾರಸ್ವತಪಾಠ :
ತೈ. ಸಂ. ४–४–೧೨ ನೆಯ ಅನುವಾಕ ಪೂರ್ಣ.

9. ಜೀಮೂತಸ್ಯೇವ ಭವತಿ ಪ್ರತೀಕಂ ....

.... ಅಶ್ವೋ ವನತಾಗ್ಂ ಹವಿಷ್ಮಾನ್ ।

ಸಾರಸ್ವತಪಾಠ :
ತೈ. ಸಂ. ४–೬–೬ ರಿಂದ ಪ್ರಪಾಠಕ ಪೂರ್ಣ.



10. ಅಗ್ನೇರ್ಮನ್ವೇ ಪ್ರಥಮಸ್ಯ ಪ್ರಚೇತಸಃ....

.... ಪ್ರಾತಾರ್ಯಗ್ನೇ ಪ್ರತರಾಂ ನ ಆಯುಃ ।

ಸಾರಸ್ವತಪಾಠ :
ತೈ. ಸಂ. ೪–೭–೧೫ ನೆಯ ಅನುವಾಕ ಪೂರ್ಣ.

11. ಸಮಿದ್ಧೋ ಅಞ್ಜನ್ ಕೃದರಂ ಮತೀನಾಂ....

.... ಹವಿರದನ್ತು ದೇವಾಃ ।

ಸಾರಸ್ವತಪಾಠ :
ತೈ. ಸಂ. ೫–೧–೧೧ ನೆಯ ಅನುವಾಕ ಪೂರ್ಣ.

12. ಗಾಯತ್ರೀ ತ್ರಿಷ್ಟುಬ್ಜಗತೀ....

.... ತನುವೇ ಭುವತ್ ।

ಸಾರಸ್ವತಪಾಠ :
ತೈ. ಸಂ. ೫–೨–೧೧ ರಿಂದ ೧೨ ನೆಯ ಅನುವಾಕ ಪೂರ್ಣ.

13. ಸ್ತೇಗಾನ್ದಗ್‍ಂಷ್ಟ್ರಾಭ್ಯಾಂ ಮಣ್ಡೂಕಾನ್....

.... ಪಿಪೀಲಿಕಾಃ ಪ್ರಶಾದೇನ ।

ಸಾರಸ್ವತಪಾಠ :
ತೈ. ಸಂ. ೫–೭–೧೧ ರಿಂದ ೨೪ ನೆಯ ಅನುವಾಕ ಪೂರ್ಣ.



14. ಪ್ರಯಾಸಾಯ ಸ್ವಾಹಾ....

.... ಸರ್ವಸ್ಮೈ ಸ್ವಾಹಾ ।

ಸಾರಸ್ವತಪಾಠ :
ತೈ. ಆ. ೩–೨೦ ನೆಯ ಅನುವಾಕ ಪೂರ್ಣ.

15. ಚಿತ್ತಗ್‍ಂ ಸಂತಾನೇನ ....

.... ಶಿಂಗೀನಿಕೋಶ್ಯಾಭ್ಯಾಮ್ ।

ಸಾರಸ್ವತಪಾಠ :
ತೈ. ಆ. ೩–೨೧ ನೆಯ ಅನುವಾಕ ಪೂರ್ಣ.

16. ದ್ಯೌಸ್ತೇ ಪೃಷ್ಠಂ ಪೃಥಿವೀ....

.... ಸಂವಥ್ಸರೋ ಮಹಿಮಾ ।

ಸಾರಸ್ವತಪಾಠ :
ತೈ. ಸಂ. ೫–೭–೨೫ ನೆಯ ಅನುವಾಕ ಪೂರ್ಣ.

17. ಅಗ್ನಿಃ ಪಶುರಾಸೀತ್ ....

.... ಯದ್ಯವಜಿಘ್ರಸಿ ।

ಸಾರಸ್ವತಪಾಠ :
ತೈ. ಸಂ. ೫–೭–೨೬ ನೆಯ ಅನುವಾಕ ಪೂರ್ಣ.



ಬ್ರಾಹ್ಮಣ

1. ಅಗ್ನಯೇ ಗಾಯತ್ರಾಯ ತ್ರಿವೃತೇ ....

.... ಸರ್ವಾಸಾಂ ದಿಶಾಮಭಿಜಿತ್ಯೈ ।

ಸಾರಸ್ವತಪಾಠ :
ತೈ. ಸಂ. ೭-೫-೧೪ ರಿಂದ ೧೫ ನೆಯ ಅನುವಾಕ ಪೂರ್ಣ.

2. ಆಗ್ನೇಯೋಽಷ್ಟಾಕಪಾಲಃ....

.... ಅಗ್ಂಹೋಮುಗ್ಭ್ಯಾಂ ದ್ವಿಕಪಾಲಃ ।

ಸಾರಸ್ವತಪಾಠ :
ತೈ. ಸಂ. ೭-೫-೨೧ ರಿಂದ ೨೨ ನೆಯ ಅನುವಾಕ ಪೂರ್ಣ.

3. ಯೋ ವಾ ಅಶ್ವಸ್ಯ ಮೇಧ್ಯಸ್ಯ ....

.... ಸಮುದ್ರೋ ಬಂಧುಃ ।

ಸಾರಸ್ವತಪಾಠ :
ತೈ. ಸಂ. ೭-೫-೨೫ ನೆಯ ಅನುವಾಕ ಪೂರ್ಣ.

4. ಪ್ರಜಾಪತೇರಕ್ಷ್ಯಶ್ವಯತ್ ....

.... ಅಶ್ವಸ್ಯ ಸರ್ವತ್ವಾಯ ।

ಸಾರಸ್ವತಪಾಠ :
ತೈ. ಸಂ. ೫-೩-೧೨ ನೆಯ ಅನುವಾಕ ಪೂರ್ಣ.



5. ಪವಸ್ವ ವಾಜಸಾತಯ ಇತಿ....

.... ಸರ್ವಂ ಜಯತಿ ।

ಸಾರಸ್ವತಪಾಠ :
ತೈ. ಸಂ. ೫-೪-೧೨ ನೆಯ ಅನುವಾಕ ಪೂರ್ಣ.

6. ಇನ್ದ್ರಾಯ ರಾಜ್ಞೇ ಸೂಕರಃ.... ಕೃಷ್ಣ

ಏಕಶಿತಿಪಾತ್ಪೇತ್ವಃ ।

ಸಾರಸ್ವತಪಾಠ :
ತೈ. ಸಂ. ೫-೫-೧೧ ನೆಯ ಅನುವಾಕದಿಂದ ಪ್ರಪಾಠಕ ಪೂರ್ಣ.

7. ರೋಹಿತೋ ಧೂಮ್ರರೋಹಿತಃ ....

.... ಸಂವತ್ಸರಾಯ ನಿವಕ್ಷಸಃ ।

ಸಾರಸ್ವತಪಾಠ :
ತೈ. ಸಂ. ೫-೬-೧೧ ರಿಂದ ಪ್ರಪಾಠಕ ಪೂರ್ಣ.

8. ಸಾಂಗ್ರಹಣ್ಯೇಷ್ಟ್ಯಾ ಯಜತೇ ।....

.... ತಸ್ಮಾದುತ್ಸೇಧಮ್ಭ್ಯಯೋ

ಪ್ರಜಾ ಅಭಿಸರ್ಗ್ಗಶ್ರಯನ್ತಿ ।

ಸಾರಸ್ವತಪಾಠ :
ತೈ. ಬ್ರಾ. ೩-೮-೧ ರಿಂದ ಪ್ರಪಾಠಕ ಪೂರ್ಣ.



9. ಪ್ರಜಾಪತಿರಶ್ವಮೇಧಮಸೃಜತ ।....

.... ಅಶ್ವಸ್ಯ ಮೇಧ್ಯಸ್ಯ ವಿವರ್ತನೇ ವಿವರ್ತನೇ ಜುಹ್ವತಿ[1] ।

ಸಾರಸ್ವತಪಾಠ :
ತೈ. ಬ್ರಾ. ೩–೯–೧ ರಿಂದ ಪ್ರಪಾಠಕ ಪೂರ್ಣ.

* * *

## ೧೩. ಪುರುಷಮೇಧ

### ಬ್ರಾಹ್ಮಣ

1. ಬ್ರಹ್ಮಣೇ ಬ್ರಾಹ್ಮಣಮಾಲಭತೇ ।

.... ಪ್ರತೀಕ್ಷಾಯೈ ಕುಮಾರೀಮ್ ।

ಸಾರಸ್ವತಪಾಠ :
ತೈ. ಬ್ರಾ. ೩–೪ ನೆಯ ಪ್ರಪಾಠಕ ಪೂರ್ಣ.

* * *

1. ತೈ. ಬ್ರಾ. 3–8 ಮತ್ತು 9 ನೆಯ ಪ್ರಪಾಠಕಗಳಲ್ಲಿ ಕೆಲವು ಮಂತ್ರಗಳೂ ಸೇರಿವೆ.



## ೧೪. ಸೌತ್ರಾಮಣೀ (ಚರಕ)

ಮಂತ್ರ

1. ಸ್ವಾದ್ವೀಂ ತ್ವಾ ಸ್ವಾದುನಾ ....

.... ನವೋವೃಕ್ತಂ ನ ಜಗ್ಮುಃ ।

ಸಾರಸ್ವತಪಾಠ :
ತೈ. ಸಂ. ೧-೮-೨೧ ರಲ್ಲಿ ಪ್ರಾರಂಭದಿಂದ

ಆಶ್ವಿನಂ ಧೂಮ್ರಮಾಲಭತೇ ....

ಎಂಬಲ್ಲಿಯವರೆಗೆ.

ಬ್ರಾಹ್ಮಣ

1. ಆಶ್ವಿನಂ ಧೂಮ್ರಮಾಲಭತೇ ....

.... ವಡಬಾ ದಕ್ಷಿಣಾ ।

ಸಾರಸ್ವತಪಾಠ :
ತೈ. ಸಂ. ೧-೮-೨೧ ರಲ್ಲಿ

ನ ಜಗ್ಮುಃ

ಎಂಬ ಪದಗಳ ನಂತರ ಅನುವಾಕ ಪೂರ್ಣ.

2. ಇಂದ್ರಸ್ಯ ಸುಷುವಾಣಸ್ಯ ದಶಧೇನ್ದ್ರಿಯಂ ವೀರ್ಯಂ

ಪರಾಪತತ್ ।

.... ತೈರೇವಾಸ್ಮೈ ಭೇಷಜಂ ಕರೋತಿ ।

ಸಾರಸ್ವತಪಾಠ :
ತೈ. ಬ್ರಾ. ೧-೮-೫ ರಿಂದ ೬ ನೆಯ ಅನುವಾಕ ಪೂರ್ಣ.



## ೧೫. ಅಚ್ಛಿದ್ರ

### ಮಂತ್ರ

1. ಯೋಃ ಪುರಸ್ತಾತ್ಪ್ರಸ್ರವಂತಿ ।

.... ಸಚತಾಂ ನಃ ಶಚೀಪತಿಃ ।

ಸಾರಸ್ವತಪಾಠ :
ತೈ. ಬ್ರಾ. ೩–೭–೪ ರಿಂದ ಪ್ರಪಾಠಕ ಪೂರ್ಣ.

### ಬ್ರಾಹ್ಮಣ

1. ಸರ್ವಾನ್ ವಾ ಏಷೋಽಗ್ನೌ ಕಾಮಾನ್ಪ್ರವೇಶಯತಿ ।

.... ರಕ್ಷಸಾಮುಪಹತ್ಯೈ[1] ।

ಸಾರಸ್ವತಪಾಠ :
ತೈ. ಬ್ರಾ. ೩–೭–೧ ರಿಂದ ೩ ನೆಯ ಅನುವಾಕ ಪೂರ್ಣ.

* * *

## ೧೬. ಪಶುಹೌತ್ರ

### ಮಂತ್ರ

1. ಅಞ್ಜನ್ತಿ ತ್ವಾಮಧ್ವರೇ ದೇವಯನ್ತಃ ।....

.... ಸೂಕ್ತವಾಕಾಯ ಸೂಕ್ತಾ ಬ್ರೂಹಿ ।

ಸಾರಸ್ವತಪಾಠ :
ತೈ. ಬ್ರಾ. ೩–೬–೧ ರಿಂದ ಪ್ರಪಾಠಕ ಪೂರ್ಣ.

---

1. ಈ ಅನುವಾಕಗಳಲ್ಲಿ ಕೆಲವು ಮಂತ್ರಗಳೂ ಸೇರಿವೆ.



## ೧೭. ಉಪನಿಷತ್ತುಗಳು

ಮಂತ್ರ

1. ಶಂ ನೋ ಮಿತ್ರಃ ಶಂ ವರುಣಃ ।....

.... ಓಂ ಶಾಂತಿಃ ಶಾಂತಿಃ ಶಾಂತಿಃ ।

ಸಾರಸ್ವತಪಾಠ :
ತೈ. ಆ. ೭–೧ ನೆಯ ಅನುವಾಕ ಪೂರ್ಣ.

2. ಸಹ ನೌ ಯಶಃ ।

ಸಹ ನೌ ಬ್ರಹ್ಮವರ್ಚಸಮ್ ।

ಸಾರಸ್ವತಪಾಠ :
ತೈ. ಆ. ೭–೩ ನೆಯ ಅನುವಾಕದಲ್ಲಿ ಪ್ರಾರಂಭದಿಂದ
ಎರಡು ವಾಕ್ಯಗಳು.

3. ಯಶ್ಛಂದಸಾಮೃಷಭೋ ವಿಶ್ವರೂಪಃ ।....

.... ಪ್ರತಿವೇಶೋಽಸಿ ಪ್ರ ಮಾ ಭಾಹಿ ಪ್ರ ಮಾ ಪದ್ಯಸ್ವ ।

ಸಾರಸ್ವತಪಾಠ :
ತೈ. ಆ. ೭–೪ ನೆಯ ಅನುವಾಕ ಪೂರ್ಣ.



4. ಅಹಂ ವೃಕ್ಷಸ್ಯ ರೇರಿವಾ ।

.... ಇತಿ ತ್ರಿಶಂಕೋರ್ವೇದಾನುವಚನಮ್ ।

ಸಾರಸ್ವತಪಾಠ :
ತೈ. ಆ. ೭–೧೦ ನೆಯ ಅನುವಾಕ ಪೂರ್ಣ.[1]

5. ಶಂ ನೋ ಮಿತ್ರಃ ಶಂ ವರುಣಃ ।....

.... ಆವೀದ್ವಕ್ತಾರಮ್ । ಓಂ ಶಾಂತಿಃ ಶಾಂತಿಃ ಶಾಂತಿಃ ॥

ಸಾರಸ್ವತಪಾಠ :
ತೈ. ಆ. ೭ ರಲ್ಲಿ ಕಡೆಯ ಅನುವಾಕ ಪೂರ್ಣ.

6. ಅಂಭಸ್ಯ ಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ

ಮಹತೋ ಮಹೀಯಾನ್ ।....

.... ಉಪತೇ ನಮ ಉಪತೇ ನಮಃ ।

ಸಾರಸ್ವತಪಾಠ :
ತೈ. ಆ. ೧೦–೧ ರಿಂದ

ಸತ್ಯಂ ಪರಂ ಪರಗ್ಂ ಸತ್ಯಂ ....

ಎಂಬ ಅನುವಾಕದವರೆಗೆ.

---

1. ಈ ಉಪನಿಷತ್ ಕಾಂಡದಲ್ಲಿ ಮಂತ್ರ–ಬ್ರಾಹ್ಮಣಗಳನ್ನು ಸ್ಥೂಲವಾಗಿ ವಿಭಾಗಿಸಿದೆ. ಮಂತ್ರಗಳಲ್ಲಿ ಕೆಲವೆಡೆ ಸಣ್ಣದಾದ ಬ್ರಾಹ್ಮಣಭಾಗವೂ, ಬ್ರಾಹ್ಮಣದಲ್ಲಿ ಚಿಕ್ಕ ಮಂತ್ರಭಾಗವೂ ಸೇರಿರುವ ಸಂಭವವಿದೆ.



## ಬ್ರಾಹ್ಮಣ

1. ಶೀಕ್ಷಾಂ ವ್ಯಾಖ್ಯಾಸ್ಯಾಮಃ ।

.... ಇತ್ಯುಕ್ತಃ ಶೀಕ್ಷಾಧ್ಯಾಯಃ ।

ಸಾರಸ್ವತಪಾಠ :
ತೈ. ಆ. ೭–೨ ನೆಯ ಅನುವಾಕ ಪೂರ್ಣ.

2. ಅಥಾತಃ ಸಗ್ಂಹಿತಾಯಾ ಉಪನಿಷದಂ

ವ್ಯಾಖ್ಯಾಸ್ಯಾಮಃ ।....

.... ಬ್ರಹ್ಮವರ್ಚಸೇನಾನ್ನಾದ್ಯೇನ ಸುವರ್ಗೇಣ

ಲೋಕೇನ ।

ಸಾರಸ್ವತಪಾಠ :
ತೈ. ಆ. ೭–೩ ನೆಯ ಅನುವಾಕದಲ್ಲಿ ಮೂರನೆಯ ವಾಕ್ಯದಿಂದ ಅನುವಾಕ ಪೂರ್ಣ.

3. ಭೂರ್ಭುವಸ್ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ ।

.... ತದ್ಧಿ ತಪಸ್ತದ್ಧಿ ತಪಃ ।

ಸಾರಸ್ವತಪಾಠ :
ತೈ. ಆ. ೭–೫ ರಿಂದ ೯ ನೆಯ ಅನುವಾಕ ಪೂರ್ಣ.



4. ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ ।

.... ಏವಮುಚೈತದುಪಾಸ್ಯಮ್ ।

ಸಾರಸ್ವತಪಾಠ :
ತೈ. ಆ. ೭–೧೧ ನೆಯ ಅನುವಾಕ ಪೂರ್ಣ.

5. ಬ್ರಹ್ಮವಿದಾಪ್ನೋತಿ ಪರಮ್ ।....

.... ಸುವರ್ಣ ಜ್ಯೋತೀಃ । ಯ ಏವಂ ವೇದ ।

ಇತ್ಯುಪನಿಷತ್ ।

ಸಾರಸ್ವತಪಾಠ :
ತೈ. ಆ. ೮ ಮತ್ತು ೯ ನೆಯ ಪ್ರಪಾಠಕ ಪೂರ್ಣ.

6. ಸತ್ಯಂ ಪರಂ ಪರಗ್ಂ ಸತ್ಯಂ ....

.... ತಸ್ಮಾದ್ಬ್ರಹ್ಮಣೋ ಮಹಿಮಾನಮ್ ॥

ಸಾರಸ್ವತಪಾಠ :
ತೈ. ಆ. ೧೦ ರಲ್ಲಿ ಕಡೆಯ ಮೂರು ಅನುವಾಕಗಳು.

---



"ಸ್ವಾಧ್ಯಾಯಬ್ರಾಹ್ಮಣಂ ಕಾಂಡಂ ಕಾಠಕೇ ಪಠಿತೋ ವಿಧಿಃ"

—ಕಾಂಡಾನುಕ್ರಮಣಿಕಾ

ಐದನೆಯ ಸ್ವಾಯಂಭುವ ಕಾಂಡದಲ್ಲಿ ಸ್ವಾಧ್ಯಾಯಮಂತ್ರ ಮತ್ತು ಬ್ರಾಹ್ಮಣಗಳು ಸೇರಿವೆ.

## ೫. ಸ್ವಾಯಂಭುವಕಾಂಡ

### ಮಂತ್ರ

1. ಯದ್ದೇವಾ ದೇವಹೇಳನಂ....

.... ತ್ವಗ್ಂ ಹಿ ವೇತ್ಥ ಯಥಾತಥವ್ ।

ಸಾರಸ್ವತಪಾಠ :

ತೈ. ಆ. ೨–೩ ನೆಯ ಅನುವಾಕದಿಂದ ೬ ನೆಯ ಅನುವಾಕ ಪೂರ್ಣ.

2. ಭೂಃ ಪ್ರಪದ್ಯೇ ಭುವಃ ಪ್ರಪದ್ಯೇ....

.... ಮುನಿಭ್ಯಶ್ಚ ನಮಃ ।

ಸಾರಸ್ವತಪಾಠ :

ತೈ. ಆ. ೨–೧೯ ಮತ್ತು ೨೦ ನೆಯ ಅನುವಾಕಗಳು.

### ಬ್ರಾಹ್ಮಣ

1. ಸಹ ವೈ ದೇವಾನಾಂ ಚಾಸುರಾಣಾಂ ಚ ಯಜ್ಞೌ

ಪ್ರತತಾವಾಸ್ತಾವ್ .... ಬ್ರಹ್ಮಾಪ್ಯೇತಿ ಯ ಏವಂ ವೇದ ।

ಸಾರಸ್ವತಪಾಠ :

ತೈ. ಆ. ೨–೧ ಮತ್ತು ೨ ನೆಯ ಅನುವಾಕ ಪೂರ್ಣ.



2. ವಾತರಶನಾ ಹ ವಾ ಋಷಯಃ ....

.... ಆತ್ಮನೋಽನುಪದಾಸಾಯ ।

ಸಾರಸ್ವತಪಾಠ :
ತೈ. ಆ. ೨–೭ ರಿಂದ ೮ ನೆಯ ಅನುವಾಕ ಪೂರ್ಣ.

3. ಅಜಾನ್ ಹ ವೈ ಪೃಶ್ನೀಗ್ಁಸ್ತಪಸ್ಯಮಾನಾನ್ ....

.... ಆತ್ಮಾ ಹಿ ವರಃ[1] ।

ಸಾರಸ್ವತಪಾಠ :
ತೈ. ಆ. ೨–೯ ರಿಂದ ೧೮ ನೆಯ ಅನುವಾಕ ಪೂರ್ಣ.



ಈ ರೀತಿಯಾಗಿ ಕೋಷ್ಟಕದ ನೆರವಿನಿಂದ ಸಾರಸ್ವತಪಾಠ ಮತ್ತು ಕಾಂಡವಿಭಾಗವನ್ನು ತಿಳಿಯಬಹುದು. ಯಜ್ಞಗಳನ್ನು ಅನುಷ್ಠಿಸುವಾಗಲೂ, ಮಂತ್ರಗಳ ವಿನಿಯೋಗವನ್ನು ತಿಳಿಯುವಾಗಲೂ ಕಾಂಡ ವಿಭಾಗವನ್ನು ತಿಳಿಯುವುದು ಅತ್ಯವಶ್ಯಕವಾಗಿದೆ.

1. ಇದರಲ್ಲಿ ಕೆಲವು ಮಂತ್ರಗಳೂ ಇವೆ.





## ತೈತ್ತಿರೀಯಶಾಖೆಯಲ್ಲಿ ಬರುವ ಕೆಲವು ಉಪಾಖ್ಯಾನಗಳು

ವೇದಗಳಲ್ಲಿ ಮಂತ್ರ ಮತ್ತು ಬ್ರಾಹ್ಮಣಗಳೆಂಬ ವಿಭಾಗವಿದೆಯಷ್ಟೆ. ಬ್ರಾಹ್ಮಣಗಳಲ್ಲಿ ಇತಿಹಾಸ, ಪುರಾಕಲ್ಪ, ಅರ್ಥವಾದಗಳು ಅಂತರ್ವಿಭಾಗ ಗಳು. ಮಂತ್ರಗಳನ್ನು ವಿನಿಯೋಗಿಸಿ ಬ್ರಾಹ್ಮಣಗಳ ಮೂಲಕ ವಿಧಿಸುವ ಕರ್ಮಗಳು ಪ್ರಶಸ್ತವಾದವುಗಳೆಂದು ನಿರೂಪಿಸಲು ವೇದದಲ್ಲಿ ಅಲ್ಲಲ್ಲಿ ಉಪಾಖ್ಯಾನಗಳು ಬರುತ್ತವೆ. ಈ ಉಪಾಖ್ಯಾನಗಳಿಗೆ ಅವುಗಳಿಂದ ನೇರವಾಗಿ ಪ್ರತಿಪಾದಿತವಾಗುವ ಅರ್ಥದಲ್ಲಿ ತಾತ್ಪರ್ಯವಿಲ್ಲವೆಂದೂ, ಯಾವ ಕರ್ಮವನ್ನು ಶ್ರುತಿಯು ತಿಳಿಸಿದ ನಂತರ ಆ ಅರ್ಥವಾದವು ಹೇಳಲ್ಪಟ್ಟಿದೆಯೋ ಆ ಕರ್ಮವು ಪ್ರಶಸ್ತ ಎಂಬುದಷ್ಟೇ ಆ ಉಪಾಖ್ಯಾನಗಳಿಗೆ ತಾತ್ಪರ್ಯವೆಂದೂ ಮೀಮಾಂಸಕರ ಅಭಿಪ್ರಾಯ.

ತೈತ್ತಿರೀಯ ಸಂಹಿತೆ, ಬ್ರಾಹ್ಮಣ ಮತ್ತು ಆರಣ್ಯಕಗಳಲ್ಲಿ ಅನೇಕ ಉಪಾಖ್ಯಾನಗಳು ಬಂದಿದ್ದರೂ ಉಪಾಖ್ಯಾನಗಳ ಪರಿಚಯಕ್ಕಾಗಿ ಆಯ್ದ ಕೆಲವು ಉಪಾಖ್ಯಾನಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

### ಅ) ಕುಮಾರ ನಚಿಕೇತನ ಉಪಾಖ್ಯಾನ

**ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂ ದದೌ ।....**

**....ಯೋಽಗ್ನಿಂ ನಾಚಿಕೇತಂ ಚಿನುತೇ। ಯ ಉ ಚೈನಮೇವಂ ವೇದ।**

—ತೈ. ಬ್ರಾ. ೩-೧೧-೮

ಗೌತಮಗೋತ್ರದಲ್ಲಿ ಜನಿಸಿದ ವಾಜಶ್ರವನ ಮಗನಾದ ವಾಜ ಶ್ರವಸನು 'ವಿಶ್ವಜಿತ್''[1] ಯಾಗವನ್ನು ಮಾಡಿದನು. ಯಾಗ ಮಾಡುವಾಗ ಋತ್ವಿಜರಿಗೆ ದಕ್ಷಿಣೆಯನ್ನು ನೀಡುವ ಸಂದರ್ಭ ಬಂದಿತು. ಆಗ ವಾಜಶ್ರವಸನ ಮಗನಾದ ನಚಿಕೇತನು ತಂದೆಯು ಸ್ವತ್ತುಗಳಲ್ಲಿ ತಾನೂ

---

ಯಾಗವನ್ನು ಮಾಡುವವನು ತನ್ನ ಸರ್ವಸ್ವವನ್ನೂ ದಾನ ಮಾಡಬೇಕಾದ ಯಾಗ.



ಸಹ ಒಬ್ಬನಾದುದರಿಂದ ತನ್ನನ್ನು ತಂದೆಯು ದಾನವನ್ನಾಗಿ ನೀಡುವುದು ಉಚಿತವೆಂದು ಭಾವಿಸಿದನು. ಬಳಿಕ ತಂದೆಯನ್ನು ಕುರಿತು 'ತಂದೆಯೇ! ನನ್ನನ್ನು ಯಾರಿಗೆ ದಾನವನ್ನಾಗಿ ನೀಡುವೆ ?' ಎಂದು ಪ್ರಶ್ನಿಸಿದನು. ಅರಿಯದ ಹಸುಳೆಯೆಂದು ಭಾವಿಸಿ ವಾಜಶ್ರವಸನು ಸುಮ್ಮನಿದ್ದನು. ನಚಿಕೇತನು ಎರಡನೆಯ ಬಾರಿ ಕೇಳಿದನು. ಉತ್ತರ ಬಾರದಿರಲು ಮೂರ ನೆಯ ಬಾರಿ ಮತ್ತೆ ಕೇಳಿದನು. ಮಗನ ಸದ್ಭಾವನೆಯನ್ನು ತಿಳಿಯದೆ ವಾಜಶ್ರವಸನು ಮಗನು ಔದ್ಧತ್ಯದಿಂದ ಹೀಗೆ ಕೇಳುತ್ತಿರುವನೆಂದುಕೊಂಡು ಕೋಪಗೊಂಡು ಮಗನ ಕಡೆ ತಿರುಗಿ 'ನಿನ್ನನ್ನು ಮೃತ್ಯುವಿಗೆ ಕೊಡುವೆನು' ಎಂದುಬಿಟ್ಟನು.

ಅಶರೀರವಾದ ದೈವೀವಾಣಿಯು ನಚಿಕೇತನಿಗೆ ಅನುಗ್ರಹವಮಾಡುವ ಇಚ್ಛೆಯಿಂದ ಹೀಗೆ ಹೇಳಿತು :—"ನಚಿಕೇತಕುಮಾರನೇ! ನಿನ್ನ ತಂದೆಯು ನಿನ್ನನ್ನು ಮೃತ್ಯುವಿನ ಮನೆಗೆ ಹೋಗೆಂದೂ, ಮೃತ್ಯುವಿಗೆ ನಿನ್ನನ್ನು ಕೊಟ್ಟೆನೆಂದೂ ಹೇಳಿರುತ್ತಾನೆ. ಯಮನ ಮನೆಗೆ ಹೋಗು. ಆದರೆ ಯಮನು ಪ್ರವಾಸದಲ್ಲಿರುವಾಗ ಹೋಗು. ಮೂರು ದಿನಗಳ ಕಾಲ ಏನನ್ನೂ ತಿನ್ನದೆ ಉಪವಾಸ ಮಾಡುತ್ತಾ ಅವನ ಮನೆಯಲ್ಲಿರು. ಯಮನು ಬಂದು ಕೇಳಿದಾಗ ಮೂರು ದಿನಗಳಿಂದ ಅವನ ಮನೆಯಲ್ಲಿ ಇರುವುದನ್ನು ತಿಳಿಸು. ಮೊದಲನೆಯ ರಾತ್ರಿ ನಿನ್ನ ಆಹಾರವೇನೆಂದು ಕೇಳಿದರೆ ನಿನ್ನ ಪ್ರಜೆಯೇ (ಮಕ್ಕಳೇ) ಆಹಾರವೆಂದು ಉತ್ತರ ಕೊಡು. ಹಾಗೆಯೇ ಎರಡನೆಯ ರಾತ್ರಿ ನಿನ್ನ ಪಶುಗಳೇ ಆಹಾರವೆಂದೂ ಮೂರನೆಯ ರಾತ್ರಿ ನಿನ್ನ ಸಾಧುಕಾರ್ಯ (ಪುಣ್ಯ)ವೇ ಆಹಾರವೆಂದೂ ಉತ್ತರಿಸು." ಹೀಗೆ ದೇವವಾಣಿಯನ್ನು ಕೇಳಿ ಅದರಂತೆಯೇ ನಚಿಕೇತನು ಮಾಡಿದನು. ಯಮನು ಪ್ರವಾಸ ದಲ್ಲಿರುವಾಗ ಅವನ ಮನೆಗೆ ಹೋಗಿ ಮೂರು ದಿನಗಳ ಕಾಲ ಉಪವಾಸ ಮಾಡಿದನು. ಯಮನು ಬಂದು ಕೇಳಿದ ಪ್ರಶ್ನೆಗಳಿಗೆ ದೇವವಾಣಿಯು ಹೇಳಿದ್ದಂತೆಯೇ ಉತ್ತರಗಳನ್ನು ಕೊಟ್ಟನು. ಆಗ ಯಮನು ಅತಿಥಿಯು ತನ್ನ ಮನೆಯಲ್ಲಿ ಉಪವಾಸವಿದ್ದುದರಿಂದ ತನಗೆ ಧರ್ಮಲೋಪವು ಒದಗಿ ತೆಂದು ಭಾವಿಸಿದನು. ಋಷಿಕುಮಾರನು ಸತ್ಕಾರಾರ್ಹನೆಂದೂ ತಿಳಿದನು. ಬಳಿಕ 'ಭಗವನ್! ನಿನಗೆ ನಮಸ್ಕಾರ. ವರವನ್ನು ಕೇಳು, ಕೊಡುವೆನು' ಎಂದನು. ಆಗ ನಚಿಕೇತನು 'ನಾನು ತಂದೆಯ ಬಳಿಗೆ ಜೀವಂತನಾಗಿ



ಹೋಗುವಂತೆ ವರವನ್ನು ಕೊಡು' ಎಂದು ಕೇಳಿದನು. ಅದಕ್ಕೆ ಯಮನು ಒಪ್ಪಿದನು.

'ಎರಡನೆಯ ವರವನ್ನು ಕೇಳು' ಎಂದು ಯಮನು ಹೇಳಿದಾಗ ನಚಿಕೇತನು 'ನಾನು ಮಾಡಿದ ಶ್ರೌತಸ್ಮಾರ್ತಕರ್ಮಗಳ ಪುಣ್ಯವು ಕ್ಷಯಿಸದಿರಲಿ' ಎಂದು ಕೇಳಿಕೊಂಡನು. ಆಗ ಯಮನು ನಾಚಿಕೇತಾಗ್ನಿ ಚಯನ-ಉಪಾಸನೆಗಳನ್ನು ನಚಿಕೇತನಿಗೆ ತಿಳಿಸಿಕೊಟ್ಟನು. ನಚಿಕೇತನಿಗೆ ಉಪದೇಶಿಸಿದುದರಿಂದಲೇ ನಾಚಿಕೇತಾಗ್ನಿಚಯನವೆಂದು ಲೋಕದಲ್ಲಿ ಪ್ರಸಿದ್ಧವಾಯಿತು. ಆದರಿಂದ ನಚಿಕೇತನ ಪುಣ್ಯಗಳು ಅಕ್ಷಯವಾದವು.

'ಮೂರನೆಯ ವರವನ್ನು ಕೇಳು' ಎಂದು ಯಮನು ಹೇಳಿದನು.[1] ಆಗ ನಚಿಕೇತನು 'ಮೃತ್ಯುವನ್ನು ಜಯಿಸುವ ಉಪಾಯವನ್ನು ತಿಳಿಸಿ ಕೊಡು' ಎಂದು ಕೇಳಿದನು. ಯಮನು ನಾಚಿಕೇತಾಗ್ನಿಯ ಉಪಾಸನೆಯನ್ನು ತಿಳಿಸಿಕೊಟ್ಟನು. ಇದರಿಂದ ನಚಿಕೇತನು ಮೃತ್ಯುವನ್ನು ಜಯಿಸಿದನು. (ಮೋಕ್ಷವನ್ನು ಪಡೆದನು.) ನಚಿಕೇತನು ಎರಡನೆಯ ಮತ್ತು ಮೂರನೆಯ ವರಗಳನ್ನು ಕೇಳಿದಾಗ ಯಮನು ನಾಚಿಕೇತಾಗ್ನಿಯನ್ನು ತಿಳಿಸಿಕೊಟ್ಟನು. ನಾಚಿಕೇತಾಗ್ನಿಯ ಚಯನವು ಮುಖ್ಯವಾಗಿದ್ದು, ಅಗ್ನ್ಯುಪಾಸನೆಯು ಗೌಣವಾದರೆ ಶ್ರೌತಸ್ಮಾರ್ತಕರ್ಮಗಳ ಪುಣ್ಯವು ಬೇಗ ಕ್ಷಯಿಸುವುದಿಲ್ಲ. ಸ್ವರ್ಗಾದಿಲೋಕಗಳಲ್ಲಿ ಸುಖಗಳನ್ನು ಅನುಭವಿಸಿ ಮತ್ತೆ ಭೂಮಿಯಲ್ಲಿ ಹುಟ್ಟಬೇಕಾಗುತ್ತದೆ. ಆದರೆ ಅಗ್ನಿಚಯನವು ಗೌಣವಾಗಿದ್ದು ಉಪಾಸನೆಯು ಮುಖ್ಯವಾದರೆ ಅಂತಹ ಉಪಾಸಕನು ಮೃತ್ಯುವನ್ನು ಜಯಿಸಿ ಮತ್ತೆ ಹುಟ್ಟದೆ ಮೋಕ್ಷವನ್ನು ಪಡೆಯುತ್ತಾನೆ. ಹೀಗೆ ಫಲಭೇದದಿಂದ ವರಗಳು ಭಿನ್ನವಾಗುತ್ತವೆ. ಹೀಗೆಯೇ ನಾಚಿಕೇತಾಗ್ನಿ ಚಯನವನ್ನು ಮಾಡಿದವನೂ ಮೃತ್ಯುವನ್ನು ಜಯಿಸುತ್ತಾನೆ. ಈ ವಿಷಯವನ್ನು ತಿಳಿದವನೂ ಮೃತ್ಯುವನ್ನು ಗೆಲ್ಲುತ್ತಾನೆ.[2]

---

1. ಮೂರು ರಾತ್ರಿಗಳ ಕಾಲ ನಚಿಕೇತನು ಉಪವಾಸವಿದ್ದುದರಿಂದ ಆ ದೋಷನಿವೃತ್ತಿಗಾಗಿ ಯಮನು ಮೂರು ವರಗಳನ್ನಿತ್ತನು.

2. ಇದೇ ಉಪಾಖ್ಯಾನವು ಕಠೋಪನಿಷತ್ತಿನಲ್ಲಿಯೂ ಬಂದಿದೆ. ಅಲ್ಲಿ ನಚಿಕೇತನು ಆತ್ಮಜ್ಞಾನವನ್ನು ಉಪದೇಶಿಸುವಂತೆ ಯಮನ ಬಳಿ ವರವನ್ನು ಬೇಡಿದನೆಂದು ಉಪಾಖ್ಯಾನವಿದೆ.



## ಆ) ನಾಭಾನೇದಿಷ್ಠನ ಉಪಾಖ್ಯಾನ

**ಮನುಃ ಪುತ್ರೇಭ್ಯೋ.... ಪಶೂನಭಿಮನ್ಯತೇ ।**

ತೈ. ಸಂ. ೩-೧-೯

ಮಂಥಿಸಂಸ್ರಾವಹೋಮದ ಪ್ರಶಂಸೆಗಾಗಿ ಈ ಉಪಾಖ್ಯಾನವು ಬಂದಿದೆ.

ಕೃಷ್ಣಯಜುರ್ವೇದಸಂಹಿತೆಯ ಮೂರನೆಯ ಕಾಂಡದ ಪ್ರಥಮ ಪ್ರಶ್ನೆಯ ಈ ಉಪಾಖ್ಯಾನವು ಬಂದಿದೆ. ಆಪಸ್ತಂಬರು

> 'ಜೀವನ್ಪುತ್ರೇಭ್ಯೋ ದಾಯಂ ವಿಭಜೇತ್ಸಮಮಾತ್ಮನಾ
> ಸಮಂ ಚ ತೇಷಾಂ'

ಎಂದು ಮಕ್ಕಳೆಲ್ಲರಿಗೂ ಬದುಕಿರುವಾಗಲೇ ದಾಯಭಾಗವನ್ನು ಕೊಡಬೇಕೆಂದು ಹೇಳುತ್ತಾರೆ. ಈ ವಿಷಯದಲ್ಲಿ ಈ ಉಪಾಖ್ಯಾನವು ಸಮರ್ಥನೆಯನ್ನು ನೀಡುತ್ತದೆ.

ಮನ್ವಂತರಪ್ರವರ್ತಕನಾದ ಮನುಚಕ್ರವರ್ತಿಯು ತನ್ನ ಮಕ್ಕಳಿಗೆ ಆಸ್ತಿಯನ್ನು ಹಂಚಿಕೊಟ್ಟನು. ಆ ಸಮಯದಲ್ಲಿ ಅಧ್ಯಯನಕ್ಕಾಗಿ ಗುರುಕುಲದಲ್ಲಿದ್ದ ನಾಭಾನೇದಿಷ್ಠನೆಂಬ ಮಗನಿಗೆ ಭಾಗವನ್ನು ಕಾದಿಡಲಿಲ್ಲ. ಅಧ್ಯಯನವನ್ನು ಮುಗಿಸಿ ಬಂದ ನಾಭಾನೇದಿಷ್ಠನು 'ನನಗೇಕೆ ಪಾಲನ್ನು ಕೊಡಲಿಲ್ಲ'ವೆಂದು ಕೇಳಿದನು. ಅದಕ್ಕೆ ಮನುವು "ನಿನಗೆ ಪಾಲಿಲ್ಲದಂತೆ ಮಾಡಿಲ್ಲ. ಮುನಿಗಳಾದ ಅಂಗಿರಸರು ಸತ್ರಯಾಗವನ್ನು ಮಾಡುತ್ತಿದ್ದಾರೆ. ಅವರಿಗೆ ಸ್ವರ್ಗಲೋಕವು ತಿಳಿಯುತ್ತಿಲ್ಲ. ಅವರಿಗೆ ನೀನು ಈ ಬ್ರಾಹ್ಮಣವನ್ನು ಹೇಳು. ಇದರಿಂದ ಸ್ವರ್ಗವನ್ನು ತಿಳಿದು ಸ್ವರ್ಗಕ್ಕೆ ಹೋಗುವಾಗ ಅವರು ತಮ್ಮ ಹಸುಗಳನ್ನು ನಿನಗೆ ಕೊಡುವರು. ಇದು ನಿನ್ನ ದಾಯಭಾಗ" ಎಂದು ಉತ್ತರಿಸಿದನು. ನಾಭಾನೇದಿಷ್ಠನು ಅಂಗಿರಸರ ಯಾಗಕ್ಕೆ ಹೋಗಿ ಆ ಬ್ರಾಹ್ಮಣವನ್ನು ಅವರಿಗೆ ತಿಳಿಸಿದನು. ಅದರ ಪ್ರಭಾವದಿಂದ ಅಂಗಿರಸರು ಸ್ವರ್ಗಕ್ಕೆ ಹೋದರು. ಹೋಗುವಾಗ ತಮ್ಮಲ್ಲಿದ್ದ ಹಸುಗಳನ್ನು ನಾಭಾನೇದಿಷ್ಠನಿಗೆ ಕೊಟ್ಟರು.



ನಾಭಾನೇದಿಷ್ಠನು ಹಸುಗಳೊಡನೆ ಯಜ್ಞಭೂಮಿಯಲ್ಲಿ ಸಂಚರಿಸುತ್ತಿದ್ದಾಗ ರುದ್ರನು ಆಗಮಿಸಿದನು. ಆತನು ಈ ಪಶುಗಳು ತನಗೆ ಸೇರಿವೆಯೆಂದನು. ನಾಭಾನೇದಿಷ್ಠನು ಅಂಗಿರಸರು ತನಗೆ ಕೊಟ್ಟರೆಂದನು. ಆಗ ರುದ್ರನು 'ಅಂಗಿರಸರು ಇವುಗಳ ಒಡೆಯರಲ್ಲ; ಇವು ಅವರಿಗೆ ಸೇರಿಲ್ಲ; ಆದುದರಿಂದ ಅವರು ಕೊಟ್ಟರೂ ನ್ಯಾಯ್ಯವಾಗುವುದಿಲ್ಲ' ಎಂದನು. ಯಜ್ಞಭೂಮಿಯಲ್ಲಿ ಉಳಿದುದೆಲ್ಲವೂ ತನಗೇ ಸೇರಬೇಕೆಂದನು. ಬಳಿಕ ರುದ್ರನು 'ನನ್ನನ್ನು ಯಜ್ಞದಲ್ಲಿ ಸೇವಿಸು; ಅನಂತರ ನಿನಗೆ ಹಸುಗಳನ್ನು ಬಿಟ್ಟು ಕೊಡುತ್ತೇನೆ' ಎಂದು ಹೇಳಿದನು. ಆಗ ನಾಭಾನೇದಿಷ್ಠನು ಮಂಥಿಸಂಸ್ರಾವಹೋಮವನ್ನು ರುದ್ರಪ್ರೀತ್ಯರ್ಥವಾಗಿ ಮಾಡಿದನು. ಅದರಿಂದ ತೃಪ್ತನಾದ ರುದ್ರನು ಆತನಿಗೆ ಅಂಗಿರಸರು ಕೊಟ್ಟ ಹಸುಗಳನ್ನು ಬಿಟ್ಟು ಕೊಟ್ಟನು. ಹೀಗೆ ಎಲ್ಲಿ ಮಂಥಿಸಂಸ್ರಾವಹೋಮದ ಅನುಷ್ಠಾನವಾಗುತ್ತದೆಯೋ ಅಲ್ಲಿ ರುದ್ರನು ಪಶುಗಳನ್ನು ಹಿಂಸಿಸುವುದಿಲ್ಲ. ಹೀಗೆ ರುದ್ರನು ಸುಪ್ರೀತನೂ ಆದನು. ನಾಭಾನೇದಿಷ್ಠನಿಗೆ ದಾಯಭಾಗವೂ ಸಿಕ್ಕಿತು.

## ಇ) ಮೂರು ಪಟ್ಟಣಗಳ ಆಖ್ಯಾನ

**ತೇಷಾಮಸುರಾಣಾಂ.... ಭ್ರಾತೃವ್ಯಪರಾಣುತ್ತ್ಯೈ....**

ತೈ. ಸಂ. ೬-೨-೩

ಸೋಮಯಾಗದಲ್ಲಿ ಉಪಸತ್ತುಗಳೆಂಬ ಅಂಗಹೋಮಗಳನ್ನು ಹೇಳಿರುತ್ತಾರೆ. ಅವುಗಳಿಗೆ ಸಂಬಂಧಿಸಿದಂತೆ ಒಂದು ಆಖ್ಯಾನವಿದೆ. ಇದು ತೈತ್ತಿರೀಯಸಂಹಿತೆಯ ಆರನೆಯ ಕಾಂಡದ ಎರಡನೆಯ ಪ್ರಶ್ನೆಯ ಮೂರನೆಯ ಅನುವಾಕದಲ್ಲಿ ಬರುತ್ತದೆ.

ಆ ರಾಕ್ಷಸರಿಗೆ ಮೂರು ಪಟ್ಟಣಗಳಿದ್ದವು. ಇವನ್ನು ದುರ್ಗಗಳಂತೆ ಸಜ್ಜುಗೊಳಿಸಿ ಆಶ್ರಯಿಸಿದ್ದರು. ಒಂದು ಅಯಸ್ಮಯ (ಕಬ್ಬಿಣದಿಂದ ನಿರ್ಮಿತ); ಇನ್ನೊಂದು ರಜತಮಯ (ಬೆಳ್ಳಿಯದು) ; ಮತ್ತೊಂದು ಹಿರಣ್ಮಯ (ಚಿನ್ನದಿಂದ ನಿರ್ಮಿತ,) ಮೊದಲನೆಯದು ಭೂಲೋಕದಲ್ಲಿಯೂ, ಎರಡನೆಯದು ಅಂತರಿಕ್ಷದಲ್ಲಿಯೂ, ಮೂರನೆಯದು



ದ್ಯುಲೋಕದಲ್ಲಿಯೂ ಇದ್ದಿತು. ದೇವತೆಗಳು ಇವುಗಳನ್ನು ಮುತ್ತಿದರು. ಆದರೆ ಜಯಿಸಲಾಗಲಿಲ್ಲ. ಉಪಸದ್ಹೋಮಗಳೆಂಬ ಶಸ್ತ್ರದಿಂದ ಯುದ್ಧದಲ್ಲಿ ರಾಕ್ಷಸರನ್ನು ಜಯಿಸಲು ನಿಶ್ಚಯಿಸಿದರು. ಅಗ್ನಿಯನ್ನು ಬಾಣದ ಕಾಂಡವಾಗಿ ಮಾಡಿಕೊಂಡರು. ಸೋಮನನ್ನು ಲೋಹದ ಭಾಗವಾಗಿ ಮಾಡಿಕೊಂಡರು. ವಿಷ್ಣುವನ್ನು ಬಾಣದ ಅಲಗಾಗಿ ಮಾಡಿಕೊಂಡರು. ಹೀಗೆ ಬಾಣವು ಸಿದ್ಧವಾಯಿತು. ಇದನ್ನು ಪ್ರಯೋಗಿಸುವವರು ಯಾರು ? ಬಳಿಕ ಆಲೋಚಿಸಿ 'ಕ್ರೂರನಾದ ರುದ್ರನೇ ಇದನ್ನು ಬಿಡಲಿ' ಎಂದು ಹೇಳಿದರು. ಆಗ ರುದ್ರನು 'ನನ್ನನ್ನು ಪಶುಪತಿಯನ್ನಾಗಿ ಮಾಡಲು ನೀವು ಸಮ್ಮತಿಸುವುದಾದರೆ ನಾನು ಪ್ರಯೋಗಿಸುವೆನು' ಎಂದನು. ದೇವತೆಗಳು ಒಪ್ಪಿದರು. ರುದ್ರನು ಬಾಣವನ್ನು ಪ್ರಯೋಗಿಸಿದನು. ಆ ಬಾಣವು ರಾಕ್ಷಸರ ಮೂರು ಪಟ್ಟಣಗಳನ್ನೂ ಭೇದಿಸಿ, ಅದರಲ್ಲಿದ್ದ ರಾಕ್ಷಸರನ್ನು ಮೂರು ಲೋಕಗಳಿಂದಲೂ ಹೊರಹಾಕಿತು. ಆದುದರಿಂದ ಉಪಸದ್ಹೋಮಗಳನ್ನು ಮಾಡುವುದರಿಂದ ಶತ್ರುಸಂಹಾರವಾಗುತ್ತದೆ.[1]

## ಈ) ನೃಮೇಧ—ಪರುಚ್ಛೇಪರ ಆಖ್ಯಾನ

ನೃಮೇಧಶ್ಚ ಪರುಚ್ಛೇಪಶ್ಚ.... ವರ್ಣಂ ವೇದೇತ್ಯಬ್ರುವೀತ್ ....

—ತೈ. ಸಂ. ೨–೫–೮

ದರ್ಶ–ಪೂರ್ಣಮಾಸಯಾಗದಲ್ಲಿ ಹೋತೃವು ಹೇಳಬೇಕಾದ ಸಾಮಿಧೇನಿಗಳಿಗೆ ಸಂಬಂಧಿಸಿದ ಆಖ್ಯಾನವೊಂದು ತೈತ್ತಿರೀಯಸಂಹಿತೆಯ ಎರಡನೆಯ ಕಾಂಡದ ಐದನೆಯ ಪ್ರಪಾಠಕದಲ್ಲಿದೆ.

ನೃಮೇಧ ಮತ್ತು ಪರುಚ್ಛೇಪರು ಪ್ರಸಿದ್ಧ ಬ್ರಹ್ಮವಾದಿಗಳು ಅಂದರೆ ವೇದವೇತ್ತರು. ಒಮ್ಮೆ ಅವರು ಹಸಿಯಾದ ಕಟ್ಟಿಗೆಯಲ್ಲಿ ಅಗ್ನಿ

1. ಪುರಾಣಗಳಲ್ಲಿ ಬರುವ ತ್ರಿಪುರದಹನದ ಕಥೆಯನ್ನು ಇದರೊಡನೆ ಹೋಲಿಸಬಹುದು. ಹೀಗೆಯೇ ವೇದದ ಹಲವು ಆಖ್ಯಾನಗಳು ಪುರಾಣಗಳಲ್ಲಿಯೂ ಕಂಡುಬರುತ್ತವೆ.



ಯನ್ನು ಉಂಟುಮಾಡೋಣವೆಂದೂ, ಆದರಿಂದ ಯಾರು ಶ್ರೇಷ್ಠ ಬ್ರಹ್ಮ ವಿದರೆಂದೂ ತಿಳಿಯುವುದೆಂದು ಹಸಿಯಾದ ಕಟ್ಟಿಗೆಯಲ್ಲಿ ಮಂತ್ರಗಳಿಂದ ಅಗ್ನಿಯನ್ನು ಸೃಜಿಸಲು ಪ್ರಾರಂಭಿಸಿದರು.

ಮೊದಲು ನೃಮೇಧನು ಮಂತ್ರಗಳನ್ನು ಹೇಳಿದನು. ಆದರಿಂದ ಹೊಗೆಯು ಮಾತ್ರವೇ ಬಂದಿತು. ಪರುಚ್ಛೇಪನು ಮಂತ್ರಗಳನ್ನು ಹೇಳಿದಾಗ ಅಗ್ನಿಯು ಉತ್ಪನ್ನವಾಯಿತು. ಆಗ ನೃಮೇಧನು 'ಋಷಿಯೇ! ನಾವಿಬ್ಬರೂ ಸಮಾನವಾಗಿಯೇ ತಿಳಿದಿದ್ದರೂ ನೀನು ಮಾತ್ರ ಅಗ್ನಿಯನ್ನು ಸೃಷ್ಟಿಸಿದೆ. ಇದಕ್ಕೆ ಕಾರಣವೇನು?' ಎಂದನು. ಪರುಚ್ಛೇಪನು 'ನಾನು ಸಾಮಿಧೇನೀವರ್ಣಗಳನ್ನು ತಿಳಿದಿರುವುದೇ ಕಾರಣ' ಎಂದು ಉತ್ತರಿಸಿದನು.

**ತಂತ್ವಾಸಮಿದ್ಭಿರಂಗಿರಃ । ಘೃತೇನ ವರ್ಧಯಾಮಸಿ ।**

ಎಂಬ ಋಕ್ಕಿನಲ್ಲಿ

**ಘೃತೇನ ವರ್ಧಯಾಮಸಿ ।**

ಎಂಬ ವಾಕ್ಯವೇ ಸಾಮಿಧೇನಿಯ ವರ್ಣವೆನಿಸುತ್ತದೆ.

ಈ ಋಕ್ಕನ್ನು ಹೇಳುವುದರಿಂದ ಯಜ್ಞೇಶ್ವರನು ಜ್ವಲಿಸುತ್ತಾನೆ.[1]

## ಉ) ಬ್ರಹ್ಮಯಜ್ಞದ ಆಖ್ಯಾನ

**ಅಗ್ನಿಂ ವೈ ಜಾತಂ ಪಾಪ್ಮಾ ಜಗ್ರಾಹ....ಅಭಾಗೋ ವಾಚಿ ಭವತಿ।**

—ತೈ. ಆ. ೨-೧೫

ಬ್ರಹ್ಮಯಜ್ಞದ (ವೇದಾಧ್ಯಯನ) ಪ್ರಶಂಸೆಗಾಗಿ ಒಂದು ಉಪಾಖ್ಯಾನವು ತೈತ್ತಿರೀಯ ಆರಣ್ಯಕದ ಎರಡನೆಯ ಪ್ರಪಾಠಕದಲ್ಲಿ ಬರುತ್ತದೆ.

ಅಗ್ನಿಯು ಹುಟ್ಟಿದನು. ಅವನನ್ನು ಪಾಪವು ಆವರಿಸಿತು. ದೇವತೆಗಳು ಆಹುತಿಗಳಿಂದ ಪಾಪವನ್ನು ಹೋಗಲಾಡಿಸಿದರು. ಆಹುತಿಗಳಿಂದ ಆ ಪಾಪವು ಯಜ್ಞಕ್ಕೆ ಬಂದಿತು. ಯಜ್ಞದಿಂದ ದಕ್ಷಿಣೆಗಳಿಗೆ; ದಕ್ಷಿಣೆಗಳಿಂದ ಆ ದಕ್ಷಿಣೆಗಳನ್ನು ಸ್ವೀಕರಿಸಿದ ಬ್ರಾಹ್ಮಣರಿಗೆ ಬಂದಿತು. ಬ್ರಾಹ್ಮಣ

1. ಸಾಮಿಧೇನಿಗಳ ಪ್ರಶಂಸೆಗಾಗಿ ಈ ಆಖ್ಯಾನವು ಬಂದಿದೆ.



ರಿಂದ ಮಂತ್ರಗಳಿಗೆ; ಮಂತ್ರಗಳಿಂದ ಸ್ವಾಧ್ಯಾಯಕ್ಕೆ (ಬ್ರಹ್ಮಯಜ್ಞಕ್ಕೆ) ಬಂದಿತು. ಆದರೆ ಆ ಪಾಪವು ದೇವತೆಗಳನ್ನೂ ಪವಿತ್ರಗೊಳಿಸಬಲ್ಲ ಬ್ರಹ್ಮಯಜ್ಞದಿಂದ ನಾಶ ಹೊಂದಿತು. ಇಂತಹ ಅಧ್ಯಯನವನ್ನು ಬಿಡುವವನು ಮಾತಿಗೂ ಯೋಗ್ಯನಲ್ಲ.

ಇದನ್ನೇ ಮುಂದುವರಿಸಿ ಶ್ರುತಿಯು ಹೀಗೆ ಹೇಳುತ್ತದೆ :
"ವೇದವನ್ನು ಬಿಟ್ಟವನು ಒಳ್ಳೆಯ ಗೆಳೆಯನನ್ನು ಕಳೆದುಕೊಂಡಂತೆ ಕಷ್ಟಕ್ಕೆ ಗುರಿಯಾಗುತ್ತಾನೆ; ಅವನಿಗೆ ಪುಣ್ಯದ ಮಾರ್ಗವು ತಿಳಿಯುವುದಿಲ್ಲ. ಅವನು ಮಾತಿಗೂ ಯೋಗ್ಯನಲ್ಲ; ಅವನಿಗೆ ಸ್ವರ್ಗವೂ ಸಿಕ್ಕುವುದಿಲ್ಲ." ಆದುದರಿಂದ ಪ್ರಯೋಜನವುಳ್ಳ ಅರ್ಥಜ್ಞಾನಕ್ಕಾಗಿ ವೇದಾಧ್ಯಯನವನ್ನು ಮಾಡಬೇಕು. ಯಾವ ಯಾವ ಯಾಗಗಳ ಪ್ರಕರಣಗಳನ್ನು ಅಧ್ಯಯನ ಮಾಡುತ್ತಾನೆಯೋ ಆಯಾ ಯಾಗಗಳ ಫಲವನ್ನೂ ಪಡೆಯುತ್ತಾನೆ. ಅಗ್ನಿ, ವಾಯು ಮತ್ತು ಆದಿತ್ಯರ ಸಾಯುಜ್ಯವನ್ನೂ ಹೊಂದುತ್ತಾನೆ. ಆಧುನಿಕರಾದ ವೇದವಿದರನ್ನೂ ಪ್ರಾಚೀನ ವೇದವಿದರನ್ನೂ ನಿಂದಿಸಬಾರದು. ಹಾಗೆ ನಿಂದಿಸುವವರು ಸೂರ್ಯಾದಿ ದೇವತೆಗಳನ್ನು ನಿಂದಿಸಿದಂತೆ ಆಗುತ್ತದೆ. ಏಕೆಂದರೆ :

**ಯಾವತೀರ್ವೈ ದೇವತಾಸ್ತಾಸ್ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ ತಸ್ಮಾದ್ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇ ದಿವೇ-ನಮಸ್ಕುರ್ಯಾನ್ನಾಶ್ಲೀಲಂ ಕೀರ್ತಯೇದೇತಾ ಏವ ದೇವತಾಃ ಪ್ರೀಣಾತಿ ।**

ಎಲ್ಲಾ ದೇವತೆಗಳೂ ವೇದವಿದನಾದ ಬ್ರಾಹ್ಮಣನಲ್ಲಿ ವಾಸಿಸುತ್ತಾರೆ. ಆದುದರಿಂದ ಅವರಿಗೆ ಪ್ರತಿದಿನವೂ ನಮಸ್ಕರಿಸಬೇಕು. ದೋಷಾರೋಪ ಮಾಡಬಾರದು. ಇದರಿಂದ ಎಲ್ಲಾ ದೇವತೆಗಳನ್ನೂ ಪ್ರೀತಿಗೊಳಿಸಿದಂತೆ ಆಗುತ್ತದೆ.



# ಕೃಷ್ಣಯಜುರ್ವೇದದ ಸ್ವರಗಳು

ಸ್ವರಗಳಿಗನುಗುಣವಾಗಿ ಅರ್ಥವು ವ್ಯತ್ಯಾಸ ಹೊಂದುವುದರಿಂದ ವೇದಗಳಲ್ಲಿ ಸ್ವರಗಳ ಉಚ್ಚಾರಣೆಯಲ್ಲಿ ಹೆಚ್ಚು-ಕಡಿಮೆಗಳು ಆಗಬಾರದು.

ಉದಾತ್ತ, ಅನುದಾತ್ತ, ಸ್ವರಿತ ಮತ್ತು ಪ್ರಚಯಗಳೆಂಬ ನಾಲ್ಕು ಸ್ವರಗಳು ಕೃಷ್ಣಯಜುರ್ವೇದದಲ್ಲಿ ಬಳಕೆಯಲ್ಲಿವೆ. ಸಾಮವೇದದಲ್ಲಿ ಏಳು ಸ್ವರಗಳು ; ಶುಕ್ಲಯಜುರ್ವೇದದಲ್ಲಿ ಉದಾತ್ತ ಅನುದಾತ್ತಗಳೆಂಬ ಎರಡೇ ಸ್ವರಗಳು ರೂಢಿಯಲ್ಲಿವೆ. ಋಗ್ವೇದದಲ್ಲಿಯೂ ನಾಲ್ಕು ಸ್ವರಗಳಿವೆ. ಈ ಉದಾತ್ತಾದಿ ಸಂಜ್ಞೆಗಳು ಸ್ವರಗಳಿಗೆ ಮಾತ್ರವೇ ಇವೆ ; ವ್ಯಂಜನಗಳಿಗಿಲ್ಲ. ಕೆಲವು ವೇಳೆ ಸ್ವರಗಳ ಈ ಧರ್ಮಗಳು ವ್ಯಂಜನಗಳಲ್ಲಿ ತೋರಬಹುದು.

ಧನ್ವನ್ನ್ । ವಸ್ತೋರ್ ಹವಿಷ್ಮತೀ । ಬರ್‌ಹಿಷಾ[1] ।

ಉದಾತ್ತ ಮುಂತಾದ ನಾಲ್ಕು ಸ್ವರಗಳಿಗೆ ಉದಾಹರಣೆಗಳು ಹೀಗಿವೆ.

'ಅಗ್ನಿಮೀಡೇ ।' ಇದು ಯಜುರ್ವೇದದಲ್ಲಿಯೂ ಇದೆ.

ಇಲ್ಲಿ 'ಅ' ಅನುದಾತ್ತ, (—) 'ಗ್ನಿ' (ಇ) ಉದಾತ್ತ<br>
'ಮೀ' (ಈ) ಸ್ವರಿತ, ( || ) 'ಡೇ' (ಏ) ಪ್ರಚಯ.

ಇವುಗಳ ಸ್ವರೂಪವನ್ನು ಪಾಣಿನಿಮುನಿಗಳು ಹೀಗೆ ಹೇಳಿರುತ್ತಾರೆ.

'ಉಚ್ಚೈರುದಾತ್ತಃ' 'ನೀಚೈರನುದಾತ್ತಃ' 'ಸಮಾಹಾರಃ ಸ್ವರಿತಃ' [2] "ಸ್ವರಿತಾತ್ಸಂಹಿತಾಯಾಮನುದಾತ್ತಾನಾಮ್"<br>
'ಪ್ರಚಯ ಉದಾತ್ತ ಶ್ರುತಿಃ' [3]

---

1. 'ಅ' ಕಾರದ ಸ್ವರಿತಧರ್ಮವು 'ನ್ನ್' ಎಂಬಲ್ಲಿ ತೋರುತ್ತದೆ. 'ಓ' ಕಾರದ ದೀರ್ಘಸ್ವರಿತಧರ್ಮವು 'ರ್' ಎಂಬಲ್ಲಿಯೂ, 'ಅ' ಕಾರದ ಅನುದಾತ್ತ ಧರ್ಮವು 'ರ್' ಎಂಬಲ್ಲಿಯೂ ತೋರುವುದು.

2. ಪಾಣಿನಿಸೂತ್ರ 1-2-29, 30, 31

3. ತೈತ್ತಿರೀಯ ಪ್ರಾತಿಶಾಖ್ಯ 21-10



ಇವುಗಳ ವಿವರಣೆಯು ಹೀಗಿದೆ :

**ತಾಲ್ವಾದಿಷು ಸಭಾಗೇಷು ಸ್ಥಾನೇಷು ಊರ್ಧ್ವಭಾಗೇ**
**ನಿಷ್ಪನ್ನಃ ಅಚ್ ಉದಾತ್ತಸಂಜ್ಞಃ ಸ್ಯಾತ್ ।**

ತಾಲ್ವಾದಿ ಸಭಾಗಸ್ಥಾನಗಳಲ್ಲಿ ಮೇಲಿನ ಭಾಗದಲ್ಲಿ ಹುಟ್ಟಿದ ಸ್ವರವು ಉದಾತ್ತ.

**ತಾಲ್ವಾದಿಷು ಸಭಾಗೇಷು ಸ್ಥಾನೇಷು ಅಧೋಭಾಗೇ**
**ನಿಷ್ಪನ್ನಃ ಅಚ್ ಅನುದಾತ್ತಸಂಜ್ಞಃ ಸ್ಯಾತ್ ।**

ತಾಲ್ವಾದಿ ಸ್ಥಾನಗಳಲ್ಲಿ ಕೆಳಭಾಗದಲ್ಲಿ ಹುಟ್ಟಿದ ಸ್ವರವು ಅನುದಾತ್ತ.

**ಉದಾತ್ತಾನುದಾತ್ತತ್ವೇ ವರ್ಣಧರ್ಮೌ ಸಮಾಹ್ರಿಯೇತೇ**
**ಯಸ್ಮಿನ್ ಸೋಽಚ್ ಸ್ವರಿತಸಂಜ್ಞಃ ಸ್ಯಾತ್ ।**

ಉದಾತ್ತತ್ವ-ಅನುದಾತ್ತತ್ವಗಳು ಯಾವ ಸ್ವರದಲ್ಲಿ ಸೇರಿವೆಯೋ ಆ ಸ್ವರವು ಸ್ವರಿತ.

ಸ್ವರಿತದ ಮುಂದೆ ಬರುವ ಅನುದಾತ್ತಗಳು 'ಪ್ರಚಯ'ವೆಂಬ ಹೆಸರನ್ನು ಪಡೆಯುತ್ತವೆ. ಇವು ಉದಾತ್ತದಂತೆ ಕೇಳಿಬರುತ್ತವೆ. ಇದನ್ನು ಪಾಣಿನಿಸೂತ್ರದಲ್ಲಿ 'ಏಕಶ್ರುತಿ'ಯೆಂದು ಹೇಳಿದೆ. [1]

ಎರಡು ಸ್ವರಗಳು ಸೇರಿ ಸಂಧಿಯಾಗುವಾಗ ಈ ಸ್ವರಗಳಲ್ಲಿ ವ್ಯತ್ಯಾಸವುಂಟಾಗುತ್ತದೆ. ಇವುಗಳನ್ನು ಸಂಗ್ರಹವಾಗಿ ಕೊಡಲಾಗಿದೆ.

**೧) ಉದಾತ್ತಮುದಾತ್ತವತಿ—ತೈ. ಪ್ರಾ. ೧೦-೧೦**

ಸಂಧಿಯಲ್ಲಿ ಒಂದು ಸ್ವರವು ಉದಾತ್ತವಾಗಿದ್ದರೆ ಏಕಾದೇಶವೂ ಉದಾತ್ತವಾಗುತ್ತದೆ.

**ದಿಕ್ಷು+ಉಪ=ದಿಕ್ಷೂಪ ಇಲ್ಲಿ ಎರಡೂ ಉದಾತ್ತಗಳು.**

**(ಉ+ಉ)**

1. ವರ್ಣಗಳು ಕಂಠ ಮುಂತಾದ ಸ್ಥಾನದಲ್ಲಿ ಹುಟ್ಟುತ್ತವೆ. ಕಂಠ, ತಾಲು ಮುಂತಾದ ಸ್ಥಾನಗಳಲ್ಲಿ ಮೇಲುಭಾಗ ಮತ್ತು ಕೆಳಭಾಗದಲ್ಲಿ ಹುಟ್ಟಿದಾಗ ಸ್ವರಗಳಿಗೆ ಉದಾತ್ತ ಮತ್ತು ಅನುದಾತ್ತ ಎಂಬ ಹೆಸರು ಬರುತ್ತದೆ.



ಯಾಜ್ಯಾ + ಆ + ಏವ = ಯಾಜ್ಯೈವ, ದಿವಿ + ಇವ = ದಿವೀವ

ಚ + ಓಜಸೇ = ಚೌಜಸೇ, ಸಾ + ಏವ + ಅಸ್ಯ + ಋದ್ಧಿಃ =

ಸೈವಾಸ್ಯರ್ದ್ಧಿಃ ।

೨) ಸ್ವರಿತಾನುದಾತ್ತಸನ್ನಿಪಾತೇ ಸ್ವರಿತಮ್ ।

—ತೈ.ಪ್ರಾ. ೧೦-೧೨

ನಿತ್ಯಸ್ವರಿತ ಮತ್ತು ಅನುದಾತ್ತಗಳು ಸೇರಿದಾಗ ಸ್ವರಿತವಾಗುತ್ತದೆ.

ಯಾಜ್ಯಾ + ಏಷಾ = ಯಾಜ್ಯೈಷಾ, ಕ್ವ + ಅಸ್ಯ = ಕ್ವಾಸ್ಯ

೩) ಉದಾತ್ತಯೋಶ್ಚ ಪರೋಽನುದಾತ್ತಃ ಸ್ವರಿತಮ್ ।

—ತೈ. ಪ್ರಾ. ೧೦-೧೬

ಇದು ಯಣ್ ಸಂಧಿಗೆ ಸಂಬಂಧಿಸುತ್ತದೆ. ಇವರ್ಣ, ಉವರ್ಣಗಳು ಉದಾತ್ತವಾಗಿದ್ದು ಅನುದಾತ್ತವು ಪರದಲ್ಲಿದ್ದರೆ ಆ ಅನುದಾತ್ತವು ಸ್ವರಿತವಾಗುತ್ತದೆ.

ವಿ + ಏವ = ವ್ಯೇವ ಅಪ್ಸು + ಅಗ್ನೇ = ಅಪ್ಸ್ವಗ್ನೇ

೪) ಊಭಾವೇ ಚ । —ತೈ. ಪ್ರಾ. ೧೦-೧೭

ಸವರ್ಣದೀರ್ಘಸಂಧಿಯಲ್ಲಿ ಊಭಾವದ ವಿಷಯದಲ್ಲಿ ವಿಶೇಷ ನಿಯಮವಿದು. ಪೂರ್ವವರ್ಣವು ಉದಾತ್ತವಾಗಿ ಪರವರ್ಣವು ಅನುದಾತ್ತವಾಗಿ ಊಭಾವವಾದರೆ ಅದು ಸ್ವರಿತವಾಗುತ್ತದೆ.

ಸು + ಉನ್ನೀಯಮ್ = ಸೂನ್ನೀಯಮ್ ।

ದಿಕ್ಷು + ಉಪದಧಾತಿ = ದಿಕ್ಷೂಪದಧಾತಿ ।



೫) ತಸ್ಮಿನ್ನನುದಾತ್ತೇ ಪೂರ್ವ ಉದಾತ್ತಃ ಸ್ವರಿತಮ್ ।
ಉದಾತ್ತೇ ಚಾನುದಾತ್ತ ಉದಾತ್ತಮ್ ।
ಸ್ವರಿತಶ್ಚ ಸರ್ವತ್ರ ।

—ತೈ. ಪ್ರಾ. ೧೨-೯-೧೦-೧೧

ಇದು ಅಕಾರಲೋಪಕ್ಕೆ ಸಂಬಂಧಿಸಿದ ನಿಯಮ. ಲೋಪ ಹೊಂದಿದ ಅಕಾರವು ಅನುದಾತ್ತವಾಗಿದ್ದರೆ ಪೂರ್ವಸ್ವರವು ಉದಾತ್ತ ವಾಗಿದ್ದರೆ ಆ ಉದಾತ್ತವು ಸ್ವರಿತವಾಗುತ್ತದೆ.

ತೇ + ಅಬ್ರುವನ್ = ತೇಽಬ್ರುವನ್

ಸಃ + ಅಬ್ರವೀತ್ = ಸೋಽಬ್ರವೀತ್

ಲೋಪ ಹೊಂದಿದ ಅಕಾರವು ಉದಾತ್ತವಾಗಿದ್ದರೆ ಹಿಂದಿನ ಅನುದಾತ್ತವು ಉದಾತ್ತವಾಗುತ್ತದೆ.

ರುಂಧತೇ + ಅಸತ್ರಂ = ರುಂಧತೇಽಸತ್ರಂ । ಮೇ + ಅನ್ನಂ
= ಮೇಽನ್ನಮ್ ।

ಉದಾತ್ತ ಅಕಾರವು ಲುಪ್ತವಾಗಿದ್ದರೆ ಹಿಂದಿನ ಸ್ವರಿತವೂ ಉದಾತ್ತ ವಾಗುತ್ತದೆ.

ಉಕ್ಥ್ಯಃ + ಅಥ = ಉಕ್ಥ್ಯೋಽಥ । ಗವೇ + ಅಶ್ವಾಯ
= ಗವೇಽಶ್ವಾಯ ।

### ಸ್ವರಗಳು ಜನಿಸುವ ಸ್ಥಾನಗಳು

ಸ್ವರಗಳು ಜನಿಸುವ ಸ್ಥಾನಗಳನ್ನು ಹೀಗೆ ಹೇಳಿದ್ದಾರೆ :
ಅನುದಾತ್ತೋ ಹೃದಿ ಜ್ಞೇಯೋ ಮೂರ್ಧ್ನ್ಯುದಾತ್ತ ಉದಾಹೃತಃ।
ಸ್ವರಿತಃ ಕರ್ಣಮೂಲೀಯಸ್ಸರ್ವಾಸ್ಯೇ ಪ್ರಚಯಃ ಸ್ಮೃತಃ ॥



ಅನುದಾತ್ತವು ಹೃದಯದಲ್ಲಿ ಹುಟ್ಟುತ್ತದೆ. ಉದಾತ್ತವು ತಲೆಯಲ್ಲಿಯೂ, ಸ್ವರಿತವು ಕಿವಿಗಳ ಮೂಲದಲ್ಲಿಯೂ ಹುಟ್ಟುತ್ತವೆ. ಪ್ರಚಯವು ಮುಖದಲ್ಲಿ ಹುಟ್ಟುತ್ತದೆ.

ಸ್ವರಗಳನ್ನು ಬೆರಳುಗಳಿಂದ ತೋರಿಸುವ ವಿಧಾನ—

ಉದಾತ್ತಂ ಪ್ರದೇಶಿನೀಂ ವಿದ್ಯಾತ್ಪ್ರಚಯಂ
ಮಧ್ಯತೋಽಂಗುಲಿಮ್ ।
ನಿಹತಂ ತು ಕನಿಷ್ಠಿಕ್ಯಾಂ ಸ್ವರಿತೋಪಕನಿಷ್ಠಿಕಾಮ್ ॥

ತರ್ಜನಿಯಲ್ಲಿ ಉದಾತ್ತವನ್ನೂ, ಮಧ್ಯದ ಬೆರಳಿನಲ್ಲಿ ಪ್ರಚಯವನ್ನೂ, ಕಿರುಬೆರಳಿನಲ್ಲಿ ಅನುದಾತ್ತವನ್ನೂ, ಅನಾಮಿಕೆಯಲ್ಲಿ ಸ್ವರಿತವನ್ನೂ ತೋರಿಸಬೇಕು.

ಋಷಿ–ದ್ರಷ್ಟಾ

'ಋಷೀ ಗತೌ' ಎಂಬ ಧಾತುವಿನಿಂದ ಋಷಿ ಶಬ್ದವು ನಿಷ್ಪನ್ನ ವಾಗಿದೆ. ಅದು ಗತ್ಯರ್ಥಕಾನಾಂ ಪ್ರಾಪ್ತ್ಯರ್ಥಕತ್ವಂ । ಎಂಬಂತೆ ಮಂತ್ರವನ್ನು ಹೊಂದಿದವರು (ನೋಡಿದವರು) ಎಂಬ ಅರ್ಥವನ್ನು ಕೊಡುತ್ತದೆ. ಆದುದರಿಂದ ಋಷಿಯೆಂದರೆ ಮಂತ್ರದ್ರಷ್ಟಾರನೆನ್ನುತ್ತಾರೆ.

ಯಜುರ್ವೇದಾರಣ್ಯಕದ ಎರಡನೆಯ ಪ್ರಶ್ನದ

ಅಜಾನ್ ಹ ವೈ

ಎಂಬ ಅನುವಾಕದಲ್ಲಿ ಋಷಿ ಶಬ್ದದ ನಿರ್ವಚನವು ಹೀಗಿದೆ :

"ಅಜಾನ್ ಹ ವೈ ಪೃಶ್ನೀಗ್‌ಸ್ತಪಸ್ಯಮಾನಾನ್ ಬ್ರಹ್ಮ
ಸ್ವಯಂಭ್ವಭ್ಯಾನರ್ಷತ್ತ ಋಷಯೋಽಭವ-
ನ್ತದೃಷೀಣಾಮೃಷಿತ್ವಮ್"



ಅಜ ಎಂಬ ಹೆಸರಿನ ಮುನಿಗಳು ತಪಸ್ಸು ಮಾಡುತ್ತಿದ್ದರು. ಆಗ ಸ್ವಯಂಭು ಬ್ರಹ್ಮವು (ವೇದವು) ಅವರ ಬಳಿಗೆ ಬಂದಿತು. ಆದುದರಿಂದ ಅಜರು ಋಷಿಗಳಾದರು. ಹೀಗೆ ಮಂತ್ರದ್ರಷ್ಟಾರರು ಋಷಿಗಳೆನಿಸಿಕೊಳ್ಳುತ್ತಾರೆ. ಇದೇ ಅವರ ಋಷಿತ್ವ.

ಈಗಲೂ ಋಷಿಗಳು ಹುಟ್ಟಬಾರದೇಕೆ ? ಎಂಬ ಪ್ರಶ್ನೆಗೆ ಆಪಸ್ತಂಬರು 'ಅದ್ಯತ್ವೇ ನಿಯಮಾತಿಕ್ರಮಾದೃಷಯೋ ನ ಜಾಯಂತೇ' ನಿಯಮಗಳನ್ನು ಈಗ ಜನರು ಮೀರುತ್ತಿರುವುದರಿಂದ ಅವರಲ್ಲಿ ಋಷಿಗಳು ಹುಟ್ಟಲಾರರು ಎಂದು ಉತ್ತರಿಸಿದ್ದಾರೆ.

ನಿರುಕ್ತದಲ್ಲಿ "ಋಷಿಗಳು ಸ್ವರ್ಗಕ್ಕೆ ಹೋದ ಮೇಲೆ ನಮಗೆ ಮಾರ್ಗದರ್ಶಕರು ಯಾರೆಂದು ಪ್ರಜೆಗಳು ಕೇಳಿದ ಪ್ರಶ್ನೆಗೆ ದೇವತೆಗಳು ತರ್ಕವನ್ನು ಋಷಿಗಳ ಸ್ಥಾನದಲ್ಲಿ ಇಟ್ಟುಕೊಳ್ಳಿರಿ ಎಂದು ಉತ್ತರಿಸಿದರು." ಎಂದು ಹೇಳುತ್ತಾರೆ.

## ಕೃಷ್ಣಯಜುರ್ವೇದದಲ್ಲಿ ಉಕ್ತರಾಗಿರುವ ಋಷಿಗಳು

ಯಜುರ್ವೇದದಲ್ಲಿ ಸಪ್ತರ್ಷಿಗಳೇ ಮೊದಲಾಗಿ ಹಲವರು ಋಷಿಗಳ ಹೆಸರುಗಳು ಕಂಡುಬರುತ್ತವೆ.

ಕಶ್ಯಪಃ ಪಶ್ಯಕೋ ಭವತಿ । ಯತ್ಸರ್ವಂ ಪರಿಪಶ್ಯತೀತಿ

ಸೌಕ್ಷ್ಮ್ಯಾತ್ ।

ಪಶ್ಯಕರಾದುದರಿಂದ (ಎಲ್ಲವನ್ನೂ ನೋಡುವುದರಿಂದ) (ತಿಳಿಯುವುದರಿಂದ) 'ಕಶ್ಯಪರು' ಎಂಬ ಅನ್ವರ್ಥವಾದ ಹೆಸರನ್ನು ಹೊಂದಿದರು.

ಅತ್ರಿರದದಾದೌರ್ವಾಯ ಎಂದು ಅತ್ರಿಗಳ ಹೆಸರು ಬಂದಿದೆ.

ಭರದ್ವಾಜೋ ಹ ತ್ರಿಭಿರಾಯುರ್ಭಿಃ ಎಂದು ಭರದ್ವಾಜರ ಹೆಸರು ಬಂದಿದೆ.



ಅಯಗ್ಂಸೋಃ ಅಗ್ನಿರಿತಿ ವಿಶ್ವಾಮಿತ್ರಸ್ಯ ಸೂಕ್ತಂ ಭವತಿ

ಎಂದು ವಿಶ್ವಾಮಿತ್ರರ ಉಲ್ಲೇಖವಿದೆ.

ಗೌತಮಕುಮಾರಮಿತಿ

ಎಂದು ಗೌತಮರ ನಾಮಸಂಕೀರ್ತನವಿದೆ.

ಇಲ್ಲಿ ವಾಜಶ್ರವಸನು ಗೌತಮಗೋತ್ರದವನೆಂದು ಹೇಳಿದೆ.

ಜಮದಗ್ನಿಃ ಪುಷ್ಟಿಕಾಮಃ

ಎಂದು ಜಮದಗ್ನಿಗಳ ಹೆಸರು ಬಂದಿದೆ.

ವಸಿಷ್ಠೋ ಹತಪುತ್ರೋಽಕಾಮಯತ ವಿಂದೇಯ

ಪ್ರಜಾಮ್ ಎಂದು ವಸಿಷ್ಠರ ಆಖ್ಯಾನವಿದೆ.*

ಹೀಗೆ ಕೃಷ್ಣಯಜುರ್ವೇದದಲ್ಲಿ ಸಪ್ತರ್ಷಿಗಳ ನಾಮಧೇಯಗಳು ಕಂಡುಬರುತ್ತವೆ.

ಸಪ್ತರ್ಷಿಗಳು ಮಾತ್ರವಲ್ಲದೆ ಇನ್ನೂ ಅನೇಕ ಋಷಿಗಳ ಹೆಸರು ಕೃಷ್ಣಯಜುರ್ವೇದದಲ್ಲಿದೆ.

ಮಹಾಮಹಿಮರಾದ ಅಗಸ್ತ್ಯರ ಹೆಸರು

ಅಗಸ್ತ್ಯೋ ಮರುದ್ಭ್ಯ ಉಕ್ಷ್ಣಃ ಪ್ರೌಕ್ಷತ್ ।

ಎಂಬ ಅನುವಾಕದಲ್ಲಿ ಕಂಡುಬರುತ್ತದೆ.

ಸಪ್ತ ಋಷಯಃ ಪ್ರಥಮಾಂ ಕೃತ್ತಿಕಾನಾಮರುಂಧತೀಮ್ ।

ಎಂಬಲ್ಲಿ ಪರಮಪತಿವ್ರತೆಯಾದ ಅರುಂಧತಿಯ ಹೆಸರಿದೆ.

---

* ಕಶ್ಯಪೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽಥ ಗೌತಮಃ ।
ಜಮದಗ್ನಿರ್ವಸಿಷ್ಠಶ್ಚ ಸಪ್ತೈತೇ ಋಷಯಃ ಸ್ಮೃತಾಃ ॥



ವೇದಗಳನ್ನು ವಿಭಾಗಿಸಿದ ವ್ಯಾಸರ ಹೆಸರು ಅರುಣಪ್ರಶ್ನೆಯಲ್ಲಿ

ಸ ಹೋವಾಚ ವ್ಯಾಸಃ ಪಾರಾಶರ್ಯಃ ।

ಎಂಬ ಸ್ಥಳದಲ್ಲಿ ಬರುತ್ತದೆ.

ಪ್ರಜಾಪತಿ, ಸೋಮ, ಅಗ್ನಿ, ವಿಶ್ವೇದೇವರು ಮತ್ತು ಸ್ವಯಂಭು ಕಾಂಡ ಋಷಿಗಳಾಗಿದ್ದಾರೆ. ಸಾಂಹಿತೀದೇವತೆಗಳು, ಯಾಜ್ಞಿಕೀದೇವತೆಗಳು, ವಾರುಣೀದೇವತೆಗಳು ಉಪನಿಷದೃಷಿಗಳಾಗಿದ್ದಾರೆ.

ವಾತರಶನಾ ಹ ವಾ ಋಷಯಃ ....

ಎಂಬಲ್ಲಿ ವಾತರಶನರ ಕೀರ್ತನೆಯಿದೆ.

ಸತ್ಯಮಿತಿ ಸತ್ಯವಚಾ ರಾಥೀತರಃ ।

ತಪ ಇತಿ ತಪೋನಿತ್ಯಃ ಪೌರುಶಿಷ್ಟಿಃ ।

ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ ।

ಈ ವಾಕ್ಯಗಳಲ್ಲಿ ರಾಥೀತರ, ಪೌರುಶಿಷ್ಟಿ, ಮೌದ್ಗಲ್ಯ ಇವರ ಅಭಿಪ್ರಾಯಗಳನ್ನು ಹೇಳಲಾಗಿದೆ. ಇನ್ನೂ ಹಲವರ ಹೆಸರುಗಳನ್ನು ನೋಡಬಹುದು.

ಭೃಗುರ್ವೈ ವಾರುಣಿಃ ॥ ಪ್ರಾಜಾಪತ್ಯೋ ಹಾರುಣಿಃ ॥

ಅರುಣೋ ಹ ಸ್ವಾಹಾಪವೇಶಿಃ ॥ ಕುಸುರುಬಿಂದ

ಔದ್ದಾಲಕಿಃ ॥ ಬಬರಃ ಪ್ರಾವಾಹಣಿಃ ॥ ಏತಾಗ್ಂ ಹ ವೈ

ಯಜ್ಞಸೇನಶ್ಚೈತ್ರಿಯಾಯಣಃ ॥ ಏತಾಗ್ಂ ಹ ವೈ





ಮುಂಡಿಭ ಔದನ್ಯವಃ ॥ ಏತಾಗ್ಂ ಹ ವಾ ಉದಂಕ-

ಶ್ಯಾಲ್ಬಾಯನಃ ॥ ಉವಾಚ ಹಾಸಿತೋ ದೈವಲಃ ॥

ಅಂಗಿರಸೋ ವೈ ಸತ್ರಮಾಸತ ॥ ಏತಂ ವೈ ಪರ ಆಟ್ಣಾರಃ,

ಕಕ್ಷೀವಾಗ್ಂ ಔಶಿಜೋ, ವೀತಹವ್ಯಃ, ಶ್ರಾಯಸ,

ಸ್ತ್ರಸದಸ್ಯುಃ, ಪೌರುಕುತ್ಸ್ಯಃ ಪ್ರಜಾಕಾಮಾ ಅಚಿನ್ವತ ॥

ದಧ್ಯಜ್ ವಾ ಆಥರ್ವಣಃ ॥ ಅತ್ಯಗ್ಂಹೋ ಹಾರುಣಿಃ॥

ಸ ಹೋವಾಚ ಪ್ಲಕ್ಷೋ ದೈಯಾಂಪಾತಿಃ ॥ ಜನಕೋ ಹ

ವೈದೇಹಃ ॥ ಅಹೀನಾ ಹಾಶ್ವತ್ಥ್ಯಃ ॥ ದೇವಭಾಗೋ ಹ

ಶ್ರೌತರ್ಷಃ । ಶೂಷೋ ಹ ವೈ ವಾರ್ಷ್ಣೇಯಃ ॥

ನೃಮೇಧಶ್ಚ ಪರುಚ್ಛೇಪಶ್ಚ ॥ ಯೇ ನಖಾಃ । ತೇ

ವೈಖಾನಸಾಃ ॥ ಯೇ ವಾಲಾಃ । ತೇ ವಾಲಖಿಲ್ಯಾಃ ॥

ತೇ ಸೌಧನ್ವನಾಸ್ಸುವರಾನಶಾನಾಃ ॥ ವಾಸಿಷ್ಠೋ ಹ

ಸಾತ್ಯಹವ್ಯಃ, ದೇವಭಾಗಂ ಪಪ್ರಚ್ಛ ॥

ರಜನೋ ವೈ ಕೌಣೇಯಃ ಕ್ರತುಜಿತಂ ಜಾನಕಿಮ್ ।

ಉಶನ್ ಹ ವೈ ವಾಜಶ್ರವಸಸ್ಸರ್ವವೇದಸಂ ದದೌ ।

ಹೀಗೆ ಯಜುರ್ವೇದದಲ್ಲಿ ಹಲವರು ಋಷಿಗಳ ಹೆಸರುಗಳು ಕಂಡುಬರುತ್ತವೆ.



ಬಬರಃ ಪ್ರಾವಾಹಣಿಃ

ಮೊದಲಾದ ಹೆಸರುಗಳು ನಿತ್ಯವಾದ ವಾಯು ಮುಂತಾದ ವಸ್ತುಗಳನ್ನು ತಿಳಿಸುತ್ತವೆ ಎಂದು ಮೀಮಾಂಸಕರ ಅಭಿಪ್ರಾಯ. ಹಾಗೆಯೇ ಅರ್ಥವಾದಗಳಲ್ಲಿ ಸೇರಿರುವ ಈ ಹೆಸರುಗಳು ವಿಧೇಯಪ್ರಶಂಸೆಯನ್ನು ಮಾಡುವುದರಿಂದ ಇವುಗಳಿಗೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದೂ ಮೀಮಾಂಸಕರು ಹೇಳುತ್ತಾರೆ.

## ಕೃಷ್ಣಯಜುರ್ವೇದಕ್ಕಿರುವ ಭಾಷ್ಯಗಳು

ಕೃಷ್ಣಯಜುರ್ವೇದಕ್ಕೆ ಅನೇಕ ಪ್ರಾಚೀನ ವಿದ್ವಾಂಸರು ಭಾಷ್ಯವನ್ನು ರಚಿಸಿರುತ್ತಾರೆ. ಆ ಎಲ್ಲ ಭಾಷ್ಯಗಳಲ್ಲಿ ಭಟ್ಟಭಾಸ್ಕರಮಿಶ್ರರಿಂದ ರಚಿತವಾದ 'ಜ್ಞಾನಯಜ್ಞ' ಎಂಬ ಹೆಸರಿನ ಭಾಷ್ಯವೂ, ಸಾಯಣಾಚಾರ್ಯರಿಂದ ರಚಿತವಾದ ಭಾಷ್ಯವೂ ತುಂಬ ಪ್ರಸಿದ್ಧವಾದುದು. ಸಂಹಿತಾಗ್ರಂಥಕ್ಕೆ ಇರುವ ಭಾಷ್ಯಗಳಲ್ಲಿ ಕುಂಡಿನನು ರಚಿಸಿರುವ ಭಾಷ್ಯವು ವೃತ್ತಿಯ ರೂಪದಲ್ಲಿದೆ. ಕಾಂಡಾನುಕ್ರಮಣಿಕೆಯಲ್ಲಿ ಬರುವ ಈ ಮಾತು ಇದನ್ನು ಸಮರ್ಥಿಸುತ್ತದೆ. 'ಯಸ್ಯಾಃ ಪದಕೃದಾತ್ರೇಯೋ ವೃತ್ತಿಕಾರಸ್ತು ಕುಂಡಿನಃ।' ಬೋಧಾಯನ ಗೃಹ್ಯಸೂತ್ರದಲ್ಲಿ ಕೌಂಡಿನ್ಯಾಯ ವೃತ್ತಿಕಾರಾಯ (೩–೯–೬) ಎಂಬ ಮಾತು ಬರುತ್ತದೆ.

ಪ್ರಸಿದ್ಧವಾದ ಸಾಯಣಭಾಷ್ಯ ಮತ್ತು ಭಟ್ಟಭಾಸ್ಕರಭಾಷ್ಯವಲ್ಲದೆ ತೈತ್ತಿರೀಯಸಂಹಿತೆಗೆ ಭವಸ್ವಾಮಿ, ಗುಹದೇವ, ಕ್ಷುರ, ಹರದತ್ತ, ವೆಂಕಟೇಶ ಮತ್ತು ಶತ್ರುಘ್ನ ಮುಂತಾದವರ ಭಾಷ್ಯಗಳೂ ಇದೆ.* ಈ ಭಾಷ್ಯಗಳು ಕೆಲವು ಅಪೂರ್ಣಗಳಾಗಿರುವುದರಿಂದಲೂ ಕಲ್ಪಸೂತ್ರ ಮುಂತಾದುವುಗಳನ್ನು ಅನ್ವಯಿಸುವುದರಲ್ಲಿ ಅಷ್ಟು ಸಮರ್ಥವಾಗಿಲ್ಲವಾದುದರಿಂದಲೂ, ಸಾಯಣಭಾಷ್ಯವೇ ಎಲ್ಲ ಭಾಷ್ಯಗಳಿಗಿಂತಲೂ

* ಋಗ್ವೇದ ಸಂಹಿತೆ, ಜಯಚಾಮರಾಜೇಂದ್ರ ವೇದರತ್ನಮಾಲಾ ಸಂಖ್ಯೆ ೧.



ಉತ್ಕೃಷ್ಟವಾದುದೆಂದು ಬಲ್ಲವರ ಮತ. ಸಾಯಣಾಚಾರ್ಯರು ಎಲ್ಲ ವೇದಗಳಿಗೂ ಭಾಷ್ಯವನ್ನು ರಚಿಸಿದವರಾದುದರಿಂದ ಮಿಕ್ಕೆಲ್ಲರಿಗಿಂತಲೂ ವೇದಾರ್ಥವನ್ನು ನಿರ್ಣಯಿಸುವುದರಲ್ಲಿ ಅವರು ತುಂಬ ಸಮರ್ಥರೆಂಬುದು ವಿದ್ವಾಂಸರ ಮತ.

ಇವೆಲ್ಲಕ್ಕಿಂತ ಮಿಗಿಲಾಗಿ ಇಂದು ನಮಗೆ ದೊರಕಿರುವ ವೇದಭಾಷ್ಯಗಳಲ್ಲಿ ನಾಲ್ಕು ವೇದಗಳಿಗೂ ಇರುವ ಭಾಷ್ಯವೆಂದರೆ ಸಾಯಣಭಾಷ್ಯವೇ ಆಗಿದೆ. ಸಾಯಣಭಾಷ್ಯದಲ್ಲಿ ಇರುವ ಒಂದು ವಿಶೇಷತೆ ಹೀಗಿದೆ. ಕೆಲವು ಮಂತ್ರಗಳು ಋಗ್ವೇದದಲ್ಲಿಯೂ ಮತ್ತು ಯಜುರ್ವೇದದಲ್ಲಿಯೂ ಸಮಾನವಾಗಿಯೇ ಇರುತ್ತವೆ. ಉಚ್ಚಾರಣೆಯ ಕ್ರಮವನ್ನು ಹೊರತುಪಡಿಸಿದರೆ ಮಂತ್ರಗಳ ಅಕ್ಷರಗಳಲ್ಲಿಯೂ ಆನುಪೂರ್ವಿಯಲ್ಲಿಯೂ ಯಾವ ವ್ಯತ್ಯಾಸವೂ ಇರುವುದಿಲ್ಲ. ಇಂತಹ ಮಂತ್ರಗಳನ್ನು ವ್ಯಾಖ್ಯಾನ ಮಾಡುವಾಗ ಸಾಯಣರು ಬೇರೆ ಬೇರೆ ರೀತಿಯ ಎರಡು ಅರ್ಥಗಳನ್ನು ಬರೆಯುವುದೂ ಉಂಟು. ಹೀಗೆ ಒಂದೇ ಮಂತ್ರಕ್ಕೆ ಎರಡು ರೀತಿಯಲ್ಲಿ ಅರ್ಥವನ್ನು ಬರೆಯಲು ಕಾರಣವಿದೆ. ಆಯಾ ಶಾಖೆಯ ಮಂತ್ರಗಳಿಗೆ ವ್ಯಾಖ್ಯಾನವನ್ನು ಮಾಡುವಾಗ ಆಯಾ ಶಾಖೆಯ ಬ್ರಾಹ್ಮಣವನ್ನು ಗಮನಿಸಿ ಅದಕ್ಕೆ ಹೊಂದಾಣಿಕೆಯಾಗುವಂತೆ ಭಾಷ್ಯವನ್ನು ಬರೆದಿರುತ್ತಾರೆ. ಆ ಎರಡು ಅರ್ಥಗಳು ಪರಸ್ಪರ ವಿರುದ್ಧವಾದವುಗಳಲ್ಲ. ಹೀಗೆ ಇಡೀ ವೇದಗಳ ಎಲ್ಲ ಶಾಖೆಗಳನ್ನು ಗಮನಿಸಿ, ಒಟ್ಟರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಸಾಯಣಾಚಾರ್ಯರು ಅನುಪಮವಾದ ಭಾಷ್ಯಗಳನ್ನು ರಚಿಸಿರುತ್ತಾರೆ.

### ಸಾಯಣಭಾಷ್ಯದ ಶೈಲಿ

ಸಾಯಣಾಚಾರ್ಯರು ಭಾಷ್ಯವನ್ನು ಬರೆದಿರುವ ಶೈಲಿಯು ಲಲಿತವಾಗಿಯೂ, ಗಂಭೀರವಾಗಿಯೂ ಇದೆ. ನಾಲ್ಕು ವೇದಗಳಿಗೆ ಭಾಷ್ಯವನ್ನು ಬರೆಯುವ ಮೊದಲು ಆಯಾ ವೇದದ ಭಾಷ್ಯದ ಪ್ರಾರಂಭದಲ್ಲಿ ಬರೆದಿರುವ ಭೂಮಿಕೆಯಲ್ಲಿಯೂ ಆಯಾ ವೇದಕ್ಕೆ ಸಂಬಂಧಿಸಿದ ಪ್ರಮುಖ ವಿಷಯಗಳು ಹೇಳಲ್ಪಟ್ಟಿವೆ. "ಚತುರ್ವೇದಭಾಷ್ಯಭೂಮಿಕಾ" ಎಂಬ



ಗ್ರಂಥವೂ ಅವರದೇ. ಕೃಷ್ಣಯಜುರ್ವೇದಕ್ಕೆ ಸಂಬಂಧಿಸಿದಂತೆ ಸಾಯಣ ಭಾಷ್ಯವು

ವಾಗೀಶಾದ್ಯಾಃ ಸುಮನಸಃ ....

ಎಂಬ ವಿಘ್ನೇಶ್ವರನ ಪ್ರಾರ್ಥನೆಯೊಂದಿಗೆ ಆರಂಭಗೊಳ್ಳುತ್ತದೆ. ನಂತರ ವಿಜಯನಗರ ಸಾಮ್ರಾಜ್ಯದ ದೊರೆಯಾದ ಬುಕ್ಕಮಹಾರಾಜನಿಂದ ಪ್ರೇರಿತನಾದ ಮಾಧವಾಚಾರ್ಯನು ವೇದಾರ್ಥವನ್ನು ಪ್ರಕಾಶಿಸಲು ಗ್ರಂಥವನ್ನು ರಚಿಸಿದನೆಂದೂ ಹೇಳಲ್ಪಟ್ಟಿದೆ.* ಸಾಯಣರು ತಮ್ಮ ವ್ಯಾಖ್ಯಾನದ ರೀತಿಯನ್ನು ಈ ರೀತಿ ಹೇಳಿರುತ್ತಾರೆ.

ಬ್ರಾಹ್ಮಣಂ ಕಲ್ಪಸೂತ್ರೇ ದ್ವೇ ಮೀಮಾಂಸಾಂ
ವ್ಯಾಕೃತಿಂ ತಥಾ ।
ಉದಾಹೃತ್ಯಾಥ ತೈಃ ಸರ್ವೈಃ ಮಂತ್ರಾರ್ಥಃ
ಸ್ಪಷ್ಟಮೀರ್ಯತೇ ॥

ಯಾವ ಮಂತ್ರವನ್ನು ವ್ಯಾಖ್ಯಾನ ಮಾಡಬೇಕಾಗಿದೆಯೋ ಆ ಮಂತ್ರದ ವಿನಿಯೋಗವನ್ನು ತಿಳಿಸುವ ಬ್ರಾಹ್ಮಣಭಾಗವನ್ನೂ, ಬೋಧಾಯನ ಮತ್ತು ಆಪಸ್ತಂಬರ ಎರಡು ಕಲ್ಪಸೂತ್ರಗಳನ್ನೂ, ಆ ಮಂತ್ರದ ಬಗ್ಗೆ ಚರ್ಚಿಸಿರುವ ಪೂರ್ವಮೀಮಾಂಸಾಸೂತ್ರಗಳು ಮತ್ತು ಅದರ ವಿಚಾರಗಳನ್ನೂ ಆ ಮಂತ್ರದಲ್ಲಿರುವ ಪದಗಳ ಬಗ್ಗೆ ತಿಳಿಸಬೇಕಾದ ವ್ಯಾಕರಣ ಶಾಸ್ತ್ರದ ಸೂತ್ರಗಳನ್ನೂ, ಅದರ ವಿವರಣೆಯನ್ನೂ ಉದಾಹರಿಸಿ, ಇವುಗಳೆಲ್ಲದರ ಸಹಾಯದಿಂದ ಮಂತ್ರದ ಅರ್ಥವು ಸ್ಪಷ್ಟವಾಗಿ ತಿಳಿಸಲ್ಪಡುತ್ತದೆ.

---

* ಮಾಧವರೇ ವಿದ್ಯಾರಣ್ಯರೆಂದು ಪ್ರಸಿದ್ಧರಾದ ಆಚಾರ್ಯರು. ಅವರು ತಮ್ಮ ತಮ್ಮನಾದ ಸಾಯಣಾಚಾರ್ಯರಿಂದ ವೇದಭಾಷ್ಯಗಳನ್ನು ಬರೆಸಿದರು. ಇಬ್ಬರೂ ಸಮರ್ಥರೇ. ಒಡಗೂಡಿ ವೇದಭಾಷ್ಯಗಳನ್ನು ರಚಿಸಿರುತ್ತಾರೆ. 'ಮಾಧವೀಯೇ ವೇದಾರ್ಥಪ್ರಕಾಶೇ' ಎಂದೇ ಭಾಷ್ಯದ ಮುಕ್ತಾಯದ ಪದಗಳಿವೆ.



ವೇದಗಳ ಉದ್ದೇಶವೇ ಪ್ರಧಾನವಾಗಿ ಧರ್ಮ ಮತ್ತು ಬ್ರಹ್ಮ ಗಳನ್ನು ತಿಳಿಸಿಕೊಡುವುದಾಗಿದೆ. ಧರ್ಮವು ಕರ್ಮಗಳ ಅನುಷ್ಠಾನರೂಪ ವಾಗಿಯೂ ಬ್ರಹ್ಮವು ಜ್ಞಾನಮಾರ್ಗದಿಂದಲೂ ತಿಳಿಯಲ್ಪಡತಕ್ಕದ್ದಾಗಿದೆ. ಕರ್ಮಕಾಂಡದಲ್ಲಿ ಬರುವ ಮಂತ್ರಗಳಿಗೆ ಕರ್ಮಗಳಲ್ಲಿಯೇ ವಿನಿಯೋಗ ವಿರುವುದರಿಂದ ಕರ್ಮಾನುಷ್ಠಾನವನ್ನು ಮಾಡಲು ಬೇಕಾದ ಬ್ರಾಹ್ಮಣ ಮೊದಲಾದುವುಗಳನ್ನು ಸಾಯಣರು ವ್ಯಕ್ತವಾಗಿ ವ್ಯಾಖ್ಯಾನ ಮಾಡು ವುದು ತುಂಬ ಸೂಕ್ತವಾಗಿಯೇ ಇದೆ.

ಯಜ್ಞಗಳ ಪ್ರಸಂಗವನ್ನು ವ್ಯಾಖ್ಯಾನ ಮಾಡುವಾಗ ಸಾಯಣರು ಕೇವಲ ಶಾಸ್ತ್ರೀಯವಿಷಯಗಳನ್ನು ಮಾತ್ರವೇ ಹೇಳದೆ ಶಾಸ್ತ್ರೀಯ ವಿಷಯಗಳನ್ನು ಮನವರಿಕೆ ಮಾಡಿಕೊಡಲು ಲೌಕಿಕ ಉದಾಹರಣೆಗಳನ್ನು ಬೇಕಾದಷ್ಟು ನೀಡಿರುತ್ತಾರೆ. ದರ್ಶ-ಪೂರ್ಣಮಾಸಗಳಲ್ಲಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಸಮಯದಲ್ಲಿ ಹೇಳುವ ಋಕ್ ಅನ್ನು 'ಸಾಮಿಧೇನೀ' ಎಂದು ಕರೆಯುತ್ತಾರೆ. ಸಾಮಿಧೇನೀ ಮಂತ್ರಗಳು ೧೧ ಇವೆ. ಆದರೆ 'ಪಂಚದಶ ಸಾಮಿಧೇನ್ಯೋ ಭವಂತಿ' ಎಂಬ ಮಾತಿನಂತೆ ಸಾಮಿಧೇನೀ ಋಕ್ಕುಗಳು ೧೫ ಆಗಬೇಕು. ಇದಕ್ಕಾಗಿ ಋಕ್ಕುಗಳ ಪೈಕಿ ಮೊದಲ ಋಕ್ಕನ್ನು ಮೂರು ಬಾರಿ ಮತ್ತು ಕಡೆಯ ಋಕ್ಕನ್ನು ಮೂರು ಬಾರಿ ಆವರ್ತನೆ ಮಾಡಿ ಯಾಜ್ಞಿಕರು ಹೇಳುತ್ತಾರೆ. ಆಗ ೧೫ ಋಕ್ಕುಗಳೇ ಆಗುತ್ತವೆ. (೩+೯+೩) ಈ ಆವೃತ್ತಿಯ ಪ್ರಸಂಗವನ್ನು ನಿರೂಪಿಸು ವಾಗ ಸಾಯಣರು ನೀಡುವ ದೃಷ್ಟಾಂತವು ತುಂಬ ಆಕರ್ಷಕವಾಗಿದೆ. ಅಲ್ಲಿಯ ಭಾಷ್ಯವಾಕ್ಯವು ಹೀಗಿದೆ.

ಯಥಾ ಲೋಕೇ ವಸ್ತ್ರೇಣ ಕಂಬಲೇನ ವಾ ವ್ರೀಹೀನ್
ವೋಢುಕಾಮೋ ಅಂತದ್ವಯಂ ಬಧ್ನಾತಿ ತದ್ವತ್ ||

ತೈ. ಸಂ. ೨-೫-೭

ಹೇಗೆ ಲೋಕದಲ್ಲಿ ಬಟ್ಟೆಯಲ್ಲಿಯಾಗಲೀ, ಕಂಬಳಿಯಲ್ಲಿಯಾಗಲೀ ಭತ್ತವನ್ನು ಕೊಂಡೊಯ್ಯಲು ಬಯಸುವವನು ಆ ಬಟ್ಟೆಯ ಎರಡೂ ಅಂಚನ್ನು ಬಿಗಿಯುತ್ತಾನೆಯೋ ಹಾಗೆಯೇ ಎರಡೂ ಕಡೆಯ ಋಕ್ಕು



ಗಳನ್ನು ಆವೃತ್ತಿ ಮಾಡಿದರೆ ಛತ್ರವು ಸೋರಿಹೋಗದಂತೆ ಯಜ್ಞವು ನಷ್ಟವಾಗುವುದಿಲ್ಲ.

ಹೀಗೆ ಅನೇಕ ಲೌಕಿಕ ಉದಾಹರಣೆಗಳಿಂದಲೂ ಗಹನವಾದ ವಿಷಯಗಳನ್ನು ಸಾಯಣರು ತಿಳಿಸಿರುತ್ತಾರೆ.

## ಭಟ್ಟಭಾಸ್ಕರ ಭಾಷ್ಯ–ಸಾಯಣಭಾಷ್ಯ

ಕೃಷ್ಣಯಜುರ್ವೇದಕ್ಕೆ ಅನೇಕ ಭಾಷ್ಯಗಳಿದ್ದರೂ ಸಹ ಅವುಗಳಲ್ಲಿ ಪ್ರಸಿದ್ಧವಾದವುಗಳು ಸಾಯಣಭಾಷ್ಯ ಮತ್ತು ಭಟ್ಟಭಾಸ್ಕರಭಾಷ್ಯಗಳೇ. ಭಟ್ಟಭಾಸ್ಕರಮಿಶ್ರನು ತಾನು ಕೌಶಿಕಗೋತ್ರದವನೆಂದೂ, ತನ್ನ ಈ ಭಾಷ್ಯವನ್ನು ಜ್ಞಾನಯಜ್ಞವೆಂದೂ ಕರೆದುಕೊಂಡಿದ್ದಾನೆ.

ಏಷ ನಿಷ್ಪಾವಕೇ ಶಾಕೇ ಕುಶಿಕಾನ್ವಯಜನ್ಮನಾ ।
ಭಟ್ಟಭಾಸ್ಕರಮಿಶ್ರೇಣ ಜ್ಞಾನಯಜ್ಞಃ ಪ್ರವರ್ತಿತಃ ॥

ತೈತ್ತಿರೀಯಸಂಹಿತೆಗೆ ಭಾಷ್ಯವನ್ನು ಬರೆಯುವಾಗ ಪ್ರಾರಂಭದಲ್ಲಿ ತನ್ನ ಭಾಷ್ಯದ ಬಗ್ಗೆ ಭಟ್ಟಭಾಸ್ಕರನು ಹೀಗೆ ಬರೆದಿದ್ದಾನೆ.

ಮಂತ್ರಾಣಾಂ ವಿನಿಯೋಗಮಾಗಮವಿಧಿಂ ಛಂದಾಂಸ್ಯೃಷೀನ್ ದೇವತಾಃ ।
ಕಾಂಡರ್ಷೀನ್ ನಿಗಮಂ ನಿರುಕ್ತಮಿತಿಹಾಸಾಖ್ಯಾಯಿಕಾ ಬ್ರಾಹ್ಮಣಮ್ ।
ವಾಕ್ಯಾರ್ಥಸ್ವರರೂಪವೃತ್ತಿಮನನನ್ಯಾಯಾಂಶ್ಚ ವಕ್ಷ್ಯೇ ಪೃಥಕ್ ।
ಶಬ್ದನಾಮನಸೂಯವಃ ಸುಮನಸಃ ಶೃಣ್ವಂತು ಜಿಜ್ಞಾಸವಃ ॥

ಮಂತ್ರಗಳ ವಿನಿಯೋಗವನ್ನೂ, ಆಗಮದ ವಿಧಿಯನ್ನೂ, ಛಂದಸ್ಸುಗಳನ್ನೂ, ಋಷಿಗಳನ್ನೂ, ದೇವತೆಗಳನ್ನೂ, ಕಾಂಡರ್ಷಿಗಳನ್ನೂ, ನಿಗಮ, ನಿರುಕ್ತ, ಇತಿಹಾಸ, ಆಖ್ಯಾಯಿಕಾ, ಮಂತ್ರಗಳ ವಿನಿಯೋಗದ ವಾಕ್ಯಗಳಾದ ಬ್ರಾಹ್ಮಣಗಳು, ವೈದಿಕವಾದ ಶಬ್ದಗಳ ರೂಪನಿಷ್ಪತ್ತಿ, ಸ್ವರ



ಸಂಚಾರರೀತಿ, ನ್ಯಾಯಗಳು—ಇವುಗಳನ್ನೂ ಬೇರೆ ಬೇರೆಯಾಗಿ ತಿಳಿಸುವೆನು. ವೇದಾರ್ಥವನ್ನು ತಿಳಿಯಬಯಸುವವರು ಇದನ್ನು ಒಳ್ಳೆಯ ಮನಸ್ಸಿನಿಂದ ಅಸೂಯೆಯಿಲ್ಲದೇ ಕೇಳಿರಿ.

ಭಟ್ಟಭಾಸ್ಕರಮಿಶ್ರನಿಗಿಂತ ಹಿಂದಿನವರಾದ ಭವಸ್ವಾಮಿ ಮೊದಲಾದವರ ವೇದಭಾಷ್ಯಗಳಿದ್ದರೂ ಅವು ತಾತ್ಪರ್ಯವನ್ನು ಮಾತ್ರ ತಿಳಿಸಿ ಕೊಡುತ್ತಿದ್ದುವೆಂದೂ ಪದಶಃ ಅರ್ಥ, ಅವುಗಳ ನಿಷ್ಪತ್ತಿ ಇವುಗಳನ್ನು ತಿಳಿಸಲೋಸುಗವೇ ತಾನು ಈ ಭಾಷ್ಯವನ್ನು ಬರೆಯುತ್ತಿರುವುದಾಗಿ ಭಟ್ಟ ಭಾಸ್ಕರನೇ ಹೇಳುತ್ತಾನೆ.

....ವಾಕ್ಯಾರ್ಥೈಕಪರಾಣ್ಯಧೀತ್ಯ ಚ ಭವಸ್ವಾಮ್ಯಾದಿ
ಭಾಷ್ಯಾಣ್ಯತೋ ।
ಭಾಷ್ಯಂ ಸರ್ವಪಥೀನಮೇತದಧುನಾ ಸರ್ವೀಯಮ
ಮಾರಭ್ಯತೇ ॥

—ತೈ.ಸಂ.ಭ.ಭಾ.ಭಾಷ್ಯ. ಉಪೋದ್ಘಾತ.

ಭಟ್ಟಭಾಸ್ಕರಭಾಷ್ಯವು ಸಾಯಣಭಾಷ್ಯದಷ್ಟು ವಿಶಾಲವಾಗಿಲ್ಲ. ಸಾಯಣಭಾಷ್ಯದಲ್ಲಿ ಪ್ರಾರಂಭದ ಭಾಗದಲ್ಲಿಯೇ ಶಬ್ದಗಳ ರೂಪನಿಷ್ಪತ್ತಿ ಪ್ರಕಾರವನ್ನು ಹೇಳಿದ ನಂತರ ಪುನಃ ಮಂತ್ರಗಳ ತಾತ್ಪರ್ಯವನ್ನೇ ಪ್ರಧಾನವನ್ನಾಗಿಸಿಕೊಂಡು ಬರೆಯಲಾಗಿದೆ. ಭಟ್ಟಭಾಸ್ಕರರ ಭಾಷ್ಯದಲ್ಲಿ ಉದ್ದಕ್ಕೂ ಶಬ್ದಗಳ ಪ್ರಕ್ರಿಯೆಯ ಬಗ್ಗೆ, ಸ್ವರಗಳ ಸಂಚಾರದ ಬಗ್ಗೆ ವಿವರಿಸಲಾಗಿದೆ. ತೈತ್ತಿರೀಯಸಂಹಿತೆಯ ಭಾಷ್ಯದಲ್ಲಿ ಮಂತ್ರಗಳಿಗೆಬೇಕಾದ ಬ್ರಾಹ್ಮಣಭಾಗದ ಭಾಷ್ಯವನ್ನು ಸಾಯಣಾಚಾರ್ಯರು ಸಂಹಿತಾ ಭಾಷ್ಯದಲ್ಲಿಯೇ ಸೇರಿಸಿ ಬರೆದಿದ್ದಾರೆ. ಭಟ್ಟಭಾಸ್ಕರರು ಮಾತ್ರ ಬ್ರಾಹ್ಮಣ ಭಾಗವನ್ನು ಬ್ರಾಹ್ಮಣವೆಂದು ಪ್ರಸಿದ್ಧವಾದ ಗ್ರಂಥದಲ್ಲಿಯೇ ವ್ಯಾಖ್ಯಾನ ಮಾಡಿರುತ್ತಾರೆ. ಸಾಯಣಭಾಷ್ಯದ ರೀತಿಯಿಂದ ಮಂತ್ರಗಳ ತಾತ್ಪರ್ಯ ಮತ್ತು ವಿನಿಯೋಗವನ್ನು ತಿಳಿಯಲು ಸೌಕರ್ಯ ಹೆಚ್ಚು.



ಹೀಗಿದ್ದರೂ ಸಾಯಣಾಚಾರ್ಯರು ಮತ್ತು ಭಟ್ಟಭಾಸ್ಕರಮಿಶ್ರರಿಬ್ಬರೂ ವೇದಾರ್ಥವನ್ನು ಪ್ರಕಾಶಿಸುವಂತಹ ಪರಮಲೋಕೋಪಕಾರವನ್ನು ಮಾಡಿದ್ದಾರೆಂಬುದರಲ್ಲಿ ಸಂಶಯವಿಲ್ಲ.

## ಉಪಸಂಹಾರ

ಹೀಗೆ ಯಜುರ್ವೇದವು ಅಧ್ವರ್ಯುವೇದವೆಂದು ಕರೆಯಲ್ಪಟ್ಟು ಪ್ರಧಾನವಾಗಿ ಯಜ್ಞಗಳನ್ನನುಷ್ಠಿಸುವ ವಿಧಿ-ವಿಧಾನಗಳನ್ನು ತಿಳಿಸುತ್ತಾ ಇದೆ. ಮನುಷ್ಯನು ಕರ್ಮವನ್ನು ಮಾಡುತ್ತಲೇ ಇರುವನಾದರೂ ವೇದೋಕ್ತವಾದ ಕರ್ಮಗಳನ್ನನುಷ್ಠಿಸುವುದರಿಂದ ಚಿತ್ತಶುದ್ಧಿಯನ್ನು ಪಡೆಯುತ್ತಾನೆ. ಚಿತ್ತಶುದ್ಧಿಯನ್ನುಂಟುಮಾಡುವ ಕರ್ಮವುಯಾವುದೆಂಬ ಅತೀಂದ್ರಿಯವಿಷಯದಲ್ಲಿ ವೇದವೇ ಪ್ರಮಾಣವಾಗಿರುತ್ತದೆ. ಯಜ್ಞಗಳನ್ನನುಷ್ಠಿಸುವುದರಿಂದ ಯಜಮಾನನ ಚಿತ್ತಶುದ್ಧಿಗೆ ಸಹಾಯವಾಗುವುದಲ್ಲದೆ 'ಯಜ್ಞಾದ್ಭವತಿ ಪರ್ಜನ್ಯಃ' ಎಂಬ ಗೀತಾವಾಕ್ಯದಂತೆ ಪರ್ಜನ್ಯವುಂಟಾಗುವುದರ ಮೂಲಕ ಲೋಕಹಿತವೂ ಇದೆ. ಯಜುರ್ವೇದದಲ್ಲಿ ಯಜ್ಞಗಳ ವಿಧಿಗಳು ತಿಳಿಸಲ್ಪಟ್ಟವೆ. ಈ ಸಂಪುಟದ ಮುಂದಿನ ಭಾಗದಲ್ಲಿ ಯಜ್ಞಗಳ ಪರಿಚಯವನ್ನು ವಿಸ್ತಾರವಾಗಿ ಪಡೆಯೋಣ.



# ಶುದ್ಧಾಶುದ್ಧ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| 48 | 10 | ಯಜ್ಞಂ | ಯಜ್ಞಂ |
| 77 | 1 | ವರ್ಣಾಃಶ್ಯುಚಯಃ | ವರ್ಣಾಃ ಶುಚಯಃ |
| 78 | 13 | ಅಯಂ | ಅಯಂ |
| 85 | 14 | ವೈಶಂಪಾಯನಃ | ವೈಶಂಪಾಯನಃ |
| 93 | 10 | ಸ್ತೇಽನುಚರಾಸ್ತವ | ಸ್ತೇಽನುಚರಾಸ್ತವ |
| 106 | 13 | ಪ್ರಯಂಜೀತ | ಪ್ರಯುಂಜೀತ |
| 109 | 13 | ಆವದ್ರಪ್ಸೋ | ಅವದ್ರಪ್ಸೋ |
| 128 | 2 | ಅಸಂಚಯವಾನ್ | ಅಸಂಚಯಪಾನ್ |
| 129 | 2 | ಪುಪಹೋವಾಃ | ಮುಪಹೋವಾಃ |
| 129 | 19 | ಸ್ವಾಹಾಹುತಿಂ | ಸ್ವಾಹಾಹುತಿಂ |
| | | ಜುಷಾಣಃ | ಜುಷಾಣಃ |
| 149 | 1 | ಆದಿತ್ಯೈ ಸ್ವಾಹಾ | ಅದಿತ್ಯೈ ಸ್ವಾಹಾ |
| 160 | 20 | ವಿಭಾಗವನ್ನೆಲ್ಲಾ | ವಿಭಾಗವನ್ನೂ |



| | | | |
|---|---|---|---|
| 170 | 1 | ದಿವಶ್ಶ್ಯೇನೇಷ್ಟಿ | ದಿವಶ್ಶ್ಯೇನೀಷ್ಟಿ |
| 170 | 13 | ದಿವಶ್ಶ್ಯೇನೇಷ್ಟಿಯು | ದಿವಶ್ಶ್ಯೇನೀಷ್ಟಿಯಾ |
| 185 | 3 | ನಿಷ್ಕ್ರೀಣಿತೇ | ನಿಷ್ಕ್ರೀಣೀತೇ |
| 190 | 10 | ಆಚ್ಛಿದ್ರಾಂ | ಅಚ್ಛಿದ್ರಾಂ |
| 198 | 9 | ದೌಸ್ತೇ | ದ್ಯಾಸೇ |



ಕೃಷ್ಣಯಜುರ್ವೇದ ಕನ್ನಡ ಪ್ರಕಾಶನ ಸಂಪುಟ-೧

ಭಾಗ-೩

# ಯಜ್ಞಗಳ ಪರಿಚಯ


ಸಂಪಾದಕ

ವಿದ್ವಾನ್ ಶ್ರೌತಿ ರಾಮಚಂದ್ರ ಗಣೇಶ ಭಾಟ್ಟ ಕೊಡ್ಲೆ ಕೆರೆ



ಪ್ರಕಾಶನ

ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ

ಬೆಂಗಳೂರು




|| ಶ್ರೀಃ ||

ನಮಸ್ತೇ ಗಾರ್ಹಪತ್ಯಾಯ
ನಮಸ್ತೇ ದಕ್ಷಿಣಾಗ್ನಯೇ ।

ನಮ ಆಹವನೀಯಾಯ
ಮಹಾವೇದ್ಯೈ ನಮೋ ನಮಃ ||



ಓಂ

# ಯಜ್ಞಗಳ ಪರಿಚಯ

ಈ ಸಂಪುಟದ ಎರಡನೆಯ ಭಾಗದಲ್ಲಿ ಕೃಷ್ಣಯಜುರ್ವೇದದ ಬಗ್ಗೆ ಪರಿಚಯವನ್ನು ನೀಡಲು ಯತ್ನಿಸಲಾಗಿದೆ. ಯಜುರ್ವೇದದ ಹಿರಿಮೆ, ಶುಕ್ಲಕೃಷ್ಣ ಭೇದಗಳು, ಯಾಜ್ಞವಲ್ಕ್ಯರ ಮಂತ್ರದರ್ಶನ, ತೈತ್ತಿರೀಯಶಾಖೆಯಲ್ಲಿನ ಕಾಂಡಪಾಠ - ಸಾರಸ್ವತಪಾಠಗಳ ಸ್ವರೂಪ, ಅವುಗಳನ್ನು ಅನ್ವಯಿಸಿಕೊಳ್ಳುವ ರೀತಿ, ಕೃಷ್ಣಯಜುರ್ವೇದದಲ್ಲಿನ ಉಪಾಖ್ಯಾನಗಳು ಮತ್ತು ಸ್ವರ ಸಂಚಾರದ ರೀತಿ ಹಾಗೂ ಕೃಷ್ಣಯಜುರ್ವೇದಕ್ಕಿರುವ ಭಾಷ್ಯಗಳು ಈ ವಿಷಯಗಳನ್ನು ಪರಿಶೀಲಿಸಿದ್ದೇವೆ.

ಯಜುರ್ವೇದವನ್ನು **ಅಧ್ವರ್ಯುವೇದವೆಂದು** ಕರೆಯುವುದರಿಂದ ಯಜುರ್ವೇದದಲ್ಲಿ ಅಧ್ವರ್ಯುವು ಹೇಳಬೇಕಾದ ಮಂತ್ರಗಳೇ ಸ್ವಾಭಾವಿಕವಾಗಿ ಹೆಚ್ಚಿವೆ. ಯಜ್ಞಗಳಲ್ಲಿ ಅಧ್ವರ್ಯುವೇ ಪ್ರಧಾನನಾದುದರಿಂದ ಯಜ್ಞಗಳನ್ನು ಚೆನ್ನಾಗಿ ಪರಿಚಯ ಮಾಡಿಕೊಂಡ ಹೊರತು ಯಜುರ್ವೇದದ ಪರಿಚಯವು ಅಪೂರ್ಣವೇ ಆಗುತ್ತದೆ. ಅಂತೆಯೇ ಪ್ರಥಮ ಸಂಪುಟದ ಈ ಮೂರನೆಯ ಭಾಗದಲ್ಲಿ ಯಜ್ಞಗಳ ಬಗ್ಗೆ ವಿಸ್ತಾರವಾದ ಪರಿಚಯವನ್ನು ನೀಡಲಾಗುವುದು. ಅಲ್ಲದೆ ಮುಂದಿನ ಸಂಪುಟಗಳಲ್ಲಿ ತೈತ್ತಿರೀಯಸಂಹಿತಾ ಗ್ರಂಥದ ಕನ್ನಡ ಅನುವಾದವನ್ನು ನೀಡಲಿರುವುದರಿಂದಲೂ, ಗ್ರಂಥಾರಂಭದಲ್ಲಿಯೇ ದರ್ಶಪೂರ್ಣಮಾಸೇಷ್ಟಿಗಳ ಪ್ರಸಂಗವಿರುವುದರಿಂದಲೂ, ಎಲ್ಲ ಯಜ್ಞಗಳ ಬಗೆಗಿನ ಪರಿಚಯವನ್ನು ನೀಡುವ ಜೊತೆಗೆ ದರ್ಶ - ಪೂರ್ಣಮಾಸೇಷ್ಟಿಗಳ ವಿಸ್ತೃತಪರಿಚಯವನ್ನು ನೀಡಿದರೆ ಗ್ರಂಥದ ವಿಷಯಪ್ರವೇಶಕ್ಕೆ ಸೌಲಭ್ಯವು ಒದಗುವುದರಿಂದ ಈ ಭಾಗದಲ್ಲಿ ಯಜ್ಞಗಳ ಪರಿಚಯವನ್ನು ನೀಡಲು ಯತ್ನಿಸುತ್ತೇವೆ.

## ಯಜ್ಞವೆಂದರೇನು?

**ಯಜ್ಞ** ಎಂಬ ಶಬ್ದವು **ಯಜ್** ಧಾತುವಿನಿಂದ ನಿಷ್ಪನ್ನವಾದುದು. **ಯಜ್** ಧಾತುವಿಗೆ ದೇವಪೂಜಾ ಮುಂತಾದ ಅರ್ಥಗಳು ಇವೆ.



**ಯಜ ದೇವಪೂಜಾಸಂಗತಿಕರಣದಾನೇಷು. ಭ್ವಾದಿ, ಉಭಯಪದೀ.**
**ಯಜ್+ನಙ್ = ಯಜ್ಞಃ**

— ಪಾ.ಸೂ. 3.3.90

ಯಾವ ರೀತಿಯಿಂದಲಾದರೂ ದೇವತೆಗಳನ್ನು ಸಂತೋಷಪಡಿಸುವಿಕೆಗೆ **ಯಜ್ಞ** ಎನ್ನಬಹುದಾದರೂ ಸಹ ಯೋಗರೂಢಿಯಿಂದ [1]

**ದೇವತೋದ್ದೇಶಪೂರ್ವಕದ್ರವ್ಯತ್ಯಾಗೋ ಯಾಗಃ**

ಎಂಬ ವಿವರಣೆಯಂತೆ ದೇವತೆಗಳನ್ನು ಉದ್ದೇಶಿಸಿ ನಿರ್ದಿಷ್ಟವಾದ ದ್ರವ್ಯವನ್ನು (ವಸ್ತುವನ್ನು) ಅರ್ಪಿಸುವುದೇ **ಯಾಗ** ಅಥವಾ **ಯಜ್ಞ**ವೆನಿಸುವುದು. ಯಾವ ದೇವತೆಗೆ ಯಾವುದನ್ನು ಬಯಸಿ ಯಾವ ದ್ರವ್ಯವನ್ನು ನೀಡಬೇಕೆಂಬುದರ ಬಗ್ಗೆ ಶ್ರುತಿಯೇ ಪ್ರಮಾಣ.

**ಯಜ್ಞ**ವೆಂಬುದು ಈ ರೀತಿಯಾಗಿ ಅಗ್ನಿದೇವನಲ್ಲಿ ದೇವತೆಗಳನ್ನು ಉದ್ದೇಶಿಸಿ ನೀಡುವ ಹವಿಸ್ಸಿನ ಕಾರ್ಯಕಲಾಪಗಳಿಗೆ ರೂಢಿಯಲ್ಲಿ ಹೆಸರಾದರೂ ಶ್ರುತಿ-ಸ್ಮೃತಿಗಳಲ್ಲಿ ಇನ್ನೂ ವ್ಯಾಪಕವಾದ ಅರ್ಥದಲ್ಲಿ ಬಳಸಲ್ಪಟ್ಟಿದೆ. ಭಗವದ್ಗೀತೆಯಲ್ಲಿ ಭಗವಂತನು ಅರ್ಜುನನಿಗೆ ದ್ರವ್ಯಯಜ್ಞ, ಜ್ಞಾನಯಜ್ಞ, ತಪೋಯಜ್ಞ ಮುಂತಾದವುಗಳನ್ನು ತಿಳಿಸಿ ಆತ್ಮಸಾಕ್ಷಾತ್ಕಾರವನ್ನೂ ಸಹ ಯಜ್ಞವೆಂದೇ ಹೇಳಿದ್ದಾನೆ. ಆದರೆ ಮೌಲಿಕವಾದ **ಯಜ್ಞ** ಎಂಬ ಶಬ್ದವು ದ್ರವ್ಯಗಳಿಂದ ನಡೆಸುವ ಕ್ರಿಯಾಕಲಾಪಗಳಿಗೇ ರೂಢವಾಗಿದೆಯೆಂದರೆ ತಪ್ಪಲ್ಲ.

## ಯಜ್ಞ - ಶ್ರುತಿ-ಸ್ಮೃತಿಮೂಲ

ಯಜ್ಞಗಳನ್ನೆ ಅನುಷ್ಠಿಸುವುದು ದೇವತೆಗಳನ್ನು ಸಂತೋಷಪಡಿಸುವುದಕ್ಕಾಗಿಯಾದರೂ ಯಜ್ಞಗಳಿಂದ ಲೌಕಿಕವಾದ ಪ್ರಯೋಜನಗಳು ಇಲ್ಲದಿಲ್ಲ. ಮನುಸ್ಮೃತಿಯಲ್ಲಿ ಮನುಮಹರ್ಷಿಯು ಯಜ್ಞಗಳ ಮಹತ್ತ್ವವನ್ನು ತಿಳಿಸುತ್ತಾ:

---

1. 'ಪಂಕಜ' ಎಂಬ ಪದಕ್ಕೆ ಕೆಸರಿನಲ್ಲಿ ಹುಟ್ಟಿದುದು ಎಂದರ್ಥ. ಕೆಸರಿನಲ್ಲಿ ಹುಟ್ಟಿದವುಗಳೆಲ್ಲ ಪಂಕಜ ಎನ್ನಿಸಿಕೊಳ್ಳುವುದಿಲ್ಲ. ಕಮಲದ ಹೂವೇ 'ಪಂಕಜ' ಎಂಬುದರ ರೂಢಿಯ ಅರ್ಥ. ಈ ರೀತಿಯ ಪದಗಳನ್ನು ಯೋಗರೂಢಗಳೆನ್ನುತ್ತಾರೆ.



**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ।**
**ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥**

— ಮನುಸ್ಮೃತಿ. 2.76

ವಿಧಿವತ್ತಾಗಿ ಅಗ್ನಿಯಲ್ಲಿ ನೀಡಿದ ಹವಿಸ್ಸಿನ ರಸವು ಆದಿತ್ಯನು ರಸವೆಲ್ಲವನ್ನೂ ಹೀರುವವನಾದುದರಿಂದ ಆದಿತ್ಯನನ್ನು ಸೇರುತ್ತದೆ. ಆ ಹವಿಸ್ಸಿನ ರಸವೇ ವೃಷ್ಟಿಯಾಗಿ ಪರಿಣಮಿಸುತ್ತದೆ. ಮಳೆಯಿಂದ ಆಹಾರವು ದೊರೆಯುತ್ತದೆ. ಆಹಾರದಿಂದ ಪ್ರಜೆಗಳು ಉಂಟಾಗುತ್ತಾರೆ.

ಎಂದಿದ್ದಾನೆ. ಭಗವದ್ಗೀತೆಯಲ್ಲಿ ಭಗವಂತನು ಅರ್ಜುನನಿಗೆ ಯಜ್ಞಗಳ ಮಹತ್ತ್ವವನ್ನು ಹೀಗೆ ತಿಳಿಸಿದ್ದಾನೆ:

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯಃ ಯಜ್ಞಃ ಕರ್ಮಸಮುದ್ಭವಃ ॥**

— ಭಗವದ್ಗೀತೆ 3.14

ಜಂತುಗಳ ಬೆಳವಣಿಗೆಗೆ ಅನ್ನವೇ ಕಾರಣ. ಅನ್ನವು (ಸಸ್ಯವು) ಮಳೆಯಿಂದ ಉಂಟಾಗುತ್ತದೆ. ಯಜ್ಞಗಳಿಂದ ಮಳೆಯು ಉಂಟಾಗುತ್ತದೆ. ಆ ಯಜ್ಞಗಳು ವೇದೋಕ್ತವಾದ ಕರ್ಮಗಳಿಂದ ಆಗುತ್ತವೆ.
ಹೀಗೆ ಸ್ಮೃತಿಗಳಲ್ಲಿ ಯಜ್ಞಗಳ ಮಹತ್ತ್ವವನ್ನು ವರ್ಣಿಸಲಾಗಿದೆ. ಅಲ್ಲದೆ ಪ್ರಮಾಣಮೂರ್ಧನ್ಯವಾದ ಶ್ರುತಿಯು

**ಯಜ್ಞೋ ಹಿ ಶ್ರೇಷ್ಠತಮಂ ಕರ್ಮ।**

ಎಂದೇ ನುಡಿದಿದೆ.

ಯಜ್ಞಗಳ ಅಗತ್ಯ

ಮನುಷ್ಯನು ಬಗೆಬಗೆಯ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. **ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್** ಎಂಬ ಗೀತಾವಾಕ್ಯದಂತೆ ಯಾರೂ ಒಂದು ಕ್ಷಣವೂ ಕರ್ಮರಹಿತರಾಗಿ ಇರಲಾರರು. ಆದರೆ ಆ



ಕರ್ಮವು ಯಾವುದಿರಬೇಕೆಂಬುದನ್ನು ಆಯ್ದುಕೊಳ್ಳುವ ಸ್ವಾತಂತ್ರ್ಯವು ಮನುಷ್ಯನಿಗಿದೆ. ಅಂತೆಯೇ ನಿಃಶ್ರೇಯಸಕ್ಕೆ ಸಾಧನವೆಂದು ವೇದವೇ ತಿಳಿಸುವ ಯಜ್ಞಗಳನ್ನು ತನ್ನ ಕರ್ಮಗಳನ್ನಾಗಿ ಆಯ್ದುಕೊಳ್ಳುವುದು ಉಚಿತವೆನಿಸಿದೆ.

ಇನ್ನೊಂದು ದೃಷ್ಟಿಯಿಂದ ಗಮನಿಸಿದಾಗಲೂ ಯಜ್ಞಗಳು ಅಗತ್ಯವೆನಿಸುತ್ತವೆ. ಸಮಸ್ತ ಚರಾಚರ ಜೀವಿಗಳಿಗೂ ಬೆಳಕು ಬೇಕೇ ಬೇಕು. ಬೆಳಕಿನಿಂದಲೇ ಅವುಗಳ ಅಸ್ತಿತ್ವದ ರಕ್ಷಣೆ. ಬೆಳಕಿನಿಂದಲೇ ಅವುಗಳಿಗೆ ತೇಜಸ್ಸು. ಬೆಳಕು ಇಲ್ಲದೆಡೆ ಎಲ್ಲವೂ ನಿಸ್ತೇಜ. ಎಲ್ಲವೂ ಅನುತ್ಸಾಹ. ಮಹಾಕವಿ ಕಾಳಿದಾಸನು:

**ಲೋಕೇನ ಚೈತನ್ಯಮಿವೋಷ್ಣರಶ್ಮೇಃ ।**

ಉಷ್ಣವಾದ ರಶ್ಮಿಗಳಿಂದ ಕೂಡಿದ ಸೂರ್ಯನಿಂದ ಜನರು ಉಲ್ಲಾಸವನ್ನು ಪಡೆಯುವಂತೆ ಎಂದಿದ್ದಾನೆ.

ಆದ್ದರಿಂದ ಬೆಳಕು- ಉಷ್ಣತೆಗಳಿಂದ ಚೈತನ್ಯವು ಮೂಡುವುದು ಅನುಭವಸಿದ್ಧವಾಗಿದೆ. ಕತ್ತಲೆಯಲ್ಲಿ ನೆಟ್ಟ ಬಳ್ಳಿಗಳು ಬೆಳಕಿನೆಡೆಗೆ ಬಾಗುತ್ತವೆ. ಬೆಳಕಿಲ್ಲದೆ ಮೋಡ ಮುಸುಕಿದ ದಿನವು ಮನುಷ್ಯನಿಗೆ ಮಂಕಾದ ದಿನವಾಗಿರುತ್ತದೆ. ಮೇಘಾವೃತವಾದ ದಿನವನ್ನು ಸಂಸ್ಕೃತದಲ್ಲಿ **ದುರ್ದಿನ** ಎನ್ನುತ್ತಾರೆ. **ಮೇಘಚ್ಛನ್ನೇಽಹ್ನಿ ದುರ್ದಿನಮ್** (ಅಮರಕೋಶ). ಆದುದರಿಂದ ಬೆಳಕಿನಿಂದ ಉತ್ಸಾಹವು ಹೆಚ್ಚುತ್ತದೆಯೆಂಬುದು ತಿಳಿದ ವಿಷಯವೇ ಆಗಿದೆ. ಬೆಳಕಿನಂತೆಯೇ ಉಷ್ಣತೆಯೂ ಮಾನವನಿಗೆ ಅತಿ ಅಗತ್ಯ. ಉಷ್ಣತೆಯಿರುವವರೆಗೆ ಶರೀರದ ಅಸ್ತಿತ್ವ. ಚಂದ್ರನಲ್ಲಿ ಉಷ್ಣತೆಯ ಅಂಶವು ಇರದ ಕಾರಣ ಅಲ್ಲಿ ಜೀವಕೋಟಿಗಳು ಬದುಕಲಾರವು.

ಇಂತಹ ಬೆಳಕು ಮತ್ತು ಉಷ್ಣತೆಗಳ ಮೂಲಗಳು ಎರಡು. ಸೂರ್ಯ ಮತ್ತು ಅಗ್ನಿ. ಅವೆರಡರಲ್ಲಿ ಸೂರ್ಯನು ನಮ್ಮ ಅಧೀನನಲ್ಲ. ರಾತ್ರಿಯಲ್ಲಿ ಅವನಿಂದ ಉಷ್ಣತೆಯು ದೊರೆಯಲಾರದು. ಆದುದರಿಂದ ನಮಗೆ ಬೇಕಾದಂತೆ ಬೇಕಾದಾಗ ಬೆಳಕು, ಉಷ್ಣತೆಗಳನ್ನು ಪಡೆಯಬೇಕಾದರೆ ಅಗ್ನಿಯ ಸಂರಕ್ಷಣೆ ಮತ್ತು ಉಪಾಸನೆಗಳು ಅಗತ್ಯ. ಈ ಅಂಶವನ್ನು ಮನಗಂಡು ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಿ ಅಗ್ನಿಯ ಆರಾಧನೆಯು ಹಾಸುಹೊಕ್ಕಾಗಿ



ಬಂದಿದೆ. ಹೀಗೆ ಅಗ್ನಿಯು ಆರಾಧನೆಯು ಲೌಕಿಕಪ್ರಯೋಜನವನ್ನೂ ನೀಡಿಯೇ ನೀಡುತ್ತದೆ.

## ಯಜ್ಞಗಳ ಆರಂಭ

ಯಜ್ಞಗಳನ್ನು ಅನುಷ್ಠಿಸುವ ಕ್ರಮವು ಆರಂಭವಾದುದು ಎಂದು? ಈ ವಿಷಯವನ್ನು ಕುರಿತು ಭಗವಂತನು ಗೀತೆಯಲ್ಲಿ ತಿಳಿಸಿರುತ್ತಾನೆ.

**ಸಹ ಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋऽಸ್ತ್ವಿಷ್ಟಕಾಮಧುಕ್॥**

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸುವಾಗಲೇ ಅವರೊಡನೆಯೇ ಯಜ್ಞ ಗಳನ್ನೂ ಸೃಜಿಸಿದನು. ಪ್ರಜೆಗಳನ್ನು ಕುರಿತು ಈ ಯಜ್ಞಗಳಿಂದ ನೀವು ವೃದ್ಧಿ ಹೊಂದಿರಿ. ಯಜ್ಞವು ನಿಮಗೆ ಬಯಸಿದುದನ್ನು ನೀಡುವಂತಾಗಲಿ.

**ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ॥**

ಈ ಯಜ್ಞಗಳಿಂದ ನೀವು ದೇವತೆಗಳನ್ನು ತೃಪ್ತಿಪಡಿಸಿರಿ. ದೇವತೆಗಳು ನಿಮಗೆ ಅನುಗ್ರಹಿಸಿ, ನಿಮ್ಮನ್ನು ತೃಪ್ತಿಪಡಿಸುವರು. ಹೀಗೆ ಪರಸ್ಪರ ಸಹಕಾರದಿಂದ ವೃದ್ಧಿ ಹೊಂದಿ ಪರಮಶ್ರೇಯಸ್ಸಾದ ಮೋಕ್ಷವನ್ನು ಪಡೆಯಿರಿ.

**ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥**

ನಿಮಗೆ ಬೇಕಾದ ಇಷ್ಟಭೋಗಗಳನ್ನು ಯಜ್ಞಪೂಜಿತರಾದ ದೇವತೆಗಳು ಕೊಡುವರು. ದೇವತೆಗಳು ನೀಡುವ ಹಲವು ವಸ್ತುಗಳನ್ನು (ನೀರು, ಬೆಳಕು, ಸಸ್ಯಗಳು) ಉಪಯೋಗಿಸಿಕೊಂಡು ದೇವತೆಗಳಿಗೆ ಏನನ್ನೂ ನೀಡದೆ ತಾನು ಮಾತ್ರ ಅನುಭವಿಸುವವನು ಕಳ್ಳನೇ ಆಗುತ್ತಾನೆ.



**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್॥**

ಯಜ್ಞಗಳನ್ನು ಮಾಡಿ ಯಜ್ಞಶೇಷವನ್ನು ಭುಂಜಿಸುವವನು **ಅಮೃತಾಶಿ** ಎನ್ನಿಸಿಕೊಳ್ಳುತ್ತಾನೆ.

**ಅಮೃತಂ ವಿಘಸೋ ಯಜ್ಞಶೇಷಭೋಜನಶೇಷಯೋಃ ।**

ಅಮರಕೋಶ. ಬ್ರಹ್ಮವರ್ಗ

ಯಜ್ಞಶೇಷವನ್ನು ಅಮೃತವೆಂದೂ, ಭೋಜನಶೇಷವನ್ನು ವಿಘಸವೆಂದೂ ಹೇಳುತ್ತಾರೆ.

ಇಂತಹ ಯಜ್ಞಶೇಷದಿಂದ ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ. ದೇವತೆಗಳಿಗೆ ಹವಿಸ್ಸನ್ನು ನೀಡದೆ ತನಗಾಗಿ ಅನ್ನವನ್ನು ಬೇಯಿಸಿಕೊಳ್ಳುವವನು ಪಾಪಿಯೇ ಆಗುತ್ತಾನೆ. ಅವನು ಪಾಪವನ್ನೇ ಊಟ ಮಾಡಿದಂತೆ.

ಹೀಗೆ ಯಜ್ಞಗಳ ಮಹತ್ತ್ವವನ್ನು ಭಗವಂತನು ಹೇಳಿ ಮನುಷ್ಯರು ಮತ್ತು ದೇವತೆಗಳ ನಡುವೆ ಯಜ್ಞಗಳ ಮೂಲಕವಾಗಿಯೇ ಚಕ್ರವೊಂದು ಏರ್ಪಟ್ಟಿಂತಿದೆಯೆಂದೂ ತಿಳಿಸುತ್ತಾನೆ. ಮನುಷ್ಯರು ಹವಿಃಪ್ರದಾನವನ್ನು ಮಾಡುತ್ತಾರೆ. ದೇವತೆಗಳು ಮಳೆಯನ್ನೂ, ಸಸ್ಯಾದಿಗಳನ್ನೂ ಚೆನ್ನಾಗಿ ನೀಡುತ್ತಾರೆ. ಅದರಿಂದ ಮತ್ತೆ ಮನುಷ್ಯರು ತುಷ್ಟರಾಗಿ ದೇವತೆಗಳನ್ನು ತೃಪ್ತಿಗೊಳಿಸುತ್ತಾರೆ.

**ತಸ್ಮಾದಿತಃ ಪ್ರದಾನಂ ದೇವಾ ಉಪಜೀವಂತಿ... ತಸ್ಮಾದಮುತಃ ಪ್ರದಾನಂ ಮನುಷ್ಯಾ ಉಪಜೀವಂತಿ...**

ಎಂಬ ಶ್ರುತಿವಚನವೂ ಇದಕ್ಕೆ ಪ್ರಮಾಣ. (ಈ ಲೋಕದ ಹವಿಸ್ಸನ್ನು ದೇವತೆಗಳೂ, ದೇವತೆಗಳು ನೀಡುವ ಮಳೆ ಮುಂತಾದವನ್ನು ಮನುಷ್ಯರೂ ಆಶ್ರಯಿಸಿರುತ್ತಾರೆ.)

ಹೀಗೆ ಯಜ್ಞಗಳ ಮೂಲಕ ಜಗತ್ತಿನ ಆಗು-ಹೋಗುಗಳು ಸುಗಮವಾಗಿ ನಡೆಯುವವೆಂದು ಭಗವಂತನು ತಿಳಿಸುತ್ತಾನೆ. ಈ ಚಕ್ರವನ್ನು ಯಾರು



ಅನುಸರಿಸುವುದಿಲ್ಲವೋ ಅವರ ಬದುಕು ವ್ಯರ್ಥವೆಂಬುದನ್ನು ಅವನೇ ಹೇಳುತ್ತಾನೆ.

## ಯಜ್ಞಗಳ ಪರಿಣಾಮ

ಯಜ್ಞಗಳ ಅನುಷ್ಠಾನದಿಂದ ಲೋಕಕ್ಷೇಮವು ಆಗುವುದೆಂಬುದು ಶ್ರುತಿ-ಸ್ಮೃತಿಸಿದ್ಧವಾದ ವಿಚಾರ. ಈ ವಿಚಾರವನ್ನು ಇನ್ನಷ್ಟು ಪರಿಶೀಲಿಸ ತಕ್ಕದ್ದಿದೆ. ನಿರ್ದಿಷ್ಟವಾದ ಫಲವನ್ನು ಬಯಸಿ ಮಾಡುವ ಯಜ್ಞಗಳು ಕೆಲವು ವೇಳೆ ಫಲಿಸದೇ ಇರುವ ಸಂದರ್ಭಗಳೂ ಇವೆ. ಮಳೆಯನ್ನು ಬಯಸಿ ಮಾಡುವ ಪರ್ಜನ್ಯ ಜಪ, ಕಾರೀರೀಷ್ಟಿ ಮುಂತಾದವುಗಳಿಂದ ಕೆಲವೊಮ್ಮೆ ಮಳೆಯು ಬರದೇ ಇರುವ ಸಂದರ್ಭಗಳೂ ಇಲ್ಲದಿಲ್ಲ. ಆದರೆ ಒಮ್ಮೆ ಫಲಿಸ ಲಿಲ್ಲವೆಂಬ ಕಾರಣದಿಂದ ಯಜ್ಞಗಳ ಅನುಷ್ಠಾನವೇ ನಿಷ್ಫಲವೆಂಬ ನಿರ್ಣಯಕ್ಕೆ ಬರುವುದು ಸಮಂಜಸವೆನಿಸದು. ಏಕೆಂದರೆ ಮನುಷ್ಯರಿಗೆ ಯಾವ ಬಯಕೆಗಳೂ ಇರಬಾರದೆಂದು ನಿಯಮವನ್ನು ಮಾಡಲು ಸಾಧ್ಯವಿಲ್ಲ. ಪ್ರತಿಯೊಬ್ಬ ಮಾನವನೂ ತನ್ನ ತನ್ನ ಪೂರ್ವಜನ್ಮಗಳ ವಾಸನಾನುಸಾರವಾಗಿ ನಾನಾ ವಸ್ತುಗಳನ್ನು ಬಯಸುವುದು ಪ್ರಪಂಚದಲ್ಲಿ ಸಿದ್ಧವಾಗಿದೆ. ಅಂದಾಗ ಅಂತಹ ಬಯಕೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ನಾನಾ ಬಗೆಯ ಲೋಕೋಪಾಯಗಳನ್ನು ಆಶ್ರಯಿಸುತ್ತಾನಷ್ಟೆ. ಲೌಕಿಕವಾದ ಉಪಾಯ ಗಳಂತೆಯೇ ವೈದಿಕವಾದ ಉಪಾಯಗಳನ್ನೂ ಆಶ್ರಯಿಸುವುದು ಪ್ರಪಂಚದಲ್ಲಿ ಇದ್ದೇ ಇದೆ. ಸಂತಾನವಿಲ್ಲದವರು ಸಂತಾನಪ್ರಾಪ್ತಿಗಾಗಿ ಔಷಧವೇ ಮುಂತಾದ ಲೌಕಿಕ ಉಪಾಯಗಳಂತೆಯೇ ಪುತ್ರಕಾಮೇಷ್ಟಿ, ನಾಗಪ್ರತಿಷ್ಠೆ ಮುಂತಾದ ವೈದಿಕ ಉಪಾಯಗಳನ್ನೂ ಆಶ್ರಯಿಸುತ್ತಾರೆ. ಲೌಕಿಕವಾದ ಉಪಾಯಗಳು ವಿಫಲವಾಗುವಂತೆ ವೈದಿಕ ಉಪಾಯಗಳೂ ಕೆಲವೊಮ್ಮೆ ವಿಫಲ ವಾಗಬಹುದು. ಉಪಾಯಗಳು ವಿಫಲವಾದಾಗ ಕಾರಣವೇ ಬೇರೆ ಇರುತ್ತದೆ. ರೋಗದ ನಿವಾರಣೆಗೆ ಔಷಧಸೇವನೆಯು ಒಂದು ಉಪಾಯ. ಔಷಧದ ಪ್ರಮಾಣವು ಕಡಿಮೆಯಾದರೂ, ಕ್ರಮ ತಪ್ಪಿದರೂ ಫಲ ಸಿಗಲಾರದು. ಹೇಗೆ ಔಷಧವು ಫಲವನ್ನು ನೀಡುವವರೆಗೆ ಔಷಧವನ್ನು ಆವೃತ್ತಿ ಮಾಡಿ ತೆಗೆದು ಕೊಳ್ಳುತ್ತೇವೆಯೋ, ಅಂತೆಯೇ ವೈದಿಕಕರ್ಮಗಳನ್ನೂ ಸಹ ಅನೇಕ ಬಾರಿ ಅನುಷ್ಠಿಸಬೇಕಾಗುತ್ತದೆ. ಒಮ್ಮೆ ಅನುಷ್ಠಿಸಿದ ನಂತರ ಫಲ ದೊರೆಯದ



ಮಾತ್ರಕ್ಕೆ ವೈದಿಕವಾದ ಯಜ್ಞ ಯಾಗಾದಿಗಳೇ ನಿಷ್ಫಲವೆಂಬ ನಿರ್ಣಯ ಸಲ್ಲದು.

ಇನ್ನೊಂದು ದೃಷ್ಟಿಯಿಂದ ನೋಡಿದಾಗಲೂ ಯಜ್ಞಯಾಗಾದಿಗಳಿಂದ ಫಲಪ್ರಾಪ್ತಿ - ಫಲರಾಹಿತ್ಯವನ್ನು ವಿವೇಚಿಸಬಹುದು. ಮಾನವನು ಮಾಡುವ ಕರ್ಮಗಳು ಫಲವನ್ನು ನೀಡದೇ ಹೋಗಲಾರವು. ಆವನವನ ಕರ್ಮಗಳು ಅನೇಕ ಜನ್ಮಗಳಲ್ಲಿ ಸಂಚಿತ (ಸಂಗ್ರಹೀತ) ವಾದುದು ಇಂತಿಷ್ಟೇ ಎಂಬುದು ಯಾರಿಗೂ ತಿಳಿಯದು. ಲೋಕದ ಸುಖ, ದುಃಖಗಳ ವೈಷಮ್ಯಕ್ಕೆ ಇದಕ್ಕಿಂತ ಬೇರೆಯಾದ ಕಾರಣವನ್ನು ನಾವು ಅರಿಯಲಾರೆವು. ಅವು ಫಲಿಸಿಯೇ ತೀರುತ್ತವೆ ಎಂಬುದು ಸಿದ್ಧವಾಗಿರುವಾಗ ಪುಣ್ಯಪ್ರಾಪ್ತಿಗಾಗಿ ಮಾಡುವ ಯಜ್ಞ ಯಾಗಾದಿಗಳಿಂದ ಆ ಕರ್ಮಗಳನ್ನು ನಾಶಪಡಿಸುವುದು ಸಾಧ್ಯವಿಲ್ಲ. ಕರ್ಮಗಳು ಪ್ರಬಲವಾಗಿದ್ದು, ಈಗಿನ ಕರ್ಮಾನುಷ್ಠಾನವು ಪೂರ್ವಕರ್ಮಗಳ ಫಲವನ್ನು ಬದಲಾಯಿಸುವಷ್ಟು ಪ್ರಬಲವಾಗಿಲ್ಲದಿರುವಾಗಲೂ ಯಜ್ಞ-ಯಾಗಾದಿಗಳು ಫಲವನ್ನು ನೀಡಲಾರವು. ಅಂತಾದರೆ ಫಲವನ್ನು ನೀಡದ ಈ ಅನುಷ್ಠಾನಗಳಿಂದ ಏನು ಪ್ರಯೋಜನ? ಎಂಬ ಸಂದೇಹ ಬರದಿರದು. ಈಗ ಮಾಡಿದ ಒಳ್ಳೆಯ ಕರ್ಮವು ಈಗ ಫಲಿಸದೇ ಇದ್ದರೂ ಅದು ಅದೃಷ್ಟ ಅಥವಾ ಅಪೂರ್ವದ ರೂಪದಲ್ಲಿ ಸೂಕ್ಷ್ಮಶರೀರದಲ್ಲಿ ಸೇರಿದ್ದು ಮುಂದೆ ಫಲವನ್ನು ನೀಡಿಯೇ ನೀಡುತ್ತದೆ. ಆದ್ದರಿಂದ ವೈದಿಕವಾದ ಯಜ್ಞಾದಿ ಕರ್ಮಾನುಷ್ಠಾನದ ವಿಷಯದಲ್ಲಿ ನಾವು ಮನನ ಮಾಡಬೇಕಾದದ್ದು ಇಷ್ಟು:

- ವೇದವೊಂದೇ ಅತೀಂದ್ರಿಯವಿಷಯಗಳಲ್ಲಿ ಪ್ರಮಾಣವಾಗಿರುವುದರಿಂದ ವೇದದಲ್ಲಿ ಯಾವ ಕರ್ಮದಿಂದ ಯಾವ ಫಲವನ್ನು ಪಡೆಯಬಹುದೆಂದು ಹೇಳಲಾಗಿದೆಯೋ ಅವು ಉಂಟಾಗಿಯೇ ತೀರುತ್ತವೆ.
- ಲೌಕಿಕವಾದ ಉಪಾಯಗಳಂತೆಯೇ ವೈದಿಕವಾದ ಉಪಾಯಗಳೂ ಕೆಲವೊಮ್ಮೆ ಫಲಿಸದೇ ಇರಬಹುದು.
- ಕರ್ತೃವಿನ ಜನ್ಮಾಂತರದ ಕರ್ಮಕ್ಕನುಗುಣವಾಗಿ ಫಲವು ಉಂಟಾಗುವುದರಿಂದ ಜನ್ಮಾಂತರಕರ್ಮಗಳು ಮತ್ತು ಈಗಿನ ಯಜ್ಞಾದಿ ಅನುಷ್ಠಾನಗಳು, ಇವುಗಳ ಪ್ರಾಬಲ್ಯ -



ದೌರ್ಬಲ್ಯಗಳಿಂದಲೇ ಫಲದಲ್ಲಿಯೂ ತಾರತಮ್ಯ ಉಂಟಾಗುತ್ತದೆ.

- ಅನುಷ್ಠಿಸಿದ ಕರ್ಮವು ಎಂದಿಗೂ ವ್ಯರ್ಥವಲ್ಲ. ಅದು ತಾನು ಫಲಿಸುವ ಸಮಯ ಬಂದಾಗ ಫಲವನ್ನು ನೀಡಿಯೇ ನೀಡುತ್ತದೆ. ಹೀಗೆ ಕರ್ಮವು ಫಲವನ್ನು ನೀಡುವ ಸಮಯವನ್ನು **ಕರ್ಮವಿಪಾಕ** ಎನ್ನುತ್ತಾರೆ.
- ಪುಣ್ಯಕರ್ಮಗಳಂತೆಯೇ ಪಾಪಕರ್ಮಗಳೂ ಸಹ ಅದೃಷ್ಟ ರೂಪದಲ್ಲಿದ್ದು ವಿಪಾಕಗೊಂಡಾಗ ಫಲಿಸುತ್ತವೆ.
- ಯಾವ ಕರ್ಮವು ಪುಣ್ಯವನ್ನು ತರುತ್ತದೆ ಅಥವಾ ಪಾಪವನ್ನು ತರುತ್ತದೆ ಎಂಬ ನಿರ್ಣಯವೂ ವೇದದಿಂದಲೇ ಆಗಬೇಕು.

## ಯಜ್ಞಗಳು ಸಹಜ

ಅಶ್ವಮೇಧ-ರಾಜಸೂಯ ಮುಂತಾದವುಗಳನ್ನು ಯಜ್ಞವೆಂಬ ಹೆಸರಿನಿಂದ ನಾವು ಕರೆಯುತ್ತೇವೆ. ಆದರೆ ಮಾನವನು ಜನಿಸುವ ಮೊದಲೇ ಅವನಿಗಾಗಿ ಯಜ್ಞವು ಆರಂಭವಾಗಿರುತ್ತದೆಯೆನ್ನಬಹುದು. ಷೋಡಶ ಸಂಸ್ಕಾರಗಳಲ್ಲಿ ಮೊದಲನೆಯದಾದ ಗರ್ಭಾಧಾನ ಸಂಸ್ಕಾರವೂ ಅದರ ಅಂಗವಾಗಿ ನಡೆಯುವ ಹೋಮ ಮುಂತಾದವುಗಳೂ ಜನಿಸಲಿರುವ ಜೀವಿಗಾಗಿಯೇ ನಡೆಯುತ್ತವೆಯಷ್ಟೆ. ಹೀಗೆ ಹುಟ್ಟುವಾಗಲೇ ಅಗ್ನಿಯ ಆರಾಧನೆಯನ್ನೊಳಗೊಂಡು ಜನಿಸಿದ ಶಿಶುವು ಉಪನಯನವಾದ ಬಳಿಕ ವಟುವಾಗಿ ಗಾಯತ್ರೀಮಂತ್ರದ ಉಪದೇಶವನ್ನು ಪಡೆದು ಗಾಯತ್ರಿಯ ಉಪಾಸನೆಯನ್ನು ಪ್ರಾರಂಭಿಸುತ್ತಾನೆ. ಗಾಯತ್ರಿಯ ಉಪಾಸನೆಯೆಂದರೆ ಬೆಳಕಿನ ಉಪಾಸನೆ. ಅಗ್ನಿಯ ಇನ್ನೊಂದು ರೂಪವೇ ಬೆಳಕು. ಅಲ್ಲದೆ ವಟುವು ನಿತ್ಯವೂ ಎರಡು ವೇಳೆ ಅನುಷ್ಠಿಸಬೇಕಾದ ಅಗ್ನಿಕಾರ್ಯ ಅಥವಾ ಸಮಿದಾಧಾನವೂ ಅಗ್ನಿಯ ಆರಾಧನೆಯೇ ಸರಿಯಷ್ಟೆ. ಬ್ರಹ್ಮಚರ್ಯಾಶ್ರಮವನ್ನು ದಾಟಿದ ಬಳಿಕ ಗೃಹಸ್ಥಾಶ್ರಮವನ್ನು ಸ್ವೀಕರಿಸುವ ತರುಣನು ಔಪಾಸನವೆಂಬ ಹೆಸರಿನಲ್ಲಿ ಮತ್ತೆ ಅಗ್ನಿಯ ಆರಾಧನೆಯನ್ನು ಆರಂಭಿಸುತ್ತಾನೆ. ಔಪಾಸನವನ್ನು ಅನುಷ್ಠಿಸುತ್ತಾನೆ. ಔಪಾಸನಾಗ್ನಿಯನ್ನು **ಗೃಹ್ಯಾಗ್ನಿ** ಅಥವಾ **ಸ್ಮಾರ್ತಾಗ್ನಿ**



ಎನ್ನುತ್ತಾರೆ. ನಂತರ ಅಗ್ನಿಯ ವಿಶೇಷ ಆರಾಧನೆಗಾಗಿ ಶ್ರೌತಾಗ್ನಿಯ ಉಪಾಸನೆಯನ್ನು ಆರಂಭಿಸುತ್ತಾನೆ.

**ಜಾತಪುತ್ರಃ ಕೃಷ್ಣಕೇಶಃ ಅಗ್ನೀನಾದಧೀತ।**
**ಜಾಯಾಮುಪಾಪ್ಯ ದಶಮೇಽಹನ್ಯಗ್ನೀನಾದಧೀತ।**

— ಬೋಧಾಯನಗೃಹ್ಯಸೂತ್ರ

ಪುತ್ರಪ್ರಾಪ್ತಿಯ ತರುವಾಯ ಕಪ್ಪಾದ ಕೂದಲುಗಳಿರುವಾಗಲೇ ಅಗ್ನಿಗಳನ್ನು ಆಧಾನ ಮಾಡಬೇಕು.

ವಿವಾಹವಾದ ನಂತರ ಹತ್ತನೆಯ ದಿನ ಅಗ್ನಿಗಳನ್ನು ಆಧಾನ ಮಾಡಬೇಕು ಎಂಬ ಮಾತಿನಂತೆ ಪತ್ನಿಯ ಒಪ್ಪಿಗೆಯನ್ನು ಪಡೆದು ಅಗ್ನ್ಯಾಧಾನವನ್ನು ಮಾಡಿ ಶ್ರೌತಾಗ್ನಿಯನ್ನು ತನ್ನ ಜೀವನವಿಡೀ ಸಂರಕ್ಷಿಸಿಕೊಂಡು ಬರುತ್ತಾನೆ. ಅಗ್ನಿಹೋತ್ರವನ್ನು ಅನುಷ್ಠಿಸುವ ಅಗ್ನಿಯನ್ನು **ಶ್ರೌತಾಗ್ನಿ** ಅಥವಾ **ತ್ರೇತಾಗ್ನಿ** ಎನ್ನುತ್ತಾರೆ. ಇವು ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯ ಎಂಬ ಹೆಸರನ್ನು ಪಡೆದವುಗಳು. ಆ ಅಗ್ನಿಯಲ್ಲಿ ನಿತ್ಯವೂ ಅಗ್ನಿಹೋತ್ರವನ್ನು ಅನುಷ್ಠಿಸುತ್ತಾ ಬರುತ್ತಾನೆ. ಹೀಗೆ ಜನ್ಮದೊಡನೆಯೇ ಬಂದ ಅಗ್ನಿಯು ವಿಸ್ತೃತಗೊಳ್ಳುತ್ತಾ ಬಂದುದರಿಂದ ಶ್ರೌತಾಗ್ನಿಗೆ ವೈತಾನಿಕ ಅಗ್ನಿ[1] ಎಂದೂ ಹೆಸರು.

ಹೀಗೆ ರೂಢಿಯಲ್ಲಿ ಅನೇಕ ಯಜ್ಞಗಳ ಹೆಸರುಗಳನ್ನು ನಾವು ಕಂಡರೂ ಸೂಕ್ಷ್ಮವಾಗಿ ಗಮನಿಸಿದಾಗ ಹುಟ್ಟಿದಾಗಿನಿಂದ ಯಜ್ಞದ ಅನುಷ್ಠಾನವು ಸಹಜವಾಗಿ ನಡೆದೇ ಇರುತ್ತದೆಯೆನ್ನಬಹುದು.

## ನಿತ್ಯ-ನೈಮಿತ್ತಿಕ ಯಜ್ಞಗಳು

**ಯಜ್ಞಂ ವ್ಯಾಖ್ಯಾಸ್ಯಾಮಃ** ಎಂಬುದು ಯಜುರ್ವೇದದ ಸೂತ್ರಕಾರರಾದ ಆಪಸ್ತಂಬರು ಮತ್ತು ಬೋಧಾಯನರು ಇಬ್ಬರು ಮಹರ್ಷಿಗಳೂ ಹೇಳಿರುವ ಸೂತ್ರ.

1. ತನು ವಿಸ್ತಾರೇ. ತನಾದಿ. ಉಭಯಪದೀ.



ಯಜ್ಞಗಳು ಇಪ್ಪತ್ತೊಂದು ಬಗೆಯಾಗಿರುತ್ತವೆ. **ಏಕವಿಂಶತಿಸಂಸ್ಥೋ ಯಜ್ಞಃ।** ಏಳು ಪಾಕಯಜ್ಞ ಸಂಸ್ಥೆಗಳು, ಏಳು ಹವಿರ್ಯಜ್ಞ ಸಂಸ್ಥೆಗಳು ಮತ್ತು ಏಳು ಸೋಮ ಸಂಸ್ಥೆಗಳು.

**ಏಕವಿಂಶತಿಸಂಸ್ಥೋ ಯಜ್ಞಃ। ಋಗ್ಯಜುಃ ಸಾಮಾತ್ಮಕಃ, ಛಂದೋಭಿಶ್ಚಿತಃ, ಗ್ರಾಮ್ಯಾರಣ್ಯಪಶ್ವೋಷಧೀಭಿರ್ಹವಿಷ್ಮಾನ್, ದಕ್ಷಿಣಾಭಿರಾಯುಷ್ಮಾನ್ ಸ ಚತುರ್ಧಾ ಜ್ಞೇಯ ಉಪಾಸ್ಯಶ್ಚ, ಸ್ವಾಧ್ಯಾಯಯಜ್ಞೋ ಜಪಯಜ್ಞಃ ಕರ್ಮಯಜ್ಞೋ ಮಾನಸಶ್ಚೇತಿ। ತೇಷಾಂ ಪರಸ್ಪರಾದ್ದಶಗುಣೋ ವೀರ್ಯೇಣ॥**

— ಬೋಧಾಯನಗೃಹ್ಯಸೂತ್ರ. 1 1.18.21

ಯಜ್ಞಗಳು ಇಪ್ಪತ್ತೊಂದು ಬಗೆ ಇವೆ. ಋಕ್, ಯಜುಸ್ಸು ಮತ್ತು ಸಾಮ ವೇದಗಳಿಂದ ಅವುಗಳ ಅನುಷ್ಠಾನ. ಗ್ರಾಮ್ಯಪಶುಗಳು, ಆರಣ್ಯಪಶುಗಳು ಮತ್ತು ಓಷಧಿಗಳೇ ಅವುಗಳ ಹವಿಸ್ಸು. ಋತ್ವಿಜರಿಗೆ ನೀಡುವ ದಕ್ಷಿಣೆಯಿಂದ ಯಜ್ಞವು ಆಯುಷ್ಮಂತವಾಗುತ್ತದೆ. ಅದು ನಾಲ್ಕು ಬಗೆ. ವೇದಾಧ್ಯಯನ ಯಜ್ಞ, ಜಪಯಜ್ಞ, ಕರ್ಮಯಜ್ಞ ಮತ್ತು ಮಾನಸಯಜ್ಞ. ಇವು ಒಂದಕ್ಕಿಂತ ಒಂದು ಹತ್ತು ಪಟ್ಟು ಫಲವನ್ನೀಯುತ್ತವೆ.

ಋಕ್, ಯಜುಸ್ಸು ಮತ್ತು ಸಾಮಗಳಿಂದ ಅನುಷ್ಠಿಸಲ್ಪಡುವ ಈ ಇಪ್ಪತ್ತೊಂದು ಬಗೆಯ ಯಜ್ಞಗಳನ್ನು ಆಪಸ್ತಂಬರೂ ಹೇಳಿದ್ದಾರೆ.

## ೧.ಸಪ್ತ ಪಾಕಯಜ್ಞಸಂಸ್ಥೆಗಳು

**ಅಲ್ಪಯಜ್ಞಾಃ ಪಾಕಯಜ್ಞಾಃ**

ಎಂಬ ಮಾತಿನಂತೆ ಚಿಕ್ಕ ಪ್ರಮಾಣದ ಯಜ್ಞಗಳು. ಸಂಸ್ಥಾ ಎಂದರೆ ಸಮೂಹ ಎಂದರ್ಥ.



| ಬೋಧಾಯನರು | ಆಪಸ್ತಂಬರು |
|---|---|
| ೧.ಹುತ | ೧.ಔಪಾಸನಹೋಮ |
| ೨.ಪ್ರಹುತ | ೨.ವೈಶ್ವದೇವ |
| ೩.ಆಹುತ | ೩.ಪಾರ್ವಣ |
| ೪.ಶೂಲಗವ | ೪.ಅಷ್ಟಕಾ |
| ೫.ಬಲಿಹರಣ | ೫.ಮಾಸಿಶ್ರಾದ್ಧ |
| ೬.ಪ್ರತ್ಯವರೋಹಣ | ೬.ಸರ್ಪಬಲಿ |
| ೭.ಅಷ್ಟಕಾಹೋಮ | ೭.ಈಶಾನಬಲಿ |

ಈ ಎಲ್ಲ ಯಜ್ಞಗಳೂ **ಗೃಹ್ಯಾಗ್ನಿ** ಯಲ್ಲಿ ಅನುಷ್ಠಿಸಲ್ಪಡುತ್ತವೆ.

## ೨. ಸಪ್ತ ಹವಿರ್ಯಜ್ಞಸಂಸ್ಥೆಗಳು.

| ಬೋಧಾಯನರು | ಆಪಸ್ತಂಬರು |
|---|---|
| ೧.ಅಗ್ನ್ಯಾಧೇಯ | ೧.ಅಗ್ನಿಹೋತ್ರ |
| ೨.ಅಗ್ನಿಹೋತ್ರ | ೨.ದರ್ಶ - ಪೂರ್ಣಮಾಸೇಷ್ಟಿಗಳು |
| ೩.ದರ್ಶ - ಪೂರ್ಣಮಾಸೇಷ್ಟಿಗಳು | ೩.ಆಗ್ರಯಣೇಷ್ಟಿ |
| ೪.ಚಾತುರ್ಮಾಸ್ಯಾನಿ | ೪.ಪಿಂಡಪಿತೃಯಜ್ಞ |
| ೫.ಆಗ್ರಯಣೇಷ್ಟಿ | ೫.ಚಾತುರ್ಮಾಸ್ಯಾನಿ |
| ೬.ನಿರೂಢ ಪಶುಬಂಧ | ೬.ನಿರೂಢ ಪಶುಬಂಧ |
| ೭.ಸೌತ್ರಾಮಣೀ | ೭.ಸೌತ್ರಾಮಣೀ |

ಪಿಂಡಪಿತೃಯಜ್ಞವು ದರ್ಶ - ಪೂರ್ಣಮಾಸೇಷ್ಟಿಯ ಒಂದು ಅಂಗವೆಂದು ಬೋಧಾಯನರು ಹೇಳಿರುತ್ತಾರೆ.

ಈ ಯಜ್ಞಗಳು ಶ್ರೌತಾಗ್ನಿಯಲ್ಲಿ (ಗಾರ್ಹಪತ್ಯ, ದಕ್ಷಿಣಾಗ್ನಿ ಮತ್ತು ಆಹವನೀಯ) ಅನುಷ್ಠಿಸಲ್ಪಡುತ್ತವೆ



## ೩.ಸಪ್ತ ಸೋಮಸಂಸ್ಥೆಗಳು.

| ಬೋಧಾಯನರು | ಆಪಸ್ತಂಬರು |
| --- | --- |
| ೧.ಅಗ್ನಿಷ್ಟೋಮ | ೧.ಅಗ್ನಿಷ್ಟೋಮ |
| ೨.ಅತ್ಯಗ್ನಿಷ್ಟೋಮ | ೨.ಅತ್ಯಗ್ನಿಷ್ಟೋಮ |
| ೩.ಉಕ್ಥ್ಯ | ೩.ಉಕ್ಥ್ಯ |
| ೪.ಷೋಡಶೀ | ೪.ಷೋಡಶೀ |
| ೫.ವಾಜಪೇಯ | ೫.ವಾಜಪೇಯ |
| ೬.ಅತಿರಾತ್ರ | ೬.ಅತಿರಾತ್ರ |
| ೭.ಅಪ್ತೋರ್ಯಾಮ | ೭.ಅಪ್ತೋರ್ಯಾಮ |

ಈ ಯಜ್ಞಗಳೂ ಶ್ರೌತಾಗ್ನಿಯಲ್ಲಿಯೇ ಅನುಷ್ಠಿಸಲ್ಪಡುತ್ತವೆ.

ಮೇಲೆ ಹೇಳಿದ ಎಲ್ಲ ಯಜ್ಞಗಳೂ ನಿತ್ಯಯಜ್ಞಗಳು. **ಯಾವಜ್ಜೀವಮಗ್ನಿಹೋತ್ರಂ ಜುಹೋತಿ** ಎಂಬ ವಾಕ್ಯವೂ, **ಯಾವಜ್ಜೀವಂ ದರ್ಶಪೂರ್ಣಮಾಸಾಭ್ಯಾಂ ಯಜೇತ** ಎಂಬ ಶ್ರುತಿವಾಕ್ಯವೂ ಸಪ್ತ ಹವಿರ್ಯಜ್ಞಸಂಸ್ಥೆಗಳನ್ನು ನಿತ್ಯಕರ್ಮಗಳನ್ನಾಗಿ ತಿಳಿಸುತ್ತವೆ. **ವಸಂತೇ ವಸಂತೇ ಜ್ಯೋತಿಷಾ ಯಜೇತ** ಎಂಬ ಶ್ರುತಿವಾಕ್ಯವು ಅಗ್ನಿಷ್ಟೋಮ ಮುಂತಾದ ಸಪ್ತ ಸೋಮಸಂಸ್ಥೆಗಳನ್ನು ನಿತ್ಯಕರ್ಮಗಳೆಂದು ತಿಳಿಸುತ್ತದೆ. ಔಪಾಸನ ಮುಂತಾದ ಸಪ್ತ ಪಾಕಯಜ್ಞಸಂಸ್ಥೆಗಳೂ ನಿತ್ಯಕರ್ಮಗಳೇ.

ಹೀಗೆ ಈ ಇಪ್ಪತ್ತೊಂದು ಯಜ್ಞಗಳ ಅನುಷ್ಠಾನವು ನಿತ್ಯಕರ್ಮದಲ್ಲಿ ಸೇರುತ್ತದೆ. ನಿತ್ಯಕರ್ಮಗಳನ್ನು ಮಾಡದಿದ್ದರೆ ಪಾಪವು ಬರುತ್ತದೆ. ಮಾಡಿದರೆ ಯಾವ ಫಲವೂ ಇಲ್ಲವೆಂಬುದು ಒಂದು ಮತ. ಯಾವ ಕರ್ಮವಾದರೂ ಫಲವನ್ನು ನೀಡಲೇಬೇಕಾದುದರಿಂದ ಪಾಪಪರಿಹಾರ ಎಂಬ ಫಲವನ್ನು ಎಲ್ಲರೂ ಬಯಸಿಯೋ ಬಯಸುವುದರಿಂದ ನಿತ್ಯಕರ್ಮಗಳು ಪಾಪಪರಿಹಾರ ವನ್ನು ಮಾಡಿಯೇ ಮಾಡುತ್ತವೆ ಎಂಬುದು ಬಹುಸಂಮತ. **ಉಪಾತ್ತಸಮಸ್ತದುರಿತಕ್ಷಯದ್ವಾರಾ ಶ್ರೀ ಪರಮೇಶ್ವರಪ್ರೀತ್ಯರ್ಥಂ** ಎಂದೇ ನಿತ್ಯಕರ್ಮಗಳಿಗೆ ಸಂಕಲ್ಪ.



ಯಾವುದಾದರೂ ನಿಮಿತ್ತವೊದಗಿದಾಗ ಮಾಡುವ ಯಜ್ಞಗಳು ನೈಮಿತ್ತಿಕಯಜ್ಞಗಳು.

**ಯಸ್ಯ ಗೃಹಾನ್ ದಹತ್ಯಗ್ನಯೇ ಕ್ಷಾಮವತೇ ಪುರೋಡಾಶಮಷ್ಟಾಕಪಾಲಂ ನಿರ್ವಪೇತ್**

ಬೆಂಕಿಯಿಂದ ಮನೆಯು ಸುಟ್ಟಾಗ ಇನ್ನೊಮ್ಮೆ ಹಾಗಾಗದಿರಲೆಂದು ಆಹಿತಾಗ್ನಿಯಾದವನು ಕ್ಷಾಮವತೀಷ್ಟಿಯನ್ನು ಮಾಡಬೇಕು. ಇದು ನೈಮಿತ್ತಿಕೇಷ್ಟಿ. ಈ ನಿತ್ಯ-ನೈಮಿತ್ತಿಕ ಯಜ್ಞಗಳಲ್ಲದೆ ನಿರ್ದಿಷ್ಟವಾದ ಫಲವನ್ನು ಬಯಸಿ ಮಾಡುವ ಯಜ್ಞಗಳು ಕಾಮ್ಯಯಜ್ಞಗಳು.

**ಐಂದ್ರಾಗ್ನಮೇಕಾದಶಕಪಾಲಂ ನಿರ್ವಪೇತ್ ಸ್ಪರ್ಧಮಾನಃ ಕ್ಷೇತ್ರೇ ವಾ ಸಜಾತೇಷು ವಾ...**

ಸ್ಪರ್ಧಿಸಬಯಸುವವನು ಐಂದ್ರಾಗ್ನೇಷ್ಟಿಯನ್ನುಮಾಡಬೇಕು. ಈ ರೀತಿಯ ಯಜ್ಞಗಳು ಕಾಮ್ಯಯಜ್ಞಗಳು. ಇಂತಹ ಹಲವಾರು ಯಜ್ಞಗಳು ವೇದದಲ್ಲಿ ಹೇಳಲ್ಪಟ್ಟಿವೆ.

## ಹೋಮ ಮತ್ತು ಯಜ್ಞಗಳು

ದಿನನಿತ್ಯದ ವ್ಯವಹಾರದಲ್ಲಿ **ರುದ್ರಹೋಮ, ಚಂಡೀಹೋಮ** ಮುಂತಾದ ಹೆಸರುಗಳನ್ನು ಕೇಳುತ್ತೇವಷ್ಟೆ. ಹಾಗೆಯೇ **ರಾಜಸೂಯ ಯಾಗ, ಅಶ್ವಮೇಧಯಾಗ** ಮುಂತಾದ ಶಬ್ದಗಳನ್ನೂ ಕೇಳುತ್ತೇವಷ್ಟೆ. ಯಜ್ಞ ಮತ್ತು ಯಾಗ ಎಂಬ ಶಬ್ದಗಳು ಪರ್ಯಾಯಶಬ್ದಗಳು. ಆದರೆ ಹೋಮ ಮತ್ತು ಯಜ್ಞಗಳು ಪರ್ಯಾಯಶಬ್ದಗಳಲ್ಲ. ಅವುಗಳಿಗಿರುವ ವ್ಯತ್ಯಾಸವೇನು ಎಂಬುದನ್ನು ತಿಳಿಯುವುದು ಅವಶ್ಯಕ.



ಒಂದೇ ಅಗ್ನಿಯಲ್ಲಿ ಮಂತ್ರಗಳ ಕಡೆಯಲ್ಲಿ **ಸ್ವಾಹಾ**ಎಂಬ ಪದವನ್ನು ಸೇರಿಸಿ ಒಂದು ದಿವಸದಲ್ಲಿ ಅಥವಾ ಕ್ಲೃಪ್ತವಾದ ಕೆಲವು ದಿವಸಗಳ ತನಕ ನಡೆಸುವ ಅಗ್ನಿಯ ಉಪಾಸನೆಗೆ ಹೋಮ, ಹವನಗಳೆಂದು ಹೆಸರು.

**ಜುಹೋತಿಚೋದನ�ः , ಸ್ವಾಹಾಕಾರಪ್ರದಾನः ದರ್ವೀಹೋಮः ।**
**ಯಜತಿಚೋದನः , ವಷಟ್ಕಾರಪ್ರದಾನः ಯಾಗः ।**

— ಆಪಸ್ತಂಬ ಶ್ರೌತಸೂತ್ರ

**ಜುಹುಯಾತ್** ಎಂಬ ಪದಗಳಿರುವ ವಾಕ್ಯದಿಂದ ತಿಳಿಸಲ್ಪಟ್ಟು, **ಸ್ವಾಹಾ** ಎಂಬ ಪದದಿಂದ ಹವಿಸ್ಸನ್ನು ಅರ್ಪಿಸುವುದು ದರ್ವೀಹೋಮ. **ಯಜೇತ** ಎಂಬ ಪದವಿರುವ ವಾಕ್ಯದಿಂದ ವೇದದಿಂದ ವಿಧಿಸಲ್ಪಟ್ಟು, **ವಷಟ್** ಎಂಬ ಪದದಿಂದ ಹವಿಸ್ಸನ್ನು ಅರ್ಪಿಸುವುದು ಯಾಗ. ಅಲ್ಲದೆ ದರ್ವೀಹೋಮವನ್ನು **ಗೃಹ್ಯಹೋಮ**ವೆಂದೂ ಕರೆಯುತ್ತಾರೆ. ಮೂರು ಅಗ್ನಿಗಳಲ್ಲಿ (ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿ) ಎರಡು ಅಥವಾ ಮೂರು ವೇದಗಳಿಂದ ಆಶ್ರಾವಣ, ಪ್ರತ್ಯಾಶ್ರಾವಣಾದಿಗಳಿಂದ ಅನುಷ್ಠಿಸುವ ಅಗ್ನಿಯ ಉಪಾಸನೆಗೂ ಯಜ್ಞಗಳೆಂದು ಹೆಸರು. ಆಶ್ರಾವಣ ಪ್ರತ್ಯಾಶ್ರಾವಣವೆಂದರೆ ಯಜ್ಞವನ್ನು ಅನುಷ್ಠಿಸುವಾಗ ಅಧ್ವರ್ಯು ಮುಂತಾದ ಋತ್ವಿಜರ ನಡುವೆ ದೇವತೆಗಳ ಸ್ತೋತ್ರ, ಆವಾಹನೆ ಮುಂತಾದವುಗಳಿಗೆ **ಓಶ್ರಾವಯ,ಅಸ್ತು ಶ್ರೌಷಟ್, ಯಜ, ಯೇ ಯಜಾಮಹೇ ಮತ್ತು ವೌಷಟ್** ಈ ಪದಗಳನ್ನು ಬಳಸುವಿಕೆ. ಮನುಷ್ಯರಿಗೆ ಸ್ತೋತ್ರವು (ಹೊಗಳಿಕೆ) ಪ್ರಿಯವಾದುದೆಂದೂ, ಪಿತೃಗಳಿಗೆ ನಮಸ್ಕಾರವು ಪ್ರಿಯವಾದುದೆಂದೂ, ದೇವತೆಗಳು ಯಜ್ಞಪ್ರಿಯರೆಂದೂ

**ಮನುಷ್ಯಾ ವಾ ಈಡೇನ್ಯಾः ಪಿತರೋ ನಮಸ್ಯಾ ದೇವಾ ಯಜ್ಞಿಯಾः ...**

— ತೈ.ಸಂ. 2.5.9

ಎಂಬ ವೇದಮಂತ್ರವು ತಿಳಿಸುತ್ತದೆ.



## ಯಜ್ಞಗಳ ಇನ್ನೂ ಕೆಲವು ಭೇದಗಳು

ಹಿಂದೆ ತಿಳಿಸಿದ ಸಪ್ತ ಪಾಕಯಜ್ಞಸಂಸ್ಥೆ, ಸಪ್ತ ಹವಿರ್ಯಜ್ಞಸಂಸ್ಥೆ ಮತ್ತು ಸಪ್ತ ಸೋಮಸಂಸ್ಥೆಗಳು - ಹೀಗೆ ಇಪ್ಪತ್ತೊಂದು ಬಗೆಯ ಯಜ್ಞಗಳಲ್ಲದೆ ಅವುಗಳನ್ನೇ ವಿಸ್ತರಿಸಿ ಅನುಷ್ಠಿಸುವ ಅನೇಕ ಯಜ್ಞಗಳು ವೇದದಲ್ಲಿ ಹೇಳಲ್ಪಟ್ಟಿವೆ. ಯಾವ ಯಾಗವನ್ನು ಅನುಷ್ಠಿಸಲು ಅಗತ್ಯವಾದ ಎಲ್ಲ ಮಂತ್ರಗಳೂ ಮತ್ತು ಯಾಗಾಂಗಗಳೂ ಸಂಪೂರ್ಣವಾಗಿ ವೇದದಲ್ಲಿಯೇ ತಿಳಿಸಲ್ಪಟ್ಟಿರುತ್ತವೆಯೋ ಅಂತಹ ಯಾಗವನ್ನು **ಪ್ರಕೃತಿಯಾಗ** ವೆನ್ನುತ್ತಾರೆ. ಯಾಗದ ವಿಶೇಷ ಹವಿಸ್ಸು, ದೇವತೆ, ಆಹುತಿಯನ್ನು ನೀಡುವಾಗ ಹೇಳುವ ಮಂತ್ರಗಳಾದ ಯಾಜ್ಯಾಮಂತ್ರಗಳು, ಪ್ರಧಾನ ಆಹುತಿಗೆ ಮೊದಲು ಹೇಳುವ ಮಂತ್ರಗಳಾದ ಪುರೋನುವಾಕ್ಯಗಳನ್ನು ಮಾತ್ರ ತಿಳಿಸಿದ್ದು, ಉಳಿದೆಲ್ಲವೂ ಪ್ರಕೃತಿಯಾಗದಂತೆಯೇ ಅನುಷ್ಠಿಸಬೇಕಾದ ಯಾಗವನ್ನು **ವಿಕೃತಿ ಯಾಗ** ವೆಂದು ಹೇಳುತ್ತಾರೆ.

ಉದಾಹರಣೆಗಾಗಿ ದರ್ಶ ಮತ್ತು ಪೂರ್ಣಮಾಸೇಷ್ಟಿಗಳು ಎಲ್ಲ ಐಷ್ಟಿಕ ಯಾಗಗಳಿಗೂ ಪ್ರಕೃತಿಯಾಗಗಳು. ಈ ಇಷ್ಟಿಗಳಿಗೆ ಸಂಬಂಧಿಸಿದ ಎಲ್ಲ ಅಂಶಗಳೂ ವೇದದಲ್ಲಿ ವಿಸ್ತಾರವಾಗಿ ಬಂದಿವೆ. ಈ ಇಷ್ಟಿಗಳಲ್ಲದೆ ಅನೇಕ ಕಾಮ್ಯೇಷ್ಟಿಗಳನ್ನು ವೇದವು ತಿಳಿಸಿದ್ದರೂ ಸಹ ಆ ವಿಶೇಷವಾದ ಇಷ್ಟಿಗಳಿಗೆ ಸಂಬಂಧಿಸಿದ ದೇವತೆ, ಹವಿಸ್ಸು ಮತ್ತು ಯಾಜ್ಯಾ-ಪುರೋನುವಾಕ್ಯಗಳನ್ನು ಮಾತ್ರ ವೇದವು ತಿಳಿಸುತ್ತದೆ. ಮಿಕ್ಕ ವಿಧಿಗಳನ್ನು ಪ್ರಕೃತಿಯಾಗದಂತೆಯೇ ಅನುಷ್ಠಿಸಬೇಕು. ಇದನ್ನೇ **ಪ್ರಕೃತಿವತ್ ವಿಕೃತಿಃ ಕರ್ತವ್ಯಾ** ಎಂದು ಪೂರ್ವಮೀಮಾಂಸಾಶಾಸ್ತ್ರದಲ್ಲಿ ತಿಳಿಸುತ್ತಾರೆ.

ಯಜ್ಞಗಳನ್ನು ನಿತ್ಯ-ನೈಮಿತ್ತಿಕ-ಕಾಮ್ಯ, ಪ್ರಕೃತಿ-ವಿಕೃತಿ ಎಂಬುದಾಗಿ ವಿಂಗಡಿಸಿದಂತೆಯೇ ಇನ್ನೊಂದು ರೀತಿಯಲ್ಲಿಯೂ ವಿಂಗಡಿಸಬಹುದು. ಅದು ೧.ಐಷ್ಟಿಕ ೨. ಪಾಶುಕ ೩. ಸೌಮಿಕ. ಯಜ್ಞಗಳಲ್ಲಿ ದೇವತೆಗಳಿಗೆ ನೀಡಬೇಕಾದ ಹವಿಸ್ಸು ಕೇವಲ ಪುರೋಡಾಶ, ಆಜ್ಯ, ಚರು, ಸಾನ್ನಾಯ್ಯ ಇವು ಮಾತ್ರವಿದ್ದರೆ ಆ ಎಲ್ಲ ಯಜ್ಞಗಳೂ **ಐಷ್ಟಿಕ**ಗಳೆನ್ನಿಸಿಕೊಳ್ಳುತ್ತವೆ. ದೇವತೆಗಳಿಗೆ ನೀಡಬೇಕಾದ ಹವಿಸ್ಸು ಪಶುವಾಗಿದ್ದರೆ ಆ ಯಾಗವು **ಪಾಶುಕ** ಎನ್ನಿಸಿಕೊಳ್ಳುತ್ತದೆ. ಹವಿಸ್ಸು ಸೋಮಲತೆಯ ರಸವಾಗಿದ್ದರೆ ಆ ಯಾಗವು **ಸೌಮಿಕ** ಎನ್ನಿಸಿಕೊಳ್ಳುತ್ತದೆ. ಹೀಗೆ ಯಾಗಗಳು ಐಷ್ಟಿಕ, ಪಾಶುಕ,



ಸೌಮಿಕಗಳೆಂಬುದಾಗಿ ಮೂರು ಬಗೆಯೆಂದು ಹೇಳಬಹುದು. ಯಜ್ಞದ ವಿಧಿಗಳನ್ನು ಗಮನಿಸಿದಾಗ ಪಾಶುಕಯಾಗಗಳಲ್ಲಿ ಐಷ್ಟಿಕದ ವಿಧಿಗಳು ಸೇರಿಯೇ ಇರುತ್ತವೆ. ಸೌಮಿಕಯಾಗಗಳಲ್ಲಿ ಐಷ್ಟಿಕ ಮತ್ತು ಪಾಶುಕದ ವಿಧಿಗಳು ಸೇರಿರುತ್ತವೆ. ಐಷ್ಟಿಕಯಾಗಗಳಲ್ಲಿ ಮಾತ್ರ ಪಾಶುಕ ಮತ್ತು ಸೌಮಿಕಗಳ ಪ್ರಸಕ್ತಿಯು ಇರುವುದಿಲ್ಲ.

ಹೀಗೆ ಯಜ್ಞಗಳಲ್ಲಿ ಅನೇಕ ಬಗೆಗಳು ಇದ್ದರೂ ಪ್ರಧಾನವಾದ ಯಾಗದ ಮಧ್ಯದಲ್ಲಿ ಬರುವ ಚಯನವೇ ಮುಂತಾದವುಗಳನ್ನು ಯಾಗಗಳನ್ನಾಗಿ ಪರಿಗಣಿಸದಿದ್ದರೂ ಯಾಗಾಂಗವನ್ನಾಗಿ ಪರಿಗಣಿಸಲಾಗಿದೆ. ಇದಲ್ಲದೆ ಸೋಮಯಾಗವನ್ನು ವಿಸ್ತರಿಸಿ ಅನುಷ್ಠಿಸಿದಾಗ ಮಾಡುವ **ದ್ವಿರಾತ್ರ** ಮೊದಲಾದವುಗಳೂ ಸಹ ಯಾಗಗಳೇ. ಇದಲ್ಲದೆ ಸೋಮಯಾಜಿಗಳು ಸೇರಿ ಮಾಡುವ **ಸತ್ರ**ವೇ ಮೊದಲಾದವುಗಳೂ ಯಾಗಗಳೇ.

ಯಜ್ಞಗಳ ವಿಭಾಗವನ್ನು ಸರಿಯಾಗಿ ತಿಳಿಯಲು ಈ ಕೆಳಗಿನ ಕೋಷ್ಟಕವು ನೆರವಾಗುವುದು.

**ಯಜ್ಞಗಳು**

| ೨೧ ಸಂಸ್ಥೆಗಳು | ನಿತ್ಯ | ನೈಮಿತ್ತಿಕ | ಕಾಮ್ಯ | ಐಷ್ಟಿಕ | ಪಾಶುಕ | ಸೌಮಿಕ |
|---|---|---|---|---|---|---|

ವೇದಗಳಲ್ಲಿ ಹೇಳಲ್ಪಟ್ಟಿರುವ ಯಜ್ಞಗಳ ಗುಂಪನ್ನೂ ಮತ್ತು ಈ ಎಲ್ಲಾ ಯಜ್ಞಗಳನ್ನು ಅನುಷ್ಠಿಸಲು ಪ್ರಾರಂಭದಲ್ಲಿ ಮಾಡಬೇಕಾದ ಅಗ್ನಿಯ ಆಧಾನವನ್ನೂ ಗಮನದಲ್ಲಿಟ್ಟುಕೊಂಡು ಪ್ರಕೃತಿ-ವಿಕೃತಿಯಾಗಗಳನ್ನು ಈ ರೀತಿ ತಿಳಿಯಬಹುದು. ಅಗ್ನಿಯನ್ನು ಆಧಾನ ಮಾಡುವ **ಅಗ್ನ್ಯಾಧೇಯವು** ಪ್ರಕೃತಿ. ಅಗ್ನಿಯು ಒಮ್ಮೆ ನಷ್ಟವಾದರೆ ಮಾಡುವ ವಿಚ್ಛಿನ್ನಾಧಾನವೂ, ಅಗ್ನಿಯ ಉಪಾಸನೆಯನ್ನು ಮಾಡಿದರೂ ಸಮೃದ್ಧಿಯು ಉಂಟಾಗಲಿಲ್ಲವೆಂಬ ಕಾರಣಕ್ಕಾಗಿ ಮಾಡುವ ನೈಮಿತ್ತಿಕಾಧಾನವೂ **ಪುನರಾಧೇಯ**ವೆನಿಸಿಕೊಳ್ಳುವುದು. ಆ ಪುನರಾಧೇಯವು ಅಗ್ನ್ಯಾಧೇಯದ ವಿಕೃತಿ.

ಐಷ್ಟಿಕ ಯಾಗಗಳಲ್ಲಿ **ದರ್ಶ-ಪೂರ್ಣಮಾಸಗಳು** ಪ್ರಕೃತಿಯಾಗಗಳು. ನಿರ್ದಿಷ್ಟವಾದ ಫಲವನ್ನು ಬಯಸಿ ಮಾಡುವ ಎಲ್ಲಾ ಕಾಮ್ಯೇಷ್ಟಿಗಳು ಈ



ಇಷ್ಟಿಗಳ ವಿಕೃತಿಯಾಗಗಳು. ಪಾಶುಕಯಾಗಗಳಲ್ಲಿ ಐಂದ್ರಾಗ್ನ ನಿರೂಢ ಪಶುಬಂಧವು ಪ್ರಕೃತಿ. ನಿರ್ದಿಷ್ಟವಾದ ಫಲವನ್ನು ಬಯಸಿ ಮಾಡುವ ಎಲ್ಲಾ ಕಾಮ್ಯ ಪಶುಬಂಧಗಳೂ ನಿರೂಢ ಪಶುಬಂಧದ ವಿಕೃತಿಯಾಗಗಳು. ಸೌಮಿಕಯಾಗಗಳಲ್ಲಿ **ಜ್ಯೋತಿಷ್ಟೋಮ-ಅಗ್ನಿಷ್ಟೋಮವು** ಪ್ರಕೃತಿ. ಉಳಿದ ಎಲ್ಲಾ ಸೌಮಿಕಗಳೂ ಈ ಜ್ಯೋತಿಷ್ಟೋಮ-ಅಗ್ನಿಷ್ಟೋಮದ ವಿಕೃತಿಗಳೇ. ಸೋಮಯಾಗದ ಅಂಗವಾಗಿ ಯಜ್ಞವೇದಿಕೆಯ ಉತ್ತರವೇದಿಯಲ್ಲಿ ಮಾಡುವ ಅಗ್ನಿಚಯನಯಾಗಗಳಿಗೆ **ಶ್ಯೇನಚಿತ್** ಅಗ್ನಿಚಯನವು ಪ್ರಕೃತಿ. ಛಂದಶ್ಚಿತ್, ಸಾವಿತ್ರಚಯನ, ಆರುಣಕೇತುಕಚಯನಗಳು ಈ ಶ್ಯೇನಚಿತ್ ಚಯನದ ವಿಕೃತಿಗಳು.

ಸೌಮಿಕಯಾಗಗಳಲ್ಲಿ ಏಕಾಹ, ಅಹೀನ, ಸತ್ರ ಮತ್ತು ಅಯನಗಳೇ ಮೊದಲಾದ ಹಲವು ವಿಧಗಳಿವೆ. ಅವುಗಳಲ್ಲಿ ಬೃಹಸ್ಪತಿಸವ, ಸರ್ವತೋ ಮುಖ, ಅಗ್ನಿಷ್ಟುತ್ ಮುಂತಾದವುಗಳು ಏಕಾಹ ಸೋಮಯಾಗಗಳು. ದ್ವಿರಾತ್ರ, ತ್ರಿರಾತ್ರ, ಚತೂರಾತ್ರ, ಪಂಚರಾತ್ರ, ಷಡ್ರಾತ್ರ, ಸಪ್ತರಾತ್ರ, ಅಷ್ಟರಾತ್ರ, ನವರಾತ್ರ, ದಶರಾತ್ರ, ಏಕಾದಶರಾತ್ರ, ದ್ವಾದಶರಾತ್ರ ಇವುಗಳು ಅಹೀನಗಳು. ದ್ವಾದಶರಾತ್ರ ಸೋಮಯಾಗವು ಅಹೀನವೂ ಹೌದು. ಸತ್ರವೂ ಹೌದು. ಬಳಿಕ ತ್ರಯೋದಶರಾತ್ರ, ಚತುರ್ದಶರಾತ್ರ, ಪಂಚದಶರಾತ್ರ, ಸಪ್ತದಶರಾತ್ರ, ವಿಂಶತಿರಾತ್ರ, ಏಕವಿಂಶತಿರಾತ್ರ, ಚತುರ್ವಿಂಶತಿರಾತ್ರ, ತ್ರಿಂಶದ್ರಾತ್ರ, ದ್ವಾತ್ರಿಂಶದ್ರಾತ್ರ, ತ್ರಯಸ್ತ್ರಿಂಶದ್ರಾತ್ರ, ಷಟ್ ತ್ರಿಂಶದ್ರಾತ್ರ, ಏಕೋನಪಂಚಾಶದ್ರಾತ್ರ ಮತ್ತು ಗವಾಮಯನ ಇವೆಲ್ಲ ಸತ್ರಗಳು.

ಈ ರೀತಿ ಬಗೆಬಗೆಯಾಗಿರುವ ಸೋಮಯಾಗಗಳಲ್ಲಿ ಅಗ್ನಿಷ್ಟೋಮವು ಏಕಾಹ. ಇದು ಅಹೀನಗಳಿಗೆ ಪ್ರಕೃತಿ. ಉಳಿದ ದ್ವಾದಶ ರಾತ್ರದವರೆಗಿನ ಅಹೀನಗಳು ಅಗ್ನಿಷ್ಟೋಮದ ವಿಕೃತಿಗಳು. ಸತ್ರಯಾಗಗಳಿಗೆ ದ್ವಾದಶರಾತ್ರವು ಪ್ರಕೃತಿಯಾಗವೆನಿಸುತ್ತದೆ. ಸತ್ರಗಳಿಗೆ ಅಹರ್ಗಣವೆಂಬ ಹೆಸರೂ ಇದೆ. ಏಕೋನಪಂಚಾಶದ್ರಾತ್ರದವರೆಗಿನ ಸತ್ರಯಾಗಗಳೆಲ್ಲವೂ ಸತ್ರದ ವಿಕೃತಿಗಳು. ಗವಾಮಯನವು ಸಂವತ್ಸರಸತ್ರ. ಉಳಿದ ಅಂಗಿರಸಾಮಯನ ಮುಂತಾದವುಗಳೆಲ್ಲವೂ ಸಾಂವತ್ಸರಿಕಸತ್ರದ ವಿಕೃತಿಗಳು.



ವೇದದಲ್ಲಿ ಪ್ರಕೃತಿಯಾಗದ ಸಂಪೂರ್ಣ ಉಪದೇಶವು ಇರುತ್ತದೆ. ವಿಕೃತಿಯಾಗದ ವಿಶೇಷತೆಗಳು ಮಾತ್ರ ಇರುತ್ತವೆ. ವಿಕೃತಿ ಯಾಗದ ವಿಶೇಷತೆಗಳನ್ನು ಬಿಟ್ಟರೆ ಉಳಿದೆಲ್ಲವೂ ಪ್ರಕೃತಿಯಾಗದಂತೆಯೇ ಎಂದು ತಿಳಿಯಬೇಕು.

ಯಜ್ಞಗಳ ಮುಖ್ಯ ಭೇದಗಳನ್ನೂ ಅವುಗಳ ಪ್ರಕೃತಿ ವಿಕೃತಿಗಳನ್ನೂ ಈ ಕೆಳಗಿನ ಕೋಷ್ಟಕದ ಮೂಲಕ ವಿವರಿಸಲು ಯತ್ನಿಸಲಾಗಿದೆ.

## ಯಜ್ಞಗಳು

೧) ಐಷ್ಟಿಕ ೨)ಪಾಶುಕ ೩) ಸೌಮಿಕ

### ೧ ಐಷ್ಟಿಕ

| ಪ್ರಕೃತಿ | ವಿಕೃತಿ |
|---|---|
| ದರ್ಶ-ಪೂರ್ಣಮಾಸ | ಎಲ್ಲ ಕಾಮ್ಯೇಷ್ಟಿಗಳು |

### ೨ ಪಾಶುಕ

| ಪ್ರಕೃತಿ | ವಿಕೃತಿ |
|---|---|
| ನಿರೂಢ ಪಶುಬಂಧ | ಎಲ್ಲ ಕಾಮ್ಯಪಶುಬಂಧಗಳು |

### ೩ ಸೌಮಿಕ

| ಪ್ರಕೃತಿ | ವಿಕೃತಿ |
|---|---|
| ೧) ಜ್ಯೋತಿಷ್ಟೋಮ-ಅಗ್ನಿಷ್ಟೋಮ (ಏಕಾಹ) | ೧) ಅಹೀನಗಳು |
| ೨) ದ್ವಾದಶರಾತ್ರ | ೨) ಸತ್ರಗಳು |
| ೩) ಗವಾಮಯನ | ೩) ಅಯನಗಳು |

ವೇದದಲ್ಲಿ ನಿರೂಪಿತವಾಗಿರುವ ಎಲ್ಲ ಕಾಮ್ಯೇಷ್ಟಿಗಳನ್ನೂ ಕಾಮ್ಯ ಪಶುಬಂಧಗಳನ್ನೂ, ಅಹೀನಗಳನ್ನೂ, ಸತ್ರಗಳನ್ನೂ ಮತ್ತು ಅಯನ ಗಳನ್ನೂ ಸಂಗ್ರಹಿಸಿ ಅನುಬಂಧ-೨ ರಲ್ಲಿ ನೀಡಲಾಗಿದೆ.

ಹೀಗೆ ಪ್ರಕೃತಿ-ವಿಕೃತಿ ಭೇದದಿಂದ ನೂರಾರು ಯಾಗಗಳು ವೇದದಲ್ಲಿ ವಿಹಿತವಾಗಿವೆ. ಹವಿಸ್ಸಿನಿಂದ ನಡೆಯುವ ಕಲಾಪವನ್ನು **ಯಜ್ಞ** ಎಂದು



ಹೆಸರಿಸುತ್ತೇವಾದರೂ ಬೋಧಾಯನಗೃಹ್ಯಸೂತ್ರದಲ್ಲಿ **ಯಜ್ಞ** ಎಂಬ ಪದವನ್ನು ಸ್ವಾಧ್ಯಾಯಯಜ್ಞ, ಜಪಯಜ್ಞ, ಕರ್ಮಯಜ್ಞ ಮತ್ತು ಮಾನಸ ಯಜ್ಞ ಎಂಬುದಾಗಿ ವ್ಯಾಪಕವಾದ ಅರ್ಥದಲ್ಲಿ ಬಳಸಿರುವುದು ಕಂಡು ಬರುತ್ತದೆ. ವೇದಾಧ್ಯಯನವನ್ನೂ, ಜಪವನ್ನೂ, ಧ್ಯಾನವನ್ನೂ ಯಜ್ಞವೆಂದೇ ಪರಿಗಣಿಸಿ ಬೋಧಾಯನರು ನಿರ್ದೇಶಿಸಿರುತ್ತಾರೆ. ಸ್ವಾಧ್ಯಾಯಯಜ್ಞ, ಜಪ ಯಜ್ಞ, ಕರ್ಮಯಜ್ಞ ಮತ್ತು ಮಾನಸಯಜ್ಞಗಳು - ಒಂದಕ್ಕಿಂತ ಒಂದು ಕ್ರಮವಾಗಿ ಹತ್ತು ಪಟ್ಟು ಫಲವನ್ನು ನೀಡುವುದಾಗಿರುತ್ತವೆಯೆಂದು ಒಂದೆಯೇ ತಿಳಿಸಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

## ಋತ್ವಿಜರು

ಯಜ್ಞವನ್ನು ನಿರ್ವಹಿಸುವುದು ಅತಿ ಕಠಿನವಾದ ಕಾರ್ಯ. ನಮ್ಮ ದಿನಬಳಕೆಯ ವ್ಯವಹಾರದಲ್ಲಿಯೂ 'ದೊಡ್ಡ ಯಜ್ಞವನ್ನು ಮಾಡಿದಂತಾ ಯಿತು ಎಂಬ ಮಾತೂ ಯಜ್ಞದ ನಿರ್ವಹಣೆಯು ಅತಿ ಕಠಿನವೆಂಬುದನ್ನು ಸೂಚಿಸುತ್ತದೆ. ಯಜ್ಞವನ್ನು ನಡೆಸಬೇಕೆಂಬುದು ಯಜಮಾನನ ಸಂಕಲ್ಪವಾ ದರೂ ಪ್ರತ್ಯಕ್ಷವಾಗಿ ಯಜ್ಞದ ಎಲ್ಲ ಕಾರ್ಯಗಳನ್ನೂ ನಿರ್ವಹಿಸುವವರು ಋತ್ವಿಜರು.

**ಋತೌ ವಸಂತಾದಿಕಾಲೇ ಯಜಂತಿ ಇತಿ ಋತ್ವಿಜಃ |**

ಎಂಬ ವಿವರಣೆಯಂತೆ ವಸಂತವೇ ಮೊದಲಾದ ಕಾಲದಲ್ಲಿ ಮಾಡುವ ಸೋಮವೇ ಮೊದಲಾದ ಯಾಗಗಳಲ್ಲಿ ಯಜಮಾನನಿಗೋಸ್ಕರವಾಗಿ ಯಜಮಾನನು ಕೊಡುವ ದಕ್ಷಿಣೆಯಿಂದ ಪ್ರೀತರಾಗಿ ಯಾಗಮಾಡುವವರು ಋತ್ವಿಜರು. ವಸಂತವೇ ಮೊದಲಾದ ಋತುಗಳಲ್ಲಿ ಯಾಗಮಾಡುವವರೇ ಋತ್ವಿಜರು ಎಂದೇನೂ ಅಲ್ಲ. ಯಾವ ಯಾಗಕ್ಕಾಗಿಯಾಗಲೀ ಯಾವ ಕಾಲ ದಲ್ಲಿಯಾಗಲೀ ಯಜಮಾನನಿಗಾಗಿ ದಕ್ಷಿಣಾನತರಾಗಿ ಅಂದರೆ ದಕ್ಷಿಣೆಯಿಂದ ಪ್ರೀತರಾಗಿ ಯಾಗವನ್ನು ನಿರ್ವಹಿಸುವವರು ಋತ್ವಿಜರು. ಎಲ್ಲ ಯಾಗಗಳಿಗೂ ದಕ್ಷಿಣೆಯು ಇದ್ದರೂ ಸತ್ರಯಾಗಕ್ಕೆ ದಕ್ಷಿಣೆಯು ಇಲ್ಲ.

ಯಜ್ಞಗಳನ್ನು ನಿರ್ವಹಿಸಲು ಮುಖ್ಯವಾಗಿರುವ ನಾಲ್ವರು ಋತ್ವಿಜರು ಹೋತಾ, ಅಧ್ವರ್ಯು, ಉದ್ಗಾತಾ ಮತ್ತು ಬ್ರಹ್ಮಾ. ವೇದದಲ್ಲಿಯೇ ಯಾವ



ಯಾವ ಯಜ್ಞಗಳಿಗೆ ಎಷ್ಟೆಷ್ಟು ಋತ್ವಿಜರು ಇರುತ್ತಾರೆಂಬುದು ಸೂಚಿತ ವಾಗಿದೆ. ಅಗ್ನಿಹೋತ್ರದಿಂದ ಮೊದಲುಗೊಂಡು ಸೋಮಯಾಗದವರೆಗೆ ಯಾಗಗಳನ್ನು ಅನುಷ್ಠಿಸಲು ಅಗತ್ಯವಾದ ಋತ್ವಿಜರು ಹೀಗಿರುತ್ತಾರೆ.

**ತಸ್ಮಾದಗ್ನಿಹೋತ್ರಸ್ಯ ಯಜ್ಞಕ್ರತೋಃ । ಏಕ ಋತ್ವಿಕ್ ।**

ಎಂಬ ಮಾತಿನಂತೆ ಅಗ್ನಿಹೋತ್ರವನ್ನನುಷ್ಠಿಸಲು ಅಧ್ವರ್ಯುವೆಂಬ ಒಬ್ಬ ಋತ್ವಿಜನು ಸಾಕು.

**... ...ದರ್ಶಪೂರ್ಣಮಾಸಯೋರ್ಯಜ್ಞಕ್ರತೋಃ । ಚತ್ವಾರ ಋತ್ವಿಜಃ ।**

ಎಂಬ ವಚನದಂತೆ ದರ್ಶ ಮತ್ತು ಪೂರ್ಣಮಾಸೇಷ್ಟಿಗಳನ್ನು ಅನುಷ್ಠಿಸಲು ಅಧ್ವರ್ಯು, ಬ್ರಹ್ಮಾ, ಹೋತಾ ಮತ್ತು ಆಗ್ನೀಧ್ರ ಎಂಬ ನಾಲ್ವರು ಋತ್ವಿಜರು.

**... ...ಚಾತುರ್ಮಾಸ್ಯಾನಾಂ ಯಜ್ಞಕ್ರತೋಃ । ಪಂಚರ್ತ್ವಿಜಃ ।**

ಎಂಬಂತೆ ಚಾತುರ್ಮಾಸ್ಯೇಷ್ಟಿಯಲ್ಲಿ ಹಿಂದಿನ ನಾಲ್ವರು ಋತ್ವಿಜರೊಡನೆ ಅಧ್ವರ್ಯುಗಣದ ಪ್ರತಿಪ್ರಸ್ಥಾತನು ಸೇರಿ ಐವರು ಋತ್ವಿಜರು.

**... ...ಪಶುಬಂಧಸ್ಯ ಯಜ್ಞಕ್ರತೋಃ । ಷಡೃತ್ವಿಜಃ ।**

ಎಂಬಂತೆ ನಿರೂಢಪಶುಬಂಧಯಾಗವನ್ನು ಅನುಷ್ಠಿಸಲು ಹಿಂದೆ ಹೇಳಿದ ಐವರು ಋತ್ವಿಜರೊಡನೆ ಹೋತೃಗಣದ ಮೈತ್ರಾವರುಣನೂ ಸೇರಿ ಆರು ಋತ್ವಿಜರು.

ಸೋಮಯಾಗದಲ್ಲಿ ಹದಿನಾರು ಮಂದಿ ಋತ್ವಿಜರು. ಪ್ರಧಾನ ಋತ್ವಿಜರಾದ ಅಧ್ವರ್ಯು, ಹೋತಾ, ಉದ್ಗಾತಾ, ಬ್ರಹ್ಮಾ ಈ ನಾಲ್ವರ ಒಂದೊಂದು ಗಣದಲ್ಲಿ ಇತರ ಮೂವರು ಋತ್ವಿಜರು ಸೇರಿಕೊಳ್ಳುತ್ತಾರೆ. ಹೀಗಾಗಿ ಒಟ್ಟು ಹದಿನಾರು ಋತ್ವಿಜರು ಸೋಮಯಾಗದಲ್ಲಿರುತ್ತಾರೆ. ಅಧ್ವರ್ಯುಗಣದಲ್ಲಿ ೧. ಅಧ್ವರ್ಯು ೨. ಪ್ರತಿಪ್ರಸ್ಥಾತಾ ೩. ನೇಷ್ಟಾ ೪. ಉನ್ನೇತಾ ಈ ನಾಲ್ವರೂ; ಹೋತೃಗಣದಲ್ಲಿ ೧. ಹೋತಾ ೨. ಮೈತ್ರಾವರುಣ



೩. ಅಚ್ಛಾವಾಕ ೪. ಗ್ರಾವಸ್ತುತ್ ಈ ನಾಲ್ವರೂ; ಉದ್ಗಾತೃಗಣದಲ್ಲಿ ೧. ಉದ್ಗಾತಾ ೨. ಪ್ರಸ್ತೋತಾ ೩. ಪ್ರತಿಹರ್ತಾ ೪. ಸುಬ್ರಹ್ಮಣ್ಯ ಈ ನಾಲ್ವರೂ ಮತ್ತು ಬ್ರಹ್ಮಗಣದಲ್ಲಿ ೧. ಬ್ರಹ್ಮಾ ೨. ಬ್ರಾಹ್ಮಣಾಚ್ಛಂಸೀ ೩.ಆಗ್ನೀಧ್ರ ೪. ಪೋತಾ ಎಂಬ ಋತ್ವಿಜರಿರುತ್ತಾರೆ. ಈ ನಾಲ್ಕೂ ಗಣದಲ್ಲಿ ಮೊದಲನೆಯವರಾದ ಅಧ್ವರ್ಯು, ಹೋತಾ, ಉದ್ಗಾತಾ ಮತ್ತು ಬ್ರಹ್ಮಾ ಈ ನಾಲ್ವರಿಗೆ ಮಹರ್ತ್ವಿಜರೆಂದು ಹೆಸರು. ಎರಡನೆಯವರಾದ ಪ್ರತಿ ಪ್ರಸ್ಥಾತಾ, ಮೈತ್ರಾವರುಣ, ಪ್ರಸ್ತೋತಾ ಮತ್ತು ಬ್ರಾಹ್ಮಣಾಚ್ಛಂಸೀ ಈ ನಾಲ್ವರಿಗೆ ಅರ್ಧಿಗಳೆಂದೂ, ಮೂರನೆಯವರಾದ ನೇಷ್ಟಾ, ಅಚ್ಛಾವಾಕ, ಪ್ರತಿ ಹರ್ತಾ ಮತ್ತು ಆಗ್ನೀಧ್ರರಿಗೆ ತೃತೀಯಿಗಳೆಂದೂ ಮತ್ತು ನಾಲ್ಕನೆಯವರಾದ ಉನ್ನೇತಾ, ಗ್ರಾವಸ್ತುತ್, ಸುಬ್ರಹ್ಮಣ್ಯ ಮತ್ತು ಪೋತಾ ಇವರಿಗೆ ಪಾದಿಗಳೆಂದೂ ಹೆಸರು. ಮಹರ್ತ್ವಿಜರು ಮುಖ್ಯರಾದುದರಿಂದ ಅವರನ್ನು ಮಹರ್ತ್ವಿಜರೆಂದು ಹೇಳಲಾಗಿದೆ. ಅರ್ಧಿಗಳೆಂದರೆ ಯಜ್ಞದಲ್ಲಿ ಆಯಾ ಗಣ ದಲ್ಲಿ ಕಾರ್ಯವನ್ನು ನಿರ್ವಹಿಸಿ ಮಹರ್ತ್ವಿಜರು ಪಡೆಯುವ ದಕ್ಷಿಣೆಯ ಅರ್ಧದಷ್ಟು ದಕ್ಷಿಣೆಯನ್ನು ಪಡೆಯುವವರು. ಆದುದರಿಂದ ಅವರನ್ನು ಅರ್ಧಿಗಳೆನ್ನುತ್ತಾರೆ. ತೃತೀಯಿಗಳೆಂದರೆ ಮಹರ್ತ್ವಿಜರು ಪಡೆಯುವ ದಕ್ಷಿಣೆಯ ಮೂರನೇ ಒಂದು ಭಾಗದಷ್ಟು ದಕ್ಷಿಣೆಗೆ ಭಾಗಿಗಳು. ಪಾದಿಗಳೆಂದರೆ ಮಹರ್ತ್ವಿಜರು ಪಡೆಯುವ ನಾಲ್ಕನೇ ಒಂದು ಭಾಗದಷ್ಟು ದಕ್ಷಿಣೆಗೆ ಭಾಗಿಗಳು. ಆದುದರಿಂದ ಅವರಿಗೆ ಪಾದಿಗಳೆಂದು ಹೆಸರು.

**ಸ್ವಾಮಿಸಪ್ತದಶಾಃ ಕರ್ಮಸಾಮಾನ್ಯಾತ್**

— ಜೈಮಿನಿಸೂತ್ರ

ಎಂಬಂತೆ ಯಾಗವನ್ನು ನಡೆಸುವ ಯಜಮಾನನೊಡನೆ ಸೋಮ ಯಾಗದಲ್ಲಿ ಹದಿನಾರು ಜನ ಋತ್ವಿಜರು. ಹದಿನೇಳನೆಯವನನ್ನಾಗಿ ಸದಸ್ಯ ನನ್ನು ಇಟ್ಟುಕೊಳ್ಳುವುದೂ ಉಂಟು.

ಈ ಋತ್ವಿಜರ ಗುಂಪಲ್ಲದೆ ಸೋಮಯಾಗದಲ್ಲಿ ಚಮಸಾಧ್ವರ್ಯು ಗಳೆಂಬ ಸಹಾಯಕರೂ ಇರುತ್ತಾರೆ. ಅಭಿಗರ, ಧ್ರುವಗೋಪ, ಸಗ್ಗ್ ಶ್ರಾವ ಈ



ಮೂವರೂ ಸಹಾಯಕರೇ. ಈ ಸಹಾಯಕರಿಗೆ ಕ್ರತುದಕ್ಷಿಣೆಯು ಸಲ್ಲುವುದಿಲ್ಲ. ಬೇರೆಯೇ ಇರುತ್ತದೆ.

ಯಾಗದ ಋತ್ವಿಜರ ಸಮೂಹವನ್ನು ಈ ಕೋಷ್ಟಕದಿಂದ ತಿಳಿಯಬಹುದು.

| **ಮಹರ್ತ್ವಿಜರು** | **ಅರ್ಧಿಗಳು** | **ತೃತೀಯಿಗಳು** | **ಪಾದಿಗಳು** |
|---|---|---|---|
| ಅಧ್ವರ್ಯು | ಪ್ರತಿಪ್ರಸ್ಥಾತಾ | ನೇಷ್ಟಾ | ಉನ್ನೇತಾ |
| ಹೋತಾ | ಮೈತ್ರಾವರುಣ | ಅಚ್ಛಾವಾಕ | ಗ್ರಾವಸ್ತುತ್ |
| ಉದ್ಗಾತಾ | ಪ್ರಸ್ತೋತಾ | ಪ್ರತಿಹರ್ತಾ | ಸುಬ್ರಹ್ಮಣ್ಯ |
| ಬ್ರಹ್ಮಾ | ಬ್ರಾಹ್ಮಣಾಚ್ಛಂಸೀ | ಆಗ್ನೀಧ್ರ | ಪೋತಾ |

ಅರ್ಧಿಗಳಿಗೆ ದ್ವಿತೀಯಿಗಳೆಂಬ ಹೆಸರೂ ಇದೆ.

ಋತ್ವಿಜರ ಲಕ್ಷಣಗಳು

**ಋತ್ವಿಜೋ ವೃಣೀತೇ ಯೂನಃ ಸ್ಥವಿರಾನ್ ವಾ ಅನೂಚಾನಾನ್ ಊರ್ಧ್ವವಾಚಃ ಅನಂಗಹೀನಾನ್ ।**

— ಆಪಸ್ತಂಬಶ್ರೌತಸೂತ್ರ. 10.1.1

ಎಂಬ ಶ್ರೌತಸೂತ್ರದಂತೆ ತರುಣರಾದಂತಹವರೂ, ಪರಂಪರೆಯಿಂದ ಅಧ್ಯಯನವನ್ನು ಮಾಡಿರುವವರೂ, ಶಾರೀರ ಊನತೆಯಿಲ್ಲದವರೂ ಆದ ಋತ್ವಿಜರನ್ನು ಯಜ್ಞಕರ್ಮಕ್ಕಾಗಿ ನಿಯೋಜಿಸಬೇಕು. ವೃದ್ಧರಾದವರ ನಿಯುಕ್ತಿಯೂ ಸಹ ತಪ್ಪಲ್ಲ.

ಇದಲ್ಲದೆ ಬೋಧಾಯನಶ್ರೌತಸೂತ್ರದ ಎರಡನೆಯ ಪ್ರಶ್ನೆಯ ಎರಡನೆಯ ಅಧ್ಯಾಯದಲ್ಲಿ ಯಜ್ಞಕ್ಕೆ ನಿಯೋಜಿಸಬೇಕಾಗಿರುವ ಋತ್ವಿಜರ ಲಕ್ಷಣಗಳನ್ನು ವಿಸ್ತಾರವಾಗಿ ಹೇಳಲಾಗಿದೆ.

**ಬ್ರಾಹ್ಮಣಾ ಋತ್ವಿಜೋ ಯೋನಿಗೋತ್ರಶ್ರುತವೃತ್ತಸಂಪನ್ನಾ ಅವಿಗುಣಾಂಗಾ ಅತ್ರಿಕಿಣಿನಃ**

— ಬೋಧಾಯನ ಶ್ರೌತಸೂತ್ರ. 2.2.1



ಜನ್ಮದಿಂದ, ವಂಶದಿಂದ, ವಿದ್ಯೆಯಿಂದ ಮತ್ತು ಆಚಾರದಿಂದ ಪ್ರಶಸ್ತರೂ, ಶರೀರದಾರ್ಢ್ಯವುಳ್ಳವರೂ (ಅವಯವಗಳ ಊನತೆಯಿಲ್ಲದವರು)ಆದ ಬ್ರಾಹ್ಮಣರು ಋತ್ವಿಜರೆನಿಸಿಕೊಳ್ಳುವರು. ಈ ಲಕ್ಷಣಗಳಲ್ಲದೆ ನಾಲ್ಕಾರು ಸೂತ್ರಗಳಿಂದ ಬೋಧಾಯನರು ಇನ್ನೂ ಅನೇಕ ಲಕ್ಷಣಗಳು ಋತ್ವಿಜರಿಗೆ ಇರಬೇಕೆಂದು ಹೇಳಿದ್ದಾರೆ. ಋತ್ವಿಜನು ವೇದವೇತ್ತರು ಮಾಡಿರುವ ನಿಯಮಗಳನ್ನು ಮೀರಿರಬಾರದು. ನಿಷಿದ್ಧವಾದ ಪ್ರದೇಶದಲ್ಲಿ ಸಂಚಾರ ಮಾಡಿರಬಾರದು. ಷಡಂಗಸಹಿತವಾದ ವೇದಾಧ್ಯಯನವನ್ನು ಮಾಡಿರಬೇಕು. ಉಣ್ಣೆ ಮೊದಲಾದವನ್ನು ಮಾರುವವನಾಗಿರಬಾರದು. ತನ್ನ ತಮ್ಮನಿಗಿಂತಲೂ ಗುಣಗಳಲ್ಲಿ ಕಡಿಮೆಯಾದವನಾಗಿರಬಾರದು. ಹೀಗೆ ಅನೇಕ ಲಕ್ಷಣಗಳನ್ನು ಹೇಳಿದ್ದಾರೆ. ಬೋಧಾಯನರು ನಿರ್ದಿಷ್ಟನಾದ ಋತ್ವಿಜನಿಗೆ ನಿರ್ದಿಷ್ಟಗೋತ್ರವನ್ನು ಸೂಚಿಸಿದ್ದಾರೆ. ಯಜ್ಞದಲ್ಲಿ ಆಂಗಿರಸ ಗೋತ್ರದವನು ಅಧ್ವರ್ಯುವಾಗಿಯೂ, ವಾಸಿಷ್ಠ ಗೋತ್ರದವನು ಬ್ರಹ್ಮನಾಗಿಯೂ, ವೈಶ್ವಾಮಿತ್ರ ಗೋತ್ರದವನು ಹೋತೃವಾಗಿಯೂ, ಆಯಾಸ್ಯ ಗೋತ್ರದವನು ಉದ್ಗಾತೃವಾಗಿಯೂ, ಕೌಷೀತಕ ಗೋತ್ರದವನು ಸದಸ್ಯನಾಗಿಯೂ ಇರಬೇಕು. ಈ ಮುಖ್ಯರಾದ ಋತ್ವಿಜರಲ್ಲದೆ ಅರ್ಧಿಗಳು, ತೃತೀಯಿಗಳು ಮತ್ತು ಪಾದಿಗಳು ಭೃಗುಗೋತ್ರದವರಾಗಲೀ ಅಥವಾ ಆಂಗಿರಸ ಗೋತ್ರದವರಾಗಲೀ ಆಗಿರಬಹುದು. ಈ ರೀತಿ ನಿರ್ದಿಷ್ಟ ಋತ್ವಿಜರಿಗೆ ನಿರ್ದಿಷ್ಟವಾದ ಗೋತ್ರವನ್ನು ಹೇಳುವ ಸೂತ್ರವು ಹೀಗಿದೆ.

**... ...ಆಂಗಿರಸೋಽಧ್ವರ್ಯುರ್ವಾಸಿಷ್ಠೋ ಬ್ರಹ್ಮಾ ವೈಶ್ವಾಮಿತ್ರೋ ಹೋತಾಽಽಯಾಸ್ಯ ಉದ್ಗಾತಾ ಕೌಷೀತಕಸ್ಸದಸ್ಯ:।**

— ಬೋಧಾಯನ ಶ್ರೌತಸೂತ್ರ. 2.2.5

ನಿರ್ದಿಷ್ಟರಾದ ಋತ್ವಿಜರು ನಿರ್ದಿಷ್ಟ ಗೋತ್ರದವರಾಗಿರಬೇಕೆಂದು ಹಿಂದಿನ ಸೂತ್ರವು ಹೇಳಿದರೂ ಬೋಧಾಯನರು:

**ಯೋನಿರ್ವೃತ್ತಂ ವಿದ್ಯಾ ಚ ಪ್ರಮಾಣಮಿತ್ಯೇಕೇ।**

— ಬೋಧಾಯನ ಶ್ರೌತಸೂತ್ರ. 2.2.7.



ಶುದ್ಧಕುಲದಲ್ಲಿ ಜನಿಸಿ, ಶಾಸ್ತ್ರೀಯ ನಡವಳಿಕೆಗಳಿಂದ ಕೂಡಿದ್ದು, ವಿದ್ಯಾ ಸಂಪನ್ನನಾಗಿರುವುದೇ ಋತ್ವಿಜನ ಲಕ್ಷಣವೆಂದೂ, ಇಂತಹ ಗೋತ್ರದವರೇ ಇಂತಹ ಋತ್ವಿಜರಾಗಬೇಕೆಂದು ನಿರ್ಬಂಧವಿಲ್ಲವೆಂಬ ಮತವನ್ನೂ ತಿಳಿಸಿದ್ದಾರೆ.

ಈ ರೀತಿ ಜನ್ಮ, ನಡತೆ ಮತ್ತು ವಿದ್ಯೆಗಳಿಂದ ಋತ್ವಿಜರನ್ನು ಆಯ್ದು ಕೊಳ್ಳುವಾಗಲೂ ಅವರು ಅವಯವಗಳ ಊನತೆಯಿಂದ ಮಾತ್ರ ಕೂಡಿರಲೇ ಬಾರದು.

**ತಾಂಶ್ಚೇತ್ ವೃಣೀತಾವ್ಯಾಪನ್ನಾಂಗಾನೇವ ವೃಣೀತ।**

— ಬೋಧಾಯನ ಶ್ರೌತಸೂತ್ರ. 2.2.8.

ಇದಲ್ಲದೆ ಮಹರ್ತ್ವಿಜರಾದ ಅಧ್ವರ್ಯು, ಬ್ರಹ್ಮಾ, ಹೋತಾ, ಉದ್ಗಾತಾ ಮತ್ತು ಸದಸ್ಯರಿಗೆ ವಿಶೇಷ ಲಕ್ಷಣಗಳನ್ನೂ ಬೋಧಾಯನರು ಹೇಳಿದ್ದಾರೆ.

**ಅಕುನಖಿನಮಧ್ವರ್ಯುಮಕಿಲಾಸಿನಂ ಬ್ರಹ್ಮಾಣಮಖಂಡಗಂ ಹೋತಾರಮಕರಾಲಮುದ್ಗಾತಾರಮಶಿಪಿವಿಷ್ಟಂ ಸದಸ್ಯಮ್।**

— ಬೋಧಾಯನ ಶ್ರೌತಸೂತ್ರ. 2.2.9.

ಅಧ್ವರ್ಯುವು ಕುನಖಿಯಾಗಿರಬಾರದು. (ಉಗುರಿನ ವ್ಯಾಧಿಯಿಂದ ವಿಕೃತ ವಾದ ಉಗುರುಳ್ಳವನಾಗಿರಬಾರದು). ಬ್ರಹ್ಮನು ಕುಷ್ಠರೋಗಿಯಾಗಿರ ಬಾರದು. ಹೋತೃವು ಮುರಿದ ಹಲ್ಲುಳ್ಳವನಾಗಲಿ, ಹರಿದ ತುಟಿಯುವನಾಗಲಿ ಆಗಿರಬಾರದು. ಉದ್ಗಾತೃವು ಹಲ್ಲುಬ್ಬಿದವನಾಗಿರಬಾರದು. ಸದಸ್ಯನು ವ್ಯಾಧಿಯಿಂದ ಬೊಕ್ಕತಲೆಯುವನಾಗಿರಬಾರದು. ಚರ್ಮವ್ಯಾಧಿಯುಳ್ಳವ ನಾಗಿರಬಾರದು.

ಹೀಗೆ ಕೃಷ್ಣಯಜುರ್ವೇದದ ಸೂತ್ರಕಾರರಾದ ಆಪಸ್ತಂಬರು ಮತ್ತು ಬೋಧಾಯನರು ಯಜ್ಞವನ್ನನುಷ್ಠಿಸಲು ಆರಿಸಿಕೊಳ್ಳಬೇಕಾದ ಋತ್ವಿಜರಿಗೆ ಲಕ್ಷಣಗಳನ್ನು ಹೇಳಿದ್ದಾರೆ.



## ಯಜ್ಞಪಾತ್ರೆಗಳು

ಯಜ್ಞವನ್ನು ಅನುಷ್ಠಿಸಲು ಅನೇಕ ಪಾತ್ರೆಗಳನ್ನು ಬಳಸುತ್ತಾರೆ. ಈ ಪಾತ್ರೆಗಳನ್ನು ನಿರ್ದಿಷ್ಟವಾದ ವೃಕ್ಷದಿಂದಲೇ ತಯಾರಿಸಬೇಕೆಂಬ ನಿಯಮವಿದೆ. ಶ್ರುತಿಯಲ್ಲಿಯೇ ಯಜ್ಞಪಾತ್ರೆಗಳು ಸಾಧಾರಣವಾಗಿ ಎಷ್ಟಿರುತ್ತವೆಯೆಂಬುದನ್ನು ತಿಳಿಸಲಾಗಿದೆ.

**... ...ಸ್ಫ್ಯಶ್ಚ ಕಪಾಲಾನಿ ಚಾಗ್ನಿಹೋತ್ರಹವಣೀ ಚ ಶೂರ್ಪಂ ಚ ಕೃಷ್ಣಾಜಿನಂ ಚ ಶಮ್ಯಾಚೋಲೂಖಲಂ ಚ ಮುಸಲಂ ಚ ದೃಷಚ್ಚೋಪಲಾ ಚೈತಾನಿ ವೈ ದಶ ಯಜ್ಞಾಯುಧಾನಿ॥**

— ತೈ.ಸಂ. 1.6.8

ಈ ರೀತಿ ಶ್ರುತಿಯಲ್ಲಿಯೇ ಯಜ್ಞಪಾತ್ರೆಗಳು ನಿರ್ದೇಶಿಸಲ್ಪಟ್ಟಿವೆ. ಈ ಯಜ್ಞಪಾತ್ರೆಗಳು ಮಾತ್ರವಲ್ಲದೆ ಯಜ್ಞಗಳಲ್ಲಿ ಉಪಯೋಗಿಸಬೇಕಾಗಿರುವ ಇತರ ಯಜ್ಞಪಾತ್ರೆಗಳನ್ನೂ ಆಪಸ್ತಂಬರೂ, ಬೋಧಾಯನರೂ ನಿರ್ದೇಶಿಸಿದ್ದಾರೆ. ಶ್ರುತಿಯು ಹೇಳಿರುವ ಯಜ್ಞಪಾತ್ರೆಗಳ ಜೊತೆಯಲ್ಲಿ ಆಪಸ್ತಂಬರು:

**... ... ಯಥಾಮ್ನಾತಮಪರಾಣಿ ಪ್ರಯುಜ್ಯ ಸ್ರುವಂ ಜುಹೂಮುಪಭೃತಂ ಧ್ರುವಾಂ ವೇದಂ ಪಾತ್ರೀಮಾಜ್ಯಸ್ಥಾಲೀಂ ಪ್ರಾಶಿತ್ರಹರಣಮಿಡಾಪಾತ್ರಂ ಪ್ರಣೀತಾಪ್ರಣಯನಮಿತಿ ಪೂರ್ವಾಣಿ ತಾನ್ಯುತ್ತರೇಣ ಅವಶಿಷ್ಟಾನಿ ಅನ್ವಾಹಾರ್ಯಸ್ಥಾಲೀಂ ಅಶ್ಮಾನಂ ಉಪವೇಷಂ ಪ್ರಾತರ್ದೋಹಪಾತ್ರಾಣಿ॥**

ಎಂಬುದಾಗಿ ಈ ಯಜ್ಞಪಾತ್ರೆಗಳನ್ನು ನಿರ್ದೇಶಿಸಿರುತ್ತಾರೆ. ಶ್ರುತಿಯಲ್ಲಿ ಹೇಳಿರುವ ಮತ್ತು ಆಪಸ್ತಂಬರು ಹೇಳಿರುವ ಯಜ್ಞಪಾತ್ರೆಗಳ ಒಂದೊಂದರ ವಿವರಣೆಯೂ ಮುಂದೆ ಇದೆ.

ವೇದದಲ್ಲಿ ನಿರ್ದೇಶಿಸಿರುವ ಯಜ್ಞಪಾತ್ರೆಗಳು ದರ್ಶ ಮತ್ತು ಪೂರ್ಣಮಾಸೇಷ್ಟಿಗಳಲ್ಲಿ ಉಪಯೋಗಿಸುವ ಪಾತ್ರೆಗಳಾಗಿವೆ. ಯಜ್ಞಗಳನ್ನು



ನಡೆಸಲು ಆಯುಧಗಳಂತೆ ಸಾಧನಗಳಾದುದರಿಂದ ಇವುಗಳಿಗೆ **ಯಜ್ಞಾಯುಧ** ಎಂದೂ ಹೆಸರು. ಈ ಯಜ್ಞಾಯುಧಗಳ ಆಕಾರವೂ, ಅವುಗಳಿಂದ ಮಾಡಬೇಕಾದ ಕಾರ್ಯಗಳೂ ಅನೇಕ. ಅವುಗಳಿಗೆ ನಿರ್ದಿಷ್ಟವಾದ ಪ್ರಮಾಣವೂ ಇರುತ್ತದೆ.

## ಯಜ್ಞಪಾತ್ರೆಗಳ ವಿವರ

**೧. ಸ್ಫ್ಯ:**

ಇದು ೪ ಅಂಗುಲ ಅಗಲ, ೨೪ ಅಂಗುಲ ಉದ್ದ ಇದ್ದು ಖದಿರವೃಕ್ಷದಿಂದ (ಕಗ್ಗಲಿ) ತಯಾರಿಸಿದ ಖಡ್ಗದ ಆಕೃತಿಯುಳ್ಳದ್ದು.

**೨. ಕಪಾಲಾನಿ (ಕಪಾಲಗಳು):**

ಇವು ಮಣ್ಣಿನಿಂದ ತಯಾರಿಸಲ್ಪಟ್ಟು ಇಟ್ಟಿಗೆಯಂತೆ ಬೆಂಕಿಯಲ್ಲಿ ಸುಟ್ಟು ನಿರ್ಮಿಸಿದ ಎರಡು ಅಂಗುಲ ಚೌಕದ ವಸ್ತುಗಳು. ಪುರೋಡಾಶವನ್ನು ಮಾಡುವುದಕ್ಕಾಗಿ ಹಿಟ್ಟನ್ನು ಕಲಸಿ ಅಗ್ನಿಯ ಕೆಂಡದ ಮೇಲಿರುವ ಈ ಕಪಾಲಗಳ ಮೇಲೆ ಹಾಕಬೇಕು. ಇವು ಪುರೋಡಾಶವನ್ನು ಪಚನ ಮಾಡುವ ಸಾಧನಗಳು.

**೩. ಅಗ್ನಿಹೋತ್ರಹವಣೀ:**

೨೪ ಅಂಗುಲ ಉದ್ದವಿದ್ದು, ೪ ಅಂಗುಲ ಎತ್ತರ, ೪ ಅಂಗುಲ ಅಗಲ, ೪ ಅಂಗುಲ ರಂಧ್ರವಿದ್ದು ವಿಕಂಕತ (ನಾಯಿಬೇಲ) ವೃಕ್ಷದಿಂದ ತಯಾರಿಸಿದ ಸಾಧನ. ಇದರಿಂದ ಅಗ್ನಿಹೋತ್ರಹೋಮವನ್ನು ಮಾಡುವುದರಿಂದ ಇದಕ್ಕೆ ಅಗ್ನಿಹೋತ್ರಹವಣೀ ಎಂದು ಹೆಸರು.

**೪. ಶೂರ್ಪ(ಮೊರ):**

ಬಿದಿರಿನಿಂದ ಮಾಡಲ್ಪಟ್ಟು ಕೇರುವುದಕ್ಕೆ ಉಪಯೋಗಿಸುವ ಸಾಧನ.

**೫. ಕೃಷ್ಣಾಜಿನ**

ಕೃಷ್ಣಮೃಗಚರ್ಮ (ಜಿಂಕೆಚರ್ಮ)

**೬.ಶಮ್ಯಾ:**

ಕಗ್ಗಲಿ ಮರದಿಂದ ಮಾಡಿದ ೩೬ ಅಂಗುಲ ಉದ್ದವಿರುವ, ಕೊನೆಯ ಭಾಗದ



ಎಂಟು ಅಂಗುಲದಲ್ಲಿ ಮುಕುಟದಂತಿರುವ ವರ್ತುಲಾಕೃತಿಯ ದಂಡಾಕಾರದ ವಸ್ತು.

**೭. ಉಲೂಖಲ (ಒರಳು):**

೧೨ ಅಂಗುಲ ಎತ್ತರದ, ವರ್ತುಲಾಕಾರದ, ಮೇಲ್ಭಾಗದಲ್ಲಿ ಬಿಲವಿರುವ ಬತ್ತವನ್ನು ಕುಟ್ಟುವ ಸಾಧನ. ಮುತ್ತುಗ ಮರದಿಂದ ನಿರ್ಮಿಸಿದುದು.

**೮. ಮುಸಲ:**

೧೮ ಅಂಗುಲ ಉದ್ದದ ಖದಿರವೃಕ್ಷದಿಂದ ನಿರ್ಮಿಸಿದ ಒನಕೆ.

**೯. ದೃಷತ್:**

ಅರೆಯುವಾಗ ಕೆಳಭಾಗದಲ್ಲಿ ಇಟ್ಟುಕೊಳ್ಳುವ ಕಲ್ಲು.

**೧೦. ಉಪಲ:**

ಮೇಲಿನಿಂದ ಅರೆಯಲು ಉಪಯೋಗಿಸುವ ಗುಂಡು.

ವೇದದಲ್ಲಿ ಹೇಳಿದ ಯಜ್ಞಪಾತ್ರೆಗಳ ಜೊತೆಯಲ್ಲಿ ಸೂತ್ರಕಾರರು ತಿಳಿಸಿರುವ ಯಜ್ಞಪಾತ್ರೆಗಳು ಹೀಗಿವೆ. ವೇದದಲ್ಲಿಯೂ ಇವುಗಳ ಹೆಸರು ಬರುತ್ತದೆ.

**೧೧. ಜುಹೂ:**

ಮುತ್ತುಗ ಮರದಿಂದ ತಯಾರಿಸಿದ್ದು, ಅಗ್ನಿಹೋತ್ರಹವಣಿಯಂತಿರುವ ಹೋಮಸಾಧನ.

**೧೨. ಉಪಭೃತ್:**

ಅಶ್ವತ್ಥ ಮರದಿಂದ ಮಾಡಿದ ಜುಹೂವಿನಂತೆಯೇ ಇರುವ ಜುಹೂ ಸಾಧನದ ಜೊತೆಯಲ್ಲಿಯೇ ಉಪಯೋಗಿಸುವ ಪದಾರ್ಥ.

**೧೩. ಸ್ರುವ:**

ಖದಿರ ಮರದಿಂದ ನಿರ್ಮಿತವಾದದ್ದು. ೨೪ ಅಂಗುಲ ಉದ್ದವಿದ್ದು, ಮುಂಭಾಗದಲ್ಲಿ ಅಂಗುಷ್ಠದ ಗೆಣ್ಣಿನಷ್ಟು ಬಿಲವಿರುತ್ತದೆ. ಆಜ್ಯಹೋಮದ ಸಾಧನ.



**೧೪. ಧ್ರುವಾ:**

ವಿಕಂಕತ ಮರದಿಂದ ಮಾಡಿದ ಜುಹೂವಿನ ಆಕಾರ ಮತ್ತು ಪರಿಮಾಣಗಳುಳ್ಳದ್ದು. ವೇದಿಯಲ್ಲಿ ಯಾಗವು ಮುಗಿಯುವವರೆಗೆ ಧ್ರುವ (ಸ್ಥಿರ)ವಾಗಿ ಇರುವುದರಿಂದ ಇದಕ್ಕೆ ಧ್ರುವಾ ಎಂದು ಹೆಸರು.

**೧೫. ಪ್ರಾಶಿತ್ರಹರಣ:**

ಖದಿರ ಮರದಿಂದ ಮಾಡಿದುದು. ೧೨ ಅಂಗುಲ ಪ್ರಮಾಣ. ಅಶ್ವತ್ಥದ ಎಲೆಯ ಆಕಾರವುಳ್ಳದ್ದು. ಋತ್ವಿಜನಾದ ಬ್ರಹ್ಮನಿಗೆ ಹೋಮಶೇಷವಾದ ಪುರೋಡಾಶದ ಭಾಗವನ್ನು (ಪ್ರಾಶಿತ್ರ) ಕೊಡುವ ಸಾಧನ.

**೧೬. ಇಡಾಪಾತ್ರ:**

ಅಶ್ವತ್ಥ ಮರದಿಂದ ಮಾಡಿದುದು. ೪ ಅಂಗುಲ ಅಗಲ, ೨೪ ಅಂಗುಲ ಉದ್ದ, ೪ ಅಂಗುಲ ಎತ್ತರ. ಇಡಾ (ಹೋಮ ಮಾಡಿದ ಹವಿಸ್ಸಿನ ಶೇಷ)ವನ್ನು ಇಡುವ ಪಾತ್ರೆ.

**೧೭. ಪ್ರೋಕ್ಷಣ:**

ಅಶ್ವತ್ಥ ಮರದಿಂದ ಮಾಡಿದುದು. ೨೪ ಅಂಗುಲ ಉದ್ದವಿದ್ದು, ತುದಿಯಲ್ಲಿ ೪ ಅಂಗುಲ ಅಗಲದ ಚೌಕಾಕಾರದ ಹಲಗೆಯಂತಿರುವ ಭಾಗವುಳ್ಳದ್ದು. ಉಳಿದ ೨೦ ಅಂಗುಲ ದಂಡಾಕೃತಿ.

**೧೮. ಪಿಷ್ಟೋದ್ವಪನೀ:**

ಪುರೋಡಾಶದ ಹಿಟ್ಟನ್ನು ಹುರಿಯುವ ಪಾತ್ರೆ. ತಾಮ್ರಲೋಹದಿಂದ ನಿರ್ಮಿತವಾದದ್ದು.

**೧೯. ಪ್ರಣೀತಾಪ್ರಣಯನ:**

ಅಶ್ವತ್ಥ ಮರದಿಂದ ಮಾಡಿದುದು. ೧೨ ಅಂಗುಲ ಉದ್ದ, ೪ ಅಂಗುಲ ಎತ್ತರ, ೪ ಅಂಗುಲ ದಂಡವುಳ್ಳದ್ದು. ೮ ಅಂಗುಲ ಬಿಲವುಳ್ಳದ್ದು. ಈ ರೀತಿಯ ಚೌಕಾಕಾರದ ಪಾತ್ರೆ.

**೨೦. ಆಜ್ಯಸ್ಥಾಲೀ:**

ಆಜ್ಯವನ್ನು ಇಟ್ಟುಕೊಳ್ಳುವುದಕ್ಕೆ ಬೇಕಾಗುವ ಕಂಚಿನ ಪಾತ್ರೆ.



**೨೧. ವೇದ:**
೨೪ ಅಂಗುಲ ದರ್ಭಮುಷ್ಟಿಯನ್ನು ಪ್ರದಕ್ಷಿಣವಾಗಿ ತಿರುಗಿಸಿ ಮಡಿಚಿ ಕಟ್ಟಿದಾಗ ಕುಳಿತ ಕರುವಿನ ಮೊಣಕಾಲಿನ ಆಕಾರದಂತೆ ಆಕಾರವನ್ನು ಪಡೆಯುವ ಯಜ್ಞಸಾಧನ.

**೨೨. ದಾರುಪಾತ್ರೀ:**
ಇಡಾಪಾತ್ರೆಯಂತೆ ಇದ್ದು ೨೪ ಅಂಗುಲ ಉದ್ದವಿರಬೇಕು. ಪುರೋಡಾಶ, ಚರು ಮುಂತಾದ ಹವಿಸ್ಸುಗಳನ್ನು ಇಟ್ಟುಕೊಳ್ಳುವ ಸಾಧನ. ಈ ಪಾತ್ರೆಗೆ ಗುರುತೊಂದನ್ನು ಮಾಡಿ ಇಡಾಪಾತ್ರೆ ಮತ್ತು ದಾರುಪಾತ್ರಿಗಳ ಭೇದವನ್ನು ತಿಳಿಯಬೇಕು.

**೨೩. ಯೋಕ್ತ್ರ:**
ಮೌಂಜೀ ಹುಲ್ಲಿನಿಂದ ತಯಾರಿಸಿದ ಮೂರು ಸಾಲಿನಿಂದ ಹೆಣೆದ ಹಗ್ಗ.

**೨೪. ವೇದಪರಿವಾಸನ:**
ವೇದದ (ಯಜ್ಞಪಾತ್ರೆ-೨೧) ಅಗ್ರಭಾಗವನ್ನು ಕತ್ತರಿಸಿದಾಗ ಉಂಟಾಗುವ ಚೂರುಗಳು.

**೨೫. ಧೃಷ್ಟಿ:**
ಮೋಕ್ಷಣದಂತೆಯೇ ಇದ್ದು ಅಶ್ವತ್ಥ ಮರದಿಂದ ನಿರ್ಮಿಸಿದುದು. ಗಾರ್ಹಪತ್ಯಾಗ್ನಿಯಿಂದ ಅಂಗಾರ (ಕೆಂಡ) ಗಳನ್ನು ತೆಗೆಯಲು ಉಪಯೋಗಿಸುವ ಸಾಧನ.

**೨೬. ಇಧ್ಮಪ್ರವ್ರಶ್ಚನ:**
ಇಧ್ಮವನ್ನು (ಸಮಿತ್ತುಗಳು) ಕಡಿಯುವಾಗ ಉಳಿಯುವ ಸಣ್ಣ ಸಣ್ಣ ಚೂರುಗಳು.

**೨೭. ಅನ್ವಾಹಾರ್ಯಸ್ಥಾಲೀ:**
ನಾಲ್ವರು ಋತ್ವಿಜರ ಭೋಜನಕ್ಕೆ ಸಾಕಾಗುವಷ್ಟು ಅನ್ನವನ್ನು ದಕ್ಷಿಣಾಗ್ನಿಯಲ್ಲಿ ಬೇಯಿಸಲು ಉಪಯೋಗಿಸುವ ಪಾತ್ರೆ. ಪ್ರಧಾನಯಾಗವು ಮುಗಿದ ನಂತರ ಬ್ರಾಹ್ಮಣರಿಗೆ ಬಡಿಸುವುದರಿಂದ ಆ ಅನ್ನಕ್ಕೆ ಅನ್ವಾಹಾರ್ಯ ವೆಂದು ಹೆಸರು.



**೨೮. ಮದಂತೀ:**

ಪುರೋಡಾಶವನ್ನು ಬೇಯಿಸಲು ಬೇಕಾಗುವ ನೀರನ್ನು ಕಾಯಿಸುವ ಪಾತ್ರ. ಆ ನೀರಿಗೆ **ಮದಂತೀ** ಎಂಬ ಹೆಸರಿರುವುದರಿಂದ ಆ ಪಾತ್ರೆಗೂ **ಮದಂತೀ** ಎಂದೇ ಹೆಸರು.

**೨೯. ಅಂತರ್ಧಾನಕಟ:**

ಅಶ್ವತ್ಥ ಮರದಿಂದ ಮಾಡಿದುದು. ಪತ್ನೀಸಂಯಾಜದ ಅನುಷ್ಠಾನಕಾಲದಲ್ಲಿ ಹವಿಸ್ಸನ್ನು ಸ್ವೀಕರಿಸಲು ಬರುವ ದೇವತೆಗಳ ಪತ್ನಿಯರಿಗೆ ಸ್ತ್ರೀಯರಾದುದರಿಂದ ಲಜ್ಜೆ ಉಂಟಾಗದಂತೆ ಮರೆ ಮಾಡುವ ಸಾಧನ.

**೩೦. ಫಲೀಕರಣ:**

ಹವಿಸ್ಸನ್ನು ತಯಾರಿಸುವಾಗ ಬತ್ತವನ್ನು ಕುಟ್ಟಬೇಕಾಗುತ್ತದೆ, ಕೇರಬೇಕಾಗುತ್ತದೆ.ಆಗಲೂ ಮತ್ತು ಪುರೋಡಾಶಕ್ಕಾಗಿ ಹಿಟ್ಟನ್ನು ಮಾಡುವಾಗಲೂ ಚೆಲ್ಲಿ ಹೋಗುವ ಧಾನ್ಯಕಣಗಳು, ಹೊಟ್ಟು ಇವುಗಳನ್ನೂ ಕಪಾಲಗಳಿಗೆ ಅಂಟುವ ಹವಿಸ್ಸಿನ ಅಂಶವನ್ನೂ ಸಂಗ್ರಹಿಸುವ ಸಾಧನ. ಅಶ್ವತ್ಥ ಮರದಿಂದ ಮಾಡಿದುದು.

**೩೧. ಅಸಿದ:**

ಲೋಹದಿಂದ ಮಾಡಿದುದು. ಮುತ್ತುಗದ ಶಾಖೆಯನ್ನೂ, ಇಧ್ಮವನ್ನೂ ದರ್ಭಮುಷ್ಟಿಗಳನ್ನೂ ಕತ್ತರಿಸಲು ಬೇಕಾದ ಸಾಧನ.

**೩೨. ಅಶ್ವಪರ್ಶು:**

ಕುದುರೆಯ ಪಾರ್ಶ್ವದಲ್ಲಿರುವ ಎಲುಬಿನ ತುಂಡು.

**೩೩. ಉಪವೇಷ:**

ದರ್ಶೇಷ್ಟಿಗಾಗಿ ವತ್ಸಾಪಾಕರಣವನ್ನು (ಕರುಗಳನ್ನು ದೂರಮಾಡುವುದು) ಮಾಡಬೇಕಾಗುತ್ತದೆ. ಅದಕ್ಕಾಗಿ ತಂದಿರುವ ಪಲಾಶಶಾಖೆಯ(ಮುತ್ತುಗದ ಕೊಂಬೆ) ಮೂಲಭಾಗ. ಅಗ್ರಭಾಗದಲ್ಲಿ ಗೇಣಿನಷ್ಟು ಪ್ರಮಾಣದಿಂದ ಶಾಖಾಪವಿತ್ರವನ್ನು ಮಾಡುತ್ತಾರೆ.

**೩೪. ದೋಹನ:**

ಹಾಲನ್ನು ಹಿಂಡುವ ಪಾತ್ರೆ.



**೩೫. ಸಾನ್ನಾಯ್ಯತಪನೀ:**
ಸಾಯಂಕಾಲದ ದೋಹವನ್ನೂ (ಹಾಲನ್ನು) ಮತ್ತು ಬೆಳಗಿನ ದೋಹವನ್ನೂ ಕಾಯಿಸುವ ಎರಡು ಕಂಚಿನ ಪಾತ್ರೆಗಳು.

**೩೬. ಶಾಖಾಪವಿತ್ರ:**
ಮೂರು ದರ್ಭೆಗಳಿಂದ ಪಲಾಶಶಾಖೆಯ ಅಗ್ರಭಾಗವನ್ನು ಜಡೆಯಂತೆ ಹೆಣೆದ ಮೇಲೆ ಸಿದ್ಧವಾಗುವ ಸಾಧನ.

ಈ ವಸ್ತುಗಳು ಮಾತ್ರವಲ್ಲದೆ ನಿರ್ವಾಪಪಾತ್ರೀ, ಹವಿಸ್ಸನ್ನು ತಯಾರಿಸಲು ಬೇಕಾಗುವ ಧಾನ್ಯವನ್ನು ಸುರುವಿಕೊಳ್ಳುವ ಪಾತ್ರೆ, ಕುಂಭಿಗಳು, ಸಂದಂಶ (ಇಕ್ಕಳ), ಶಿಕ್ಯ(ನೊಜೆಯ ಹುಲ್ಲಿನಿಂದ ಮಾಡಿ ತೂಗುಹಾಕುವ ಶಿಕ್ಕ), ಅರಣಿ(ಅಗ್ನಿಯನ್ನು ಮಥನ ಮಾಡುವಾಗ ಬಳಸುವ ಸಾಧನ), ಶಕಟ (ಬಂಡಿ) ಹವಿಸ್ಸನ್ನು ತಯಾರಿಸಲು ಬೇಕಾಗುವ ಧಾನ್ಯವನ್ನು ತರುವ ಮತ್ತು ಇಡುವ ಸಾಧನ, ಪರಿಶ್ರಯಣ (೧೨ ಅಂಗುಲದ ಪಾತ್ರೆ) ಹೀಗೆ ಅನೇಕ ಪಾತ್ರೆಗಳನ್ನು ಪ್ರಕೃತಿಯಾಗಗಳಲ್ಲಿಯೂ, ವಿಕೃತಿಯಾಗ ಗಳಲ್ಲಿಯೂ ಬಳಸುತ್ತಾರೆ.

ಮಥಿತ

ಹೀಗೆ ಯಜ್ಞಗಳನ್ನು ಅನುಷ್ಠಿಸುವುದು ಪುರುಷಾರ್ಥವಾದ ಧರ್ಮದ ಸಾಧನವಾದುದರಿಂದ ನಮ್ಮ ಪ್ರಾಚೀನಪರಂಪರೆಯಲ್ಲಿ ಯಜ್ಞಗಳ ಸ್ಥಾನವು ತುಂಬ ಹಿರಿದಾಗಿದೆ.

**ಧರ್ಮಬ್ರಹ್ಮಣೀ ವೇದೈಕವೇದ್ಯೇ।**

ಎಂಬ ಮಾತಿನಂತೆ ಅನುಷ್ಠಿಸಬೇಕಾದ ಧರ್ಮವನ್ನೂ , ಪರವಸ್ತುವಾದ ಬ್ರಹ್ಮ ವನ್ನೂ ತಿಳಿಯಲು ವೇದವೊಂದೇ ಸಾಧನ. ಧರ್ಮವೂ, ಬ್ರಹ್ಮವೂ ಅತೀಂದ್ರಿಯವಾಗಿರುವುದೇ ಅದಕ್ಕೆ ಕಾರಣ. ಅತೀಂದ್ರಿಯವಿಷಯಗಳೇ ವೇದಗಳಿಂದ ಪ್ರತಿಪಾದ್ಯವಾಗಿರುತ್ತವೆ.



**ಪ್ರತ್ಯಕ್ಷಾನುಮಾನಾಭ್ಯಾಮ್ ಅನವಗತೇಷ್ಟಾನಿಷ್ಟಪ್ರಾಪ್ತಿ - ಪರಿಹಾರ ಪ್ರಕಾಶನಪರೋಽಯಂ ಸರ್ವೋಽಪಿ ವೇದಃ ।**

— ಬೃಹದಾರಣ್ಯಕೋಪನಿಷತ್. ಶಾಂಕರಭಾಷ್ಯ

ಎಂಬ ಶಂಕರಾಚಾರ್ಯರ ವಚನದಿಂದಲೂ ಈ ಅಂಶವೇ ಸೂಚಿಸಲ್ಪಡುತ್ತದೆಯಷ್ಟೆ. ಆದುದರಿಂದ ಯಜ್ಞಗಳ ಅನುಷ್ಠಾನವು ಶ್ರೇಯಸ್ಸಿನ ಸಾಧನವೆಂಬುದು ನಿಸ್ಸಂಶಯ.

ಈ ರೀತಿಯ ಯಜ್ಞಗಳ ಸಾಮ್ರಾಜ್ಯವು ವಿಸ್ತಾರವಾಗಿದ್ದು ಯಾವುದೇ ಫಲವನ್ನು ಬಯಸುವವನು ಯಜ್ಞಗಳ ಉಪಾಯವನ್ನೇ ಆಶ್ರಯಿಸುತ್ತಿದ್ದುದು ನಮ್ಮ ಇತಿಹಾಸದಲ್ಲಿ ಪ್ರಸಿದ್ಧವಿದೆ. ಸಂತಾನವಿಲ್ಲದ ದಶರಥನು ಪುತ್ರಕಾಮೇಷ್ಟಿ ಯಜ್ಞವನ್ನು ಮಾಡಿದುದು, ಪಾಂಡವರು ರಾಜಸೂಯ ಯಾಗವನ್ನು ನಡೆಸಿದುದು, ನೂರು ಅಶ್ವಮೇಧಯಾಗಗಳನ್ನು ಮಾಡುವವನಿಗೆ ಇಂದ್ರಪದವಿಯು ದೊರೆಯುವುದು, ಶ್ರೀರಾಮನು ಅಶ್ವಮೇಧ ಯಾಗವನ್ನು ನಡೆಸಿದುದು, ವಿಶ್ವಾಮಿತ್ರನು ಮಾಡಿದ ಯಾಗದ ರಕ್ಷಣೆಗಾಗಿ ಶ್ರೀರಾಮನು ಲಕ್ಷ್ಮಣನೊಡನೆ ಹೋದುದು - ಹೀಗೆ ಅನೇಕ ಪ್ರಸಂಗಗಳು ನಮ್ಮ ಇತಿಹಾಸದಲ್ಲಿ ಹಾಸುಹೊಕ್ಕಾಗಿ ಬಂದು ನಮ್ಮ ಪೂರ್ವಜರು ಯಜ್ಞಗಳಿಗೆ ನೀಡಿದ್ದ ಪ್ರಾಶಸ್ತ್ಯವನ್ನು ಎತ್ತಿ ಹೇಳುತ್ತವೆ.

ಆದುದರಿಂದ ಯಜ್ಞಗಳ ವಿಷಯದಲ್ಲಿ ಮಥಿತವಾದುದು ಇಷ್ಟು:

- ಮನುಷ್ಯನು ತಾನು ಜನಿಸುವಾಗಲೇ ಪ್ರಾರಂಭಗೊಂಡಿರುವ ಅಗ್ನಿಯ ಆರಾಧನೆಯನ್ನು ವಿಸ್ತರಿಸಿಕೊಳ್ಳುತ್ತಾ ಅಗ್ನಿಯ ವಿಸ್ತೃತ ರೂಪಗಳನ್ನು ಉಪಾಸಿಸುತ್ತಾನೆ.
- ಯಜ್ಞಗಳನ್ನು ನಿತ್ಯ-ನೈಮಿತ್ತಿಕ-ಕಾಮ್ಯ, ಪ್ರಕೃತಿ-ವಿಕೃತಿ, ಐಷ್ಟಿಕ-ಪಾಶುಕ-ಸೌಮಿಕಗಳೆಂದು ವಿಂಗಡಿಸಲಾಗಿದೆ.
- ಯಜ್ಞಗಳನ್ನು ಅನುಷ್ಠಿಸಲು ನಾನಾಲಕ್ಷಣಸಂಪನ್ನರಾದ ಋತ್ವಿಜರು ಇರುತ್ತಾರೆ. ಬೇರೆ ಬೇರೆ ಯಜ್ಞಗಳಿಗೆ ಬೇರೆ ಬೇರೆ ಸಂಖ್ಯೆಯ ಋತ್ವಿಜರು.
- ಬಗೆಬಗೆಯ ಯಜ್ಞಪಾತ್ರೆಗಳಿಂದ ಅನೇಕ ಯಜ್ಞಗಳನ್ನು ಅನುಷ್ಠಿಸಲಾಗುತ್ತದೆ.



- ಎಲ್ಲಾ ಶ್ರೌತಯಜ್ಞಗಳನ್ನೂ ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿಗಳೆಂಬ ಮೂರು ಅಗ್ನಿಗಳನ್ನಿಟ್ಟುಕೊಂಡು ಅನುಷ್ಠಿಸಲಾಗುತ್ತದೆ.
- ಗೃಹ್ಯಾಗ್ನಿಯಲ್ಲಿ ಅನುಷ್ಠಿಸುವ ಕರ್ಮಗಳು ಸ್ಮಾರ್ತಕರ್ಮಗಳು ಅಥವಾ ಗೃಹ್ಯಕರ್ಮಗಳು ಅಥವಾ ಹೋಮಗಳು.
- ಪ್ರಕೃತಿಯಾಗಗಳ ಪ್ರಕ್ರಿಯೆಯನ್ನು ಚೆನ್ನಾಗಿ ಪರಿಶೀಲಿಸಿ ಮನದಟ್ಟು ಮಾಡಿಕೊಳ್ಳುವುದರಿಂದ ವಿಕೃತಿಯಾಗಗಳ ಸ್ವರೂಪವು ಚೆನ್ನಾಗಿ ಅರಿವಾಗುವುದು.
- ಯಾಜ್ಞಿಕವಾದ ಪಾರಿಭಾಷಿಕ ಶಬ್ದಗಳ ದೃಢವಾದ ಪರಿಚಯವು ಅತ್ಯಗತ್ಯ.

ಈವರೆಗೆ ಯಜ್ಞಗಳ ಒಂದು ಸ್ಥೂಲ ಪರಿಚಯವಾದಂತಾಯಿತು. ಇನ್ನು ಯಜ್ಞಗಳಲ್ಲಿ ಪ್ರಕೃತಿಯಾಗಗಳನ್ನು ಸ್ವಲ್ಪ ವಿಸ್ತರಿಸಿ ತಿಳಿಸಲಾಗುವುದು. ನಂತರ ಅನೇಕ ಬಗೆಯ ಹವಿರ್ಯಜ್ಞ, ಸೌಮಿಕಗಳನ್ನೂ, ಕೃಷ್ಣಯಜುರ್ವೇದ ದಲ್ಲಿ ಯಾವ ಯಾವ ಯಜ್ಞಗಳು ಎಲ್ಲೆಲ್ಲಿ ನಿರೂಪಿತವಾಗಿವೆ ಎಂಬುದನ್ನೂ, ಈ ಶತಮಾನದಲ್ಲಿಯೂ ಬೇರೆ ಬೇರೆ ಕಡೆ ಅನುಷ್ಠಿಸಿದ ಯಜ್ಞಗಳ ವಿವರ ಗಳನ್ನೂ ಅನುಬಂಧ-೨, ಇರಲ್ಲಿ ಪರಿಚಯಿಸಲಾಗುವುದು.

ದರ್ಶ-ಪೂರ್ಣಮಾಸವು ಇಷ್ಟಿಗಳಿಗೆ ಪ್ರಕೃತಿ. ಆ ದರ್ಶ-ಪೂರ್ಣಮಾಸ ಗಳನ್ನು ತ್ರೇತಾಗ್ನಿಯಲ್ಲಿ ಅನುಷ್ಠಿಸಬೇಕು. ಈ ತ್ರೇತಾಗ್ನಿಯು ಎಲ್ಲಾ ಶ್ರೌತ ಕರ್ಮಗಳಿಗೂ ಆಧಾರಭೂತವಾದುದು. ಈ ಮೂರು ಅಗ್ನಿಗಳನ್ನು ಆಧಾನ ಮಾಡಿದ ನಂತರ ಅದರಲ್ಲಿಯೇ ಎಲ್ಲ ಶ್ರೌತಕಲಾಪಗಳೂ ನಡೆಯುತ್ತವೆ. ಆದುದರಿಂದ ಅಗ್ನಿಯನ್ನು ಗೃಹಸ್ಥನು ಆಧಾನ ಮಾಡಬೇಕಾದ ಕ್ರಮವನ್ನು ಪರಿಚಯಿಸಲಾಗುವುದು



# ಅಗ್ನ್ಯಾಧಾನ

ಅಗ್ನ್ಯಾಧಾನದ ವಿಧಿಯು ತೈತ್ತಿರೀಯಬ್ರಾಹ್ಮಣದ ಒಂದನೇ ಅಷ್ಟಕದ ಮೊದಲನೆಯ ಪ್ರಪಾಠಕದ ಎರಡನೆಯ ಅನುವಾಕದಿಂದ ಪ್ರಾರಂಭವಾಗಿ ಎರಡನೆಯ ಪ್ರಪಾಠಕದ ಮೊದಲನೆಯ ಅನುವಾಕವು ಪೂರ್ಣಗೊಳ್ಳುವವರೆಗೆ ಹೇಳಲ್ಪಟ್ಟಿದೆ.

## ಆಧಾನವು ಯಾವಾಗ?

ತ್ರೈವರ್ಣಿಕರು ವಿವಾಹವಾದ ನಂತರ ಹತ್ತನೆಯ ದಿನ ಅಗ್ನಿಯನ್ನು ಆಧಾನ ಮಾಡತಕ್ಕದ್ದು.

**ಜಾಯಾಮುಪಾಪ್ಯ ದಶಮೇಽಹನ್ಯಗ್ನೀನಾದಧೀತ।**

— ಬೋಧಾಯನ ಗೃ. ಸೂ.

ಅಗ್ನ್ಯಾಧಾನವನ್ನು ಬ್ರಾಹ್ಮಣನು ವಸಂತಕಾಲದಲ್ಲಿಯೂ, ಕ್ಷತ್ರಿಯನು ಗ್ರೀಷ್ಮದಲ್ಲಿಯೂ, ವೈಶ್ಯನು ಶರದೃತುವಿನಲ್ಲಿಯೂ ಮಾಡಬೇಕೆಂದು ಶ್ರುತಿಯೇ ತಿಳಿಸುತ್ತದೆ.

**ವಸಂತಾ ಬ್ರಾಹ್ಮಣೋಽಗ್ನಿಮಾದಧೀತ।**
**ಗ್ರೀಷ್ಮೇ ರಾಜನ್ಯ ಆದಧೀತ।**
**ಶರದಿ ವೈಶ್ಯ ಆದಧೀತ।**

— ತೈ. ಬ್ರಾ. 1.1.2.

ಅಗ್ನಿಯನ್ನು ಕೃತ್ತಿಕಾ ನಕ್ಷತ್ರದಲ್ಲಿಯೂ, ರೋಹಿಣೀ ನಕ್ಷತ್ರದಲ್ಲಿಯೂ, ಪುನರ್ವಸೂ ನಕ್ಷತ್ರದಲ್ಲಿಯೂ, ಪೂರ್ವಫಲ್ಗುನೀ ನಕ್ಷತ್ರದಲ್ಲಿಯೂ, ಉತ್ತರ ಫಲ್ಗುನೀ ನಕ್ಷತ್ರದಲ್ಲಿಯೂ, ಚಿತ್ರಾ ನಕ್ಷತ್ರದಲ್ಲಿಯೂ ಆಧಾನ ಮಾಡಬಹುದೆಂದು ಶ್ರುತಿಯೇ ತಿಳಿಸುತ್ತದೆ.



**ಕೃತ್ತಿಕಾಸ್ವಗ್ನಿಮಾದಧೀತ ।**

**ಯೋ ರೋಹಿಣ್ಯಾಮಗ್ನಿಮಾಧತ್ತೇ ।**

**ತೇ ಪುನರ್ವಸ್ವೋರಾದಧತ ।**

**ಸ ಪೂರ್ವಯೋಃ ಫಲ್ಗುನ್ಯೋರಗ್ನಿಮಾದಧೀತ ।**

**ಸ ಉತ್ತರಯೋಃ ಫಲ್ಗುನ್ಯೋರಗ್ನಿಮಾದಧೀತ ।**

**ಸ ಚಿತ್ರಾಯಾಮಗ್ನಿಮಾದಧೀತ ।**

— ತೈ ಬ್ರಾ. 1.1.2.

ಈ ವಾಕ್ಯಗಳಿಂದ ಆಯಾ ನಕ್ಷತ್ರದಂದು ಅಗ್ನಿಯ ಆಧಾನ ಮಾಡಬೇಕೆಂದು ಶ್ರುತಿಯೇ ತಿಳಿಸಿದೆ. ಬ್ರಹ್ಮವರ್ಚಸ್ಸು ಮುಂತಾದವುಗಳನ್ನು ಪಡೆಯಬಯಸುವವನು ಈ ನಕ್ಷತ್ರಗಳಲ್ಲಿ ಅಗ್ನ್ಯಾಧಾನ ಮಾಡಬೇಕೆಂದೂ, ಪ್ರತಿಯೊಂದು ನಕ್ಷತ್ರದಲ್ಲಿ ಮಾಡಿದ ಆಧಾನಕ್ಕೂ ನಿರ್ದಿಷ್ಟಫಲವಿದೆಯೆಂದೂ ಶ್ರುತಿಯೇ ತಿಳಿಸಿದೆ. ಆದರೆ ರೋಹಿಣೀ ನಕ್ಷತ್ರದಲ್ಲಿ ಆಧಾನ ಮಾಡಬೇಕೆಂದು ಇನ್ನೊಮ್ಮೆ ತಿಳಿಸುವ ಶ್ರುತಿವಚನವು ಪ್ರಪಾಠಕದ ಕಡೆಯಲ್ಲಿದೆ. ಹೀಗೆ ಎರಡನೆಯ ಬಾರಿ ರೋಹಿಣೀ ನಕ್ಷತ್ರವನ್ನು ಶ್ರುತಿಯು ಎತ್ತಿ ಹೇಳಿರುವುದರಿಂದಲೂ, ಶತಪಥಬ್ರಾಹ್ಮಣದಲ್ಲಿ

**ಅಮಾವಾಸ್ಯಾಯಾಮೇವಾಗ್ನಿಮಾದಧೀತ, ಯಾಸೌ ವೈಶಾಖಸ್ಯಾಮಾವಾಸ್ಯಾ ತಸ್ಯಾಮಾದಧೀತ ಸಾ ರೋಹಿಣ್ಯಾ ಸಂಪದ್ಯತೇ।**

ಎಂಬ ವಚನವಿರುವುದರಿಂದಲೂ, ಬೋಧಾಯನರು ಶ್ರೌತಸೂತ್ರದಲ್ಲಿ;



**ಸಾ ಯಾ ವೈಶಾಖ್ಯಾಃ ಪೌರ್ಣಮಾಸ್ಯಾ ಉಪರಿಷ್ಟಾದಮಾವಾಸ್ಯಾ ಭವತಿ, ಸಾ ಸಕೃತ್ ಸಂವತ್ಸರಸ್ಯ ರೋಹಿಣ್ಯಾ ಸಂಪದ್ಯತೇ, ತಸ್ಯಾಮಾದಧೀತ।**

ಎಂದು ತಿಳಿಸಿರುವುದರಿಂದಲೂ ವೈಶಾಖ ಕೃಷ್ಣ ಅಮಾವಾಸ್ಯೆಯಂದು ರೋಹಿಣೀ ನಕ್ಷತ್ರದಿಂದ ಕೂಡಿದ ಕಾಲವು ಆಧಾನಕ್ಕೆ ಮುಖ್ಯಕಾಲವೆಂಬುದು ನಿರ್ಣಯ.

ಹೀಗೆ ಅಗ್ನ್ಯಾಧಾನವನ್ನು ಮಾಡಲು ವಸಂತಾದಿ ಋತುಗಳನ್ನು, ಕೃತ್ತಿಕಾದಿ ನಕ್ಷತ್ರಗಳನ್ನು ಹೇಳಿದ್ದರೂ ಸಹ

**ಯದ್ವೈನಂ ಯಜ್ಞ ಉಪನಮೇತ್ ಅಥಾದಧೀತ।**

— ತೈ ಬ್ರಾ. 1.1.2.

ಎಂಬ ಶ್ರುತಿವಚನದಂತೆ ಯಾವಾಗ ಸೋಮಯಾಗವನ್ನು ಮಾಡಬೇಕೆಂಬ ಇಚ್ಛೆಯು ಉಂಟಾಗುವುದೋ ಅಥವಾ ವ್ಯಾಧಿಯು ಉಲ್ಬಣಿಸಿ ಮರಣವು ಸನ್ನಿಹಿತವಾಗುವುದೋ ಪುಣ್ಯಪ್ರಾಪ್ತಿಗಾಗಿ ಆಗಲೇ ಅಗ್ನ್ಯಾಧಾನವನ್ನು ಮಾಡಬಹುದು. ಆಗ

**ನರ್ತುಂ ಸೂರ್ಕ್ಷೇತ್ ನ ನಕ್ಷತ್ರಮ್।**

— ಬೋಧಾಯನ ಶ್ರೌತಸೂತ್ರ

ಎಂಬಂತೆ ಯಾವ ಋತುವಿನಲ್ಲಿಯಾಗಲೀ, ಯಾವ ನಕ್ಷತ್ರದಲ್ಲಿಯಾಗಲೀ ಆಧಾನವನ್ನು ಮಾಡಬಹುದು. ಈ ರೀತಿಯ ಆಧಾನಗಳನ್ನು **ಸೋಮಾಧಾನ, ಆರ್ತಿಜಾಧಾನ** ಎಂದು ಕರೆಯುತ್ತಾರೆ. ಇದನ್ನೇ

**ತದೇತದಾರ್ತಸ್ಯಾತಿವೇಲಂ ಶ್ರದ್ಧಾಯುಕ್ತಸ್ಯ।**

— ಬೋಧಾಯನ ಶ್ರೌತಸೂತ್ರ

ಎಂದು ಸೂತ್ರಕಾರರು ತಿಳಿಸಿರುತ್ತಾರೆ.



## ಅಗ್ನಿಯ ಆಧಾನವು ಹೇಗೆ?

ಅಗ್ನಿಯನ್ನು ಆಧಾನ ಮಾಡುವ ಒಂದು ವಾರದ ಮೊದಲು ದಂಪತಿಗಳು ಆಧಾನದ ಅಧಿಕಾರಸಿದ್ಧಿಗಾಗಿ ಗಣಹೋಮವನ್ನು ಅನುಷ್ಠಿಸಬೇಕು.

**ಜಪಹೋಮೇಷ್ಟಿಯಂತ್ರಾದ್ಯೈಃ ಶೋಧಯಿತ್ವಾ ಸ್ವವಿಗ್ರಹಮ್ ।**

— ಬೋಧಾಯನ ಧರ್ಮಸೂತ್ರ. 4.5.2.

ಎಂಬ ವಚನದಂತೆ ಜಪ, ಹೋಮಾದಿಗಳಿಂದ ಶರೀರವನ್ನು ಶುದ್ಧಿಗೊಳಿಸಿಕೊಳ್ಳಬೇಕು. ಇದಕ್ಕಾಗಿ ಕೂಶ್ಮಾಂಡಹೋಮವನ್ನು ಮಾಡಬೇಕು. ಕೃಛ್ರಾದಿ ವ್ರತಗಳನ್ನೂ ಆಚರಿಸಿರಬೇಕು. ಅಗ್ನ್ಯಾಧಾನವನ್ನು ಮಾಡುವವನು ಹೀಗೆ ಶರೀರವನ್ನು ಶುದ್ಧಿಗೊಳಿಸಿಕೊಳ್ಳುವಂತೆ ತನ್ನ ಲೋಕವ್ಯವಹಾರದಿಂದಲೂ ಶುದ್ಧನಾಗಿರಬೇಕಾದುದು ಅತ್ಯಗತ್ಯ. ಬೋಧಾಯನರು ಹೇಳಿರುವ ಈ ಕೆಳಗಿನ ಮಾತುಗಳನ್ನು ಗಮನಿಸುವುದು ಅಗತ್ಯ.

**ಅಗ್ನೀನ್ ಆಧಾಸ್ಯಮಾನಃ ...।**
**ಯೇನಾಸ್ಯಾಕುಶಲಗಾಂ ಸ್ಯಾತ್ತೇನ ಕುಶಲಂ ಕುರ್ವೀತ ।**
**ಯಾನ್ಯೃಣಾನಿ ಉತ್ಥಿತಕಾಲಾನಿ ಸ್ಯುಸ್ತಾನಿ ವ್ಯವಹರೇತ್**
**ಅನುಜ್ಞಾಪಯೀತ ವಾ ।**

ಅಗ್ನಿಯನ್ನು ಆಧಾನ ಮಾಡುವವನು ಯಾರೊಡನೆಯಾದರೂ ವೈಷಮ್ಯದಿಂದ ಕಲಹವು ಉಂಟಾಗಿದ್ದರೆ ಅವನನ್ನು ಸಮೀಪಿಸಿ ಮಾತನಾಡಿಸಿ ಸಮಾಧಾನ ಗೊಳಿಸಿರಬೇಕು. ಯಾರಿಂದಲಾದರೂ ಸಾಲವನ್ನು ಪಡೆದಿದ್ದರೆ ಸಾಲವನ್ನು ಹಿಂದಿರುಗಿಸುವ ಅವಧಿಯು ಮುಗಿದಿದ್ದರೆ ಆಧಾನಕ್ಕೆ ಮೊದಲು ಸಾಲವನ್ನು ತೀರಿಸಿಬಿಡಬೇಕು. ಸಾಲವನ್ನು ಹಿಂದಿರುಗಿಸಲಾಗದಿದ್ದರೆ ಸಾಲವನ್ನು ನೀಡಿದವನಿಂದ 'ನೀನು ಆಧಾನವನ್ನು ಮಾಡುವುದಾದರೆ ನನ್ನ ಸಾಲವನ್ನು ಬಳಿಕ ಹಿಂದಿರುಗಿಸಿದರೂ ಸಾಕು, ನೀನು ಆಧಾನವನ್ನು ಮಾಡು' ಎಂಬುದಾಗಿ ಒಪ್ಪಿಗೆಯನ್ನು ಪಡೆದಿರಬೇಕು.

— ಬೋಧಾಯನ ಶ್ರೌತಸೂತ್ರ. 24.12.1.3



ಹೀಗೆ ಶರೀರ, ಮನಸ್ಸು ಮತ್ತು ಲೋಕವ್ಯವಹಾರ ಈ ಮೂರ ರಿಂದಲೂ ಪರಿಶುದ್ಧನಾಗಿ ಆಧಾನವನ್ನು ಮಾಡಬೇಕು.

ಅಗ್ನ್ಯಾಧಾನವು ಯಜ್ಞವಲ್ಲ. ಈ ಕರ್ಮದಿಂದ ತ್ರೇತಾಗ್ನಿಗಳಾದ ಗಾರ್ಹಪತ್ಯ, ದಕ್ಷಿಣಾಗ್ನಿ ಮತ್ತು ಆಹವನೀಯಗಳು ಸಿದ್ಧಿಸುತ್ತವೆ. ಈ ಆಧಾನ ಕರ್ಮವನ್ನು ನೆರವೇರಿಸಲು ಐವರು ಋತ್ವಿಜರು ಅಗತ್ಯ. ಅಧ್ವರ್ಯು, ಬ್ರಹ್ಮಾ, ಹೋತಾ, ಉದ್ಗಾತಾ ಮತ್ತು ಆಗ್ನೀಧ್ರ ಇವರೇ ಆ ಐವರು ಋತ್ವಿಜರು. ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳಿಂದ ಋತ್ವಿಜರು ಆಧಾನಕರ್ಮವನ್ನು ಅನುಷ್ಠಿಸುತ್ತಾರೆ.

## ಅಗ್ನ್ಯಾಧಾನದ ಪೂರ್ವಾಂಗ

ಅರಣಿಗಳಿಂದ ಮಥಿಸಿ ಅಗ್ನ್ಯಾಧಾನ ಮಾಡುವುದು ಪ್ರಧಾನವಾದ ಕರ್ಮವಾದರೂ ಆಧಾನಕ್ಕೆ ಮೊದಲು ಆಧಾನದ ಪೂರ್ವಾಂಗವಾಗಿ ಮಾಡ ಬೇಕಾದ ಕ್ರಿಯಾಕಲಾಪಗಳು ಸಾಕಷ್ಟಿವೆ. ಅಗ್ನ್ಯಾಧಾನವನ್ನು ಅನುಷ್ಠಿಸುವ ದಂಪತಿಗಳು ಸ್ನಾನಮಾಡಿ ಶುಚೀಭೂತರಾಗಿ ಪವನ, ಮಂತ್ರಾಚಮನ, ಮಂತ್ರ ಪ್ರೋಕ್ಷಣ, ಪುಣ್ಯಾಹವಾಚನ ಮತ್ತು ಶ್ರದ್ಧಾಹ್ವಾನವನ್ನು ಮಾಡಬೇಕು. ನಂತರ **ಅಗ್ನೀನ್ ಆಧಾಸ್ಯೇ** ಎಂದು ಆಧಾನದ ಸಂಕಲ್ಪವನ್ನು ಮಾಡಬೇಕು. ಬಳಿಕ ಆಧಾನಕರ್ಮವನ್ನು ಅನುಷ್ಠಿಸುವ ಸಲುವಾಗಿ ಋತ್ವಿಜರನ್ನು ಪ್ರಾರ್ಥಿಸಿ ಕೊಳ್ಳ ಬೇಕು. ಇದಕ್ಕೆ **ಋತ್ವಿಗ್ವರಣ** ಎನ್ನುತ್ತಾರೆ. ಋತ್ವಿಜರಿಗೆ ಮಧುಪರ್ಕ ವನ್ನಿತ್ತು ಸತ್ಕರಿಸಿ, ದೇವಯಜನವನ್ನು ಯಾಚಿಸಬೇಕು. ಅಧ್ವರ್ಯು ಮೊದಲಾದ ಋತ್ವಿಜರನ್ನು ಕುರಿತು ಯಜ್ಞಭೂಮಿಯಲ್ಲಿ ಅಗ್ನ್ಯಾಧಾನವನ್ನು ಮಾಡಲು ಒಪ್ಪಿಗೆಯನ್ನು ಪಡೆಯುವುದೇ ದೇವಯಜನಯಾಚನ. ದೇವ ಯಜನ ಯಾಚನದ ನಂತರ ಆಧಾನಕ್ಕೆ ಅಗತ್ಯವಾದ ಸಂಭಾರಗಳನ್ನು ಮಂತ್ರ ಪೂರ್ವಕ ವಾಗಿ ಸ್ವೀಕರಿಸಬೇಕು. ಯಾಜ್ಞಿಕಪ್ರಕ್ರಿಯೆಯಲ್ಲಿ ಯಜ್ಞಕ್ಕೆ ಅಗತ್ಯ ವಾದ ವಸ್ತು ಗಳನ್ನು ಸಂಭಾರಗಳೆನ್ನುತ್ತಾರೆ. ತೈತ್ತಿರೀಯ ಬ್ರಾಹ್ಮಣದ. ೧.೨.೧ ನೆಯ ಅನುವಾಕದಲ್ಲಿ ಈ ಸಂಭಾರಗ್ರಹಣದ ಮಂತ್ರಗಳಿವೆ.

ಮಂತ್ರಗಳಿಂದ ಮರಳು ಮುಂತಾದವುಗಳನ್ನೂ, ಅಶ್ವತ್ಥವೃಕ್ಷದ ಕೊಂಬೆ ಮುಂತಾದ ಸಂಭಾರಗಳನ್ನೂ ಸ್ವೀಕರಿಸಬೇಕು. ಹೀಗೆ ಮಂತ್ರಪೂರ್ವಕವಾಗಿ ಸಂಭಾರಗಳನ್ನು ಸ್ವೀಕರಿಸುವುದನ್ನು ಸಂಭರಣ ಎನ್ನುತ್ತಾರೆ. ಈ ಸಂಭಾರಗಳ



ಜೊತೆಗೆ ಅಶ್ವತ್ಥವೃಕ್ಷದ ಎರಡು ಅರಣಿಗಳನ್ನು ಇಟ್ಟುಕೊಳ್ಳಬೇಕು. ಈ ಎರಡರಲ್ಲಿ ಮೇಲಿನ ಅರಣಿಗೆ ಉತ್ತರಾರಣಿ ಎಂದೂ, ಕೆಳಗಿನ ಅರಣಿಗೆ ಅಧರಾರಣಿ ಎಂದೂ ಹೆಸರು. ಇವೆರಡೂ ಸಹ ೧೬ ಅಂಗುಲ ಉದ್ದವಿದ್ದು, ೧೨ ಅಂಗುಲ ಅಗಲವಿದ್ದು, ೪ ಅಂಗುಲ ದಪ್ಪವಿರುತ್ತವೆ. ಹೀಗೆ ಸಂಭಾರ ಗಳನ್ನು ಸಂಭರಣ ಮಾಡಿದ ನಂತರ ಗೋಪಿತೃಯಜ್ಞವನ್ನು ಮಾಡಬೇಕು.

## ಗೋಪಿತೃಯಜ್ಞ

ಯಜಮಾನನು ವಪನ, ಸ್ನಾನ, ಪವನಗಳನ್ನು ಅನುಷ್ಠಿಸಿದ ನಂತರ ವಿನಿಧಿವಾಚನವನ್ನು ಮಾಡಬೇಕು. ವಿನಿಧಿವಾಚನವೆಂದರೆ **ಸಿಗ್ಂಹೇ ಮೇ ಮನ್ಯುಃ** ಎಂಬುದಾಗಿ ಆರಂಭಗೊಳ್ಳುವ ವಾಕ್ಯಗಳನ್ನು ಪಠಿಸುವುದು. ಅಗ್ನ್ಯಾಧಾನಕ್ಕೆ ಮೊದಲು 'ನನ್ನ ಚಿತ್ತದ ದೋಷಗಳಾದ ಕ್ರೋಧ, ವ್ಯಥೆ, ಆಲಸ್ಯ ಮುಂತಾದವುಗಳನ್ನು ಬಿಡುವೆನು' ಎಂದರ್ಥ. 'ನನ್ನ ಕೋಪವನ್ನು ಸಹಜವಾಗಿಯೇ ಸಿಟ್ಟಿನ ಸ್ವಭಾವದ ಪ್ರಾಣಿಯಾದ ಸಿಂಹದಲ್ಲಿ ಇಡುವೆನು' ಎಂದು ಈ ಮಂತ್ರಗಳು ಆರಂಭಗೊಳ್ಳುವುವು. ಇದನ್ನು **ಸಿಂಹಾನುವಾಕ** ಎನ್ನುತ್ತಾರೆ. ಈ ಮಂತ್ರಗಳನ್ನು ಯಜಮಾನನು ವಾಚನ ಮಾಡುವುದರಿಂದ ಇದನ್ನು **ವಿನಿಧಿವಾಚನ** ಎನ್ನುತ್ತಾರೆ. ನಂತರ ವಿಧಿಯನ್ನನುಸರಿಸಿ **ಗೋಪಿತೃಯಜ್ಞ**ವನ್ನು ಯಜಮಾನನು ಅನುಷ್ಠಿಸಬೇಕು. ಬೋಧಾಯನ ಮಹರ್ಷಿಗಳು ಮಾತ್ರ ಈ ಗೋಪಿತೃಯಜ್ಞವನ್ನು ಹೇಳಿರುತ್ತಾರೆ. ಗೋಪಿತೃಯಜ್ಞದ ನಂತರ ಯಜಮಾನದಂಪತಿಗಳು ತುಪ್ಪದಿಂದ ಅಥವಾ ಹಾಲಿನಿಂದ ಮಿಶ್ರವಾದ ಭೋಜನವನ್ನು ಮಾಡುತ್ತಾರೆ.

## ಸರ್ವೌಷಧ ಹೋಮ

ಅಗ್ನ್ಯಾಧಾನ ಮಾಡುವ ಪೂರ್ವಾಂಗವಾಗಿ ಗೋಪಿತೃಯಜ್ಞವನ್ನು ಅನುಷ್ಠಿಸಿದ ನಂತರ ಆ ದಿನ ಸಂಜೆ ಅಧಿವೃಕ್ಷಸೂರ್ಯಕಾಲದಲ್ಲಿ (ಸೂರ್ಯನ ಕಿರಣಗಳು ಭೂಮಿಯನ್ನು ಬಿಟ್ಟು ಮರದ ಮೇಲೆ ಬೀಳುವ ಸಮಯದಲ್ಲಿ) ತಾನು ಅನುಷ್ಠಿಸುತ್ತಿದ್ದ ಗೃಹ್ಯಾಗ್ನಿಯನ್ನು (ಔಪಾಸನಾಗ್ನಿ) ಎರಡು ಭಾಗ ಮಾಡಬೇಕು. ಒಂದು ಭಾಗದಲ್ಲಿ ಸರ್ವೌಷಧಹೋಮವನ್ನು



ಅನುಷ್ಠಿಸಬೇಕು. ಉಳಿದ ಅರ್ಧ ಭಾಗವನ್ನು ಔಪಾಸನ ಮುಂತಾದ ಗೃಹ್ಯಕರ್ಮಗಳನ್ನು ಅನುಷ್ಠಿಸಲು ಸಂರಕ್ಷಿಸಿಕೊಳ್ಳಬೇಕು.

## ಬ್ರಹ್ಮೌದನ

ಸರ್ವೌಷಧಹೋಮವನ್ನು ಮಾಡಿದ ಅಗ್ನಿಯನ್ನು ದರ್ಶ - ಪೂರ್ಣ ಮಾಸ ಯಾಗಶಾಲೆಗೆ ತಂದು ಅಲ್ಲಿ ಗಾರ್ಹಪತ್ಯಕುಂಡದಲ್ಲಿ ಸ್ಥಾಪಿಸಬೇಕು. ನಂತರ ಆ ಕುಂಡದ ಮುಂಭಾಗದಲ್ಲಿ ಬ್ರಹ್ಮದೇವತೆಗಾಗಿ ವ್ರೀಹಿಯನ್ನು (ಬತ್ತ) ನಾಲ್ಕುಬಾರಿ **ಬ್ರಹ್ಮಣೇ ಜುಷ್ಟಂ ನಿರ್ವಪಾಮಿ** ಎಂದು ಇಟ್ಟುಕೊಳ್ಳಬೇಕು. ಬಳಿಕ ಆ ಬತ್ತವನ್ನು ಕುಟ್ಟಿ ಅಕ್ಕಿಯನ್ನು ಪಾತ್ರೆಯಲ್ಲಿಟ್ಟು ಶ್ರಪಣ (ಬೇಯಿಸುವುದು) ಮಾಡಿ

**ಪ್ರವೇಧಸೇ ಕವಯೇ ಮೇಧ್ಯಾಯ।**

ಎಂಬ ಮಂತ್ರದಿಂದ ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸಬೇಕು. ಉಳಿದ ಚರುವನ್ನು ನಾಲ್ವರು ಋತ್ವಿಜರಿಗೆ ಯಜಮಾನನು ನೀಡುತ್ತಾನೆ. ಅವರು ಅದನ್ನು ಸ್ವೀಕರಿಸಬೇಕು. ಇದನ್ನು **ಬ್ರಹ್ಮೌದನಪ್ರಾಶನ** ಎಂದು ಹೇಳುತ್ತಾರೆ.

## ಅರಣಿಗ್ರಹಣ

ಬ್ರಹ್ಮೌದನಪ್ರಾಶನದ ನಂತರ ಅಧ್ವರ್ಯುವು ಯಜಮಾನನಿಗೆ ಅರಣಿಗಳನ್ನು ಅಗ್ನಿಮಥನಕ್ಕಾಗಿ ಕೊಡುತ್ತಾನೆ. ಆಗ ಯಜಮಾನನು:

**ಅನೃತಾತ್ಸತ್ಯಮುಪೈಮಿ। ಮಾನುಷಾದ್ದೈವ್ಯಮುಪೈಮಿ।**

**ದೈವೀಂ ವಾಚಂ ಯಚ್ಛಾಮಿ।**

— ತೈ. ಬ್ರಾ. 1.2.1

ಸುಳ್ಳು ಹೇಳುವುದನ್ನು ಬಿಟ್ಟು ಸತ್ಯವನ್ನೇ ನುಡಿಯುತ್ತೇನೆ. ಲೌಕಿಕ ಕಾರ್ಯವನ್ನು ಬಿಟ್ಟು ದೇವತಾಕಾರ್ಯವನ್ನು ಮಾಡುತ್ತೇನೆ. ಸಂಸ್ಕೃತ ಭಾಷೆಯಿಂದಲೇ ವ್ಯವಹಾರವನ್ನು ಮಾಡುತ್ತೇನೆ ಎಂದು ಸಂಕಲ್ಪ ಮಾಡಿ



ವಾಙ್ನಿಯಮವನ್ನು (ಮೌನವನ್ನು) ಮಾಡುತ್ತಾನೆ. ನಂತರ ಬ್ರಹ್ಮೌದನವನ್ನು ಶ್ರಪಣ ಮಾಡಿದ ಅಗ್ನಿಯಲ್ಲಿ ಒಣಗಿದ ಕಟ್ಟಿಗೆಯ ಚೂರುಗಳನ್ನು ಹಾಕುತ್ತಾ ರಾತ್ರಿಯಲ್ಲಿ ಜಾಗರಣೆಯನ್ನು ಮಾಡುತ್ತಾನೆ. ಅಪರರಾತ್ರಿಯಲ್ಲಿ ಅಧ್ವರ್ಯುವು ಯಜಮಾನನಿಂದ ಅರಣಿಗಳನ್ನು ತೆಗೆದುಕೊಂಡು ಬ್ರಹ್ಮೌದನದ ಅಗ್ನಿಯನ್ನು ಅರಣಿಗಳಲ್ಲಿ ಸಮಾರೋಪ ಮಾಡುತ್ತಾನೆ. ಅರಣಿ ಗಳಲ್ಲಿ ಅಗ್ನಿಯು ಸೇರಿಕೊಂಡಿತು ಎಂಬ ಭಾವನೆಯಿಂದ ಅಗ್ನಿಗೆ ಎದುರಾಗಿ ಅರಣಿಗಳನ್ನು ಹಿಡಿಯುವುದೇ ಅಗ್ನಿಸಮಾರೋಪ. ಬಳಿಕ ಬ್ರಹ್ಮೌದನದ ಅಗ್ನಿ ಯನ್ನು ಒಂದು ಪಾತ್ರೆಯಲ್ಲಿ ಹಾಕಿ ಗಾರ್ಹಪತ್ಯಕುಂಡವನ್ನು ಮತ್ತು ಉಳಿದ ಎರಡು ಕುಂಡಗಳನ್ನು ಗೋಮಯದಿಂದ ಶುದ್ಧಿಗೊಳಿಸಬೇಕು. ನಂತರ ಹಿಂದಿನ ದಿನ ಮಂತ್ರಪೂರ್ವಕವಾಗಿ ತೆಗೆದುಕೊಂಡ ಮರಳು, ಅಶ್ವತ್ಥದ ಕೊಂಬೆ ಮುಂತಾದ ಸಂಭಾರಗಳನ್ನು ಮೂರು ಭಾಗ ಮಾಡಿ ಮೂರು ಕುಂಡ ಗಳಲ್ಲಿ ಹಾಕಬೇಕು.

## ಅಗ್ನಿಮಂಥನ

ಗಾರ್ಹಪತ್ಯಾಯತನದಲ್ಲಿ (ಗಾರ್ಹಪತ್ಯಾಗ್ನಿಯ ಸ್ಥಾನ) ಹಾಕಿದ ಸಂಭಾರಗಳ ಮೇಲೆ ಕೃಷ್ಣಾಜಿನವನ್ನು ಹಾಸಿ ಅದರ ಮೇಲೆ ಅಧರಾರಣಿಯನ್ನಿಟ್ಟು ಅಧರಾರಣಿಯ ಮೇಲೆ ಉತ್ತರಾರಣಿಯನ್ನಿಡಬೇಕು. ನಂತರ ಅಧ್ವರ್ಯುವು **ಮಂಥತ** ಎಂದು ಹೇಳಿದ ಮೇಲೆ ಮೊದಲು ಯಜ ಮಾನನು ಅಗ್ನಿಯನ್ನು ಕಡೆಯಬೇಕು. ನಂತರ ಬೇರೆಯವರು ಸಹಾಯ ಮಾಡಬಹುದು. ಕೊನೆಯಲ್ಲಿ ಮಾತ್ರ ಯಜಮಾನನೇ ಕಡೆಯಬೇಕು. ಅಗ್ನಿಯು ಉತ್ಪನ್ನವಾದ ಮೇಲೆ ಯಜಮಾನನು ವಾಙ್ನಿಯಮವನ್ನು ಬಿಡುತ್ತಾನೆ. ಅಗ್ನಿಯನ್ನು ಮಥಿಸುವಾಗ ಉದ್ಗಾತೃವು ಸಾಮಗಾನವನ್ನು ಮಾಡುತ್ತಾನೆ. ಅರಣಿಯಿಂದ ಮಥಿತವಾದ ಅಗ್ನಿಯನ್ನು ನಂತರ ಗಾರ್ಹಪತ್ಯ ಕುಂಡದಲ್ಲಿ ಸಂಪೂರ್ಣ ಹಾಕಬೇಕು. ಇದನ್ನು **ಗಾರ್ಹಪತ್ಯಾಧಾನವೆನ್ನು** ತ್ತಾರೆ. ಬಳಿಕ ಈ ಅಗ್ನಿಯ ಒಂದು ಅಂಶವನ್ನು ತೆಗೆದುಕೊಂಡು ದಕ್ಷಿಣಾಗ್ನಿಯ ಕುಂಡದಲ್ಲಿ ಸ್ಥಾಪಿಸಬೇಕು. ಇದಕ್ಕೆ **ದಕ್ಷಿಣಾಗ್ನ್ಯಾಧಾನ** ಎಂದು ಹೆಸರು. ಸೂರ್ಯನು ಅರ್ಧ ಉದಿಸುತ್ತಿರುವಾಗ ಗಾರ್ಹಪತ್ಯ ಕುಂಡದಿಂದ ಅಗ್ನಿಯನ್ನು ತೆಗೆದುಕೊಂಡು ಆಹವನೀಯಕುಂಡದಲ್ಲಿ ಹಾಕುವುದಕ್ಕೆ



ಆಹವನೀಯಾಧಾನವೆಂದು ಹೆಸರು. ಈ ರೀತಿ ಗಾರ್ಹಪತ್ಯಕುಂಡದಿಂದ ಅಗ್ನಿಯನ್ನು ಆಹವನೀಯದಲ್ಲಿ ಸ್ಥಾಪಿಸುವಾಗಲೂ ಉದ್ಗಾತೃವು ಸಾಮಗಾನವನ್ನು ಮಾಡುತ್ತಿರಬೇಕು.

## ಉತ್ತರಾಂಗ ಸರ್ವೌಷಧಹೋಮ

ಹೀಗೆ ಮೂರು ಅಗ್ನಿಗಳ ಆಧಾನವಾದ ನಂತರ ತ್ರೇತಾಗ್ನಿಯಲ್ಲಿ ಧಾನ್ಯಗಳಿಂದ ವ್ಯಾಹೃತಿಮಂತ್ರವನ್ನು ಹೇಳಿ ಹೋಮವನ್ನು ಮಾಡಬೇಕು. ನಂತರ ಮೂರೂ ಅಗ್ನಿಗಳಲ್ಲಿ ಸಮಿತ್ತುಗಳನ್ನು ಮಂತ್ರಪೂರ್ವಕವಾಗಿ ಹಾಕಬೇಕು. ಬಳಿಕ ಅಗ್ನಿಯ ಉಪಸ್ಥಾನ (ಪ್ರಾರ್ಥನೆ). ನಂತರ ಗಾರ್ಹಪತ್ಯದಲ್ಲಿ ಆಜ್ಯಸಂಸ್ಕಾರವನ್ನು ಮಾಡಿಕೊಂಡು ಆಹವನೀಯದಲ್ಲಿ ಪೂರ್ಣಾಹುತಿಗಳನ್ನೂ ಕೂಶ್ಮಾಂಡಹೋಮವನ್ನೂ ಮಾಡಬೇಕು. ಬಳಿಕ ಮಥಿಸಿದ ಅಗ್ನಿಗಳ ಸಂಸ್ಕಾರಕ್ಕಾಗಿ ಆಜ್ಯದಿಂದ ಅಗ್ನಿಹೋತ್ರಹೋಮವನ್ನು ಮಾಡಬೇಕು. ಸಾಯಂಕಾಲ ಮತ್ತು ಪ್ರಾತಃಕಾಲ ಮಾಡಬೇಕಾದ ಅಗ್ನಿಹೋತ್ರವನ್ನು ಒಟ್ಟಿಗೇ ಮಾಡಬೇಕು. ಮೊದಲ ಅಗ್ನಿಹೋತ್ರವನ್ನು ಸಾಯಂಕಾಲ ಮಾಡಬೇಕಾದರೂ ಸಹ ಆಧಾನವನ್ನು ಮಾಡಿದ ನಂತರ ಅಗ್ನಿಯ ಸಂಸ್ಕಾರಕ್ಕಾಗಿ ಪ್ರಾತಃಕಾಲವೇ ಎರಡನ್ನೂ ಒಮ್ಮೆಲೇ ಅನುಷ್ಠಿಸುತ್ತಾರೆ. ಮಂತ್ರವನ್ನು ಉಚ್ಚರಿಸದೇ ಹವಿಸ್ಸನ್ನು ಅರ್ಪಿಸುವುದರಿಂದ ಈ ಮೊದಲ ಅಗ್ನಿಹೋತ್ರವನ್ನು **ತೂಷ್ಣೀಮಗ್ನಿಹೋತ್ರ** ಎನ್ನುತ್ತಾರೆ. ನಂತರ ಅಗ್ನಿಃ, ಅಗ್ನಿಃ ಪವಮಾನಃ, ಅಗ್ನಿಃ ಪಾವಕಃ, ಅಗ್ನಿಃ ಶುಚಿಃ, ಇಂದ್ರಾಗ್ನಿ ಮತ್ತು ಅದಿತಿ ಈ ದೇವತೆಗಳನ್ನು ಉದ್ದೇಶಿಸಿ ಮಾಡುವ ಪವಮಾನೇಷ್ಟಿಯನ್ನು ಮಾಡಬೇಕು. ಆಧಾನ ಮಾಡಿದ ಸಾಯಂಕಾಲವೇ ಅಗ್ನಿಹೋತ್ರವು ಪ್ರಾರಂಭಗೊಳ್ಳುವುದು.

ಆಧಾನವನ್ನು ಮಾಡಿದ ನಂತರ ಈ ಮೂರೂ ಅಗ್ನಿಗಳನ್ನು ಹನ್ನೆರಡು ರಾತ್ರಿಗಳ ಕಾಲ ಜಾಗ್ರತೆಯಿಂದ ಅಗ್ನಿಯು ನಷ್ಟವಾಗದಂತೆ ರಕ್ಷಿಸಿಕೊಂಡಿರಬೇಕು. ನಂತರ ಪೂರ್ಣಿಮೆಯಂದು ಅನ್ವಾರಂಭಣೀಯೇಷ್ಟಿಯನ್ನು ಮಾಡಿ ಕೃಷ್ಣಪಕ್ಷದ ಪ್ರತಿಪದೆಯಂದು ಪೂರ್ಣಮಾಸೇಷ್ಟಿಯನ್ನು ಅನುಷ್ಠಿಸಬೇಕು. ಆಧಾನವನ್ನು ಯಾವ ಸೂಕ್ತವಾದ ಕಾಲದಲ್ಲಿ ಮಾಡಿದರೂ ಸಹ ಇಷ್ಟಿಯನ್ನು ಪೂರ್ಣಿಮೆಯಂದೇ ಆರಂಭಿಸಬೇಕು. ಅಮಾವಾಸ್ಯೆಯ ಇಷ್ಟಿಯಂದೇ ಮುಕ್ತಾಯ ಮಾಡಬೇಕು.



**ಪೌರ್ಣಮಾಸ್ಯುಪಕ್ರಮುವಮ್, ಅಮಾವಾಸ್ಯಾಪವರಕವಮ್**

ಎಂಬ ವಚನವೇ ಇದಕ್ಕೆ ಆಧಾರ.

ಹೀಗೆ ಅಗ್ನಿಯ ಆಧಾನವನ್ನು ಮಾಡಿ ಪೌರ್ಣಮಾಸೇಷ್ಟಿಯಿಂದ ಆರಂಭಿಸಿ ಪ್ರತಿ ಅಮಾವಾಸ್ಯೆ ಮತ್ತು ಪೂರ್ಣಿಮೆಗಳಂದು ಇಷ್ಟಿಗಳನ್ನು ಅನುಷ್ಠಿಸಬೇಕು. ಆಧಾನದಿಂದ ಸಿದ್ಧವಾದ ಅಗ್ನಿಯನ್ನು ತಾನು ಬದುಕಿರುವ ವರೆಗೆ ರಕ್ಷಿಸಿಕೊಂಡು ಬರಬೇಕು.

## ಪುನರಾಧಾನ

ಈ ರೀತಿ ಅಗ್ನಿಯನ್ನು ಆಧಾನ ಮಾಡಿ ರಕ್ಷಿಸಿಕೊಂಡು ಬರುತ್ತಿರುವಾಗ ಯಾವುದಾದರೂ ಅನಿವಾರ್ಯಕಾರಣಗಳಿಂದ ಅಗ್ನಿಯು ನಷ್ಟವಾದರೆ ಯಜಮಾನನು ಅಗ್ನಿಹೋತ್ರವನ್ನು ಅನುಷ್ಠಿಸುವುದಕ್ಕಾಗಿ ಮತ್ತೆ ಅಗ್ನಿಯನ್ನು ಆಧಾನ ಮಾಡಬೇಕಾಗುತ್ತದೆ. ಈ ಕ್ರಿಯಾಕಲಾಪವನ್ನು ಶ್ರೌತಪ್ರಕ್ರಿಯೆಯಲ್ಲಿ **ಪುನರಾಧಾನ** ಎನ್ನುತ್ತಾರೆ. ಆಧಾನ ಮಾಡಿದ ಒಂದು ವರ್ಷದ ಒಳಗಾಗಿ ಯಜಮಾನನು ವ್ಯಾಧಿಗ್ರಸ್ತನಾದರೆ, ಅಥವಾ ಅಗ್ನಿಯೇನಾದರೂ ನಷ್ಟವಾದರೆ ಆಷಾಢ ಪೂರ್ಣಿಮೆಯ ಮೊದಲಿನ ಅಮಾವಾಸ್ಯೆ, ಪ್ರತಿಪದ್ ಅಥವಾ ದ್ವಿತೀಯಾ ಈ ಮೂರು ದಿನಗಳಲ್ಲಿ ಒಂದು ದಿನ ಪುನರ್ವಸು ನಕ್ಷತ್ರಯುಕ್ತವಾದಾಗ

**ಪುನರ್ವಸ್ವೋರಾದಧೀತ್ತೈತದ್ವೈ ಪುನರಾಧೇಯಸ್ಯ ನಕ್ಷತ್ರವಮ್ . . .**

— ತೈ.ಸಂ. 1.5.1

ಎಂಬ ಶ್ರುತಿವಚನದಂತೆ ಪುನಃ ಅಗ್ನ್ಯಾಧಾನವನ್ನು ಮಾಡಬೇಕು. ಈ ರೀತಿಯ ತಿಥಿ ಮತ್ತು ನಕ್ಷತ್ರಯೋಗವು ಒದಗದಿದ್ದರೆ ಉತ್ತರಾಯಣದ ಶುಕ್ಲಪಕ್ಷದಲ್ಲಿ ಪುನರ್ವಸು ನಕ್ಷತ್ರದಿಂದ ಕೂಡಿದ ದಿನದಂದು ಪುನರಾಧಾನವನ್ನು ಮಾಡಬೇಕು.

ಅಗ್ನ್ಯಾಧಾನವು ಪ್ರಕೃತಿ. ಪುನರಾಧಾನವು ವಿಕೃತಿ. **ಪ್ರಕೃತಿವತ್ ವಿಕೃತಿಃ ಕರ್ತವ್ಯಾ** ಎಂಬ ವಚನದಂತೆ ಪುನರಾಧೇಯದ ಕರ್ಮವೆಲ್ಲವೂ ಬಹು ಪಾಲು



ಅಗ್ನ್ಯಾಧೇಯದಂತೆಯೇ ಇರುತ್ತದೆ. ಪುನರಾಧೇಯದಲ್ಲಿ ಮಾಡಬೇಕಾದ ವಿಶೇಷಗಳೂ ಇವೆ. ಆ ಕಲಾಪಗಳಲ್ಲಿ ದರ್ಭೆಯಿಂದ ನಿರ್ಮಿಸಿದ ರಜ್ಜು (ಹಗ್ಗ) ವಿನಿಂದ ಆಧಾನ ಮಾಡಬೇಕೆಂಬುದು ಒಂದು ವಿಶೇಷ.

ಅಗ್ನಿಯು ನಷ್ಟವಾದಾಗ ಪುನಃ ಅಗ್ನಿಯನ್ನು ಆಧಾನ ಮಾಡುವುದನ್ನು **ವಿಚ್ಛಿನ್ನಾಧಾನ** ಎನ್ನುತ್ತಾರೆ. ಅಗ್ನಿಯನ್ನು ಇಟ್ಟುಕೊಂಡಿದ್ದರೂ ಸಮೃದ್ಧಿಯು ಉಂಟಾಗದ ಕಾರಣಕ್ಕಾಗಿ ಪುನಃ ಆಧಾನವನ್ನು ಮಾಡಿದರೆ ಅದನ್ನು **ನೈಮಿತ್ತಿಕಾಧಾನ** ಎನ್ನುತ್ತಾರೆ. ಪುನರಾಧಾನ ಮಾಡಿದ ನಂತರವೂ ಸಮೃದ್ಧಿಯು ಉಂಟಾಗದಿದ್ದಾಗ ಇನ್ನೊಮ್ಮೆ ಪುನರಾಧಾನ ಮಾಡಲು ಅವಕಾಶವಿದೆ. ಇದನ್ನು **ತೃತೀಯಾಧಾನ** ಎನ್ನುತ್ತಾರೆ. ಹೀಗೆ ಅಗ್ನ್ಯಾಧೇಯವನ್ನು ಪ್ರಕೃತಿಯನ್ನಾಗಿ ಇಟ್ಟುಕೊಂಡಿರುವ ಈ ಪುನರಾಧೇಯವು ಮೂರು ಬಗೆಯಾಗಿರುತ್ತದೆ.

ಅಗ್ನಿಯನ್ನು ಆಧಾನ ಮಾಡುವುದು ನಿತ್ಯಕರ್ಮಗಳಾದ ಅಗ್ನಿಹೋತ್ರ ಮುಂತಾದವುಗಳನ್ನು ಅನುಷ್ಠಾನ ಮಾಡುವುದಕ್ಕಾಗಿಯಷ್ಟೆ. ದರ್ಶ- ಪೂರ್ಣ ಮಾಸೇಷ್ಟಿಗಳನ್ನೂ, ಇನ್ನಿತರ ಪಾಶುಕ ಸೌಮಿಕ ಯಾಗಗಳನ್ನೂ ಈ ತ್ರೇತಾಗ್ನಿಯನ್ನಿಟ್ಟುಕೊಂಡೇ ಯಜಮಾನನು ಅನುಷ್ಠಿಸುತ್ತಾನೆ. ಅಗ್ನಿಹೋತ್ರವನ್ನಂತೂ ನಿತ್ಯವೂ ಅನುಷ್ಠಿಸಲೇಬೇಕು. **ಯಾವಜ್ಜೀವಮಗ್ನಿಹೋತ್ರಂ ಜುಹುಯಾತ್** ಎಂಬ ವಚನವು ಅಗ್ನಿಹೋತ್ರವು ನಿತ್ಯಕರ್ಮ ಎಂಬುದನ್ನು ತಿಳಿಸಿಕೊಡುತ್ತಾ ಇದೆ. ಆ ಅಗ್ನಿಹೋತ್ರದ ಪರಿಚಯವನ್ನು ಈಗ ನೀಡಲಿದ್ದೇವೆ.



# ಅಗ್ನಿಹೋತ್ರ

ಅಗ್ನಿಹೋತ್ರದ ವಿಧಿಯನ್ನು ತೈತ್ತಿರೀಯಬ್ರಾಹ್ಮಣದ ಎರಡನೆ ಅಷ್ಟಕದ ಮೊದಲನೆಯ ಪ್ರಪಾಠಕದಲ್ಲಿ ಪೂರ್ತಿ ಹೇಳಲಾಗಿದೆ. ಅಗ್ನಿಹೋತ್ರಕ್ಕೆ ಸಂಬಂಧಿಸಿದ ಪ್ರಾಯಶ್ಚಿತ್ತವಿಧಿಯು ತೈತ್ತಿರೀಯಬ್ರಾಹ್ಮಣದ ಒಂದನೆಯ ಅಷ್ಟಕದ ನಾಲ್ಕನೆಯ ಪ್ರಪಾಠಕದ ಮೂರು ಮತ್ತು ನಾಲ್ಕನೆಯ ಅನುವಾಕ ಗಳಲ್ಲಿ ಹೇಳಲ್ಪಟ್ಟಿದೆ.

ಅಗ್ನಿಯನ್ನು ಉದ್ದೇಶಿಸಿ ಮಾಡುವ ಹೋಮವಾದುದರಿಂದ ಈ ಕರ್ಮಕ್ಕೆ **ಅಗ್ನಿಹೋತ್ರ** ವೆಂದು ಹೆಸರು. ನಿತ್ಯವೂ ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ

**ಅಗ್ನಿರ್ಜ್ಯೋತಿರ್ಜ್ಯೋತಿಸ್ಸೂರ್ಯಃ ಸ್ವಾಹಾ।**

ಮುಂತಾದ ಮಂತ್ರಗಳಿಂದ ಹೋಮವನ್ನು ಮಾಡಬೇಕಾಗುತ್ತದೆ. ಅಗ್ನಿ ಹೋತ್ರಹೋಮದಲ್ಲಿ ಎರಡು ಬಗೆ. ಅಸಂಸೃಷ್ಟಹೋಮ ಮತ್ತು ಸಂಸೃಷ್ಟ ಹೋಮ. ಸಾಯಂಕಾಲ ಮತ್ತು ಪ್ರಾತಃಕಾಲ ಎರಡು ವೇಳೆಯಲ್ಲಿ ಮಾಡ ಬೇಕಾದ ಅಗ್ನಿಹೋತ್ರದಲ್ಲಿ

**ಅಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹಾ।**

**ಸೂರ್ಯೋ ಜ್ಯೋತಿರ್ಜ್ಯೋತಿಃ ಸೂರ್ಯಃ ಸ್ವಾಹಾ।**

ಎಂದು ಹೋಮವನ್ನು ಮಾಡಿದರೆ ಇದನ್ನು **ಅಸಂಸೃಷ್ಟಹೋಮ** ವೆನ್ನುತ್ತಾರೆ. ಹಾಗೆ ಮಾಡದೆ,

**ಅಗ್ನಿರ್ಜ್ಯೋತಿರ್ಜ್ಯೋತಿಃ ಸೂರ್ಯಃ ಸ್ವಾಹಾ।**

**ಸೂರ್ಯೋ ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹಾ।**



ಎಂದು ಹೋಮವನ್ನು ಮಾಡಿದರೆ ಇದನ್ನು **ಸಂಸೃಷ್ಟಹೋಮವೆನ್ನುತ್ತಾರೆ.** ಈ ಎರಡು ಬಗೆಯಿಂದಲೂ ಹೋಮ ಮಾಡುವ ವಿಧಿಯಿದೆ.

ಸೂರ್ಯನ ತೇಜಸ್ಸು ಸಾಯಂಕಾಲದಲ್ಲಿ ಅಗ್ನಿಯನ್ನು ಪ್ರವೇಶಿಸುತ್ತದೆ.

**ಅಗ್ನಿಂ ವಾವಾದಿತ್ಯಃ ಸಾಯಂ ಪ್ರವಿಶತಿ।**

— ತೈ.ಬ್ರಾ. 2.1.2.

**ಸೌರಂ ತೇಜಃ ಸಾಯಮಗ್ನಿಂ ಸಂಕ್ರಮತೇ।**

ಎಂಬ ವಚನಗಳು ಇದಕ್ಕೆ ಆಧಾರ. ಹಾಗೆಯೇ ಅಗ್ನಿಯ ತೇಜಸ್ಸು ಪ್ರಾತಃಕಾಲದಲ್ಲಿ ಸೂರ್ಯನನ್ನು ಸೇರುತ್ತದೆ.

**ಉದ್ಯಂತಂ ವಾವಾದಿತ್ಯಮಗ್ನಿರನು ಸಮಾರೋಹತಿ।**

— ತೈ.ಬ್ರಾ. 2.1.2.

ಆದುದರಿಂದ ಯಾವ ವಿಧವಾಗಿ ಹೋಮವನ್ನು ಮಾಡಿದರೂ ಹವಿಸ್ಸು ಅಗ್ನಿಗೇ ಸಲ್ಲುವ ಕಾರಣ ಇದಕ್ಕೆ **ಅಗ್ನಿಹೋತ್ರವೆಂಬ** ಹೆಸರು ಬಂದಿದೆ.

## ಅಗ್ನಿಹೋತ್ರದ ವಿಧಾನ

### ಪೂರ್ವಾಂಗ

ಅಗ್ನ್ಯಾಧಾನದ ನಂತರ ಅಗ್ನಿಹೋತ್ರವನ್ನು ಮೊಟ್ಟಮೊದಲು ಆರಂಭಿಸುವಾಗ ಯಜಮಾನನು ಪವನ, ಮಂತ್ರಾಚಮನ, ಮಂತ್ರಪ್ರೋಕ್ಷಣಗಳಿಂದ ಶುದ್ಧನಾಗಿ **ಅಗ್ನಿಸೂರ್ಯಪ್ರಜಾಪತಯಃ ಪ್ರೀಯಂತಾಮ್** ಎಂದು ಪುಣ್ಯಾಹವನ್ನು ಮಾಡಬೇಕು. ನಂತರ ಯಜಮಾನನು ತೀರ್ಥಾಚಮನವನ್ನು ಮಾಡಬೇಕು. ಇಲ್ಲಿ ತೀರ್ಥವೆಂದರೆ ಇಧ್ಮ ಮತ್ತು ಬರ್ಹಿಸ್ಸುಗಳನ್ನು ಇಡುವ ಸ್ಥಳಕ್ಕಿಂತಲೂ ಪಶ್ಚಿಮಭಾಗ. ಈ ಸ್ಥಳದಲ್ಲಿ ದಂಪತಿಗಳು ಆಚಮನ ಮಾಡಿಕೊಂಡು ಗಾರ್ಹಪತ್ಯಾಗ್ನಿಯ ಪಶ್ಚಿಮಕ್ಕೆ ಕುಳಿತು ಪ್ರಾಣಾಯಾಮ ಮಾಡಿ



**ಸತ್ಯಧಿಕಾರೇ ಯಾವಜ್ಜೀವಮ್ ಅಗ್ನಿಹೋತ್ರಂ ಹೋಷ್ಯಾಮಿ।**

ಎಂದು ಸಂಕಲ್ಪ ಮಾಡಬೇಕು. ಆಮೇಲೆ ಗಾರ್ಹಪತ್ಯಾಗ್ನಿಯಲ್ಲಿ ಗೃಹ್ಯಸೂತ್ರದ ವಿಧಿಯಂತೆ ಆಜ್ಯಸಂಸ್ಕಾರವನ್ನು ಮಾಡಬೇಕು. ಬಳಿಕ ಸ್ರುಕ್ ಮತ್ತು ಸ್ರುವಗಳನ್ನು ಸಂಮಾರ್ಜನೆ ಮಾಡಿ ಆಹವನೀಯಾಗ್ನಿಯಲ್ಲಿ ಚತುರ್ಗೃಹೀತ ದಿಂದ ದಶಹೋತ್ರ ಹೋಮವನ್ನೂ, ಬಳಿಕ ಸ್ರುವದಿಂದ ಕೂಶ್ಮಾಂಡ ಹೋಮವನ್ನೂ ಮಾಡಬೇಕು. ಇವು ಅಗ್ನಿಹೋತ್ರವನ್ನು ಮೊಟ್ಟಮೊದಲು ಆರಂಭಿಸುವಾಗ ಮಾಡಬೇಕಾದ ವಿಧಿಗಳು.

ನಂತರ **ಉಪಾತ್ತದುರಿತಕ್ಷಯದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಸಾಯಮಗ್ನಿಹೋತ್ರಂ ಪಯಸಾ ಹೋಷ್ಯಾಮಿ** ಎಂದು ಸಾಯಂಕಾಲ ದಲ್ಲಿಯೂ, **ಪ್ರಾತರಗ್ನಿಹೋತ್ರಂ ಪಯಸಾ ಹೋಷ್ಯಾಮಿ** ಎಂದು ಪ್ರಾತಃ ಕಾಲದಲ್ಲಿಯೂ ಸಂಕಲ್ಪ ಮಾಡಿ ಪ್ರಧಾನವಾದ ಅಗ್ನಿಹೋತ್ರಹೋಮವನ್ನು ಮಾಡಬೇಕು.

## ಅಗ್ನಿಹೋತ್ರಹೋಮದ ವಿಧಿ

ಅಗ್ನಿಹೋತ್ರಕ್ಕೆ ಅಗತ್ಯವಾದ ಅಗ್ನಿಹೋತ್ರಸ್ಥಾಲೀ, ಸ್ರುವ, ಸ್ರುಕ್, ಅಭಿದ್ಯೋತನ ಕುಶಗಳು, ಸಮಿತ್ತುಗಳು- ಈ ಹೋಮಸಾಧನಗಳನ್ನು ಗಾರ್ಹ ಪತ್ಯದ ಪಶ್ಚಿಮಕ್ಕೆ ಒಂದು ಮರದ ಹಲಗೆಯ ಮೇಲೆ ಇಟ್ಟುಕೊಳ್ಳಬೇಕು. ನಂತರ ಅಗ್ನಿಹೋತ್ರ ಹೋಮಕ್ಕಾಗಿ ಗೋದೋಹನ (ಹಾಲನ್ನು ಕರೆ ಯುವುದು) ವನ್ನು ಮಾಡಬೇಕು. ಗೋವನ್ನು ಅಗ್ನಿಹೋತ್ರಶಾಲೆಯ ದಕ್ಷಿಣಕ್ಕೆ ಉತ್ತರಾಭಿಮುಖವಾಗಿ ಕಟ್ಟಬೇಕು. ಅಗ್ನಿಹೋತ್ರಕ್ಕೆ ಅಗತ್ಯವಾದ ಹಾಲನ್ನು ಬ್ರಾಹ್ಮಣನೇ ಕರೆಯಬೇಕು. ಶ್ರುತಿಯಲ್ಲಿ

**ಅಗ್ನಿಹೋತ್ರಮೇವ ನ ದುಹ್ಯಾಚ್ಛೂದ್ರಃ।**

ಎಂಬ ವಚನವಿದೆ. ಕರೆದ ಹಾಲನ್ನು ಆಹವನೀಯದ ಪೂರ್ವಭಾಗದಿಂದ (ಪೂರ್ವದ್ವಾರದಿಂದ) ತಂದು ಗಾರ್ಹಪತ್ಯದ ಪಶ್ಚಿಮದಲ್ಲಿ ಇಡಬೇಕು. ಬಳಿಕ ಮೂರು ಅಗ್ನಿಗಳಿಗೂ ಕ್ರಮವಾಗಿ ಪರಿಷೇಚನವನ್ನು ಮಾಡಬೇಕು. ಗಾರ್ಹ ಪತ್ಯದ ಪಶ್ಚಿಮಕ್ಕೆ ಕುಳಿತು ಕುಂಡದಲ್ಲಿರುವ ಅಂಗಾರಗಳಲ್ಲಿ (ಕೆಂಡ) ಕೆಲವನ್ನು



ಅಲ್ಲಿಯೇ ಕುಂಡದ ಹೊರಕ್ಕೆ ಉತ್ತರಕ್ಕೆ ಸರಿಸಿ ಅಂಗಾರಗಳ ಮೇಲೆ ಹಾಲನ್ನು ಕಾಯಿಸಬೇಕು. ದರ್ಭೆಗಳಿಂದ ಅಭಿದ್ಯೋತನ ಮತ್ತು ಪರ್ಯಗ್ನಿಕರಣಗಳನ್ನು ಮಾಡಬೇಕು. ನಂತರ ಕಾಯಿಸಿದ ಹಾಲನ್ನು ಉತ್ತರಕ್ಕೆ ತೆಗೆದಿಟ್ಟು ಅಂಗಾರಗಳನ್ನು ಪುನಃ ಕುಂಡದಲ್ಲಿ ಹಾಕಬೇಕು. ಬಲಗೈಯಲ್ಲಿ ಸ್ರುವ ಮತ್ತು ಸಮಿಧೆಗಳನ್ನು ಎಡಗೈಯಲ್ಲಿ ಅಗ್ನಿಹೋತ್ರಹವಣಿಯನ್ನು ತೆಗೆದುಕೊಂಡು ಗಾರ್ಹಪತ್ಯಾಗ್ನಿಯಲ್ಲಿ ಕಾಯಿಸಬೇಕು. ಅಗ್ನಿಹೋತ್ರಹವಣಿಯನ್ನು ದರ್ಭ ಕೂರ್ಚದ ಮೇಲಿಟ್ಟು ಹಾಲನ್ನು ಸ್ರುವದಿಂದ ನಾಲ್ಕು ಬಾರಿ ಅಗ್ನಿ ಹೋತ್ರಹವಣಿಗೆ ತುಂಬಿಕೊಳ್ಳಬೇಕು. ಋತ್ವಿಜನು ಅಗ್ನಿಹೋತ್ರವನ್ನು ಮಾಡುವುದಾದರೆ ಯಜಮಾನನಿಂದ ಅನುಜ್ಞೆಯನ್ನು ಪಡೆಯಬೇಕು. ಅಗ್ನಿಹೋತ್ರಹೋಮವನ್ನು ಋತ್ವಿಜರ ಮೂಲಕವೂ ಮಾಡಿಸಬಹುದು. ಆದರೆ ಅಮಾವಾಸ್ಯೆ, ಪೂರ್ಣಿಮೆಗಳಲ್ಲಿ ಅಂದರೆ ಪರ್ವಕಾಲದಲ್ಲಿ ಅಗ್ನ್ಯಾಧಾನವನ್ನು ಮಾಡಿದ ಯಜಮಾನನೇ ಹೋಮವನ್ನು ಮಾಡಬೇಕು.

ಸ್ವಯಂ ಪರ್ವಣಿ ಜುಹುಯಾತ್।

ಹಾಲನ್ನು ತುಂಬಿದ ನಂತರ ಸಮಿಧವನ್ನು ಅಗ್ನಿಹೋತ್ರಹವಣಿಯ ದಂಡದ ಮೇಲೆ ಇಟ್ಟು ಅಗ್ನಿಹೋತ್ರಹವಣಿಯನ್ನು ಆಹವನೀಯದ ಪಶ್ಚಿಮಕ್ಕೆ ವೇದಿಯಲ್ಲಿ ಕೂರ್ಚದ ಮೇಲೆ ಆಸಾದನ ಮಾಡಬೇಕು (ಇಡಬೇಕು). ಆಹವನೀಯಾಗ್ನಿಯಲ್ಲಿ ಸಮಿದಾಧಾನವನ್ನು ಮಾಡಿ ಅಗ್ನಿ ಹೋತ್ರಹವಣಿಯಲ್ಲಿರುವ ಹಾಲಿನಿಂದ ಹೋಮವನ್ನು ಮಾಡಬೇಕು. ಇದೇ ಪ್ರಧಾನವಾದ **ಅಗ್ನಿಹೋತ್ರಹೋಮವೆನಿಸಿಕೊಳ್ಳುತ್ತದೆ.** ನಂತರ ಹೋಮ ಶೇಷವನ್ನು ಪ್ರಾಶನ ಮಾಡಬೇಕು. ಮೂರು ಅಗ್ನಿಗಳಲ್ಲಿಯೂ ಸಮಿದಾಧಾನ ವನ್ನು ಮಾಡಿ ಉತ್ತರಪರಿಷೇಚನವನ್ನು ಮಾಡಬೇಕು. ಸಾಯಂಕಾಲದಲ್ಲಿ ಹೋಮವಾದ ನಂತರ ಅಗ್ನ್ಯುಪಸ್ಥಾನವನ್ನು ಮಾಡಬೇಕು.

ಅಗ್ನಿಹೋತ್ರವನ್ನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಅನುಷ್ಠಿಸುವುದಾದರೂ ಎರಡೂ ಹೋಮಗಳು ಸೇರಿ ಒಂದು ಹೋಮವೆನಿಸಿಕೊಳ್ಳುತ್ತದೆ. ಸಾಯಂಕಾಲದಲ್ಲಿ ಹೋಮವನ್ನು ಮಾಡಿದವನೇ ಪ್ರಾತಃಕಾಲದಲ್ಲಿಯೂ ಹೋಮವನ್ನು ಮಾಡಬೇಕು. ಸಾಯಂಕಾಲದಲ್ಲಿ



ಹೋಮಕ್ಕೆ ಹಾಲನ್ನು ಉಪಯೋಗಿಸಿದ್ದರೆ ಬೆಳಗಿನ ಹೋಮವನ್ನೂ ಹಾಲಿನಿಂದಲೇ ಮಾಡಬೇಕು. ಏಕೆಂದರೆ ಶ್ರುತಿಯಲ್ಲಿ

**ಆಜ್ಯೇನ ಜುಹುಯಾತ್ತೇಜಸ್ಕಾಮಸ್ಯ।**

**ಪಯಸಾ ಪಶುಕಾಮಸ್ಯ।**

**ದಧ್ನೇಂದ್ರಿಯಕಾಮಸ್ಯ।**

ಎಂಬುದಾಗಿ ತೇಜಸ್ಸು, ಪಶುಸಂಪತ್ತು ಮತ್ತು ಇಂದ್ರಿಯಪಟುತ್ವವನ್ನು ಬಯಸುವವನು ಕ್ರಮವಾಗಿ ಆಜ್ಯದಿಂದಲೂ, ಹಾಲಿನಿಂದಲೂ, ಮೊಸರಿನಿಂದಲೂ ಅಗ್ನಿಹೋತ್ರಹೋಮವನ್ನು ಅನುಷ್ಠಿಸಬೇಕೆಂದು ಉಪದೇಶಿಸಲ್ಪಟ್ಟಿದೆ. ಆದ್ದರಿಂದ ಸಾಯಂಕಾಲ ಮತ್ತು ಪ್ರಾತಃಕಾಲದ ಅಗ್ನಿಹೋತ್ರಗಳಲ್ಲಿ ಒಂದೇ ರೀತಿಯ ದ್ರವ್ಯವಿರಬೇಕು. ಸಾಯಂಕಾಲ ಹಾಲಿನಿಂದ ಹೋಮವಾದರೆ ಪ್ರಾತಃಕಾಲವೂ ಹಾಲಿನಿಂದಲೇ. ಮೊಸರಿನಿಂದಾದರೆ ಮೊಸರಿನಿಂದಲೇ ಹೋಮವನ್ನು ಮಾಡಬೇಕು.

ನಿತ್ಯವೂ ಅಗ್ನಿಹೋತ್ರವನ್ನು ಅನುಷ್ಠಿಸಲು ತ್ರೇತಾಗ್ನಿಗಳನ್ನು ಸಂರಕ್ಷಿಸಿಕೊಂಡಿರಬೇಕಷ್ಟೆ. ಈ ಅಗ್ನಿಸಂರಕ್ಷಣೆಯ ರೀತಿಯು ಎರಡು ವಿಧವಾಗಿದೆ. ಒಂದು ಅಜಸ್ರಪಕ್ಷ. ಇನ್ನೊಂದು ಉದ್ಧರಣಪಕ್ಷ. ಅಜಸ್ರಪಕ್ಷದಂತೆ ಗಾರ್ಹಪತ್ಯ, ದಕ್ಷಿಣಾಗ್ನಿ ಮತ್ತು ಆಹವನೀಯ ಈ ಮೂರು ಅಗ್ನಿಗಳನ್ನೂ ಸದಾ ಕಾಲವೂ ರಕ್ಷಿಸಿಕೊಂಡಿರಬೇಕಾಗುವುದು. ಉದ್ಧರಣಪಕ್ಷವನ್ನು ಅನುಸರಿಸುವುದಾದರೆ ಗಾರ್ಹಪತ್ಯಾಗ್ನಿ ಒಂದನ್ನು ಸದಾ ಕಾಲವೂ ಸಂರಕ್ಷಿಸಿಕೊಂಡಿದ್ದು, ಅಗ್ನಿಹೋತ್ರ ಮುಂತಾದ ಆಯಾ ಕರ್ಮಗಳನ್ನು ಅನುಷ್ಠಿಸುವ ಸಂದರ್ಭದಲ್ಲಿ ಗಾರ್ಹಪತ್ಯದ ಅಗ್ನಿಯನ್ನೇ ದಕ್ಷಿಣಾಗ್ನಿ ಮತ್ತು ಆಹವನೀಯಾಗ್ನಿಯ ಕುಂಡಗಳಲ್ಲಿ ಸ್ಥಾಪಿಸಿಕೊಂಡು ಅನುಷ್ಠಾನವನ್ನು ಮಾಡಬೇಕು. ಈ ರೀತಿ ಅಗ್ನಿಯನ್ನು ಸ್ಥಾಪಿಸಿಕೊಳ್ಳುವುದನ್ನು ಉದ್ಧರಣಪಕ್ಷ ಎಂದು ಹೇಳುತ್ತಾರೆ.



# ಐಷ್ಟಿಕ

## ದರ್ಶ-ಪೂರ್ಣಮಾಸೇಷ್ಟಿ

ನಿತ್ಯವೂ ಅಗ್ನಿಹೋತ್ರವನ್ನು ಅನುಷ್ಠಿಸುವ ಗೃಹಸ್ಥನು ಅಗ್ನ್ಯಾಧಾನ ವನ್ನು ಮಾಡಿ ಗಾರ್ಹಪತ್ಯ, ದಕ್ಷಿಣಾಗ್ನಿ ಮತ್ತು ಆಹವನೀಯಗಳೆಂಬ ಮೂರು ಅಗ್ನಿಗಳನ್ನು ಸಿದ್ಧಪಡಿಸಿಕೊಂಡಿರುತ್ತಾನಷ್ಟೆ. ಹೀಗೆ ಸಿದ್ಧಪಡಿಸಿದ ಅಗ್ನಿಗಳನ್ನು ಆಯುಷ್ಯವಿಡೀ ರಕ್ಷಿಸಿಕೊಂಡು ಬರಬೇಕು. ನಿತ್ಯವೂ ಗೋಕ್ಷೀರದಿಂದ ಮಾಡುವ ಅಗ್ನಿಹೋತ್ರಹೋಮವಲ್ಲದೆ ಪ್ರತಿ ಅಮಾವಾಸ್ಯೆ ಮತ್ತು ಮರುದಿನ ಪ್ರತಿಪದೆ (ಪಾಡ್ಯ) ಯಂದು ದರ್ಶಯಾಗವನ್ನೂ, ಪ್ರತಿ ಪೂರ್ಣಿಮೆ ಮತ್ತು ಮರುದಿನ ಪ್ರತಿಪದೆ ಈ ಎರಡು ದಿನಗಳಿಂದ ಪೂರ್ಣ ಮಾಸಯಾಗವನ್ನೂ ಅನುಷ್ಠಿಸಬೇಕು. ಈ ದರ್ಶ-ಪೂರ್ಣಮಾಸಯಾಗಗಳಿಗೆ ಇಷ್ಟಿಗಳೆಂದೂ ಹೆಸರು.

**ದರ್ಶಶ್ಚ ಪೂರ್ಣಮಾಸಶ್ಚ ಯಾಗೌ ಪಕ್ಷಾಂತಯೋಃ ಪೃಥಕ್ ।**

— ಅಮರಕೋಶ, ಬ್ರಹ್ಮವರ್ಗ

ಈ ದರ್ಶ ಮತ್ತು ಪೂರ್ಣಮಾಸೇಷ್ಟಿಗಳಿಗೆ ನಾಲ್ವರು ಋತ್ವಿಜರು. ಅಧ್ವರ್ಯು, ಬ್ರಹ್ಮಾ, ಹೋತಾ ಮತ್ತು ಆಗ್ನೀಧ್ರ ಈ ನಾಲ್ವರು ಋತ್ವಿಜರು ಇಷ್ಟಿಯನ್ನು ನಿರ್ವಹಿಸುವರು.

**ತಸ್ಮಾದ್ದರ್ಶಪೂರ್ಣಮಾಸಯೋರ್ಯಜ್ಞಕ್ರತೋಃ । ಚತ್ವಾರ ಋತ್ವಿಜಃ ॥**

— ತೈ.ಬ್ರಾ. 2.3.6

ಹೀಗೆ ನಾಲ್ವರು ಋತ್ವಿಜರು, ಪತ್ನಿಯಿಂದೊಡಗೂಡಿದ ಯಜಮಾನ ಇವರುಗಳು ನಿರ್ವಹಿಸುವ ಕರ್ಮವೇ ಇಷ್ಟಿ ಎನಿಸಿಕೊಳ್ಳುತ್ತದೆ.

ಶ್ರುತಿಯಲ್ಲಿ ಉಪದಿಷ್ಟವಾಗಿರುವ ಎಲ್ಲ ಬಗೆಯ ಇಷ್ಟಿಗಳಿಗೂ ಈ ದರ್ಶ-ಪೂರ್ಣಮಾಸೇಷ್ಟಿಗಳೇ ಪ್ರಕೃತಿಗಳು. ವೇದದಲ್ಲಿ ಈ ಇಷ್ಟಿಗಳನ್ನು ಅನುಷ್ಠಿಸುವ ವಿಧಾನವು ಸಂಪೂರ್ಣವಾಗಿ ಹೇಳಲ್ಪಟ್ಟಿದೆ.



ಅಗ್ನಿಹೋತ್ರಿಯಾದವನು ಅಮಾವಾಸ್ಯೆ ಮತ್ತು ಪೌರ್ಣಮಿಯಂದು ಬೆಳಿಗ್ಗೆ ಸ್ನಾನಾದಿ ನಿತ್ಯಕರ್ಮಗಳನ್ನು ಮತ್ತು ಅಗ್ನಿಹೋತ್ರವನ್ನು ಪೂರೈಸಿದ ನಂತರ ಯಾಗದ ಸಂಕಲ್ಪವನ್ನು ಮಾಡಬೇಕು. ಸಂಕಲ್ಪವನ್ನು ಮಾಡುವ ಮೊದಲು ಪವನಾದಿಗಳಿಂದ ಋತ್ವಿಜರೂ, ಯಜಮಾನದಂಪತಿಗಳೂ ಶುಚೀಭೂತರಾಗಿರಬೇಕು. ಸಂಕಲ್ಪವನ್ನು ಮಾಡುವಾಗ ಯಾಗದ ಮುಖ್ಯ ಕಾರ್ಯಕ್ರಮವನ್ನು ನಿರೂಪಿಸಬೇಕು. ಹವಿಸ್ಸನ್ನೂ, ದೇವತೆಯನ್ನೂ, ಪ್ರಯಾಜಾದಿ ಮಂತ್ರಗಳ ಸಂಖ್ಯೆಯನ್ನೂ ಪ್ರಾರಂಭದಲ್ಲಿಯೇ ಸ್ಪಷ್ಟಪಡಿಸುವುದರಿಂದ ಯಾಗದ ಇಡೀ ಚಿತ್ರವು ಕಣ್ಣೆದುರಿಗೆ ನಿಂತಂತಾಗುವುದು. ಉದಾಹರಣೆಗಾಗಿ ದರ್ಶೇಷ್ಟಿಯ ಸಂಕಲ್ಪದಲ್ಲಿ:

**ಆಮಾವಾಸ್ಯಂ ಹವಿಃ, ವ್ರೀಹಿಮಯಃ ಪುರೋಡಾಶಃ, ಆಜ್ಯಂ ಸಾನ್ನಾಯ್ಯಂ ಚ ದ್ರವ್ಯಂ, ಅಗ್ನಿಃ, ಇಂದ್ರಾಗ್ನಿಃ ದೇವತೇ ಅಥವಾ ಅಗ್ನೀಂದ್ರೌ ದೇವತೇ, ಪಂಚದಶ ಸಾಮಿಧೇನ್ಯಃ, ದ್ವಾವಾಘಾರೌ, ಪಂಚ ಪ್ರಯಾಜಾಃ, ಅಗ್ನೀಷೋಮಾವಾಜ್ಯಭಾಗೌ, ತ್ರಯೋಽನೂಯಾಜಾಃ ... ...ಇತ್ಯಾದಿ.**

ಈ ಇಷ್ಟಿಯಲ್ಲಿ ಭತ್ತವನ್ನು ಕುಟ್ಟಿ ಮಾಡುವ ಪುರೋಡಾಶವಿರುತ್ತದೆ. ಆಜ್ಯ ಅಥವಾ ಸಾನ್ನಾಯ್ಯವೇ ದ್ರವ್ಯ. ಅಗ್ನಿ-ಇಂದ್ರಾಗ್ನಿ ಅಥವಾ ಅಗ್ನಿ-ಇಂದ್ರ ಇವರೇ ದೇವತೆಗಳು. ಹದಿನೈದು ಸಾಮಿಧೇನೀಮಂತ್ರಗಳು. ಎರಡು ಆಘಾರಗಳು. ಐದು ಪ್ರಯಾಜಮಂತ್ರಗಳು. ಅಗ್ನಿ ಮತ್ತು ಸೋಮರೆಂಬ ಎರಡು ಆಜ್ಯಭಾಗಗಳು. ಮೂರು ಅನೂಯಾಜ ಮಂತ್ರಗಳು ......ಇತ್ಯಾದಿ.

ಎಂಬುದಾಗಿ ಸಂಕಲ್ಪವನ್ನು ಹೇಳುವುದೇ ಕಾರ್ಯಕ್ರಮದ ನಿರೂಪಣೆ. ಬೇರೆ ಬೇರೆ ಇಷ್ಟಿಗಳಲ್ಲಿ ದೇವತೆಗಳೂ, ಹವಿಸ್ಸೂ ಬೇರೆ ಬೇರೆಯೇ ಇರುವುದರಿಂದ ಈ ರೀತಿಯ ನಿರೂಪಣೆಯಿಂದ ಕಾರ್ಯಕ್ರಮದ ಸ್ಪಷ್ಟ ಚಿತ್ರಣವು ದೊರೆಯುವುದಲ್ಲದೆ ತಪ್ಪಿಲ್ಲದೆ ಕಾರ್ಯಕಲಾಪವು ಜರುಗುತ್ತದೆ. ಇಷ್ಟಿಯ ಪ್ರಯೋಗವನ್ನು ವಿವರಿಸುವಾಗ ಸಾಮಿಧೇನೀ ಮುಂತಾದ ಶಬ್ದಗಳ ಅರ್ಥವನ್ನು ವಿವರಿಸಲಾಗುವುದು



# ದರ್ಶ-ಪೂರ್ಣಮಾಸೇಷ್ಟಿಗಳಲ್ಲಿಯ ಕಲಾಪಗಳು

## ಪೂರ್ವಾಂಗ

ದರ್ಶೇಷ್ಟಿ ಮತ್ತು ಪೂರ್ಣಮಾಸೇಷ್ಟಿಗಳಲ್ಲಿ ಪ್ರಧಾನವಾದ ಯಾಗಕ್ಕೆ ಮೊದಲು ಸಾಕಷ್ಟು ಪೂರ್ವಾಂಗವೂ, ಪ್ರಧಾನಯಾಗವು ಮುಗಿದ ಬಳಿಕ ಉತ್ತರಾಂಗವೂ ಇರುತ್ತದೆ. ಪ್ರಾರಂಭದಲ್ಲಿ ಗಾರ್ಹಪತ್ಯ, ದಕ್ಷಿಣಾಗ್ನಿ ಮತ್ತು ಆಹವನೀಯಗಳಲ್ಲಿ ಮೂರು ಮೂರು ಸಮಿತ್ತುಗಳನ್ನು ಹೋಮಿಸಬೇಕು. ಇದು ಮೊದಲನೆಯ ಕಾರ್ಯ. ಇದಕ್ಕೆ **ಅನ್ವಾಧಾನ** ಎಂದು ಹೆಸರು. ಎರಡು ಇಷ್ಟಿಗಳಲ್ಲಿಯೂ ಪಂಚದಶ ಸಾಮಿಧೇನಿಗಳು, ದ್ವಾವಾಘಾರೌ, ಪಂಚ ಪ್ರಯಾಜಗಳು, ಆಜ್ಯಭಾಗಗಳು ಇವೆಲ್ಲವೂ ಪೂರ್ವಾಂಗವೆನಿಸುತ್ತವೆ. ಸಾಮಿಧೇನೀ ಮುಂತಾದವುಗಳ ವಿವರಣೆಯು ಹೀಗಿದೆ.

**ಸಾಮಿಧೇನೀ:** ಅಗ್ನಿಯನ್ನು ದೀಪ್ತಗೊಳಿಸಲು ಹೇಳುವ ಋಕ್‌ಗಳಿಗೆ ಸಾಮಿಧೇನೀ ಎಂದು ಹೆಸರು.

**ಋಕ್ ಸಾಮಿಧೇನೀ ಧಾಯ್ಯಾ ಚ ಯಾ ಸ್ಯಾದಗ್ನಿಸಮಿಂಧನೇ ।**

— ಅಮರಕೋಶ, ಬ್ರಹ್ಮವರ್ಗ

**ಆಘಾರ:** ಅಗ್ನಿಯಲ್ಲಿ ಒಂದು ಕಡೆಯಿಂದ ಇನ್ನೊಂದೆಡೆಗೆ ಮಂತ್ರದಿಂದ ಆಜ್ಯದ ಧಾರೆಯನ್ನು ಎರೆಯುವುದು.

**ಪ್ರಯಾಜ:** ಪ್ರಧಾನಯಾಗಕ್ಕಿಂತಲೂ ಮೊದಲು ಯಾವ ಮಂತ್ರ ಗಳಿಂದ ಯಾಗವನ್ನು ಮಾಡುತ್ತಾರೆಯೋ ಅವುಗಳಿಗೆ ಪ್ರಯಾಜಗಳೆಂದು ಹೆಸರು. ಅವು ಮಂತ್ರಗಳೇ.

**ಆಜ್ಯಭಾಗ:** ಪ್ರಧಾನಯಾಗಕ್ಕಿಂತಲೂ ಮೊದಲು ಯಾಗದ ಕಣ್ಣು ಗಳಂತೆ ಇರುವ ದೇವತೆಗಳಿಗೆ ನೀಡುವ ಆಜ್ಯಹವಿಸ್ಸು ಇರುತ್ತದೆ. ಯಾವ ದೇವತೆಗಳಿಗೆ ಈ ರೀತಿ ಆಜ್ಯದ ಭಾಗವು ಸಲ್ಲುವುದೋ, ಆ ದೇವತೆಗಳಿಗೆ ಆಜ್ಯಭಾಗಗಳೆಂದು ಹೆಸರು. ದರ್ಶ-ಪೂರ್ಣಮಾಸಗಳಿಗೆ ಅಗ್ನಿ ಮತ್ತು ಸೋಮದೇವತೆಗಳೇ ಆಜ್ಯಭಾಗಗಳು.



## ಪ್ರಧಾನಯಾಗ

ದರ್ಶ ಮತ್ತು ಪೂರ್ಣಮಾಸೇಷ್ಟಿಗಳು ಎರಡೂ ಇಷ್ಟಿಗಳೇ ಆದರೂ ಎರಡು ಇಷ್ಟಿಗಳಿಗೂ ದೇವತೆಗಳು ಬೇರೆ ಬೇರೆ. ಅಲ್ಲದೆ ಎರಡಕ್ಕೂ ಸಮಾನವಾದ ಒಂದೇ ದೇವತೆಯೂ ಇದೆ. ಆಹಿತಾಗ್ನಿಯಾದವನು ಯಾವ ಋಷಿಗಳ ಸೂತ್ರವನ್ನು ತನ್ನ ಪರಂಪರೆಯಿಂದಲೂ ಅವಲಂಬಿಸಿರುತ್ತಾನೆಯೋ, ಅದನ್ನು ಅನುಸರಿಸಿಯೂ ದೇವತೆಗಳು ಬೇರೆಬೇರೆಯಾಗುವುದಿದೆ. ಅಲ್ಲದೆ ಯಜಮಾನನಾದವನು ಅಗ್ನಿಹೋತ್ರ, ದರ್ಶ-ಪೂರ್ಣಮಾಸಗಳನ್ನು ಅನುಷ್ಠಿಸುತ್ತಾ ಸೋಮಯಾಗವನ್ನು ಅನುಷ್ಠಿಸಿದವನಾದರೆ, ಅವನು ದರ್ಶೇಷ್ಟಿಯಲ್ಲಿ ಉಳಿದ ಹವಿಸ್ಸು, ದೇವತೆಗಳೊಂದಿಗೆ ಬೇರೆ ಹವಿಸ್ಸಿನಂದಲೂ, ಬೇರೆ ದೇವತೆಯನ್ನುದ್ದೇಶಿಸಿಯೂ ದರ್ಶೇಷ್ಟಿಯನ್ನು ಅನುಷ್ಠಿಸಬೇಕಾಗುತ್ತದೆ.

ದರ್ಶೇಷ್ಟಿಯಲ್ಲಿ ಆಗ್ನೇಯ ಅಷ್ಟಾಕಪಾಲ ಪುರೋಡಾಶವು ಹವಿಸ್ಸು. ಅಂದರೆ ಎಂಟು ಕಪಾಲಗಳಲ್ಲಿ ಇಟ್ಟು ಸಂಸ್ಕರಿಸಲ್ಪಟ್ಟ ಪುರೋಡಾಶವೆಂಬ ಹವಿಸ್ಸನ್ನು ಅಗ್ನಿದೇವತೆಗೆ ಅರ್ಪಿಸಬೇಕು. ಶ್ರುತಿಯಲ್ಲಿ ಅಲ್ಲಲ್ಲಿ ಬರುವ ಅಷ್ಟಾಕಪಾಲ, ನವಕಪಾಲ, ದಶಕಪಾಲ ಮುಂತಾದ ಶಬ್ದಗಳಿಗೆ ಅಷ್ಟು ಸಂಖ್ಯೆಯ ಕಪಾಲಗಳಲ್ಲಿಟ್ಟು ಸಂಸ್ಕರಿಸಿದ ಹವಿಸ್ಸು ಎಂದರ್ಥ. ಕಪಾಲ ಎಂದರೆ ಸಣ್ಣ ಸಣ್ಣ ಮಣ್ಣಿನ ಚೌಕಳಿಗಳು. ಆಗ್ನೇಯ ಅಷ್ಟಾಕಪಾಲದ ಬಳಿಕ ಪ್ರಜಾಪತಿ ಅಥವಾ ವಿಷ್ಣು ದೇವತೆಗೆ ಆಜ್ಯವು ಹವಿಸ್ಸು. ಇದು ಉಪಾಂಶುಯಾಜ. ನಂತರ ಐಂದ್ರಾಗ್ನ ಏಕಾದಶಕಪಾಲ ಪುರೋಡಾಶವು ಹವಿಸ್ಸು. ಅಂದರೆ ಹನ್ನೊಂದು ಕಪಾಲಗಳಲ್ಲಿ ಇಟ್ಟು ಸಂಸ್ಕರಿಸಿದ ಪುರೋಡಾಶವನ್ನು ಇಂದ್ರಾಗ್ನಿ ದೇವತೆಗಳಿಗೆ ಅರ್ಪಿಸಬೇಕು. ಪೂರ್ಣಮಾಸೇಷ್ಟಿಯಲ್ಲಿ ಆಗ್ನೇಯ ಅಷ್ಟಾಕಪಾಲ ಪುರೋಡಾಶ. ಆಜ್ಯಹವಿಸ್ಸಿನಿಂದ ಪ್ರಜಾಪತಿ ದೇವತೆಗೆ ಯಾಗ. ಯಜಮಾನನು ಆಶ್ವಲಾಯನನಾದರೆ ವಿಷ್ಣುವಿಗೆ ಯಾಗ. ಅಗ್ನೀಷೋಮೀಯ ಏಕಾದಶಕಪಾಲ ಪುರೋಡಾಶ. ಇಂದ್ರೋ ವೈಮೃಧ ಏಕಾದಶಕಪಾಲ ಪುರೋಡಾಶ.

ಸೋಮಯಾಗವನ್ನು ಮಾಡಿದ ಯಜಮಾನನಾದರೆ ದರ್ಶೇಷ್ಟಿಯಲ್ಲಿ ಮಾತ್ರ ಸೋಮಯಾಗವನ್ನು ಮಾಡಿದ ನಂತರ ಒಂದು ವರ್ಷದವರೆಗೆ



ಇಂದ್ರಾಗ್ನಿಗೆ ಬದಲಾಗಿ ಇಂದ್ರ ದೇವತೆಗೂ, ನಂತರ ಮಹೇಂದ್ರ ದೇವತೆಗೂ ಹವಿಸ್ಸನ್ನು ಅರ್ಪಿಸಬೇಕಾಗುತ್ತದೆ. ಹವಿಸ್ಸು ಮಾತ್ರ ಪುರೋಡಾಶವೇ ಇದ್ದು ಅದರೊಡನೆ ಸಾನ್ನಾಯ್ಯವನ್ನು ಸೇರಿಸಿಕೊಳ್ಳಬೇಕು. ಈ ಕೆಳಗಿನ ಕೋಷ್ಟಕದ ಸಹಾಯದಿಂದ ದರ್ಶ-ಪೂರ್ಣಮಾಸೇಷ್ಟಿಗಳಲ್ಲಿಯು ಪ್ರಧಾನಯಾಗದ ಹವಿಸ್ಸು ಮತ್ತು ದೇವತೆಗಳನ್ನು ತಿಳಿಯಬಹುದಾಗಿದೆ.

## ಪ್ರಧಾನಯಾಗ

| ದರ್ಶೇಷ್ಟಿ | ಪೂರ್ಣಮಾಸೇಷ್ಟಿ |
|---|---|
| ೧. ಅಗ್ನಿದೇವತೆಗೆ ಅಷ್ಟಾಕಪಾಲ ಪುರೋಡಾಶ. | ೧. ಅಗ್ನಿದೇವತೆಗೆ ಅಷ್ಟಾಕಪಾಲ ಪುರೋಡಾಶ. |
| ೨. ಪ್ರಜಾಪತಿ ದೇವತೆಗೆ ಆಜ್ಯ ಹವಿಸ್ಸು ವಿಷ್ಣುದೇವತೆಗೆ ಆಜ್ಯ ಹವಿಸ್ಸು (ಆಶ್ವಲಾಯನರಿಗೆ). | ೨. ಪ್ರಜಾಪತಿ ದೇವತೆಗೆ ಆಜ್ಯಹವಿಸ್ಸು ವಿಷ್ಣುದೇವತೆಗೆ ಆಜ್ಯಹವಿಸ್ಸು (ಆಶ್ವಲಾಯನರಿಗೆ). |
| ೩. ಇಂದ್ರಾಗ್ನಿ ದೇವತೆಗೆ ಏಕಾದಶ ಕಪಾಲ ಪುರೋಡಾಶ, ಸೋಮ ಯಾಜಿಯಾದರೆ ಸೋಮಯಾಗದ ನಂತರ ಒಂದು ವರ್ಷ ಇಂದ್ರಾಗ್ನಿದೇವತೆಗೆ ಬದಲು ಇಂದ್ರ ದೇವತೆಗೆ ಪುರೋಡಾಶದೊಡನೆ ಸಾನ್ನಾಯ್ಯ. ಬಳಿಕ ಮಹೇಂದ್ರ ದೇವತೆಗೆ ಪುರೋಡಾಶದೊಡನೆ ಸಾನ್ನಾಯ್ಯ. | ೩.ಅಗ್ನೀಷೋಮ ದೇವತೆಗೆ ಏಕಾದಶ ಕಪಾಲ ಪುರೋಡಾಶ. ೪. ಇಂದ್ರ ವೈಮೃಧ ದೇವತೆಗೆ ಏಕಾದಶಕಪಾಲ ಪುರೋಡಾಶ. |

ಸೋಮಯಾಗವನ್ನು ಮಾಡಿದ ನಂತರ ಪೂರ್ಣಮಾಸೇಷ್ಟಿಯಲ್ಲಿ ಯಾವ ಬದಲಾವಣೆಯೂ ಇರುವುದಿಲ್ಲ.

ಹೀಗೆ ಪ್ರಧಾನದೇವತೆಗಳಿಗೆ ಹವಿಸ್ಸನ್ನು ನೀಡಿದ ನಂತರ ಉಪಹೋಮ ಗಳನ್ನು ಅನುಷ್ಠಿಸಬೇಕು. ಉಪಹೋಮಗಳ ನಂತರ ಅಗ್ನಿಸ್ವಿಷ್ಟಕೃತ್



ಹೋಮ. ಯಾಗದ ಕಲಾಪವು ಚೆನ್ನಾಗಿ ನಡೆದಿರುವಂತೆ ಅನುಗ್ರಹಿಸುವ ದೇವತೆಯೇ ಸ್ವಿಷ್ಟಕೃತ್ (ಸು + ಇಷ್ಟಕೃತ್) ಅಗ್ನಿ.

ಉತ್ತರಾಂಗ

ಈ ಪ್ರಧಾನಯಾಗಗಳು ಮುಗಿದ ನಂತರ ಎಲ್ಲ ಹವಿಸ್ಸುಗಳ ದಕ್ಷಿಣಾರ್ಧವನ್ನು (ಬಲಭಾಗದ ಅಂಶ) ಅವದಾನ ಮಾಡಲಾಗುವುದು. ಅವದಾನವೆಂದರೆ ರಾಶಿಯಿಂದ ಬೇರ್ಪಡಿಸುವುದು.

**ರಾಶಿಭ್ಯಃ ಪೃಥಕ್ಕರಣಮ್ ಅವದಾನಮ್ ।**

ಬಳಿಕ ಇಡೋಪಾಹ್ವಾನ ಮಾಡಿ ಎಲ್ಲರೂ ಪ್ರಾಶನ ಮಾಡಬೇಕು. ಇದಕ್ಕೆ ಇಡಾಭಕ್ಷಣವೆಂದು ಹೆಸರು. ಇದಾದ ನಂತರ ಅನೂಯಾಜಗಳು. ಅನೂಯಾಜಗಳೆಂದರೆ ಪ್ರಧಾನಯಾಗದ ನಂತರ ಯಾವ ಮಂತ್ರಗಳಿಂದ ಹೋಮವನ್ನು ಮಾಡುತ್ತಾರೆಯೋ ಅವು. ಅವು ಮಂತ್ರಗಳೇ.

ದರ್ಶ ಮತ್ತು ಪೂರ್ಣಮಾಸೇಷ್ಟಿಗಳೆರಡರಲ್ಲೂ ಮೂರು ಮೂರು ಅನೂಯಾಜಗಳು. ಬಳಿಕ ಸೂಕ್ತವಾಕ ಮತ್ತು ಶಂಯುವಾಕ ಮಂತ್ರಗಳ ಪಠನ.

ಅಧ್ವರ್ಯುವಿನಿಂದ ಅನೂಯಾಜಗಳ ನಂತರ, ಸೂಚನೆಯು ಬಂದ ನಂತರ ಹೋತೃವು ಹೇಳುವ ಮಂತ್ರಕ್ಕೆ **ಸೂಕ್ತವಾಕ**ವೆಂದೂ, ಹೋತೃವು ಹೇಳುವ **ಶಂಯು** ಎಂಬ ಪದದಿಂದ ಕೂಡಿರುವ ಋಕ್ಕಿಗೆ **ಶಂಯುವಾಕ**ವೆಂದೂ ಹೆಸರು.

ಬಳಿಕ ನಾಲ್ಕು ಅಥವಾ ಎಂಟು ಪತ್ನೀಸಂಯಾಜಗಳು. ದೇವತೆಗಳ ಪತ್ನಿಯರಿಗೆ ನೀಡಬೇಕಾದ ಹವಿರ್ಭಾಗವನ್ನು ಅರ್ಪಿಸುವಾಗ ಹೇಳುವ ಮಂತ್ರಗಳೇ ಪತ್ನೀಸಂಯಾಜಮಂತ್ರಗಳು.

ಉತ್ತರಾಂಗವಾದ ಬಳಿಕ ದಕ್ಷಿಣಾಗ್ನಿಯಲ್ಲಿ ಪ್ರಾಯಶ್ಚಿತ್ತ ಮತ್ತು ಫಲೀಕರಣಹೋಮವನ್ನು ಅನುಷ್ಠಿಸಬೇಕು. ಬಳಿಕ ಆಹವನೀಯದಲ್ಲಿ ಪ್ರಾಯಶ್ಚಿತ್ತ ಮತ್ತು ಸಮಿಷ್ಟಯಜುರ್ಹೋಮ. ನಂತರ ಯಜಮಾನನ ವಿಷ್ಣುಕ್ರಮ.



ವಿಷ್ಣುಕ್ರಮವೆಂದರೆ ಮಂತ್ರಪೂರ್ವಕವಾಗಿ ಯಜಮಾನನು ಮೂರು ಹೆಜ್ಜೆಗಳನ್ನಿಡುವುದು.

ಈ ಕಲಾಪಗಳಲ್ಲದೆ ಇಷ್ಟಿಯ ಪ್ರಾರಂಭದಲ್ಲಿ ಯಜಮಾನನು ಮತ್ತು ಅವನ ಪತ್ನಿಯೂ ವ್ರತಗ್ರಹಣವನ್ನು ಮಾಡಿರಬೇಕು. ಇಷ್ಟಿಯು ಮುಗಿದ ನಂತರ ಇಬ್ಬರಿಗೂ ವ್ರತವಿಸರ್ಜನೆಯೂ ಇದೆ.

## ಇಷ್ಟಿಗಳಲ್ಲಿ ಋತ್ವಿಜರು ಎಲ್ಲೆಲ್ಲಿರಬೇಕು?

ಅಧ್ವರ್ಯುವು ಕಾರ್ಯಕಲಾಪವನ್ನು ನಿರ್ವಹಿಸುವ ಪ್ರಮುಖ ಋತ್ವಿಜನಷ್ಟೆ. ಅವನು ಅನ್ವಾಧಾನವನ್ನು ಮಾಡಲು ಯಾಗಶಾಲೆಯನ್ನು ಪ್ರವೇಶಿಸಿದವನು ಕೊನೆಯವರೆಗೆ ಅಲ್ಲಿಯೇ ಇರಬೇಕಾಗುತ್ತದೆ. ಯಾಗ ಶಾಲೆಗೆ ವಿಹಾರವೆಂದೂ ಹೆಸರಿದೆ. ಅಧ್ವರ್ಯುವಿನಂತೆಯೇ ಬ್ರಹ್ಮನೂ ಸಹ ಪ್ರಾರಂಭದಿಂದ ಕೊನೆಯವರೆಗೆ ವಿಹಾರದಲ್ಲಿಯೇ ಇರುತ್ತಾನೆ. ಬ್ರಹ್ಮನು ಆಹವನೀಯಾಗ್ನಿಯ ದಕ್ಷಿಣದಲ್ಲಿ ತನ್ನ ಆಸನದಲ್ಲಿ ಕುಳಿತಿರುತ್ತಾನೆ. ಬ್ರಹ್ಮನಿಗೆ ಇಷ್ಟಿ ಅಥವಾ ಯಜ್ಞಗಳಲ್ಲಿ ಮಾನಸವ್ಯಾಪಾರವಿರುತ್ತದೆ. **ಸದಾ ಯಜ್ಞಮನಾ ಆಸೀತ** ಎಂಬಂತೆ ಯಜ್ಞದ ಕಲಾಪದಲ್ಲಿಯೇ ಅವನು ಮಗ್ನನಾಗಿರುತ್ತಾನೆ. ಜಾಗರೂಕನಾಗಿ ಕಲಾಪಗಳನ್ನು ಬ್ರಹ್ಮನು ವೀಕ್ಷಿಸುತ್ತಾನೆ. ಆಗ್ನೀಧ್ರನು ಅಧ್ವರ್ಯುವಿನೊಡನೆಯೇ ಬಂದು ಕಡೆಯವರೆಗೆ ಇದ್ದು ತನ್ನ ಕರ್ತವ್ಯವನ್ನು ನಿರ್ವಹಿಸುತ್ತಾನೆ. ಆಗ್ನೀಧ್ರನಿಗೆ **ಅಗ್ನೀತ್** ಎಂಬ ಹೆಸರೂ ಇದೆ. ಇನ್ನೊಬ್ಬ ಋತ್ವಿಜನಾದ ಹೋತೃವು ಮಾತ್ರ ಹವಿಸ್ಸನ್ನು ಆಸಾದನೆ (ಇಟ್ಟು) ಮಾಡಿದ ನಂತರ ವಿಹಾರವನ್ನು ಪ್ರವೇಶಿಸುತ್ತಾನೆ. ನಂತರ ವೇದಿಯ ಎಡಭಾಗದಲ್ಲಿ ಉತ್ತರಶ್ರೋಣಿಯ ಉತ್ತರಭಾಗದಲ್ಲಿ ಇರುತ್ತಾನೆ. ಹೋತೃಪ್ರಾಯಶ್ಚಿತ್ತವು ಮುಗಿಯುವವರೆಗೆ ಹೋತೃವು ವಿಹಾರದಲ್ಲಿರುತ್ತಾನೆ.

## ದರ್ಶೇಷ್ಟಿಯಲ್ಲಿಯ ವಿಶೇಷ

ದರ್ಶ ಮತ್ತು ಪೂರ್ಣಮಾಸಗಳೆರಡೂ ಸಹ ಇಷ್ಟಿಗಳೇ ಆದರೂ ಅವುಗಳಿಗಿರುವ ವ್ಯತ್ಯಾಸವನ್ನು ಗಮನಿಸಿದ್ದೇವೆ. ದರ್ಶದಲ್ಲಿ ಅಮಾವಾಸ್ಯೆ ಮತ್ತು ಪ್ರತಿಪತ್ತಿನಲ್ಲಿಯೂ, ಪೂರ್ಣಮಾಸದಲ್ಲಿ ಪೂರ್ಣಿಮೆ ಮತ್ತು ಪ್ರತಿಪತ್ತಿನಲ್ಲಿಯೂ ಇಷ್ಟಿಗಳನ್ನನುಷ್ಠಿಸಬೇಕಾಗುವುದು. ಪೂರ್ಣಿಮೆಗೆ



**ಉಪವಸಥೀಯ** ಎಂಬ ಹೆಸರೂ, ಪ್ರತಿಪದ್ ದಿನಕ್ಕೆ **ಯಜನೀಯಮಹಃ** ಎಂದೂ ಹೆಸರಿದೆ.

ಸೋಮಯಾಗ ಮಾಡಿದವರು ದರ್ಶದಲ್ಲಿ ಸಾನ್ನಾಯ್ಯ ಹವಿಸ್ಸನ್ನು ಇಂದ್ರ - ಮಹೇಂದ್ರ ದೇವತೆಗಳಿಗೆ ಅರ್ಪಿಸಬೇಕಾಗಿರುವುದರಿಂದ ಅಮಾವಾಸ್ಯೆಯಂದು ಮಾಡುವ ಕಲಾಪವು ಸಾಕಷ್ಟಿರುತ್ತದೆ.

**ಪೂರ್ವೇದ್ಯುರಿಧ್ಮಾಬರ್ಹಿಃ ಕರೋತಿ ।**

— ತೈ. ಬ್ರಾ. 3.2.3.

ಎಂಬ ಶ್ರುತಿವಚನದಂತೆ ಇಷ್ಟಿಯ ಹಿಂದಿನ ದಿನವೇ ಇಧ್ಮ ಮತ್ತು ದರ್ಭೆಗಳನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ಅಲ್ಲದೆ ದರ್ಶೇಷ್ಟಿಯಲ್ಲಿ ಮಾತ್ರ ಸಾನ್ನಾಯ್ಯವು ಹವಿಸ್ಸಾಗಿರುವುದರಿಂದ ವತ್ಸಾಪಾಕರಣವು ಪ್ರಸಕ್ತವಾಗಿರುತ್ತದೆ. ಹಸುಗಳನ್ನೂ ಕರುಗಳನ್ನೂ ಮುತ್ತುಗದ ಶಾಖೆಯಿಂದ ಬೇರ್ಪಡಿಸಿ ಮೇಯಲು ದೂರ ಮಾಡುವುದು **ವತ್ಸಾಪಾಕರಣ.**

ಪೂರ್ವದಿನದ ಕಾರ್ಯಗಳು

ಅಗ್ನಿಹೋತ್ರವನ್ನು ಅನುಷ್ಠಿಸುತ್ತಿರುವ ಯಜಮಾನನು ದರ್ಶೇಷ್ಟಿಯನ್ನು ಮಾಡುವಾಗ ಅಮಾವಾಸ್ಯೆಯಂದು ವೇದಿಯ ದಕ್ಷಿಣಕ್ಕೆ ತನ್ನ ಸ್ಥಾನದಲ್ಲಿ ಕುಳಿತು, ಆಚಮನವನ್ನು ಮಾಡಿ ಆಹವನೀಯಾಗ್ನಿಯನ್ನು ಪರಿಷೇಚನ ಮಾಡುತ್ತಾನೆ. ಬಳಿಕ ನಾಲ್ಕು ಸಮಿತ್ತುಗಳನ್ನು ಹೋಮಿಸಿ, ವ್ರತಗ್ರಹಣವನ್ನು ಮಾಡಿ ಪುನಃ ಪರಿಷೇಚನವನ್ನು ಮಾಡಬೇಕು. ನಂತರ ಅಧ್ವರ್ಯುವು ವಿಹಾರದಿಂದ ಪೂರ್ವದಿಕ್ಕಿಗೆ ಹೊರಟು ಹಸಿಯಾದ ಎಲೆಯಿಂದ ಕೂಡಿದ ಮುತ್ತುಗದ ಶಾಖೆಯನ್ನು ವತ್ಸಾಪಾಕರಣಕ್ಕಾಗಿ ಕತ್ತಿಯಿಂದ ಕತ್ತರಿಸಬೇಕು. ತೈತ್ತಿರೀಯಸಂಹಿತೆಯ ಪ್ರಾರಂಭದ ಮಂತ್ರವಾದ

**ಇಷೇ ತ್ವಾ**



ಎಂಬುದನ್ನು ಇಲ್ಲಿ ಹೇಳಬೇಕು. ಆ ಪಲಾಶಶಾಖೆಯಿಂದ ಆರು ಹಸುಗಳು ಮತ್ತು ಅವುಗಳ ಕರುಗಳನ್ನು ಬೇರ್ಪಡಿಸಿ ಅವುಗಳನ್ನು ಬೇರೆ ಬೇರೆ ಜಾಗಗಳಿಗೆ ಮೇಯಲಿಕ್ಕೆ ಕಳಿಸಬೇಕು. ಈ ಕಲಾಪಕ್ಕೆ **ವತ್ಸಾಪಾಕರಣವೆಂದು** ಹೆಸರು.

ನಂತರ ಆ ಶಾಖೆಯನ್ನು ತಂದು ಗಾರ್ಹಪತ್ಯದ ಮೇಲ್ಭಾಗದಲ್ಲಿ ಸುರಕ್ಷಿತವಾಗಿ ಇಡಬೇಕು. ಬಳಿಕ ಅಶ್ವಪರ್ಶುವಿನಿಂದಾಗಲೀ (ಕುದುರೆಯ ಪಕ್ಕೆಲುಬು- ಹರಿತವಾದುದು), ಕತ್ತಿಯಿಂದಾಗಲೀ ಇಷ್ಟಿಗೆ ಅಗತ್ಯವಾದ ದರ್ಭೆಯನ್ನು ಕತ್ತರಿಸಬೇಕು. ಈ ಎರಡು ಸಾಧನಗಳನ್ನೂ ಕತ್ತರಿಸಲು ತೆಗೆದುಕೊಂಡು ಹೋಗುವ ಮೊದಲು ಗಾರ್ಹಪತ್ಯದಲ್ಲಿ ಕಾಯಿಸಿರಬೇಕು. ನಂತರ ದರ್ಭೆಯು ಬೆಳೆದಿರುವ ಸ್ಥಳಕ್ಕೆ ಹೋಗಿ ಯಾಗಕ್ಕೆ ಅವಶ್ಯವಿರುವಷ್ಟು ದರ್ಭೆಯ ಮುಷ್ಟಿಯನ್ನು ಕತ್ತರಿಸಬೇಕು. ದರ್ಭೆಯನ್ನು ಕತ್ತರಿಸುವಾಗ ಒಟ್ಟು ಆರು ಮುಷ್ಟಿಗಳಷ್ಟು ದರ್ಭೆಯನ್ನು ಕತ್ತರಿಸುವುದು ಅಗತ್ಯ. ಒಂದು ಮುಷ್ಟಿ ದರ್ಭೆಯು ಪ್ರಸ್ತರಕ್ಕೂ, ಮೂರು ಮುಷ್ಟಿಗಳಷ್ಟು ದರ್ಭೆಯು ಅಂತರ್ವೇದಿಯಲ್ಲಿ ಹರಡುವುದಕ್ಕೂ, ಒಂದು ಮುಷ್ಟಿಯು ಪರಿಸ್ತರಣ ಮುಂತಾದವುಗಳನ್ನು ಮಾಡುವುದಕ್ಕೂ ಮತ್ತು ವೇದ, ವೇದಪರಿವಾಸನಗಳಿಗೆ ಇನ್ನೊಂದು ಮುಷ್ಟಿಯ ದರ್ಭೆಯೂ ವಿನಿಯೋಗವಾಗುವುದು. ಈ ದರ್ಭೆಗಳ ಮುಷ್ಟಿಯ ಪ್ರಮಾಣ ದರ್ಶ-ಪೂರ್ಣಮಾಸಗಳಿಗೆ. ಉತ್ತರೋತ್ತರ ಯಾಗಗಳಲ್ಲಿ ವೇದಿಯ ಪ್ರಮಾಣವನ್ನನುಸರಿಸಿ ಮೂರು ಮುಷ್ಟಿಯ ಬದಲು ಐದು, ಏಳು, ಒಂಬತ್ತು, ಹನ್ನೊಂದು ಅಥವಾ ಇನ್ನೂ ಹೆಚ್ಚು ಬೆಸ ಸಂಖ್ಯೆಯಷ್ಟು ದರ್ಭೆಯ ಮುಷ್ಟಿಗಳನ್ನು ಕತ್ತರಿಸಬೇಕಾಗುತ್ತದೆ.

ಮೂರು ದರ್ಭೆಗಳನ್ನು ತೆಗೆದುಕೊಂಡು ಅವುಗಳ ತುದಿಗೆ ಪುನಃ ಮೂರು ದರ್ಭೆಗಳನ್ನು ಹನ್ನೆರಡು ದರ್ಭೆಗಳವರೆಗೆ ಜೋಡಿಸಿ ಹುರಿಯಂತೆ ಹೊಸೆದು ದರ್ಭೆಯ ಹಗ್ಗವೊಂದನ್ನು ತಯಾರಿಸಬೇಕು. ಈ ದರ್ಭೆಯ ರಜ್ಜು (ಹುರಿ) ವಿಗೆ **ಶುಲ್ಬ** ವೆಂದು ಹೆಸರು. ಆ ಶುಲ್ಬದಿಂದ ಮೊದಲಿನ ನಾಲ್ಕು ಮುಷ್ಟಿಗಳಷ್ಟು ದರ್ಭೆಗಳನ್ನು ಇಟ್ಟು ಕಟ್ಟಬೇಕು. ಉಳಿದ ದರ್ಭೆಯ ಮುಷ್ಟಿಯನ್ನು ಬುಡದ ಅರ್ಧದಲ್ಲಿ ಮಡಿಚಿ, ಉಳಿದ ಅರ್ಧವನ್ನು ಜಡೆಯಂತೆ ಹೆಣೆದು ಕೊನೆಗೆ ಗಂಟು ಹಾಕಬೇಕು. ಮಡಿಸಿದ ಭಾಗವೇ ವೇದ. ಹೆಣೆದ ಭಾಗವೇ ವೇದಪರಿವಾಸನ.



ಹೀಗೆ ದರ್ಭೆಗಳನ್ನು ಸಂಗ್ರಹಿಸಿದ ನಂತರ ಯಾಗಕ್ಕೆ ಬೇಕಾಗುವ ಸಮಿತ್ತನ್ನು (ಇಧ್ಮ) ಕತ್ತರಿಸಬೇಕು. ಬಾಹುಪ್ರಮಾಣದ ಮೂರು ಸಮಿಧೆಗಳನ್ನೂ (ಪರಿಧಿಗಾಗಿ), ಪ್ರಾದೇಶಪ್ರಮಾಣದ ಹದಿನೆಂಟು ಸಮಿಧೆಗಳನ್ನೂ-ಹೀಗೆ ಇಪ್ಪತ್ತೊಂದು ಸಮಿಧೆಗಳನ್ನು ಇನ್ನೊಂದು ಶುಲ್ಬದಿಂದ ಕಟ್ಟಿ ಗಾರ್ಹಪತ್ಯದ ಮೇಲ್ಭಾಗದಲ್ಲಿ ಸ್ಥಾಪಿಸಬೇಕು. ಈ ಕಲಾಪಗಳನ್ನು **ಇಧ್ಮಾಬರ್ಹಿರಾಹರಣ** ಎನ್ನುತ್ತಾರೆ.

ಸೋಮಯಾಜಿಗಳು ಮಾಡಬೇಕಾದ ದರ್ಶೇಷ್ಟಿಯಲ್ಲಿ ವಿಶೇಷವಿದೆಯಷ್ಟೆ. ಸೋಮಯಾಜಿಗಳಾದವರು ದರ್ಶೇಷ್ಟಿಯನ್ನು ಮಾಡುವಾಗ ವೇದಿಕರಣವನ್ನು ಮಾಡಿದ ನಂತರ ಈ ಹಿಂದಿನ ದಿನ ರಾತ್ರಿ ಸಾಯಂಕಾಲದ ಅಗ್ನಿಹೋತ್ರವನ್ನು ಮಾಡಿ, ಬೆಳಿಗ್ಗೆ ತಂದ ಪಲಾಶಶಾಖೆಯ ಎಲೆಗಳನ್ನೆಲ್ಲ ತೆಗೆದು ಗಾರ್ಹಪತ್ಯದ ಮುಂದೆ ವಿಸರ್ಜಿಸಬೇಕು. ನಂತರ ಶಾಖೆಯ ಅಗ್ರದ ಪ್ರಾದೇಶಮಾತ್ರದಷ್ಟನ್ನು ಕತ್ತರಿಸಿ ಅದಕ್ಕೆ ದರ್ಭೆಗಳನ್ನು ಸೇರಿಸಿ ಹೆಣೆದು ಅಗ್ರ ಮತ್ತು ಮೂಲಗಳಲ್ಲಿ ಗಂಟನ್ನು ಹಾಕಬೇಕು. ಇದಕ್ಕೆ **ಶಾಖಾಪವಿತ್ರ** ವೆಂದು ಹೆಸರು. ಶಾಖೆಯ ಉಳಿದ ಭಾಗಕ್ಕೆ **ಉಪವೇಷ**ವೆಂದು ಹೆಸರು.

ಗಾರ್ಹಪತ್ಯದ ಉತ್ತರಕ್ಕೆ ದರ್ಭೆಗಳನ್ನು ಪೂರ್ವಾಗ್ರವನ್ನಾಗಿಟ್ಟು ದೋಹನಪಾತ್ರ, ಶಾಖಾಪವಿತ್ರ, ಎರಡು ಪಾತ್ರೆಗಳು (ಸಾಯಂದೋಹ ಮತ್ತು ಪ್ರಾತರ್ದೋಹದ ಹಾಲನ್ನು ಕಾಯಿಸಲು) ಇವುಗಳನ್ನು ಕೆಳಮುಖವಾಗಿ ಇಟ್ಟು ನಂತರ ಮೇಲ್ಮುಖ ಮಾಡಿ ಪ್ರೋಕ್ಷಿಸಬೇಕು. ಬಳಿಕ ಉಪವೇಷದಿಂದ ಗಾರ್ಹಪತ್ಯಾಗ್ನಿಯ ಅಂಶವನ್ನು ಕುಂಡದ ಒಳಗೇ ಉತ್ತರ ಭಾಗಕ್ಕೆ ಬೇರ್ಪಡಿಸಿ, ಅದರ ಮೇಲೆ ಸಾನ್ನಾಯ್ಯತಪನಿಯನ್ನಿಟ್ಟು ಅದರ ಮೇಲೆ ಪೂರ್ವಾಗ್ರವಾಗಿ ಶಾಖಾಪವಿತ್ರವನ್ನಿಟ್ಟು ಒಂದೊಂದೇ ಹಸುವಿನ ಹಾಲನ್ನು ಕರೆದು ಪಾತ್ರೆಯಲ್ಲಿ ಹಾಕಬೇಕು. ದೋಹನಪಾತ್ರದಿಂದ ಸಂಕ್ಷಾಲನ ಜಲವನ್ನು (ತೊಳೆದ ನೀರು) ಸಾನ್ನಾಯ್ಯತಪನಿಗೆ ಹಾಕಿ ಹಾಲನ್ನು ಚೆನ್ನಾಗಿ ಕಾಯಿಸಬೇಕು. ಹಾಲು ಆರಿದ ಮೇಲೆ ಮೊಸರಿನಿಂದ ಹೆಪ್ಪು ಹಾಕಬೇಕು. ನಂತರ ಸಾಯಂಕಾಲದ ಅಗ್ನಿಹೋತ್ರದ ಶೇಷವನ್ನು ಮೇಲಿನಿಂದ ಹಾಕಿ ಶಿಕ್ಯ (ನೆಲುವು) ದಲ್ಲಿ ಸುರಕ್ಷಿತವಾಗಿ ಇಡಬೇಕು. ಅದರ ಮೇಲೆ ನೀರಿನ ತಟ್ಟೆಯನ್ನು ಮುಚ್ಚಬೇಕು. ಹಾಲನ್ನು ಕಾಯಿಸುವ ಸಲುವಾಗಿ ಗಾರ್ಹ ಪತ್ಯದಲ್ಲಿ ಉತ್ತರಕ್ಕೆ ಸರಿಸಿದ ಅಗ್ನಿಯನ್ನು ಉಪವೇಷದಿಂದ ಗಾರ್ಹಪತ್ಯದಲ್ಲಿಯೇ



ಮತ್ತೆ ಸೇರಿಸಿಬಿಡಬೇಕು. ಇದೆಲ್ಲವನ್ನೂ ಸಾಯಂದೋಹವೆನ್ನುತ್ತಾರೆ. ಬಳಿಕ ಪ್ರಾತಃಕಾಲದ ದೋಹಕ್ಕಾಗಿ ದರ್ಭೆಗಳಿಂದ ಮಂತ್ರವಿಲ್ಲದೆ ವತ್ಸಾಪಾಕರಣ ವನ್ನು ಮಾಡಬೇಕು.

ಹೀಗೆ ದರ್ಶೇಷ್ಟಿಯನ್ನು ಮಾಡುವಾಗ ಪೂರ್ವದಿನದಲ್ಲಿ ವತ್ಸಾಪಾ ಕರಣ, ಇಧ್ಮಾಬರ್ಹಿರಾಹರಣ, ಸಾಯಂದೋಹ ಮುಂತಾದ ಕಾರ್ಯ ಕಲಾಪಗಳಿರುತ್ತವೆ. ಶ್ರೌತಪ್ರಕ್ರಿಯೆಯಲ್ಲಿ ಸಣ್ಣ ಸಣ್ಣ ಕಲಾಪಗಳನ್ನೂ ಮಂತ್ರ ಗಳನ್ನು ಹೇಳಿಯೇ ಮಾಡಬೇಕು. ಮಂತ್ರವಿಲ್ಲದ ಕಲಾಪವು ತುಂಬ ಕಡಿಮೆ. ಕೆಲವೆಡೆ ಮಂತ್ರಗಳನ್ನು ಹೇಳಿ ಸಿದ್ಧಪಡಿಸಬೇಕಾದ ವಸ್ತುಗಳು ಮೊದಲೇ ಸಂಗ್ರಹಿಸಲ್ಪಟ್ಟಿದ್ದರೆ ಅಲ್ಲಿಯೂ ಮಂತ್ರವನ್ನು ಹೇಳಲೇಬೇಕು.

**ಸಿದ್ಧೇ ಮಂತ್ರಾಃ ಪ್ರಯೋಕ್ತವ್ಯಾಃ ಸಾನ್ನಾಯ್ಯೇ ಮಾರ್ತಿಕೇ ತಥಾ ।**
**ಛಿನ್ನೇ ಪಿಷ್ಟೇ ತಥಾ ಲೂನೇ... ...**

ಎಂಬಂತೆ ಹವಿಸ್ಸು, ಮೃತ್ತಿಕಾಪಾತ್ರ, ಸಮಿತ್ತು, ಪುರೋಡಾಶ, ದರ್ಭೆಯನ್ನು ಕತ್ತರಿಸುವುದು ಮುಂತಾದವುಗಳು ಸಿದ್ಧವಾಗಿದ್ದರೂ ಮಂತ್ರೋಚ್ಚಾರಣೆ ಯನ್ನಂತೂ ಮಾಡಲೇಬೇಕೆಂಬ ವಿಧಿಯಿದೆ.

## ಇಷ್ಟಿಯ ದಿನದ ಕಲಾಪಗಳ ವಿವರಣೆ

ಬೆಳಗಿನ ಅಗ್ನಿಹೋತ್ರವಾದ ಮೇಲೆ ಅಧ್ವರ್ಯುವು ಆಹವನೀ ಯಾಗ್ನಿಯ ಉತ್ತರಕ್ಕೆ ನಿಂತು ಜಲಸ್ಪರ್ಶ ಮಾಡಿ ಹಸ್ತಪ್ರಕ್ಷಾಲನವನ್ನು ಮಾಡಿ ಕೊಂಡು, ಹಸ್ತಸಮ್ಮಾರ್ಜನ ಮಾಡಿಕೊಂಡು ಆಹವನೀಯ, ದಕ್ಷಿಣಾಗ್ನಿ ಮತ್ತು ಗಾರ್ಹಪತ್ಯಗಳಿಗೆ ಪರಿಸ್ತರಣವನ್ನು ಹಾಕಬೇಕು.

ದಕ್ಷಿಣಾಗ್ನಿಗೆ **ಅನ್ವಾಹಾರ್ಯಪಚನ** ವೆಂದು ಇನ್ನೊಂದು ಹೆಸರು.

**ದಕ್ಷಿಣೇಗ್ನೌ ಜುಹೋತಿ ।**

**ಯದನ್ವಾಹಾರ್ಯಪಚನೇಽನ್ವಾಹಾರ್ಯಂ ಪಚಂತಿ ।**

ಎಂಬ ಎರಡು ಶ್ರುತಿವಚನಗಳೇ ಇದಕ್ಕೆ ಪ್ರಮಾಣ.



ಯಜಮಾನನಿಗೆ ಗೃಹಪತಿ ಎಂಬ ಹೆಸರಿದೆ. ಅವನೊಡನೆ ಇರುವ ಅಲ್ಲದೆ ಪತ್ನೀಸಂಯಾಜವನ್ನು ಅನುಷ್ಠಿಸುವ ಅಗ್ನಿಗೆ ಗಾರ್ಹಪತ್ಯ ಎಂದು ಹೆಸರು.

**ಗೃಹಪತಿನಾ ಸಂಯುಕ್ತೇ ಞ್ಯಃ ।**

— ಪಾ.ಸೂ. 4.4.90

**ಗೃಹಪತಿ + ಞ್ಯ = ಗಾರ್ಹಪತ್ಯ. ಗೃಹಪತಿ = ಯಜಮಾನ.**

ಆಹುತಿಯನ್ನು ನೀಡುವ ಅಗ್ನಿಗೆ **ಆಹವನೀಯ** ಎಂದು ಹೆಸರು. ಇಷ್ಟಿಯದಿನ ಪರಿಸ್ತರಣ ಹಾಕುವ ಕಾರ್ಯವನ್ನು ಮೊದಲ ದಿನವೂ ಅನುಷ್ಠಿಸಬಹುದು. ಪರಿಸ್ತರಣದ ನಂತರ ಅಧ್ವರ್ಯುವು ಅಂತರ್ವೇದಿಯಲ್ಲಿ ಪೂರ್ವಾಗ್ರವಾಗಿ ದರ್ಭೆಗಳನ್ನು ಹರಡಿ ಅದರಲ್ಲಿ ಯಾಗಕ್ಕೆ ಬೇಕಾದ ಪಾತ್ರೆಗಳನ್ನು ಪ್ರತಿ ಸಾಲಿಗೆ ಎರಡರಂತೆ ಪಾತ್ರೆಗಳನ್ನು ಕೆಳಮುಖವಾಗಿರುವಂತೆ ಆಸಾದನೆ ಮಾಡುತ್ತಾನೆ (ಇಡುತ್ತಾನೆ). ಇಷ್ಟಿಗಾಗಿ ಇಡುವ ಪಾತ್ರೆಗಳು ಸ್ಫ್ಯ, ಕಪಾಲಗಳು, ಅಗ್ನಿಹೋತ್ರಹವಣೀ, ಶೂರ್ಪ, ಕೃಷ್ಣಾಜಿನ, ಶಮ್ಯಾ, ಉಲೂಖಲ, ಮುಸಲ, ದೃಷತ್, ಉಪಲ, ಜುಹೂ, ಉಪಭೃತ್, ಸ್ರುವ, ಧ್ರುವಾ, ಪ್ರಾಶಿತ್ರಹರಣ, ಇಡಾಪಾತ್ರ, ಮೋಕ್ಷಣ, ಪಿಷ್ಟೋದ್ವಪನೀ, ಪ್ರಣೀತಾಪ್ರಣಯನ, ಆಜ್ಯಸ್ಥಾಲೀ, ವೇದ, ದಾರುಪಾತ್ರೀ, ಯೋಕ್ತ್ರ, ವೇದಪರಿವಾಸನ, ಧೃಷ್ಟಿ, ಇಧ್ಮಪ್ರವ್ರಶ್ಚನ, ಅನ್ವಾಹಾರ್ಯಸ್ಥಾಲೀ, ಮದಂತೀ, ಅಂತರ್ಧಾನಕಟ, ಫಲೀಕರಣ-ಇವುಗಳು. ದರ್ಶಕ್ಕೆ ಹತ್ತೊಂಬತ್ತು ಕಪಾಲಗಳು. ಪೂರ್ಣಮಾಸಕ್ಕೆ ಮೂವತ್ತು ಕಪಾಲಗಳು.

ಅಂತರ್ವೇದಿಯಲ್ಲಿ (ವೇದಿಯ ಒಳಭಾಗ) ಅಧ್ವರ್ಯುವು ಪಾತ್ರಾಸಾದನವನ್ನು ಮಾಡಿದ ನಂತರ ಬ್ರಹ್ಮನು ಈಶಾನ್ಯದಲ್ಲಿ ಆಚಮನವನ್ನು ಮಾಡಿ ಆಹವನೀಯದ ಮುಂಭಾಗದಿಂದ ಬಂದು ದಕ್ಷಿಣದಲ್ಲಿ ಆಸನದ ಮೇಲೆ ಉತ್ತರಾಭಿಮುಖನಾಗಿ ಕೂರುತ್ತಾನೆ. ಆಗ ಅಧ್ವರ್ಯುವು ಗಾರ್ಹಪತ್ಯದಿಂದ ಆಹವನೀಯದವರೆಗೆ ಮಧ್ಯರೇಖೆಯ ಮೇಲೆ ಸಂತತವಾಗಿ ದರ್ಭೆಗಳನ್ನು ಹಾಕುತ್ತಾನೆ. ಇದನ್ನು **ಪೃಷ್ಠ್ಯಾಸ್ತರಣ** ಎನ್ನುತ್ತಾರೆ. ನಂತರ ಗೇಣು ಪ್ರಮಾಣದ ಸರಿಯಾದ ಅಗ್ರವಿರುವ ಎರಡು



ದರ್ಭೆಗಳನ್ನು ಸಾಧನದಿಂದ ಕತ್ತರಿಸಿ ಪವಿತ್ರವನ್ನು ಮಾಡಬೇಕು. ಅದನ್ನು ಬುಡದಿಂದ ತುದಿಯವರೆಗೆ ಜಲದಿಂದ ಅನುಮಾರ್ಜನೆ ಮಾಡಬೇಕು. ಹೀಗೆ ಪವಿತ್ರವನ್ನು ಶುದ್ಧಗೊಳಿಸಿ ಗಾರ್ಹಪತ್ಯದ ಉತ್ತರಕ್ಕೆ ಕುಳಿತು ಪೂರ್ವಾಗ್ರವಾದ ದರ್ಭೆಗಳನ್ನಿಟ್ಟು ಅದರ ಮೇಲೆ ಪ್ರಣೀತಾಪ್ರಣಯನಪಾತ್ರೆಯನ್ನು ಇಡಬೇಕು. ಅದರ ಮೇಲೆ ಉತ್ತರಾಗ್ರವಾಗಿ ಪವಿತ್ರವನ್ನಿಟ್ಟು ಬ್ರಹ್ಮನಿಗೆ **ಬ್ರಹ್ಮನ್! ಅಪಃ ಪ್ರಣೇಷ್ಯಾಮಿ** ಎಂಬುದಾಗಿ ಪ್ರೈಷದಿಂದ ತಿಳಿಸಿ **'ಓಂ! ಪ್ರಣಯ'** ಎಂದು ಬ್ರಹ್ಮನಿಂದ ಒಪ್ಪಿಗೆ ಪಡೆಯಬೇಕು. ಬಳಿಕ ಯಜಮಾನನಿಗೆ ಮೌನದಿಂದ ಇರಲು ತಿಳಿಸಬೇಕು. ಪ್ರಣೀತಾಪಾತ್ರದಲ್ಲಿ ಅರ್ಧಕ್ಕಿಂತ ಹೆಚ್ಚು ಜಲವನ್ನು ತುಂಬಿ, ಪಾತ್ರೆಯನ್ನು ಮುಖದಷ್ಟು ಎತ್ತರದಲ್ಲಿ ಆಹವನೀಯದ ಉತ್ತರಕ್ಕೆ ತೆಗೆದುಕೊಂಡು ಹೋಗಿ ಪೂರ್ವಾಗ್ರವಾದ ದರ್ಭೆಗಳ ಮೇಲೆ ಇಟ್ಟು ದರ್ಭೆಗಳಿಂದ ಮುಚ್ಚಬೇಕು.

## ಹವಿರ್ನಿರ್ವಾಪ, ಉತ್ಪವನ ಇತ್ಯಾದಿಗಳು

ಅಧ್ವರ್ಯುವು ಪವಿತ್ರವನ್ನು ತೆಗೆದುಕೊಂಡು ಬಲಕ್ಕೆ ತಿರುಗಿ ಪಶ್ಚಿಮಕ್ಕೆ ಬಂದು ಬಲಗೈಯಿಂದ ಅಗ್ನಿಹೋತ್ರಹವಣಿಯನ್ನೂ, ಎಡಗೈಯಿಂದ ಶೂರ್ಪವನ್ನೂ ತೆಗೆದುಕೊಂಡು ಗಾರ್ಹಪತ್ಯದಲ್ಲಿ ಕಾಯಿಸಬೇಕು. ಗಾರ್ಹಪತ್ಯದ ಪಶ್ಚಿಮಕ್ಕೆ ಧಾನ್ಯವನ್ನು ತುಂಬಿದ ಗಾಡಿಯನ್ನು ಪೂರ್ವಾಭಿಮುಖವಾಗಿ ಮೊದಲೇ ಸ್ಥಾಪಿಸಿರಬೇಕು. ಅದರ ನೊಗವನ್ನು ಅಭಿಮರ್ಶಿಸಿ ಗಾಡಿಗೆ ಅಭಿಮಂತ್ರಣ ಮಾಡಬೇಕು. ನಂತರ ಗಾಡಿಯ ಅಕ್ಷದಂಡದ (ಚಕ್ರಗಳನ್ನು ಸೇರಿಸುವ ದಂಡ) ದಕ್ಷಿಣಭಾಗದಿಂದ ಗಾಡಿಯನ್ನು ಏರಿ ಮೂಕಿನಲ್ಲಿ (ಗಾಡಿಯ ಮುಂದಿನ ಭಾಗದಲ್ಲಿ) ಶೂರ್ಪವನ್ನಿಡಬೇಕು. ಶೂರ್ಪದಲ್ಲಿ ಅಗ್ನಿಹೋತ್ರಹವಣಿಯನ್ನೂ, ಅದರಲ್ಲಿ ಪವಿತ್ರವನ್ನೂ ಇಟ್ಟು ಪುರೋಡಾಶಕ್ಕಾಗಿ ಇಟ್ಟಿರುವ ಧಾನ್ಯವನ್ನು ನೋಡಬೇಕು. ಪುರೋಡಾಶಕ್ಕಾಗಿ ವ್ರೀಹಿ (ಭತ್ತ) ಅಥವಾ ಯವ (ಜವೆಗೋಧಿ) ವನ್ನು ಬಳಸುತ್ತಾರೆ. ನಂತರ ಆ ಧಾನ್ಯದಲ್ಲಿರುವ ಕಸಕಡ್ಡಿ



ಯನ್ನು ತೆಗೆದುಹಾಕಬೇಕು. ಬಳಿಕ ಅಧ್ವರ್ಯುವು ದಶಹೋತೃಮಂತ್ರವನ್ನು ಹೇಳುತ್ತಾನೆ. ತೈತ್ತಿರೀಯ ಆರಣ್ಯಕ ದಲ್ಲಿರುವ

**ಚಿತ್ತಿಃ ಸ್ರುಕ್।**

ಎಂದು ಪ್ರಾರಂಭವಾಗುವ ಹತ್ತು ವಾಕ್ಯಗಳಿಗೆ ದಶಹೋತೃಮಂತ್ರಗಳೆಂದು ಹೆಸರು. ಹನ್ನೊಂದನೆಯ ವಾಕ್ಯವಾದ

**ವಾಚಸ್ಪತೇ ವಿಧೇ ನಾಮನ್।**

ಎಂಬುದರ ನಂತರ ಅನುವಾಕವು ಮುಗಿಯುವವರೆಗೆ ಗ್ರಹಭಾಗವೆಂದು ಹೆಸರು.

**ಹವಿರ್ನಿರ್ವಪ್ಸನ್ ದಶಹೋತಾರಂ ವ್ಯಾಚಕ್ಷೀತ ।**

ಮಂತ್ರವನ್ನು ಹೇಳಿ ಯಜಮಾನನನ್ನು ಕುರಿತು **ಹವಿರ್ನಿರ್ವಪ್ಸ್ಯಾಮಿ** ಎಂದು ತಿಳಿಸಿ **ಓಂ, ನಿರ್ವಪ** ಎಂದು ಅವನಿಂದ ಒಪ್ಪಿಗೆಯನ್ನು ಪಡೆದು ಪವಿತ್ರಸಹಿತವಾದ ಅಗ್ನಿಹೋತ್ರಹವಣಿಯಿಂದ ಹವಿರ್ನಿರ್ವಾಪವನ್ನು ಮಾಡಬೇಕು. ದೇವತೆಯ ಹವಿಸ್ಸಿಗಾಗಿ ಒಂದು ಯಜ್ಞಪಾತ್ರೆಯಿಂದ ಇನ್ನೊಂದು ಯಜ್ಞಪಾತ್ರೆಗೆ ದ್ರವ್ಯವನ್ನು ಹಾಕಿಕೊಳ್ಳುವುದೇ ಹವಿರ್ನಿರ್ವಾಪ. ಧಾನ್ಯದ ಗಾಡಿಯು ಇಲ್ಲದಿದ್ದರೆ ಅದರ ಸ್ಥಾನದಲ್ಲಿ ಸ್ಥ್ಯವನ್ನಿಟ್ಟು ಹವಿರ್ನಿರ್ವಾಪವನ್ನು ಮಾಡಬೇಕು. ಪ್ರಾರಂಭದಲ್ಲಿ ಅಗ್ನಿದೇವತೆಗೆ ಮೂರು ಸಲ ಮಂತ್ರದಿಂದ ನಿರ್ವಾಪವನ್ನು ಮಾಡಿ ಶೂರ್ಪದಲ್ಲಿ ಹಾಕಿಕೊಳ್ಳಬೇಕು. ನಾಲ್ಕನೆಯ ಬಾರಿ ಮಂತ್ರವಿಲ್ಲದೇ (ತೂಷ್ಣೀಂ) ನಿರ್ವಾಪವನ್ನು ಮಾಡಬೇಕು. ದರ್ಶಯಾಗದಲ್ಲಿ ಇಂದ್ರಾಗ್ನಿಗೂ, ಸೋಮಯಾಜಿಯಾದರೆ ಸೋಮಯಾಗದ ನಂತರ ಒಂದು ವರ್ಷ ಇಂದ್ರನಿಗೂ, ನಂತರ ಮಹೇಂದ್ರ ದೇವತೆಗೂ ಹವಿರ್ನಿರ್ವಾಪವನ್ನು ಮಾಡಬೇಕು. ಪೂರ್ಣಮಾಸೇಷ್ಟಿಯಲ್ಲಿ ಯಾದರೆ ಅಗ್ನಿಷೋಮ ದೇವತೆಗೂ, ಇಂದ್ರವೈಮೃಧ ದೇವತೆಗೂ ನಿರ್ವಾಪವನ್ನು ಮಾಡಬೇಕು. ಹವಿರ್ನಿರ್ವಾಪವನ್ನು ಮಾಡುವಾಗ ಅಗ್ನಿದೇವತೆಗಾದರೆ



**ಆಗ್ನಯೇ ಜುಷ್ಟಂ ನಿರ್ವಪಾಮಿ ।**

ಎಂದೂ, ಇಂದ್ರಾಗ್ನಿಗಾದರೆ

**ಇಂದ್ರಾಗ್ನಿಭ್ಯಾಂ ಜುಷ್ಟಂ ನಿರ್ವಪಾಮಿ ।**

ಎಂದೂ, ಇಂದ್ರ ವೈಮೃಧ ದೇವತೆಗಾದರೆ

**ಇಂದ್ರಾಯ ವೈಮೃಧಾಯ ಜುಷ್ಟಂ ನಿರ್ವಪಾಮಿ ।**

ಎಂದೂ ಅಧ್ವರ್ಯುವು ಹೇಳುತ್ತಾನೆ.

ಪ್ರಜಾಪತಿ ಅಥವಾ ವಿಷ್ಣುದೇವತೆಯು ಆಜ್ಯದೇವತೆಯಾದುದರಿಂದ ಅವರಿಗೆ ಹವಿರ್ನಿರ್ವಾಪವಿಲ್ಲ. ನಿರ್ವಾಪ ಮಾಡಿದ ಧಾನ್ಯವನ್ನೂ, ಉಳಿದ ಧಾನ್ಯ ವನ್ನೂ ಅಭಿಮರ್ಶಿಸಿ ನಿರ್ವಾಪ ಮಾಡಿದ ಮತ್ತು ಮಾಡದ ಎರಡೂ ಧಾನ್ಯವನ್ನು ಸೇರಿಸಿ ಗಾರ್ಹಪತ್ಯದ ಉತ್ತರಕ್ಕೆ ಆಸಾದನ ಮಾಡಬೇಕು. ನಂತರ ಅಗ್ನಿಹೋತ್ರಹವಣಿಯಲ್ಲಿ ಪವಿತ್ರವನ್ನು ಅಡ್ಡವಾಗಿ ಇಟ್ಟು, ಜಲವನ್ನು ತುಂಬಿ ಪವಿತ್ರದಿಂದ ಮೂರು ಬಾರಿ ಉತ್ಪವನ ಮಾಡಬೇಕು. ಆಮೇಲೆ ನಿಂತುಕೊಂಡು ಪ್ರೋಕ್ಷಣಿಯ ಜಲವನ್ನು ಅಭಿಮಂತ್ರಿಸಿ ಆ ಜಲವನ್ನು ಮೂರು ಬಾರಿ ಕೈಯಲ್ಲಿ ತೆಗೆದುಕೊಂಡು ಪುನಃ ಜಲಕ್ಕೇ ಪ್ರೋಕ್ಷಿಸಬೇಕು. ನಂತರ ವೇದಿಯಲ್ಲಿ ಇಟ್ಟ ಪಾತ್ರೆಗಳನ್ನು ಮೇಲ್ಮುಖವಾಗಿ ಇಡಬೇಕು. ನಿರ್ವಾಪ ಮಾಡಿದ ಧಾನ್ಯವನ್ನೂ, ಯಜ್ಞಪಾತ್ರೆಗಳನ್ನೂ ಮೂರು ಬಾರಿ ಪ್ರೋಕ್ಷಿಸಬೇಕು. ಉಳಿದ ಪ್ರೋಕ್ಷಣಿಯನ್ನು ಗಾರ್ಹಪತ್ಯದ ಪೂರ್ವಕ್ಕೆ ಸ್ಥಾಪಿಸಬೇಕು.

ಪುರೋಡಾಶವನ್ನು ತಯಾರಿಸುವುದಕ್ಕಾಗಿ ಧಾನ್ಯವನ್ನು ನಿರ್ವಾಪ ಮಾಡಿರುತ್ತಾರಷ್ಟೆ. ಧಾನ್ಯವನ್ನು ಕುಟ್ಟಿ ಪುರೋಡಾಶವನ್ನು ತಯಾರಿಸಲೂ ಸಾಕಷ್ಟು ಕಲಾಪಗಳಿವೆ.

ಧಾನ್ಯವನ್ನು ಕುಟ್ಟುವ ಉಲೂಖಲವನ್ನು ಕೃಷ್ಣಾಜಿನದ ಮೇಲೆ ಇಡ ಬೇಕು. ಕೃಷ್ಣಾಜಿನವನ್ನು ಅದರ ಕಂಠಭಾಗವು ಮೇಲೆ ಬರುವಂತೆ ಹಿಡಿದು ಮೂರು ಬಾರಿ ಕೊಡವಿ ಸ್ವಚ್ಛಗೊಳಿಸಿ, ಕೃಷ್ಣಾಜಿನದ ಕಂಠಭಾಗವು



ಪಶ್ಚಿಮಕ್ಕೂ, ಕೂದಲಿರುವ ಭಾಗವು ಮೇಲಕ್ಕೂ ಬರುವಂತೆ ಅಂತ ರ್ವೇದಿಯ ಉತ್ತರಕ್ಕೆ ಆಸಾದನೆ ಮಾಡಬೇಕು. ಅದರಲ್ಲಿ ಉಲೂಖಲವನ್ನೂ (ಒರಳು) ಉಲೂಖಲದಲ್ಲಿ ನಿರ್ವಾಪ ಮಾಡಿದ ಧಾನ್ಯದ ಸ್ವಲ್ಪ ಭಾಗವನ್ನೂ ಹಾಕಬೇಕು. ನಂತರ ಮುಸಲ (ಒನಕೆ) ದಿಂದ ಧಾನ್ಯವನ್ನು ಕುಟ್ಟಿ ಶೂರ್ಪ ದಿಂದ ಹೊಟ್ಟನ್ನು ಬೇರ್ಪಡಿಸಿ ಅಕ್ಕಿಯನ್ನು ಸಿದ್ಧಪಡಿಸಬೇಕು. ಆಗ ಹವಿಷ್ಕರ್ತನನ್ನು (ಆಗ್ನೀಧ್ರ) ಆಹ್ವಾನಿಸಬೇಕು. ನಂತರ ಶಮ್ಯೆಯಿಂದ ದೃಷತ್ ಮತ್ತು ಉಪಲಗಳಿಗೆ ಕ್ರಮವಾಗಿ ಎರಡು ಮತ್ತು ಒಂದು ಬಾರಿ ಹೀಗೆ ಮೂರು ಬಾರಿ ಬಡಿಯಬೇಕು. ಮಂತ್ರಪೂರ್ವಕವಾಗಿ ಸ್ವಲ್ಪ ತಂಡುಲ (ಅಕ್ಕಿ) ವನ್ನು ಸಿದ್ಧಗೊಳಿಸಬೇಕು. ಬಳಿಕ ಅಧ್ವರ್ಯುವು ಅನ್ಯರ ಸಹಾಯವನ್ನು ಪಡೆದು ಪೂರ್ತಿಗೊಳಿಸಬೇಕು. ನಂತರ ಅಕ್ಕಿಯನ್ನು ತೊಳೆದು ಆ ಜಲವನ್ನು ಅಂತರ್ವೇದಿಯಲ್ಲಿಯಾಗಲೀ, ಉತ್ಕರದಲ್ಲಿಯಾಗಲೀ ಹಾಕಬೇಕು. ಉತ್ಕರ ವೆಂದರೆ ಆಹವನೀಯದ ಉತ್ತರದಿಕ್ಕಿನಲ್ಲಿರುವ ಒಂದು ಸ್ಥಾನ.

ಈ ಸಮಯದಲ್ಲಿಯೇ ಪ್ರಾತರ್ದೋಹನವನ್ನು (ಹಾಲು ಕರೆ ಯುವುದು) ಮಾಡಬೇಕು. ಹಿಂದಿನ ದಿನದ ಸಾಯಂದೋಹದಂತೆಯೇ ಪ್ರಾತ ರ್ದೋಹ. ಆದರೆ ಶಾಖಾಪವಿತ್ರವನ್ನು ಉತ್ತರಾಗ್ರವಾಗಿ ಸ್ಥಾಪಿಸಬೇಕು. ಹಾಲಿಗೆ ಹೆಪ್ಪು ಹಾಕಬಾರದು. ಉಳಿದೆಲ್ಲ ಕಲಾಪವೂ ಸಾಯಂ ದೋಹದಂತೆಯೇ.

ಹಿಂದಿನಂತೆಯೇ ಕೃಷ್ಣಾಜಿನವನ್ನು ಕೊಡವಿ, ವೇದಿಯ ಉತ್ತರಕ್ಕೆ ಆಸಾದನೆ ಮಾಡಬೇಕು. ಅದರಲ್ಲಿ ಶಮ್ಯೆಯನ್ನಿಟ್ಟು ಅದರ ಮೇಲೆ ದೃಷದವನ್ನೂ, ಅದರ ಮೇಲೆ ಉಪಲವನ್ನೂ ಸ್ಥಾಪಿಸಿ ತಂಡುಲವನ್ನು ಹಾಕಿ ಅಭಿಮಂತ್ರಣವನ್ನು ಮಾಡಿ ಪಿಷ್ಟ (ಹಿಟ್ಟು) ವನ್ನು ಸಿದ್ಧಗೊಳಿಸಿ ಕೃಷ್ಣಾಜಿನದಲ್ಲಿ ಹಾಕಿಕೊಳ್ಳಬೇಕು. ಉಳಿದ ತಂಡುಲವನ್ನು ಸಹಾಯಕರಿಂದ ಕುಟ್ಟಿಸಿ ಹಿಟ್ಟನ್ನು ತಯಾರಿಸಿಕೊಳ್ಳಬೇಕು. ಇದು ಪುರೋಡಾಶವನ್ನು ತಯಾರಿಸಲು ಬೇಕಾದ ಪಿಷ್ಟವನ್ನು ತಯಾರಿಸಿಕೊಳ್ಳುವ ವಿಧಾನ. ದೇವತೆಗಳಿಗೆ ಚರುವು (ಅನ್ನ) ಹವಿಸ್ಸಾಗಿದ್ದರೆ ಈ ಪೇಷಣವು (ಕುಟ್ಟುವುದು) ಇರುವುದಿಲ್ಲ.



## ಕಪಾಲೋಪಧಾನ

ದರ್ಶೇಷ್ಟಿಗೆ ಹತ್ತೊಂಬತ್ತು ಕಪಾಲಗಳು. (ಅಗ್ನಿದೇವತೆಗೆ ಎಂಟು ಕಪಾಲಗಳು, ಇಂದ್ರಾಗ್ನಿಗೆ ಹನ್ನೊಂದು ಕಪಾಲಗಳು. ಸೋಮಯಾಜಿಗಳಾದರೆ ಅಗ್ನಿದೇವತೆಗೆ ಎಂಟು, ಇಂದ್ರ ಅಥವಾ ಮಹೇಂದ್ರ ದೇವತೆಗೆ ಹನ್ನೊಂದು. ೮ + ೧೧ = ೧೯) ಪೂರ್ಣಮಾಸೇಷ್ಟಿಗೆ ಮೂವತ್ತು ಕಪಾಲಗಳು. (ಅಗ್ನಿದೇವತೆಗೆ ಎಂಟು ಕಪಾಲಗಳು. ಅಗ್ನೀಷೋಮದೇವತೆಗೆ ಹನ್ನೊಂದು ಕಪಾಲಗಳು. ಇಂದ್ರವೈಮೃಧ ದೇವತೆಗೆ ಹನ್ನೊಂದು ಕಪಾಲಗಳು. ೮ + ೧೧ + ೧೧ = ೩೦ ). ಆಯಾ ಇಷ್ಟಿಗಳಲ್ಲಿ ಅಷ್ಟು ಕಪಾಲಗಳನ್ನು ತೊಳೆದು ಗಾರ್ಹಪತ್ಯದ ಪಶ್ಚಿಮದಲ್ಲಿ ಇಟ್ಟುಕೊಳ್ಳಬೇಕು. ಬಳಿಕ ಕೆಂಡವನ್ನು ತೆಗೆಯುವ ಸೌಟಿನಂತಿರುವ ಸಾಧನವಾದ ಧೃಷ್ಟಿಯಿಂದ ಅಂಗಾರವನ್ನು (ಕೆಂಡ) ತೆಗೆದು ಆಯಾ ದೇವತೆಗಳಿಗೆ ಅನುಗುಣವಾಗಿ ಮಂತ್ರ ಪೂರ್ವಕವಾಗಿ ಉತ್ತರಸಂಸ್ಥೆಯಾಗಿ ಎಂದರೆ ಉತ್ತರ ದಿಕ್ಕಿನೆಡೆಗೆ ಬರುವಂತೆ ಸ್ಥಾಪಿಸಿದ ಕಪಾಲಗಳ ಮೇಲೆ ಹಾಕಿ ಕಪಾಲಗಳು ಚೆನ್ನಾಗಿ ಕಾಯುವಂತೆ ಮಾಡಬೇಕು. ನಂತರ ಮದಂತೀಕುಂಭದಲ್ಲಿ ಜಲವನ್ನು ತುಂಬಿಸಿ ಗಾರ್ಹಪತ್ಯಾಗ್ನಿಯಲ್ಲಿ ಕಾಯಿಸಬೇಕು. ಈ ವಿಧಿಗೆ **ಕಪಾಲೋಪಧಾನ**ವೆಂದು ಹೆಸರು.

## ಪುರೋಡಾಶಶ್ರಪಣ

ಗಾರ್ಹಪತ್ಯದ ಉತ್ತರಕ್ಕೆ ಕುಳಿತು ಪಿಷ್ಟೋದ್ವಪನಿಯಲ್ಲಿ ಎಂದರೆ ಹಿಟ್ಟನ್ನು ಹುರಿಯುವ ಪಾತ್ರೆಯಲ್ಲಿ ಪವಿತ್ರವನ್ನು ಉತ್ತರಾಗ್ರವನ್ನಾಗಿಟ್ಟು ಮೇಲಿನಿಂದ ಪಿಷ್ಟವನ್ನು ಹಾಕಬೇಕು. ಚೆನ್ನಾಗಿ ಕಾಯಿಸಿದ ಮದಂತೀ ಜಲವನ್ನು ಅದರಲ್ಲಿ ಹಾಕಿ ಹಿಟ್ಟನ್ನು ಬೆರೆಸುವ ಸಾಧನವಾದ ಸೌಟಿನಂತಿರುವ ಮೇಕ್ಷಣದಿಂದ ಸಂಯೋಜನ ಮಾಡಬೇಕು. ಆಗ ಗಾರ್ಹಪತ್ಯದ ಮೇಲಿದ್ದ ಪಿಷ್ಟೋದ್ವಪನಿಯನ್ನು ಉತ್ತರಕ್ಕೆ ನೆಲದ ಮೇಲೆ ಇಡಬೇಕು. ಈ ರೀತಿಯಾಗಿ ಚೆನ್ನಾಗಿ ಪಕ್ವವಾದ ಪಿಷ್ಟದಿಂದ ದರ್ಶಯಾಗದಲ್ಲಿ ಕೂರ್ಮದ ಆಕೃತಿ ಯಂತಿರುವ ಎರಡು ಪುರೋಡಾಶಗಳನ್ನೂ, ಪೌರ್ಣಮಾಸದಲ್ಲಿಯಾದರೆ ಮೂರು ಪುರೋಡಾಶಗಳನ್ನೂ ತಯಾರಿಸಬೇಕು. ಕಪಾಲಗಳ ಮೇಲಿಟ್ಟ ಅಂಗಾರಗಳನ್ನು ಪುನಃ ಗಾರ್ಹಪತ್ಯಕುಂಡದಲ್ಲಿ ಹಾಕಿ ಕಪಾಲಗಳ ಮೇಲೆ ಒಂದೊಂದು



ಪುರೋಡಾಶದಂತೆ ಇಡಬೇಕು. ಎಂಟು ಕಪಾಲಗಳ ಮೇಲೆ ಆಗ್ನೇಯ ಪುರೋಡಾಶವನ್ನಿಟ್ಟ ಮೇಲೆ ಆಜ್ಯಸ್ಥಾಲಿಯಲ್ಲಿ ಆಜ್ಯವನ್ನು ನಿರ್ವಾಪ ಮಾಡಬೇಕು. ನಂತರ ಗಾರ್ಹಪತ್ಯಾಗ್ನಿಯಲ್ಲಿ ದರ್ಭೆಗಳನ್ನು ಹೊತ್ತಿಸಿ ಎಲ್ಲ ಹವಿಸ್ಸುಗಳಿಗೂ ಪರ್ಯಗ್ನಿಕರಣವನ್ನು ಮಾಡಬೇಕು. ಹವಿಸ್ಸುಗಳೆಲ್ಲವನ್ನೂ ಉರಿಯುತ್ತಿರುವ ದರ್ಭೆಗಳಿಂದ ಪ್ರದಕ್ಷಿಣವಾಗಿ ಮೂರು ಬಾರಿ ಸುತ್ತು ಗಟ್ಟುವುದೇ **ಪರ್ಯಗ್ನಿಕರಣ.** ನಂತರ ದರ್ಭೆಗಳನ್ನು ಹೊತ್ತಿಸಿ ಪುರೋಡಾಶ ಗಳ ಮೇಲಿಟ್ಟು ಅವುಗಳ ಮೇಲೆ ಭಸ್ಮ ಮತ್ತು ಅಂಗಾರಗಳನ್ನಿಟ್ಟು ಬೇಯಿಸ ಬೇಕು. ನಂತರ ಅಂತರ್ವೇದಿಯಲ್ಲಿ ಸ್ಫ್ಯದಿಂದ ಪೂರ್ವಾಗ್ರವಾಗಿ ಮೂರು ರೇಖೆಗಳನ್ನು ಮಾಡಿ ಪಿಷ್ಟೋದ್ವಪನಿಯಲ್ಲಿ ಉಳಿದ ಜಲದಿಂದ ಪಶ್ಚಿಮಾಭಿ ಮುಖವಾಗಿ ಮೂರು ರೇಖೆಗಳಲ್ಲಿ ನಿನಯನ ಮಾಡಬೇಕು (ಬಿಡಬೇಕು).

## ವೇದಿಕರಣ

ಅಂತರ್ವೇದಿಯಲ್ಲಿಟ್ಟಿರುವ ವೇದವನ್ನು ಮಂತ್ರಪೂರ್ವಕವಾಗಿ ತೆಗೆದು ಕೊಂಡು ಮೂರು ಬಾರಿ ವೇದಿಯನ್ನು ಮಧ್ಯದಲ್ಲಿ, ದಕ್ಷಿಣದಲ್ಲಿ ಮತ್ತು ಉತ್ತರದಲ್ಲಿ ಗುಡಿಸಿ ಸ್ವಚ್ಛ ಮಾಡಬೇಕು. ವೇದಿಯ ಪಶ್ಚಿಮಕ್ಕೆ ನಿಂತು ಕೊಂಡು ಎರಡು ದರ್ಭೆಗಳೊಂದಿಗೆ ಸ್ಫ್ಯವನ್ನು ತೆಗೆದುಕೊಳ್ಳಬೇಕು. ಒಂದು ದರ್ಭೆಯಿಂದ ಸ್ಫ್ಯವನ್ನು ಸಮ್ಮಾರ್ಜನ (ಉಜ್ಜುವುದು) ಮಾಡಿ ಇನ್ನೊಂದು ದರ್ಭೆಯನ್ನು ಅಂತರ್ವೇದಿಯ ಪೂರ್ವತೃತೀಯಭಾಗದಲ್ಲಿಡಬೇಕು. ವೇದಿಯನ್ನು ಮೂರು ಭಾಗಗಳನ್ನಾಗಿ ವಿಂಗಡಿಸಿಕೊಂಡಾಗ ಆಹವನೀಯದ ಕಡೆಯಿಂದ ಮೊದಲನೆಯ ಮೂರನೆಯ ಒಂದು ಭಾಗವೇ ಪೂರ್ವತೃತೀಯ ಭಾಗ. ಅಲ್ಲಿ ಸ್ಫ್ಯದಿಂದ ಮೂರು ಸಲ ಮಂತ್ರಸಹಿತವಾಗಿಯೂ, ಒಮ್ಮೆ ಅಮಂತ್ರಕವಾಗಿಯೂ ಕತ್ತರಿಸಿದ ದರ್ಭೆಯನ್ನು ಮತ್ತು ಮಣ್ಣನ್ನು ಉತ್ಕರ ದಲ್ಲಿ ಹಾಕಬೇಕು. ನಂತರ ಸ್ಫ್ಯದಿಂದ ಅಂತರ್ವೇದಿಯನ್ನು ಕೊಂಚ ಅಗೆದು ಮಣ್ಣು ತೆಗೆದು ಅಲ್ಲಿ ಹೊಸ ಮಣ್ಣನ್ನು ಹಾಕಿಸಿ ಸ್ಫ್ಯದಿಂದ ವೇದಿಯನ್ನು ನಿರ್ಮಿಸಬೇಕು. ನಂತರ ಸ್ಫ್ಯವನ್ನು ವೇದಿಯ ಪಶ್ಚಿಮತೃತೀಯದೇಶದಲ್ಲಿ ಉತ್ತರಾಗ್ರವನ್ನಾಗಿಟ್ಟು ಆಗ್ನೀಧ್ರನಿಗೆ ಪ್ರೈಷವನ್ನು ನೀಡಬೇಕು. ಬಳಿಕ ಅದರ ಮೇಲೆ ಪ್ರೋಕ್ಷಣೀಜಲವನ್ನು ಹಾಕಿ ಕೈಗಳನ್ನೂ ಸ್ಫ್ಯವನ್ನೂ ತೊಳೆದು,



ಪ್ರಣೀತಾಪಾತ್ರೆಯ ಉತ್ತರಕ್ಕೆ ಇಧ್ಮಮತ್ತು ಬರ್ಹಿಗಳನ್ನು ಆಸಾದನೆ ಮಾಡಬೇಕು.

ಸ್ರುಕ್ ಸಂಮಾರ್ಜನ ಮತ್ತು ಇಷ್ಟಿಯಲ್ಲಿ ಪತ್ನಿಯ ಕಾರ್ಯಗಳು.

ಅಧ್ವರ್ಯುವು ಬಳಿಕ ಬಲಗೈಯಿಂದ ಸ್ರುವ, ಜುಹೂ ಮತ್ತು ಉಪಭೃತ್‌ಗಳನ್ನೂ, ಎಡಗೈಯಿಂದ ಧ್ರುವಾ, ಪ್ರಾಶಿತ್ರಹರಣ ಮತ್ತು ವೇದ ಪರಿವಾಸನಗಳನ್ನೂ ತೆಗೆದುಕೊಂಡು ಗಾರ್ಹಪತ್ಯಾಗ್ನಿಯಲ್ಲಿ ಮೂರು ಬಾರಿ ಕಾಯಿಸಬೇಕು. ವೇದಪರಿವಾಸನದಿಂದ ಸ್ರುವಾದಿಗಳ ಬಿಲ, ಬಿಲದ ಪೃಷ್ಠಭಾಗ ಮತ್ತು ದಂಡಗಳನ್ನು ಮೂರು ಮೂರು ಬಾರಿ ಸಂಮಾರ್ಜನ ಮಾಡಿ ವೇದ ಪರಿವಾಸನವನ್ನು ನೀರಿನಿಂದ ಪ್ರೋಕ್ಷಿಸಿ ಗಾರ್ಹಪತ್ಯದಲ್ಲಿ ಹಾಕಬೇಕು. ಇದನ್ನು **ಪ್ರಹರಣ** ಎನ್ನುತ್ತಾರೆ. ಸಂಮಾರ್ಜನೆಯನ್ನು ಮಾಡಿದ ನಂತರ ಸ್ರುವಾದಿ ಪಾತ್ರೆಗಳನ್ನು ಆಹವನೀಯದ ಉತ್ತರಕ್ಕೆ ಅಂದರೆ ಉತ್ತರದ ಪೂರ್ವಭಾಗಕ್ಕೆ ದರ್ಭೆಗಳ ಮೇಲೆ ಇಡಬೇಕು. ಆ ಮೇಲೆ ಯಜಮಾನನ ಪತ್ನಿಯು ಯಜ್ಞಶಾಲೆಯನ್ನು ಪ್ರವೇಶಿಸುತ್ತಾಳೆ.

**ಅಯಜ್ಞೋ ವಾ ಏಷಃ । ಯೋಽಪತ್ನೀಕಃ ।**

ಎಂಬ ಶ್ರುತಿವಚನವು ಪತ್ನಿಯು ಯಜ್ಞದಲ್ಲಿ ಮಾಡಬೇಕಾದ ವಿಧಿಯನ್ನು ಮಾಡದಿದ್ದರೆ ಆ ಯಜ್ಞವು ಯಜ್ಞವೇ ಅಲ್ಲ ಎಂದು ತಿಳಿಸುತ್ತದೆ. ಶ್ರೌತ ಪ್ರಕ್ರಿಯೆಯಲ್ಲಿಯೂ ಗೃಹ್ಯಪ್ರಕ್ರಿಯೆಯಲ್ಲಿಯೂ ಪತ್ನಿಗೆ ಸಮಾನವಾದ ಸ್ಥಾನವಿದೆ.

**ದಂಪತ್ಯೋಃ ಸಹಾಧಿಕಾರಾತ್ ।**

ಪತ್ನೀ ಎಂಬ ಶಬ್ದವೇ ಯಜ್ಞದ ಮೂಲಕವಾಗಿ ಬಂದಿದೆ.

**ಪತ್ಯುರ್ನೋ ಯಜ್ಞಸಂಯೋಗೇ ।**

— ಪಾ.ಸೂ. 4.1.33



ಎಂಬ ಸೂತ್ರವು ಯಜ್ಞಸಂಬಂಧದಿಂದಲೇ ಪತ್ನೀಶಬ್ದವು ಬಂದಿದೆ ಎಂದು ತಿಳಿಸುತ್ತದೆ. ಭಾರತೀಯಪರಂಪರೆಯಲ್ಲಿ ದಂಪತಿಗಳಿಗೆ ಸಮ ಪ್ರಾಧಾನ್ಯವೇ ಶ್ರುತಿಸಮ್ಮತ.

**ಅರ್ಧೋ॑ ವಾ ಏ॒ಷ ಆ॒ತ್ಮನಃ। ಯತ್ಪತ್ನೀ॥**

— ತೈತ್ತಿರೀಯ ಬ್ರಾಹ್ಮಣ

ಯಜಮಾನನ ಪತ್ನಿಯು ಆತನ ಶರೀರದ ಅರ್ಧವಿದ್ದಂತೆ.

ಶ್ರೌತಕರ್ಮದಲ್ಲಿ ಪತ್ನಿಯು ಮಾಡಬೇಕಾದ ಎಲ್ಲ ಕರ್ಮಗಳಲ್ಲಿಯೂ ಪತ್ನಿಯೇ ಮಂತ್ರವನ್ನು ಹೇಳಬೇಕು. ಯಜಮಾನನು ತಾನು ಅಗ್ನ್ಯಾಧಾನ ಮಾಡುವ ಮೊದಲೇ ತನ್ನ ಪತ್ನಿಗೆ ಮಂತ್ರಗಳನ್ನು ಅಭ್ಯಾಸ ಮಾಡಿಸಿರಬೇಕೆಂದು ಸಾಯಣಾಚಾರ್ಯರು ಅಭಿಪ್ರಾಯ ಪಟ್ಟಿರುತ್ತಾರೆ. ಶ್ರೌತಕರ್ಮಗಳು ವಿರಳವಾದುದರಿಂದ ಅನೇಕ ಪರಂಪರಾಗತವಾದ ಉತ್ತಮ ವಿಷಯಗಳು ದೂರವಾಗಿ ಪರಂಪರೆಯ ಬಗ್ಗೆ ತಪ್ಪು ಅಭಿಪ್ರಾಯ ಬರಲು ಅವಕಾಶವಾಗಿದೆ.

ಯಾಗಶಾಲೆಯನ್ನು ಪ್ರವೇಶಿಸಿದ ಪತ್ನಿಯು ವೇದಿ ಮತ್ತು ಉತ್ಕರಗಳ ಮಧ್ಯದಿಂದ ಬಂದು ಗಾರ್ಹಪತ್ಯದ ಪಶ್ಚಿಮಕ್ಕೆ ದಕ್ಷಿಣಾರ್ಧದಲ್ಲಿ ಉತ್ತರಾಭಿಮುಖವಾಗಿ ಕೂರುತ್ತಾಳೆ. ನಂತರ ಯೋಕ್ತ್ರವನ್ನು ಪತ್ನಿಯು ಕಟ್ಟಿಕೊಳ್ಳುತ್ತಾಳೆ. ಬಳಿಕ ಬಲಗೈಯಲ್ಲಿ ಪವಿತ್ರವನ್ನಿಟ್ಟುಕೊಂಡು ಆಚಮನವನ್ನು ಮಾಡುತ್ತಾಳೆ. ನಂತರ ಪತ್ನಿಯು ಗಾರ್ಹಪತ್ಯಾಗ್ನಿಗೆ ಪರಿಷೇಚನವನ್ನು ಮಾಡಿ ನಾಲ್ಕು ಸಮಿತ್ತುಗಳಿಂದ ಹೋಮವನ್ನು ಮಾಡುತ್ತಾಳೆ. ಇದು ವ್ರತಗ್ರಹಣವೆನಿಸಿಕೊಳ್ಳುತ್ತದೆ.

ನಂತರ ಉತ್ತರಪರಿಷೇಚನವನ್ನು ಮಾಡಿ ಪತ್ನಿಯು ಗಾರ್ಹಪತ್ಯವನ್ನೂ ಆಜ್ಯವನ್ನೂ ವೀಕ್ಷಿಸಬೇಕು. ನಂತರ ಸ್ರುಕ್ ಸಮ್ಮಾರ್ಜನವನ್ನು ಆಗ್ನೀಧ್ರನು ಮಾಡಬೇಕು. ಆಗ್ನೀಧ್ರನುಪತ್ನಿಯುಅವೇಕ್ಷಿಸಿದ ಆಜ್ಯವನ್ನು ಗಾರ್ಹಪತ್ಯದಲ್ಲಿ ಇಟ್ಟು, ಸಮಿತ್ತನ್ನು ಆಜ್ಯಸ್ಥಾಲಿಯ ಕೆಳಭಾಗದಲ್ಲಿ ಹಿಡಿದು ಪೂರ್ವಕ್ಕೆ ಆಹವನೀಯದ ತನಕ ತೆಗೆದುಕೊಂಡು ಆಹವನೀಯದಲ್ಲಿ ಆಜ್ಯಸ್ಥಾಲಿಯಲ್ಲಿರುವ ಆಜ್ಯವನ್ನು ಕಾಯಿಸಿ ವೇದಿಯಲ್ಲಿಡಬೇಕು. ನಂತರ ಸಮಿತ್ತನ್ನು



ಸ್ವಾಹಾಕಾರದಿಂದ ಅಗ್ನಿಯಲ್ಲಿ ಅರ್ಪಿಸಬೇಕು. ನಂತರ ಅಧ್ವರ್ಯುವು ಆಜ್ಯ ಸ್ಥಾಲಿಯನ್ನು ಅಂತರ್ವೇದಿಯ ದಕ್ಷಿಣಾರ್ಧದಲ್ಲಿ ಯಜಮಾನನ ಎದುರಿಗೆ ಇಡಬೇಕು. ನಂತರ ಯಜಮಾನನು ಮಂತ್ರಪೂರ್ವಕವಾಗಿ ಆಜ್ಯವನ್ನು ಅವೇಕ್ಷಣ ಮಾಡಬೇಕು. ನಂತರ ಆಜ್ಯಸ್ಥಾಲಿಯನ್ನು ವೇದಿಯ ಉತ್ತರಭಾಗ ದಲ್ಲಿಡಬೇಕು. ಅಧ್ವರ್ಯುವು ತಾನೂ ಸಹ ಆಜ್ಯವನ್ನು ನೋಡಬೇಕು. ನಂತರ ಆಜ್ಯೋತ್ಪವನವನ್ನೂ (ದರ್ಭೆಯಿಂದ ತೀಡುವುದು), ಪ್ರೋಕ್ಷಣಿಯ ಉತ್ಪವನವನ್ನೂ ಮಾಡಬೇಕು. ಅಗ್ನಿಹೋತ್ರಹವಣಿಯಲ್ಲಿರುವ ಸಂಸ್ಕರಿ ಸಲ್ಪಟ್ಟ ನೀರಿಗೆ **ಪ್ರೋಕ್ಷಣೀ** ಎನ್ನುತ್ತಾರೆ. ಬಳಿಕ ಬಲಗೈಯಿಂದ ಸ್ರುವವನ್ನೂ, ಎಡಗೈಯಿಂದ ಜುಹೂವನ್ನೂ ತೆಗೆದುಕೊಂಡು ಜುಹೂವನ್ನು ವೇದದ ಮೇಲಿಟ್ಟು ನಾಲ್ಕು ಸಲ ಅದರಲ್ಲಿ ಸ್ರುವದಿಂದ ಆಜ್ಯವನ್ನು ತುಂಬಿಕೊಂಡು ಉತ್ಕರದಲ್ಲಿ ಇಡಬೇಕು. ಇದರಂತೆ ಉಪಭೃತ್ ನಲ್ಲಿ ಎಂಟು ಬಾರಿ ತುಂಬಿ ಕೊಳ್ಳಬೇಕು. ಧ್ರುವಾದಲ್ಲಿ ನಾಲ್ಕು ಬಾರಿ ತುಂಬಿಕೊಳ್ಳಬೇಕು. ಇವುಗಳನ್ನು ಉತ್ಕರದಲ್ಲಿ ಕ್ರಮವಾಗಿಡಬೇಕು.

ಅಗ್ನಿಹೋತ್ರಹವಣಿಯಲ್ಲಿರುವ ಪ್ರೋಕ್ಷಣಿಯನ್ನು ಎತ್ತಿಕೊಂಡು ಇಧ್ಮ, ವೇದಿ ಮತ್ತು ಬರ್ಹಿಸ್ಸುಗಳನ್ನು ಕ್ರಮೇಣ ಪ್ರೋಕ್ಷಿಸಿ ಬರ್ಹಿಸ್ಸನ್ನು (ದರ್ಭೆಯ ಕಟ್ಟು) ಅಂತರ್ವೇದಿಯಲ್ಲಿ ಪೂರ್ವಕ್ಕೆ ಗ್ರಂಥಿಯನ್ನು ಮಾಡಿಟ್ಟು ಕೊಂಡು ಪ್ರೋಕ್ಷಿಸಬೇಕು. ಪ್ರೋಕ್ಷಣೀಶೇಷವನ್ನು ಅಂತರ್ವೇದಿಯಲ್ಲಿ ಪಶ್ಚಿಮಕ್ಕೆ ಚೆಲ್ಲಬೇಕು.

## ಬರ್ಹಿರಾಸ್ತರಣ-ಸ್ರುಗಾಸಾದನ

ಅಧ್ವರ್ಯುವು ಶುಲ್ಬರಜ್ಜುವಿನಿಂದ ಕಟ್ಟಿದ ಬರ್ಹಿಸ್ಸನ್ನು ಬಿಡಿಸಿ ಅದರಲ್ಲಿರುವ ಪ್ರಸ್ತರವನ್ನು ಅಂದರೆ ದರ್ಭೆಯ ಮುಷ್ಟಿಯನ್ನು ತೆಗೆದು ಅದರಲ್ಲಿ ಪವಿತ್ರವನ್ನು ಸೇರಿಸಿ ಯಜಮಾನನಿಗೆ ನೀಡಬೇಕು. ದರ್ಶೇಷ್ಟಿ ಯಲ್ಲಾದರೆ ಶಾಖಾಪವಿತ್ರವನ್ನೂ ಸೇರಿಸಬೇಕು. ಶುಲ್ಬವನ್ನು ಅಂತರ್ವೇದಿ ಯಲ್ಲಿ ನೈಋತ್ಯದಿಂದ ಈಶಾನ್ಯಾಗ್ರವಾಗಿಡಬೇಕು. ನಂತರ ಮೂರು ದರ್ಭ ಮುಷ್ಟಿಗಳನ್ನು ಅಂತರ್ವೇದಿಯಲ್ಲಿ ಪೂರ್ವ, ಮಧ್ಯಮ ಮತ್ತು ಪಶ್ಚಿಮ ಭಾಗಗಳಲ್ಲಿ ಪೂರ್ವಾಗ್ರಗಳನ್ನಾಗಿ ಮಾಡಿ ಹರಡಬೇಕು. ದರ್ಭೆಗಳನ್ನು ಹರಡುವಾಗ ಮೊದಲನೆಯ ಮುಷ್ಟಿಯ ಬುಡವನ್ನು ಎರಡನೆಯ ಮುಷ್ಟಿಯ



ಅಗ್ರವು ಮುಚ್ಚಿರಬೇಕು. ನಂತರ ಯಜಮಾನನಿಂದ ಪ್ರಸ್ತರವನ್ನು ತೆಗೆದು ಕೊಂಡು ಬಲಗೈಯಲ್ಲಿ ಹಿಡಿದು ಆಹವನೀಯಾಗ್ನಿಯ ಪಶ್ಚಿಮ, ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿ ಮೂರು ಪರಿಧಿಗಳನ್ನು ಮೇಖಲೆಯ ಮೇಲೆ ಇಡಬೇಕು. ಪರಿಧಿಗಳೆಂದರೆ ಬಾಹು ಪ್ರಮಾಣದ ಮೂರು ಸಮಿಧೆಗಳು. ಆಹವನೀಯದ ಪೂರ್ವಕ್ಕೆ ಪರಿಧಿಯಿಲ್ಲ. ಸೂರ್ಯದೇವನೇ ಪೂರ್ವದಿಕ್ಕಿನ ಪರಿಧಿ ಎಂದು ಮನಸ್ಸಿನಿಂದ ಕಲ್ಪಿಸಬೇಕೆಂಬ ವಿಧಿಯಿದೆ. ಮೇಖಲೆಯೆಂದರೆ ಕುಂಡದ ಮೇಲಿನ ಮಣ್ಣಿನ ಕಟ್ಟೆ. ಕುಂಡದ ಮೇಲೆ ಎರಡು ಕಟ್ಟೆಗಳಿರುತ್ತವೆ. ಅವುಗಳನ್ನು **ಮೇಖಲಾ** ಎನ್ನುತ್ತಾರೆ.

ಪರಿಧಿಗಳನ್ನು ಇಟ್ಟ ನಂತರ ಆಗ್ನೇಯ, ಈಶಾನ್ಯಭಾಗಗಳಲ್ಲಿ ಎರಡು ಸಮಿತ್ತುಗಳನ್ನು ಇಡಬೇಕು. ಆಗ ಇಧ್ಮದಲ್ಲಿ ಒಂದು ಸಮಿಧೆಯು ಉಳಿಯುತ್ತದೆ. ಇದನ್ನು ಮುಂದೆ ಅನೂಯಾಜದಲ್ಲಿ ವಿನಿಯೋಗಿಸುತ್ತಾರೆ. ನಂತರ ಅಂತರ್ವೇದಿಯ ಪೂರ್ವತೃತೀಯಭಾಗದಲ್ಲಿ ಎರಡು ದರ್ಭೆಗಳನ್ನು ಉತ್ತರಾಗ್ರವಾಗಿ ಇಡಬೇಕು. ಇವುಗಳಿಗೆ **ವಿಧೃತಿ** ಎಂದು ಹೆಸರು. ನಂತರ ವಿಧೃತಿಯ ಮೇಲೆ ಪ್ರಸ್ತರವನ್ನೂ, ಪ್ರಸ್ತರದ ಮೇಲೆ ಜುಹೂವನ್ನೂ ಇಟ್ಟು, ಉತ್ತರಕ್ಕೆ ವಿಧೃತಿಯ ಕೆಳಭಾಗದಲ್ಲಿ ಉಪಭೃತ್ ಅನ್ನೂ, ಇದರ ಉತ್ತರಕ್ಕೆ ವಿಧೃತಿಗಳ ಮೇಲೆ ಧ್ರುವೆಯನ್ನೂ, ಧ್ರುವಾದ ಉತ್ತರಕ್ಕೆ ಆಜ್ಯಸ್ಥಾಲಿಯನ್ನೂ, ಸ್ರುವವನ್ನೂ ಆಸಾದನ ಮಾಡಬೇಕು. ಬಳಿಕ ಅಭಿಮಂತ್ರಣ ಮಾಡಬೇಕು. ಈ ಕಲಾಪವೇ ಬರ್ಹಿರಾಸ್ತರಣ ಮತ್ತು ಸ್ರುಗಾಸಾದನ. ಜುಹೂ, ಉಪಭೃತ್, ಧ್ರುವಾ, ಸ್ರುವ ಹೀಗೆ ಯಜ್ಞಪಾತ್ರೆಗಳು ಇದ್ದರೂ ಈ ನಾಲ್ಕಕ್ಕೂ **ಸ್ರುಕ್** ಎಂಬುದು ಸಾಧಾರಣವಾದ ಹೆಸರು.

**ಧ್ರುವೋಪಭೃಜ್ಜುಹೂರ್ನಾ ತು ಸ್ರುವೋ ಭೇದಾಃ ಸ್ರುಚಃ ಸ್ತ್ರಿಯಃ ।**

— ಅಮರಕೋಶ ಬ್ರಹ್ಮವರ್ಗ

## ಹವಿರಾಸಾದನ

ಅಧ್ವರ್ಯುವು ಬಲಗೈಯಿಂದ ಸ್ರುವ ಮತ್ತು ಆಜ್ಯಸ್ಥಾಲಿಗಳನ್ನೂ ಎಡಗೈಯಲ್ಲಿ ದಾರುಪಾತ್ರೀ ಮತ್ತು ವೇದಗಳನ್ನು ಹಿಡಿದು ಗಾರ್ಹಪತ್ಯದ ಪಶ್ಚಿಮಕ್ಕೆ ಕುಳಿತು ದಾರುಪಾತ್ರೆಯಲ್ಲಿ ಅಂದರೆ ಪುರೋಡಾಶವನ್ನು



ಇಟ್ಟುಕೊಳ್ಳುವ ಪಾತ್ರೆಯಲ್ಲಿ ಸ್ರುವದ ಆಜ್ಯದಿಂದ ಉಪಸ್ತರಣ ಮಾಡಬೇಕು. ಉಪಸ್ತರಣವು ಪಾತ್ರಾಭಿಘಾರದಂತೆಯೇ ಮಾಡುವ ಕ್ರಿಯೆ.

ದರ್ಶೇಷ್ಟಿಯಲ್ಲಾದರೆ ಎರಡು ಕಡೆ, ಪೂರ್ಣಮಾಸೇಷ್ಟಿಯಲ್ಲಾದರೆ ಮೂರು ಕಡೆ ಉಪಸ್ತರಣ. ನಂತರ ಧೃಷ್ಟಿಯಿಂದ ಪ್ರಥಮಪುರೋಡಾಶದ ಮೇಲೆ ಇಟ್ಟ ಅಂಗಾರವನ್ನು ತೆಗೆದು ವೇದದಿಂದ ಪುರೋಡಾಶಕ್ಕೆ ತಗುಲಿದ ಭಸ್ಮವನ್ನು ದೂರ ಮಾಡಿ ಸ್ವಚ್ಛಗೊಳಿಸಬೇಕು. ನಂತರ ಅಭಿಘಾರವನ್ನು ಮಾಡಿ ಕಪಾಲಗಳ ಮೇಲಿಂದ ಪುರೋಡಾಶವನ್ನು ತೆಗೆಯಬೇಕು. ಪುರೋಡಾಶಕ್ಕೆ ಮೇಲಿಂದ ಅಭ್ಯಂಜನ (ಆಜ್ಯಸ್ಪರ್ಶ), ಕೆಳಗಿನಿಂದ ಉಪಾಂಜನವನ್ನು ಮಾಡಿ ದಾರುಪಾತ್ರೆಯಲ್ಲಿ ಮೊದಲ ಉಪಸ್ತರಣವನ್ನು ಮಾಡಿದ ಸ್ಥಳದಲ್ಲಿ ಇಡಬೇಕು. ಹೀಗೆಯೇ ಎಲ್ಲ ಪುರೋಡಾಶಗಳನ್ನೂ ಉದ್ವಾಸನೆ ಮಾಡಬೇಕು. ದರ್ಶೇಷ್ಟಿಯಲ್ಲಾದರೆ ಸೋಮಯಾಜಿಯಾದವರು ಎರಡನೆಯ ಪುರೋಡಾಶದ ಜೊತೆಗೆ ಸಾನ್ನಾಯ್ಯವನ್ನೂ ಉದ್ವಾಸನೆ ಮಾಡಬೇಕು. ಬಳಿಕ ಕಪಾಲಗಳಿಗೆ ಪ್ರತ್ಯಂಜನವನ್ನು (ಆಜ್ಯಸ್ಪರ್ಶ) ಮಾಡಿ, ಕಪಾಲಗಳನ್ನು ಎಣಿಸಿ ಉದ್ವಾಸನವನ್ನು ಮಾಡಬೇಕು. ನಂತರ ಆಜ್ಯಸ್ಥಾಲಿಯಲ್ಲಿದ್ದ ಆಜ್ಯವನ್ನು ಸ್ರುವದಿಂದ ತುಂಬಿಕೊಂಡು ಎರಡು ಪುರೋಡಾಶಗಳ ಮಧ್ಯದಲ್ಲಿ ಇಟ್ಟುಕೊಳ್ಳಬೇಕು. ನಂತರ ದಾರುಪಾತ್ರೀ, ಆಜ್ಯಸ್ಥಾಲೀ ಮತ್ತು ಸ್ರುವಗಳೊಡನೆ ಪೂರ್ವಕ್ಕೆ ಬಂದು ಅಂತರ್ವೇದಿಯ ಮಧ್ಯದಲ್ಲಿ ಜುಹೂ ಮುಂತಾದ ಯಜ್ಞಪಾತ್ರೆಗಳ ಪಶ್ಚಿಮಕ್ಕೆ ಹವಿಸ್ಸನ್ನು ಆಸಾದನ ಮಾಡಬೇಕು. ಆಜ್ಯದಿಂದ ತುಂಬಿದ ಸ್ರುವವನ್ನು ಉಳಿದ ಸ್ರುಕ್‌ಗಳ ಮುಂಬದಿಯಿಂದ ದಕ್ಷಿಣಕ್ಕೆ ಪ್ರಸ್ತರದ ಮೇಲಿಟ್ಟು, ಪುನಃ ಹಿಂದಕ್ಕೆ ತಂದು ಧ್ರುವಾದಲ್ಲಿ ಹಾಕಬೇಕು. ನಂತರ ಯಜಮಾನನು ಆಸಾದನ ಮಾಡಿದ ಎಲ್ಲ ಹವಿಸ್ಸನ್ನೂ ಅಭಿಮಂತ್ರಿಸಬೇಕು.

## ಸಾಮಿಧೇನೀ, ಆಘಾರ, ಪ್ರವರಗಳು:

ಹವಿರಾಸಾದನೆಯಾದ ಬಳಿಕ ಸಾಮಿಧೇನೀಮಂತ್ರಗಳನ್ನು ಹೇಳಲು ಹೋತೃವನ್ನು ಅಧ್ವರ್ಯುವು ಆಹ್ವಾನಿಸುತ್ತಾನೆ. ವಿಹಾರದಲ್ಲಿ ಇಲ್ಲಿಯವರೆಗೆ ಹೋತೃವು ಇರುವುದಿಲ್ಲ. ಬ್ರಹ್ಮನೂ, ಯಜಮಾನನೂ, ಪತ್ನಿಯೂ, ಆಗ್ನೀಧ್ರನೂ ಮತ್ತು ಅಧ್ವರ್ಯುವೂ ಇರುತ್ತಾರೆ. ಅಧ್ವರ್ಯುವು **ಹೋತರೇಹಿ** (ಹೋತೃವೇ! ಬಾ) ಎಂಬುದಾಗಿ ಹೋತೃವನ್ನು



ಆಮಂತ್ರಿಸುತ್ತಾನೆ. ನಂತರ **ಅಗ್ನಯೇ ಸಮಿಧ್ಯಮಾನಾಯಾನುಬ್ರೂಹಿ** ಎಂದು ಹೋತೃವನ್ನುದ್ದೇಶಿಸಿ ಅಧ್ವರ್ಯುವು ಹೇಳಿದ ನಂತರ ಹೋತೃವು ಸಾಮಿಧೇನೀಮಂತ್ರಗಳನ್ನು ಹೇಳುತ್ತಾನೆ. ಸಾಮಿಧೇನೀಮಂತ್ರಗಳು ಹನ್ನೊಂದು ಋಕ್ ಗಳು. ಮೊದಲನೆಯ ಋಕ್ ಅನ್ನೂ, ಕಡೆಯ ಋಕ್ ಅನ್ನೂ ಮೂರು ಮೂರು ಬಾರಿ ಹೇಳುವುದರಿಂದ ಹದಿನೈದು ಋಕ್ ಗಳಾಗುತ್ತವೆ. ದರ್ಶ-ಪೂರ್ಣಮಾಸದಲ್ಲಿ ಪಂಚದಶ (೧೫) ಸಾಮಿಧೇನಿ ಗಳಿರುತ್ತವೆ. ಹೋತೃವು ಸಾಮಿಧೇನೀಮಂತ್ರಗಳನ್ನು ಹೇಳುತ್ತಿದ್ದಂತೆಯೇ ಪ್ರತಿಯೊಂದು ಮಂತ್ರದ ಓಂಕಾರಕ್ಕೂ ಒಂದೊಂದು ಸಮಿಧೆಯಂತೆ ಆಹವನೀಯದಲ್ಲಿ ಹೋಮಿಸಬೇಕು. ಇದಾದ ನಂತರ ವೇದದಿಂದ ಆಹವನೀಯವನ್ನು ಗಾಳಿ ಬರುವಂತೆ ಬೀಸಿ ಚೆನ್ನಾಗಿ ಉರಿಯುವಂತೆ ಮಾಡಬೇಕು.

ನಂತರ ಪೂರ್ವಾಘಾರ. ಪೂರ್ವಾಘಾರವೆಂದರೆ ದಕ್ಷಿಣಪರಿಧಿಯ ಮಧ್ಯದಿಂದ ಆರಂಭಿಸಿ ಉತ್ತರಪರಿಧಿಯ ಮಧ್ಯದವರೆಗೆ ಆಜ್ಯಧಾರೆಯು ಉಂಟಾಗುವಂತೆ ಸ್ರುವದಿಂದ ಆಹವನೀಯದಲ್ಲಿ ಹೋಮ ಮಾಡುವುದು. ಬಳಿಕ ಅಗ್ನೀಧ್ರನು ಪರಿಧಿಗಳಿಗೂ ಮತ್ತು ಅಗ್ನಿಗೂ ಸಮ್ಮಾರ್ಜನೆಯನ್ನು ಮಾಡುತ್ತಾನೆ. ನಂತರ ಅಧ್ವರ್ಯುವು ಜುಹೂ ಮತ್ತು ಉಪಭೃತ್ ಗಳ ಮುಂಭಾಗದಲ್ಲಿ ಅಂಜಲಿಯಿಂದ ಅಗ್ನಿಯನ್ನು ನಮಸ್ಕರಿಸಬೇಕು. ಎಡಗೈ ಯಿಂದ ಉಪಭೃತ್ ಅನ್ನೂ ಬಲಗೈಯಿಂದ ಜುಹೂವನ್ನೂ ಹಿಡಿದುಕೊಂಡು ಎಡಗಾಲನ್ನು ಮುಂದಿಟ್ಟು ಅಂತರ್ವೇದಿಯನ್ನು ದಾಟಿ ಪೂರ್ವಾಭಿ ಮುಖವಾಗಿ ಆಹವನೀಯದ ದಕ್ಷಿಣಕ್ಕೆ ನಿಂತು ಮಧ್ಯಮಪರಿಧಿಯಿಂದ ಆರಂಭಿಸಿ ಜುಹೂವಿನಲ್ಲಿರುವ ಆಜ್ಯದಿಂದ ಧಾರಾರೂಪವಾಗಿ ಆಜ್ಯದ ನೇರವಾದ ರೇಖೆಯು ಉಂಟಾಗುವಂತೆ ಉತ್ತರಾಘಾರವನ್ನು ಮಾಡಬೇಕು. ನಂತರ ಜುಹೂ ಮತ್ತು ಉಪಭೃತ್ ಗಳನ್ನು ಒಂದಕ್ಕೊಂದು ಸ್ಪರ್ಶವಾಗದಂತೆ ಹಿಡಿದುಕೊಂಡು ಬಲಗಾಲನ್ನು ಮುಂದೆ ಮಾಡಿಕೊಂಡು ವೇದಿಯನ್ನು ದಾಟಿ ಆಘಾ ರ ಮಾಡಿ ಉಳಿದ ಆಜ್ಯದಿಂದ ಧ್ರುವಾದಲ್ಲಿರುವ ಆಜ್ಯವನ್ನು ಮೂರು ಸಲ ಅಂಜನ ಮಾಡಬೇಕು(ಬೆರೆಸಬೇಕು). ಬಳಿಕ ಜುಹೂ ಮತ್ತು ಉಪಭೃತ್ ಗಳನ್ನು ಅವುಗಳ ಸ್ಥಾನದಲ್ಲಿ ಇಡಬೇಕು.



ಸಾಮಿಧೇನೀ ಮತ್ತು ಆಘಾರಗಳು ಮುಗಿದ ನಂತರ ಅಧ್ವರ್ಯುವು ಇಧ್ಮವನ್ನು ಕಟ್ಟಿದ ರಜ್ಜುವಿನಿಂದ ಸುತ್ತಲ್ಪಟ್ಟ ಸ್ಫ್ಯವನ್ನು ಉತ್ಕರದಲ್ಲಿ ಅಂದರೆ ಆಹವನೀಯದ ಉತ್ತರ ದಿಕ್ಕಿನಲ್ಲಿರುವ ಸ್ಥಾನದಲ್ಲಿ ಅಗ್ರವು ಮೇಲೆ ಬರುವಂತೆ ಹಿಡಿದು **ಓ ಶ್ರಾವಯ** ಎಂದು ಆಶ್ರಾವಣವನ್ನು ಮಾಡಬೇಕು. ಆಗ ಅಧ್ವರ್ಯುವಿನ ಹಿಂದೆ ನಿಂತಿರುವ ಆಗ್ನೀಧ್ರನು **ಅಸ್ತು ಶ್ರೌಷಟ್** ಎಂದು ಪ್ರತ್ಯಾಶ್ರಾವಣ ಮಾಡುತ್ತಾನೆ. ನಂತರ ಅಧ್ವರ್ಯುವು ಪ್ರವರಮಂತ್ರವನ್ನು ಪಠಿಸಿ ಕೊನೆಯಲ್ಲಿ ಹೋತೃವಿನ ಹೆಸರನ್ನು ಹೇಳುತ್ತಾನೆ. ಇದೇ ಪ್ರವರವಿಧಿ. ಆಗ ಹೋತೃವು ಎದ್ದು ಇಧ್ಮವನ್ನು ಕಟ್ಟಿದ್ದ ದರ್ಭೆಗಳಿಂದ ಮುಖವನ್ನು ಸಮ್ಮಾರ್ಜನೆ ಮಾಡಿಕೊಂಡು ತನ್ನ ಸ್ಥಾನದಲ್ಲಿ ಕುಳಿತು **ಘೃತವತೀಮಧ್ವರ್ಯೋ** ಎಂದು ಹೇಳುತ್ತಾನೆ. ಅದನ್ನು ಕೇಳಿ ಅಧ್ವರ್ಯುವು ಜುಹೂ ಮತ್ತು ಉಪಭೃತ್‌ಗಳನ್ನು ತೆಗೆದುಕೊಂಡು ಹಿಂದಿನಂತೆ ಬಲಗಾಲನ್ನು ಮುಂದೆ ಮಾಡಿ ಆಹವನೀಯದ ದಕ್ಷಿಣಕ್ಕೆ ನಿಂತುಕೊಳ್ಳುತ್ತಾನೆ.

## ಪ್ರಯಾಜಹೋಮ

ಪ್ರಯಾಜಹೋಮಕ್ಕಾಗಿ ಅಧ್ವರ್ಯುವು ನಿಂತುಕೊಂಡು **ಓಶ್ರಾವಯ** ಎಂದು ಹೇಳುತ್ತಾನೆ. ಆಗ್ನೀಧ್ರನು **ಅಸ್ತು ಶ್ರೌಷಟ್** ಎನ್ನುತ್ತಾನೆ. ಬಳಿಕ ಅಧ್ವರ್ಯುವು **ಸಮಿಧೋ ಯಜ** ಎಂದು ಪ್ರಯಾಜಮಂತ್ರಗಳಿಗೆ ಪ್ರೈಷವನ್ನು ಹೇಳುತ್ತಾನೆ. ಪ್ರಧಾನಯಾಗಕ್ಕಿಂತಲೂ ಮೊದಲೇ ಈ ಮಂತ್ರ ಗಳಿಂದ ಹೋಮವನ್ನು ಮಾಡುವುದರಿಂದ ಈ ಮಂತ್ರಗಳಿಗೆ **ಪ್ರಯಾಜ** ಗಳೆಂದು ಹೆಸರು. ದರ್ಶ-ಪೂರ್ಣಮಾಸದಲ್ಲಿ ಐದು ಪ್ರಯಾಜಗಳು. ಚಾತುರ್ಮಾಸ್ಯೇಷ್ಟಿಯಲ್ಲಿ ಒಂಬತ್ತು ಪ್ರಯಾಜಗಳಿರುತ್ತವೆ. ಪಾಶುಕಯಾಗ ದಲ್ಲಿಯೂ, ಸೌಮಿಕದಲ್ಲಿಯೂ ಹನ್ನೊಂದು ಪ್ರಯಾಜಗಳಿರುತ್ತವೆ.

ಹೋತೃವು ಮೊದಲನೆಯ ಪ್ರಯಾಜಮಂತ್ರವನ್ನು ಹೇಳಿ ಕಡೆಯಲ್ಲಿ ವಷಟ್‌ಕಾರವನ್ನು ಹೇಳುವಾಗ ಅಧ್ವರ್ಯುವು ಜುಹೂವಿನ ಆಜ್ಯದಿಂದ ಆಹವನೀಯದಲ್ಲಿ ಹೋಮ ಮಾಡುತ್ತಾನೆ. ಹೀಗೆಯೇ ಅಧ್ವರ್ಯುವು ಎರಡನೆಯ ಮತ್ತು ಮೂರನೆಯ ಪ್ರಯಾಜಗಳಿಗೂ ಆಶ್ರಾವಣ-ಪ್ರತ್ಯಾಶ್ರಾವಣಗಳ ನಂತರ **ಯಜ, ಯಜ** ಎಂದು ಪ್ರತ್ಯೇಕವಾಗಿ ಪ್ರೈಷವನ್ನು ನೀಡಿ ಹೋಮವನ್ನು ಮಾಡುತ್ತಾನೆ. ಮೂರು ಪ್ರಯಾಜಗಳ ವೇಳೆಗೆ



ಜುಹೂವಿನಲ್ಲಿರುವ ಆಜ್ಯವು ಮುಗಿಯುತ್ತದೆ. ನಂತರ ಉಪಭೃತ್ ನಲ್ಲಿರುವ ಆಜ್ಯದ ಅರ್ಧದಷ್ಟನ್ನು ಜುಹೂವಿಗೆ ಹಾಕಿಕೊಂಡು ನಾಲ್ಕು ಮತ್ತು ಐದನೆಯ ಪ್ರಯಾಜಮಂತ್ರಗಳಿಂದ ಹೋಮ ಮಾಡುತ್ತಾನೆ. ಪ್ರಯಾಜದ ಐದು ಆಹುತಿಗಳು ಅಗ್ನಿಯಲ್ಲಿ ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಮತ್ತು ಮಧ್ಯಭಾಗದಲ್ಲಿ ಅರ್ಪಿಸಲ್ಪಡುತ್ತವೆ. ನಂತರ ಅಧ್ವರ್ಯುವು ಎಡಗಾಲನ್ನು ಮುಂದಿಟ್ಟುಕೊಂಡು ವೇದಿಯನ್ನು ದಾಟಿ, ಪ್ರಯಾಜ ಹೋಮದ ಉಳಿದ ಆಜ್ಯದಿಂದ ಧ್ರುವಾ, ಪ್ರಥಮ ಪುರೋಡಾಶ ಮತ್ತು ಉತ್ತರಕ್ಕೆ ಇರುವ ಹವಿಸ್ಸುಗಳಿಗೆ ಅಭಿಘಾರವನ್ನು ಮಾಡುತ್ತಾನೆ. ಉಪಭೃತ್ ಅನ್ನೂ ಅಭಿಘಾರ ಮಾಡುತ್ತಾನೆ.

## ಆಜ್ಯಭಾಗಹೋಮ

ಅಧ್ವರ್ಯುವು ಇಷ್ಟು ಆದ ನಂತರ **ಅಗ್ನಯೇಽನುಬ್ರೂಹಿ** ಎಂದು ಪುರೋಽನುವಾಕ್ಯಕ್ಕೆ ಪ್ರೈಷವನ್ನು ನೀಡುತ್ತಾನೆ. ದರ್ಶ-ಪೂರ್ಣಮಾಸೇಷ್ಟಿಗಳಲ್ಲಿ ಆಶ್ರಾವಣ-ಪ್ರತ್ಯಾಶ್ರಾವಣಗಳು ಪ್ರಯಾಜದಿಂದಲೇ ಆರಂಭಗೊಂಡರೂ, ಪುರೋಽನುವಾಕ್ಯವು ಮಾತ್ರ ಆಜ್ಯಭಾಗದಿಂದಲೇ ಪ್ರಾರಂಭಗೊಳ್ಳುತ್ತದೆ. ಪ್ರಯಾಜಗಳಿಗೆ ಪುರೋಽನುವಾಕ್ಯವಿರುವುದಿಲ್ಲ.

**ಪುರೋಽನುವಾಕ್ಯಾಮನೂಚ್ಯ ಯಾಜ್ಯಯಾ ಜುಹೋತಿ ।**

ಎಂಬ ಶ್ರುತಿವಚನದಂತೆ **ಪುರೋಽನುವಾಕ್ಯ**ವನ್ನು ಹೇಳಿಸಿ **ಯಾಜ್ಯಾ**ದಿಂದ ಅಧ್ವರ್ಯುವು ಹೋಮವನ್ನು ಮಾಡುತ್ತಾನೆ. ಪ್ರಧಾನಯಾಗಕ್ಕೆ ಮೊದಲು ದೇವತೆಯನ್ನು ಸ್ತುತಿಸುವ ಋಕ್ **ಪುರೋಽನುವಾಕ್ಯ**ವೆನಿಸುತ್ತದೆ.

ಪುರೋಽನುವಾಕ್ಯದ ಪ್ರೈಷದ ನಂತರ ಅಧ್ವರ್ಯುವು ಧ್ರುವಾದಲ್ಲಿರುವ ಆಜ್ಯವನ್ನು ಸ್ರುವದಿಂದ ನಾಲ್ಕು ಸಲ ಜುಹೂವಿನಲ್ಲಿ ತೆಗೆದುಕೊಂಡು ವೇದಿಯನ್ನು ದಾಟುತ್ತಾನೆ. ಇದನ್ನು **ಅತ್ಯಾಕ್ರಮಣ**ವೆಂದು ಕರೆಯುತ್ತಾರೆ. ಈ ಸಮಯದಲ್ಲಿ ಹೋತೃವು ಪುರೋಽನುವಾಕ್ಯವನ್ನು ಪಠಿಸಿ ಮುಗಿಸಿರುತ್ತಾನೆ.

ನಂತರ ಆಶ್ರಾವಣ-ಪ್ರತ್ಯಾಶ್ರಾವಣಗಳಾದ ಮೇಲೆ **ಅಗ್ನಿಂ ಯಜ** ಎಂದು ಪುನಃ ಪ್ರೈಷವನ್ನು ನೀಡುತ್ತಾನೆ. ಹೋತೃವು ಯಾಜ್ಯಾಮಂತ್ರವನ್ನು



ಪಠಿಸುತ್ತಾನೆ. ಯಾಜ್ಯಾಮಂತ್ರಗಳನ್ನು **ಯೇ ಯಜಾಮಹೇ** ಎಂಬ ಪದಗಳೊಡನೆ ಪಠಿಸಲಾಗುವುದು. ಈ ಮಂತ್ರಗಳಿಂದ ಯಾಗವನ್ನು ಮಾಡುವ್ರುದರಿಂದ ಅವುಗಳಿಗೆ **ಯಾಜ್ಯಾ** ಎಂಬ ಹೆಸರು. ಯೇ ಯಜಾಮಹೇ ಎಂಬುದಕ್ಕೆ **ಆಗೂಃ** ಎಂದೂ ಹೆಸರು.

ಯಾಜ್ಯಾಮಂತ್ರಗಳನ್ನು ಪಠಿಸಿ ಹೋತೃವು ವಷಟ್ಕಾರವನ್ನು ಹೇಳುವಾಗ ಆಹವನೀಯದ ಉತ್ತರಾರ್ಧ-ಪೂರ್ವಾರ್ಧದಲ್ಲಿ (ಈಶಾನ್ಯ) ಹೋಮವನ್ನು ಅಧ್ವರ್ಯುವು ಮಾಡುತ್ತಾನೆ. ಪುನಃ ವೇದಿಯನ್ನು ಎಡಗಾಲಿನಿಂದ ದಾಟಿ ಹಿಂದಿರುಗಿ ಬಂದು **ಸೋಮಾಯಾನುಬ್ರೂಹಿ** ಎಂದು ಪುರೋನುವಾಕ್ಯಕ್ಕೆ ಪ್ರೈಷವನ್ನಿತ್ತು, ಹಿಂದಿನಂತೆಯೇ ಧ್ರುವಾದಲ್ಲಿರುವ ಆಜ್ಯವನ್ನು ಸ್ರುವದಿಂದ ನಾಲ್ಕು ಸಲ ಜುಹೂವಿನಲ್ಲಿ ಗ್ರಹಣ ಮಾಡಿ, ವೇದಿಯನ್ನು ದಾಟಿ **ಸೋಮಂ ಯಜ** ಎಂದು ಪ್ರೈಷವನ್ನಿತ್ತು, ಹೋತೃವು ವಷಟ್ಕಾರವನ್ನು ಹೇಳುವ ಸಮಯದಲ್ಲಿ ದಕ್ಷಿಣಾರ್ಧ-ಪೂರ್ವಾರ್ಧ (ಆಗ್ನೇಯ) ದಲ್ಲಿ ಹೋಮವನ್ನು ಮಾಡುತ್ತಾನೆ. ಈ ಎರಡೂ ದೇವತೆಗಳಿಗೆ (ಅಗ್ನಿ ಮತ್ತು ಸೋಮ) ಆಜ್ಯಭಾಗಗಳೆಂದು ಹೆಸರು. ಈ ಹೋಮಕ್ಕೆ **ಆಜ್ಯಭಾಗಹೋಮ** ಎಂದು ಹೆಸರು.

## ಪ್ರಧಾನಯಾಗ ಮತ್ತು ಸ್ವಿಷ್ಟಕೃತ್ ಹೋಮ

ಈ ಮೇಲಿನ ಎಲ್ಲ ಪೂರ್ವಾಂಗಗಳೂ ಮುಗಿದ ನಂತರ ದರ್ಶ-ಪೂರ್ಣಮಾಸೇಷ್ಟಿಯಲ್ಲಿನ ಪ್ರಧಾನದೇವತೆಗಳಿಗೆ ಯಾಗವು ನಡೆಯುತ್ತದೆ. ಅಧ್ವರ್ಯುವು ಧ್ರುವಾದಲ್ಲಿರುವ ಆಜ್ಯವನ್ನು ಸ್ರುವದಿಂದ ತೆಗೆದುಕೊಂಡು ಜುಹೂವಿನಲ್ಲಿ ಉಪಸ್ತರಣ ಮಾಡುತ್ತಾನೆ. **ಅಗ್ನಯೇಽನುಬ್ರೂಹಿ** ಎಂದು ಪ್ರೈಷವನ್ನಿತ್ತು ಹೋತೃವು ಅಗ್ನಿದೇವತೆಯ ಪುರೋನುವಾಕ್ಯವನ್ನು ಪಠಿಸುತ್ತಿರುವಾಗ ಉಪಸ್ಥಾನಮಂತ್ರವನ್ನು ಹೇಳಿ ಪ್ರಥಮ ಪುರೋಡಾಶದ ಪೂರ್ವಾರ್ಧ ಮತ್ತು ಅಪರಾರ್ಧದಿಂದ ಹವಿಸ್ಸನ್ನು ಅವದಾನ ಮಾಡುತ್ತಾನೆ. ಧ್ರುವಾದಲ್ಲಿರುವ ಆಜ್ಯದಿಂದ ಅಭಿಘಾರವನ್ನು ಮಾಡಿ, ಆಜ್ಯಸ್ಥಾಲಿಯಿಂದ ಅವದಾನ ಮಾಡಿದ ಸ್ಥಾನಕ್ಕೆ ಪ್ರತ್ಯಂಜನವನ್ನು ಮಾಡುತ್ತಾನೆ. ನಂತರ ಸ್ರುವದಿಂದ ಆಗ್ನೇಯ ಹವಿಸ್ಸನ್ನು ಅರ್ಪಿಸುವ ಆಹವನೀಯದಲ್ಲಿ ಆಜ್ಯಹೋಮವನ್ನು ಮಾಡಿ ಅತ್ಯಾಕ್ರಮಣವನ್ನು ಮಾಡುತ್ತಾನೆ. ದೇವತೆಗಳನ್ನು



ಆಹ್ವಾನ ಮಾಡುವಾಗ ಅಧ್ವರ್ಯುವು ಜುಹೂ ಮತ್ತು ಉಪಭೃತ್ ಗಳನ್ನು ಬಲ ಮತ್ತು ಎಡಗೈಯಲ್ಲಿ ಹಿಡಿದು ವೇದಿಯನ್ನು ದಾಟಿ ದಕ್ಷಿಣಕ್ಕೆ ಹೋಗುವಿಕೆಗೆ **ಅತ್ಯಾಕ್ರಮಣ** ಎಂದು ಹೆಸರು.

ಅತ್ಯಾಕ್ರಮಣದ ನಂತರ ಅಧ್ವರ್ಯುವು **ಆಃಶ್ರಾವಯ**, ಅಥವಾ **ಓಃಶ್ರಾವಯ** ಎಂದು ಹೇಳುತ್ತಾನೆ. ಆಗ್ನೀಧ್ರನು **ಅಸ್ತು ಶ್ರೌಃಷಟ್** ಎಂದು ಹೇಳುತ್ತಾನೆ. ಇದನ್ನು ಆಶ್ರಾವಣ-ಪ್ರತ್ಯಾಶ್ರಾವಣ ಎನ್ನುತ್ತಾರೆ.

ಆಶ್ರಾವಣ-ಪ್ರತ್ಯಾಶ್ರಾವಣಗಳ ನಂತರ **ಅಗ್ನಿಂ ಯಜ** ಎಂಬುದಾಗಿ ಹೋತೃವಿಗೆ ಪ್ರೈಷವನ್ನು ನೀಡುತ್ತಾನೆ. ಹೋತೃವು ಅಗ್ನಿದೇವತೆಯ ಯಾಜ್ಯಾ ಮಂತ್ರವನ್ನು ಹೇಳಿ ವಷಟ್ಕಾರವನ್ನು ಹೇಳುವಾಗ ಪುರೋಡಾಶವನ್ನು ಆಹವನೀಯಾಗ್ನಿಯಲ್ಲಿ ಅರ್ಪಿಸುತ್ತಾನೆ. ಬಳಿಕ ಪ್ರತ್ಯಾಕ್ರಮಣವನ್ನು ಮಾಡುತ್ತಾನೆ. **ಪ್ರತ್ಯಾಕ್ರಮಣ**ವೆಂದರೆ ಹವಿಸ್ಸನ್ನು ಅರ್ಪಿಸಿದ ನಂತರ ವಾಮ ಪಾದದಿಂದಲೇ, ಪೂರ್ವಕ್ಕೆ ಮುಖ ಮಾಡಿಕೊಂಡೇ, ವೇದಿಯನ್ನು ದಾಟಿ ವೇದಿಯ ಉತ್ತರಕ್ಕೆ ಹಿಂದಿರುಗುವಿಕೆ.

ಪ್ರತ್ಯಾಕ್ರಮಣದ ಬಳಿಕ **ಪ್ರಜಾಪತಯೇಽನುಬ್ರೂಹಿ** ಎಂದು ಪುರೋಽನುವಾಕ್ಯಕ್ಕೆ ಪ್ರೈಷವನ್ನೀಯುತ್ತಾನೆ. ನಂತರ ಜುಹೂವಿನಲ್ಲಿ ಧ್ರುವಾ ದಲ್ಲಿರುವ ಆಜ್ಯವನ್ನು ನಾಲ್ಕು ಬಾರಿ ಸ್ರುವದಿಂದ ಹಾಕಿಕೊಂಡು **ಪ್ರಜಾಪತಿಂ ಯಜ** ಎಂದು ಯಾಜ್ಯಾಮಂತ್ರಕ್ಕೆ ಪ್ರೈಷವನ್ನಿತ್ತು ವಷಟ್ಕಾರದಲ್ಲಿ ಹೋಮ ವನ್ನು ಮಾಡುತ್ತಾನೆ. ಇದನ್ನು ಉಪಾಂಶುಯಾಗವೆನ್ನುತ್ತಾರೆ. ಪ್ರಜಾಪತಿ ದೇವತೆಗೆ ಮಂತ್ರವನ್ನು ಉಚ್ಚರಿಸುವಾಗ ಗಟ್ಟಿಯಾಗಿ ಉಚ್ಚರಿಸಬಾರದೆಂದು ವಿಧಿಯಿದೆ.

**... ...ಮನಸಾ ಪ್ರಜಾಪತಯೇ ಜುಹ್ವತಿ ।**

ಪ್ರೈಷವನ್ನೀಯುವಾಗ **ಅನುಬ್ರೂಹಿ** ಮತ್ತು **ಯಜ** ಈ ಪದಗಳನ್ನು ಗಟ್ಟಿಯಾಗಿ ಹೇಳಿದರೂ **ಪ್ರಜಾಪತಯೇ**, **ಪ್ರಜಾಪತಿಂ** ಎಂಬ ಪದಗಳನ್ನು ಮೆಲ್ಲಗೇ ಹೇಳಬೇಕು. ಅಗ್ನಿ-ಅಗ್ನೀಷೋಮ ಮತ್ತು ಅಗ್ನಿ-ಇಂದ್ರಾಗ್ನಿ ಅಥವಾ ಇಂದ್ರದೇವತೆಗೂ ನಡುವೆ ಈ ಹೋಮವಿದೆ.



**ಉಪಾಂಶುಯಾಜಮಂತರಾ ಯಜತಿ ।**

ಇದೇ ಕ್ರಮದಿಂದ ಅಂದರೆ ಪುರೋನುವಾಕ್ಯಪ್ರೈಷ, ಅವದಾನ, ಅತ್ಯಾಕ್ರಮಣ, ಆಶ್ರಾವಣ-ಪ್ರತ್ಯಾಶ್ರಾವಣ, ಯಾಜ್ಯಾಪ್ರೈಷ, ಯಾಗ-ಹೀಗೆ ದರ್ಶೇಷ್ಟಿಯಲ್ಲಿ ಇಂದ್ರಾಗ್ನಿ ದೇವತೆಗೆ ಪುರೋಡಾಶಯಾಗ. ಸೋಮಯಾಜಿಗಳಾದವರಿಗೆ ಸೋಮಯಾಗದ ನಂತರ ಒಂದು ವರ್ಷದವರೆಗೆ ಇಂದ್ರದೇವತೆಗೆ ಪುರೋಡಾಶ ಮತ್ತು ಸಾನ್ನಾಯ್ಯಗಳಿಂದ ಯಾಗ. ಅನಂತರ ಮಹೇಂದ್ರದೇವತೆಗೆ ಪುರೋಡಾಶ ಮತ್ತು ಸಾನ್ನಾಯ್ಯಗಳಿಂದ ಯಾಗ. ಪೂರ್ಣಮಾಸೇಷ್ಟಿಯಲ್ಲಿ ಅಗ್ನೀಷೋಮದೇವತೆಗೂ, ಇಂದ್ರ- ವೈಮೃಧ ದೇವತೆಗೂ ಪುರೋಡಾಶದಿಂದ ಯಾಗ. ಪೂರ್ಣಮಾಸದಲ್ಲಿ ಅಗ್ನೀಷೋಮ ಮತ್ತು ಇಂದ್ರ-ವೈಮೃಧ ದೇವತೆಗಳಿಗೆ ಎರಡನೆಯ ಮತ್ತು ಮೂರನೆಯ ಪುರೋಡಾಶದಿಂದಲೂ, ದರ್ಶದಲ್ಲಿ ಇಂದ್ರಾಗ್ನಿಗೆ ಎರಡನೆಯ ಪುರೋಡಾಶದಿಂದಲೂ, ಪೂರ್ವಾರ್ಧ-ಅಪರಾರ್ಧಗಳಿಂದ ಅವದಾನ ಮಾಡಬೇಕು. ನಂತರ **ಅಗ್ನಯೇ ಸ್ವಿಷ್ಟಕೃತೇಽನುಬ್ರೂಹಿ** ಎಂದು ಹೋತೃವಿಗೆ ಪ್ರೈಷ ವನ್ನು ನೀಡಬೇಕು. ಅಗ್ನಿಸ್ವಿಷ್ಟಕೃತ್ ದೇವತೆಗೆ ಪ್ರಥಮ ಪುರೋಡಾಶದ ಉತ್ತರಾರ್ಧದಿಂದಲೂ, ಧ್ರುವಾಜ್ಯ, ಎರಡನೆಯ ಮತ್ತು ಮೂರನೆಯ ಪುರೋಡಾಶದ (ಪೂರ್ಣಮಾಸದಲ್ಲಿ) ಉತ್ತರಾರ್ಧ, ಸಾನ್ನಾಯ್ಯದ ಉತ್ತರಾರ್ಧ(ದರ್ಶದಲ್ಲಿ)ಇವಿಷ್ಟು ಹವಿಸ್ಸುಗಳನ್ನು ಅವದಾನ ಮಾಡಬೇಕು. ನಂತರ ಎರಡು ಬಾರಿ ಅಭಿಘಾರವನ್ನು ಮಾಡಬೇಕು. ಪ್ರತ್ಯಂಜನವಿರುವುದಿಲ್ಲ. ಸ್ರುವದಿಂದ ಆಹವನೀಯದಲ್ಲಿ ಪಾರ್ವಣ ಹೋಮ (ಪೌರ್ಣಮಾಸೀ ಮತ್ತು ಅಮಾವಾಸ್ಯಾ ದೇವತೆಗಳಿಗೆ). ಬಳಿಕ ಅಧ್ವರ್ಯುವು ಅತ್ಯಾಕ್ರಮಣವನ್ನು ಮಾಡಿದ ನಂತರ ಆಶ್ರಾವಣ-ಪ್ರತ್ಯಾಶ್ರಾವಣಗಳು ನಡೆಯುತ್ತವೆ. ಹೋತೃವಿಗೆ ಅಧ್ವರ್ಯುವು **ಅಗ್ನಿಂ ಸ್ವಿಷ್ಟಕೃತಂ ಯಜ** ಎಂದು ಪ್ರೈಷವನ್ನು ನೀಡುತ್ತಾನೆ. ಯಾಜ್ಯಾಮಂತ್ರವನ್ನು ಹೇಳಿ ಹೋತೃವು ವಷಟ್ಕಾರವನ್ನು ಹೇಳುವಾಗ ಅಧ್ವರ್ಯುವು ಹೋಮವನ್ನು ಮಾಡುತ್ತಾನೆ. ಅಗ್ನಿಸ್ವಿಷ್ಟಕೃತ್ ದೇವತೆಗೆ ಹವಿಸ್ಸನ್ನು ಈಶಾನ್ಯದಲ್ಲಿ ಹಿಂದೆ ಹೋಮ ಮಾಡಿದ ಆಹುತಿಗಳನ್ನು ಮೀರಿ ಮುಂದಕ್ಕೆ ಅರ್ಪಿಸಬೇಕು.



ಸ್ವಿಷ್ಟಕೃತ್ ಹೋಮವಾದ ನಂತರ ಅಧ್ವರ್ಯುವು ಪ್ರತ್ಯಾಕ್ರಮಣ ಮಾಡಿ ಬಂದು ಜುಹೂವಿನಲ್ಲಿ ಜಲವನ್ನು ತುಂಬಿ ಅಂತಃಪರಿಧಿನಿನಯನ ಅಂದರೆ ಪರಿಧಿಗಳ ಒಳಗೆ ಬರುವಂತೆ ಮಾಡುತ್ತಾನೆ. ಬಳಿಕ ಜುಹೂವನ್ನು ನೀರಿನಿಂದ ತೊಳೆದು ಸ್ವಚ್ಛಗೊಳಿಸಿ ಆಹವನೀಯದಲ್ಲಿ ಕಾಯಿಸಿ ನೀರನ್ನು ತುಂಬಿಕೊಂಡು ಬಹಿಃಪರಿಧಿನಿನಯನ ಅಂದರೆ ಪರಿಧಿಗಳ ಹೊರಗೆ ಬರುವಂತೆ ಮಾಡುತ್ತಾನೆ. ನಂತರ ಉಪಭೃತ್ ನಲ್ಲಿರುವ ಆಜ್ಯವನ್ನು ಪೂರ್ತಿ ಜುಹೂವಿಗೆ ಹಾಕಿ ಜುಹೂ ಮತ್ತು ಉಪಭೃತ್ ಎರಡನ್ನೂ ಆಯಾ ಸ್ಥಾನದಲ್ಲಿ ಇಡುತ್ತಾನೆ.

ಬಲಗಡೆಯ ಪುರೋಡಾಶದ ಉತ್ತರಾರ್ಧದಿಂದ ಯವದಷ್ಟು ಪ್ರಮಾಣದ ಪುರೋಡಾಶವನ್ನು ತೆಗೆದುಕೊಂಡು ಬ್ರಹ್ಮನಿಗೆ ಹವಿಃಶೇಷವನ್ನು ನೀಡುವುದಕ್ಕಾಗಿ ಹವಿಃಶೇಷವನ್ನಿಟ್ಟುಕೊಳ್ಳುವ ಮರದ ಪಾತ್ರೆಯಾದ ಪ್ರಾಶಿತ್ರ ದಲ್ಲಿ ಅವದಾನವನ್ನು ಮಾಡಿ ಅದಕ್ಕೆ ಸ್ರುವದ ದಂಡಭಾಗದಿಂದ ಅಭಿಘಾರ ವನ್ನು ಮಾಡಬೇಕು. ನಂತರ ಪ್ರಣೀತಾಜಲವನ್ನು ಇಟ್ಟುಕೊಳ್ಳುವ ಮರದ ಪಾತ್ರೆಯಾದ ಪ್ರಣೀತಾಪ್ರಣಯನದ ಪಶ್ಚಿಮಕ್ಕೆ ಪ್ರಾಶಿತ್ರಹರಣವನ್ನು ಇಟ್ಟು ಸ್ರುವದಂಡವನ್ನು ನೀರಿನಿಂದ ತೊಳೆಯಬೇಕು.

## ಇಡೋಪಾಹ್ವಾನ, ಇಡಾಭಕ್ಷಣಗಳು

ಇಡಾಪಾತ್ರವನ್ನು ಅಂತರ್ವೇದಿಯಲ್ಲಿಟ್ಟು ಆಜ್ಯಸ್ಥಾಲಿಯಲ್ಲಿರುವ ಆಜ್ಯದಿಂದ ಇಡಾಪಾತ್ರೆಯ ಉಪಸ್ತರಣವನ್ನು ಮಾಡಬೇಕು. ದಕ್ಷಿಣಪುರೋಡಾಶದ ದಕ್ಷಿಣಾರ್ಧದಿಂದ ಇಡಾವದಾನವನ್ನು ಮಾಡಬೇಕು. ಎರಡನೆಯ ಅವದಾನವು ಮಂತ್ರವಿಲ್ಲದೆಯೇ ಮಾಡಲ್ಪಡಬೇಕು. ಈ ಅವದಾನಗಳನ್ನು ಇಡಾಪಾತ್ರೆಯಲ್ಲಿ ಹಾಕಬೇಕು. ಪ್ರಥಮ ಪುರೋಡಾಶದ ಪೂರ್ವಾರ್ಧದಿಂದ ಮೂರು ಅಂಗುಲ ಅಥವಾ ನಾಲ್ಕು ಅಂಗುಲ ಪ್ರಮಾಣ ದಷ್ಟು ಅವದಾನವನ್ನು ಮಾಡಿ ಆಜ್ಯದಿಂದ ಅಭಿಘಾರ ಮಾಡಿ ಧ್ರುವಾದ ಮುಂಭಾಗದಲ್ಲಿ ಇಡಬೇಕು. ಇದು ಯಜಮಾನಭಾಗ. ಅದೇ ಪುರೋಡಾಶದಿಂದ ಮತ್ತೆ ಅವದಾನವನ್ನು ಮಾಡಿ ಉತ್ತರಕ್ಕೆ ಇಡಬೇಕು. ಇದೇ ಬ್ರಹ್ಮಭಾಗ. ನಂತರ ಪುರೋಡಾಶದಿಂದ ಚತುರ್ಧಾಕರಣ ಮಾಡ ಬೇಕು. ಆಮೇಲೆ ಧ್ರುವಾಜ್ಯದಿಂದ ಎರಡು ಸಲ ಅವದಾನವನ್ನು ಮಾಡ ಬೇಕು. ನಂತರ ಹಿಂದಿನಂತೆ ಉತ್ತರಪುರೋಡಾಶ ಮತ್ತು ಸಾನ್ನಾಯ್ಯಗಳಿಂದ



ಎರಡೆರಡು ಸಲ ಇಡಾವದಾನವನ್ನು ಮಾಡಬೇಕು. ನಂತರ ಇಡಾಪಾತ್ರ ದಲ್ಲಿರುವ ಹವಿಸ್ಸಿಗೆ ಆಜ್ಯಸ್ಥಾಲಿಯಿಂದ ಅಭಿಘಾರವನ್ನು ಮಾಡಬೇಕು. ಹೋತೃವಿನ ತರ್ಜನೀ ಬೆರಳಿನ (ತೋರುಬೆರಳು) ಮೇಲಿನ ಎರಡು ಗೆಣ್ಣು ಗಳಿಗೆ ಅಂಜನವನ್ನು (ಆಜ್ಯಸ್ಪರ್ಶ) ಮಾಡಿದ ನಂತರ ಹೋತೃವು ತುಟಿಗಳಿಗೆ ಸ್ಪರ್ಶಿಸುತ್ತಾನೆ. ನಂತರ ಅವನ ಕೈಗೆ ಉಪಸ್ತರಣವನ್ನು ಮಾಡಿ, ಇಡಾ ಪಾತ್ರೆ ಯಲ್ಲಿರುವ ಹವಿಸ್ಸನ್ನು ಎರಡು ಸಲ ಇತ್ತು, ಅಭಿಘಾರವನ್ನು ಮಾಡಬೇಕು. ಹೋತೃವು ಬಳಿಕ ಇಡೋಪಾಹ್ವಾನಮಂತ್ರಗಳನ್ನು ಪಠಿಸುತ್ತಾನೆ. ಈ ಸಮಯ ದಲ್ಲಿ ಹೋತೃ ಮತ್ತು ಅಧ್ವರ್ಯುಗಳು ಇಡಾಪಾತ್ರವನ್ನು ಮುಖದ ಎತ್ತರಕ್ಕೆ ಹಿಡಿದಿರುತ್ತಾರೆ. ಯಜಮಾನನೂ, ಬ್ರಹ್ಮನೂ ಮತ್ತು ಆಗ್ನೀಧ್ರನೂ ಹೋತೃ ವನ್ನು ಅನ್ವಾರಂಭ ಮಾಡಿಕೊಂಡಿರುತ್ತಾರೆ (ಸ್ಪರ್ಶ). ಈ ಸಮಯ ದಲ್ಲಿ ಅಧ್ವರ್ಯುವು ಬಲಗೈಯಿಂದ ಚತುರ್ಧಾಕರಣವನ್ನು ಅಂದರೆ ದಕ್ಷಿಣ ಪುರೋಡಾಶದಲ್ಲಿ ನಾಲ್ಕು ಭಾಗ ಮಾಡಿ, ಅಂತರ್ವೇದಿಯಲ್ಲಿರುವ ಬರ್ಹಿಸ್ಸಿನಲ್ಲಿ (ದರ್ಭೆಗಳಲ್ಲಿ) ಸ್ಥಾಪಿಸುತ್ತಾನೆ. ಇಡೋಪಾಹ್ವಾನಮಂತ್ರವು ಮುಗಿದ ಬಳಿಕ ಆಗ್ನೀಧ್ರನಿಗೆ ಅಧ್ವರ್ಯುವು ಷಡವತ್ತವನ್ನು ನೀಡುತ್ತಾನೆ. ಸ್ಥಾಲಿಯ ಆಜ್ಯದಿಂದ ಉಪಸ್ತರಣ, ಹವಿಸ್ಸಿನ ಒಂದು ಭಾಗ ಮತ್ತು ಅಭಿಘಾರ ಇವು ಎರಡು ಬಾರಿ ಅನುಷ್ಠಿಸಲ್ಪಟ್ಟಾಗ ಷಡವತ್ತ - ಆರು ಬಾರಿ ಅವದಾನ ಮಾಡಲ್ಪಟ್ಟದ್ದು ಎನಿಸಿಕೊಳ್ಳುವುದು.

ಷಡವತ್ತವನ್ನು ನೀಡಿದ ನಂತರ ಹೋತೃ, ಆಗ್ನೀಧ್ರ, ಅಧ್ವರ್ಯು, ಬ್ರಹ್ಮಾ ಮತ್ತು ಯಜಮಾನ ಎಲ್ಲರೂ ವೇದಿಯಿಂದ ಹೊರಗೆ ಇಡಾಭಕ್ಷಣ ವನ್ನು ಮಾಡಿ ಸಂಮಾರ್ಜನೆ ಮಾಡಿಕೊಳ್ಳುತ್ತಾರೆ.

ಬಳಿಕ ಅಧ್ವರ್ಯುವಿನ ಪ್ರೈಷದ ನಂತರ ಆಗ್ನೀಧ್ರನು ಬ್ರಹ್ಮನಿಗೆ ಪ್ರಾಶಿತ್ರ ವನ್ನು ಕೊಡುತ್ತಾನೆ. ನಂತರ ಯಜಮಾನನು ನಾಲ್ವರು ಋತ್ವಿಜರಿಗೂ ಚತುರ್ಧಾಕರಣವನ್ನು ನಿರ್ದೇಶಿಸುತ್ತಾನೆ. ಋತ್ವಿಜರು ಅದನ್ನು ಸ್ವೀಕರಿಸುತ್ತಾರೆ. ಇಷ್ಟಿಯ ಪ್ರಾರಂಭದಲ್ಲಿಯೇ ದಕ್ಷಿಣಾಗ್ನಿಯಲ್ಲಿ ನಾಲ್ವರು ಋತ್ವಿಜರಿಗೆ ಭೋಜನಕ್ಕೆ ಸಾಲುವಷ್ಟು ಅನ್ನವನ್ನು ಪಾಕ ಮಾಡಿ ಇಟ್ಟು ಕೊಂಡಿರುತ್ತಾರೆ. ಈಗ ಅದಕ್ಕೆ ಅಭಿಘಾರವನ್ನು ಮಾಡಿ ಅಂತರ್ವೇದಿಯ ದಕ್ಷಿಣಶ್ರೋಣಿಯಲ್ಲಿಡಬೇಕು. ಶ್ರೋಣಿಯೆಂದರೆ ಸೊಂಟವೆಂದು ಅರ್ಥ. ಇಡೀ ಯಜ್ಞವೇದಿಯೇ ಯಜಮಾನನ ಶರೀರವಿದ್ದಂತೆ. ಆದುದರಿಂದ



ವೇದಿಯ ಮೇಲುಭಾಗವನ್ನು (ಪೂರ್ವದ) ಯಜ್ಞಶಿರಸ್ಸು ಎಂದು ಹೇಳು ತ್ತಾರೆ. ದಕ್ಷಿಣದಿಂದ ಉತ್ತರಕ್ಕೆ ಈ ಶಿರೋಭಾಗದಲ್ಲಿ ಬ್ರಹ್ಮಾ, ಆಹವನೀಯ, ಪ್ರಣೀತಾಪಾತ್ರ ಮತ್ತು ಇಧ್ಮ-ಬರ್ಹಿಗಳು ಇವೆಲ್ಲವೂ ಸರಳರೇಖೆಯಂತೆ ಇರುತ್ತವೆ. ಆ ಭಾಗವೇ ಯಜ್ಞಶಿರಸ್ಸು, ಹೀಗೆಯೇ ಯಜ್ಞದ ಅಂಸ (ಭುಜ), ಯಜ್ಞದ ಶ್ರೋಣಿ (ಮಧ್ಯಭಾಗ) ಎಂದೂ ವೇದಿಯ ಸ್ಥಾನಗಳಿಗೆ ವೇದ ಮೂಲಕವಾಗಿ ಯಾಜ್ಞಿಕರಲ್ಲಿ ವ್ಯವಹಾರವು ರೂಢಿಯಲ್ಲಿದೆ.

ಋತ್ವಿಜರಿಗೆ ಭೋಜನಕ್ಕಾಗಿ ನೀಡುವ ಅನ್ವಾಹಾರ್ಯವೆಂಬ ಹೆಸರಿರುವ ಅನ್ನವನ್ನು ದಕ್ಷಿಣಶ್ರೋಣಿಯಲ್ಲಿ ಇಟ್ಟ ನಂತರ ಬ್ರಹ್ಮನು ಅನ್ವಾಹಾರ್ಯದ ಸ್ವಲ್ಪ ಅಂಶವನ್ನು ಅವಘ್ರಾಣ ಮಾಡುತ್ತಾನೆ. ನಂತರ ಸ್ವಲ್ಪ ಅನ್ವಾಹಾರ್ಯವನ್ನು ಪ್ರಾಶಿತ್ರಹರಣದಲ್ಲಿ ಹಾಕಬೇಕು. ಯಜಮಾನನು ಅನ್ವಾಹಾರ್ಯವನ್ನು ಋತ್ವಿಜರಿಗೆ ದಕ್ಷಿಣೆಯನ್ನಾಗಿ ನೀಡುತ್ತಾನೆ. ಋತ್ವಿಜರು ಅದನ್ನು ಪ್ರತಿಗ್ರಹಿಸುವರು. ನಂತರ ಅಧ್ವರ್ಯುವು ಅಂತರ್ವೇದಿಯಲ್ಲಿರುವ ಹವಿಸ್ಸಿನ ಶೇಷವನ್ನು ಉದ್ವಾಸನೆ ಮಾಡುತ್ತಾನೆ.

## ಅನೂಯಾಜ, ಸೂಕ್ತವಾಕ, ಶಂಯುವಾಕಗಳು

ಅಧ್ವರ್ಯುವು ಬ್ರಹ್ಮನನ್ನು ಕುರಿತು:

**ಬ್ರಹ್ಮನ್! ಪ್ರಸ್ಥಾಸ್ಯಾಮಃ।**

ಬ್ರಹ್ಮನೇ! ಅನೂಯಾಜದ ಪ್ರಕ್ರಿಯೆಯನ್ನು ಆರಂಭಿಸುತ್ತೇನೆ. (ವಾಕ್ಯದಲ್ಲಿರುವ ಬಹುವಚನವು ವಿವಕ್ಷಿತವಲ್ಲ.)

ಎಂದು ಪ್ರೈಷವನ್ನು ನೀಡುತ್ತಾನೆ. ಬ್ರಹ್ಮನು **ಓಂ! ಪ್ರತಿಷ್ಠ** ಎಂದು ಅನುಜ್ಞೆಯನ್ನು ನೀಡುತ್ತಾನೆ. ಬಳಿಕ ಅಧ್ವರ್ಯುವು ಇಧ್ಮದಲ್ಲಿ ಉಳಿದಿದ್ದ ಒಂದು ಸಮಿಧೆಯನ್ನು ಆಹವನೀಯದಲ್ಲಿ ಅಮಂತ್ರಕವಾಗಿ ಅರ್ಪಿಸುತ್ತಾನೆ. ನಂತರ ಆಗ್ನೀಧ್ರನು ಇಧ್ಮಸನ್ನಹನಗಳಿಂದ ಪರಿಧಿ ಮತ್ತು ಅಗ್ನಿಗಳನ್ನು ಒಮ್ಮೊಮ್ಮೆ ಸಮ್ಮಾರ್ಜನೆ ಮಾಡಿ ಅದನ್ನು ಆಹವನೀಯದಲ್ಲಿ ಅರ್ಪಿಸುತ್ತಾನೆ. ಬಳಿಕ ಅಧ್ವರ್ಯುವು ಅತ್ಯಾಕ್ರಮಣವನ್ನು ಮಾಡಿ ಆಶ್ರಾವಣ-ಪ್ರತ್ಯಾಶ್ರಾವಣಗಳ ನಂತರ **ದೇವಾನ್ ಯಜ** ಎಂದು ಪ್ರಥಮಪ್ರೈಷವನ್ನು ಹೇಳಬೇಕು.



ಹೋತೃವು ಅನೂಯಾಜಮಂತ್ರಗಳನ್ನು ಪಠಿಸುತ್ತಾನೆ. ಅನೂಯಾಜಮಂತ್ರಗಳಿಗೂ ಪ್ರಯಾಜಗಳಂತೆಯೇ ಪುರೋನುವಾಕ್ಯವಿರುವುದಿಲ್ಲ. ಪ್ರಧಾನ ಯಾಗದ ನಂತರ ಈ ಮಂತ್ರಗಳಿಂದ ಯಾಗವಿರುವುದರಿಂದ ಇವುಗಳಿಗೆ **ಅನೂಯಾಜ** ಎಂದು ಹೆಸರು. ಅನೂಯಾಜದ ಕಡೆಯಲ್ಲಿ ಹೋತೃವು ವಷಟ್ಕಾರವನ್ನು ಹೇಳುವಾಗ ಅಧ್ವರ್ಯುವು ಆಹವನೀಯದಲ್ಲಿ ಅನೂಯಾಜ ಸಮಿಧೆಯ ಪೂರ್ವಾರ್ಧದಲ್ಲಿ ಜುಹೂವಿನಲ್ಲಿರುವ ಆಜ್ಯದ ಮೂರನೆಯ ಒಂದು ಭಾಗದಿಂದ ಹೋಮವನ್ನು ಮಾಡಬೇಕು. ನಂತರ ಪುನಃ ಆಶ್ರಾವಣ-ಪ್ರತ್ಯಾಶ್ರಾವಣಗಳು. **ಯಜ** ಎಂಬ ಎರಡನೆಯ ಪ್ರೈಷ. ವಷಟ್ಕಾರದಲ್ಲಿ ಹೋಮ. ಈ ಹೋಮವನ್ನು ಸಮಿಧೆಯ ಮಧ್ಯಭಾಗದಲ್ಲಿ ಮಾಡಬೇಕು. ಪುನಃ ಸಮಿಧೆಯ ಆದಿಯಿಂದ ತುದಿಯವರೆಗೂ ತೃತೀಯ ಹೋಮ. ಬಳಿಕ ಪ್ರತ್ಯಾಕ್ರಮಣವನ್ನು ಮಾಡಿ ಸ್ರುಕ್ ಗಳನ್ನು ಸ್ವಸ್ಥಾನದಲ್ಲಿಟ್ಟು ಬಲಗೈಯಿಂದ ಜುಹೂವನ್ನು ಎತ್ತಿ ಹಿಡಿಯಬೇಕು. **ಉಪಭೃತ್** ಅನ್ನು ಎಡಗೈಯಿಂದ ಕೆಳಗೆ ಒತ್ತಬೇಕು. ಬಲಗೈಯಲ್ಲಿರುವ ಜುಹೂವನ್ನು ಪೂರ್ವಕ್ಕೆ ಸರಿಸಿ, **ಉಪಭೃತ್** ಅನ್ನು ಪಶ್ಚಿಮಾಗ್ರವಾಗಿ ಪಶ್ಚಿಮಕ್ಕೆ ಸರಿಸಬೇಕು. ನಂತರ **ಉಪಭೃತ್** ಅನ್ನು ಜಲದಿಂದ ಪ್ರೋಕ್ಷಿಸಿ, ಜುಹೂ ಮತ್ತು ಉಪಭೃತ್ ಎರಡನ್ನೂ ಮೊದಲಿನಂತೆಯೇ ಆಸಾದನೆ ಮಾಡಿ ಪ್ರಸ್ತರವನ್ನು ವಿಧೃತಿಯೊಂದಿಗೆ ತೆಗೆಯಬೇಕು. 'ವಿಧೃತಿ' ಎಂದರೆ ಎರಡು ದರ್ಭೆಗಳು. ಪ್ರಸ್ತರ ಮೊದಲಾದವುಗಳನ್ನಿಡುವುದಕ್ಕೆ ವಿನಿಯೋಗವಾಗುವವು. ಪ್ರಸ್ತರದ ಅಗ್ರವನ್ನು ಜುಹೂವಿನಲ್ಲಿಯೂ, ಮಧ್ಯಭಾಗವನ್ನು ಉಪಭೃತ್ ನಲ್ಲಿಯೂ, ಮೂಲಭಾಗವನ್ನು ಧ್ರುವಾದಲ್ಲಿಯೂ, ಘೃತಾಂಜನವಾಗುವಂತೆ (ಆಜ್ಯವು ಸೇರುವಂತೆ) ಸ್ಪರ್ಶ ಮಾಡಿಸಬೇಕು. ನಂತರ ಪ್ರಸ್ತರದ ದರ್ಭೆಯಲ್ಲಿ ಒಂದನ್ನು ತೆಗೆದಿಟ್ಟು ಪ್ರಸ್ತರವನ್ನು ಜುಹೂವಿನಲ್ಲಿ ನಿಲ್ಲಿಸಿ ಸೂಕ್ತವಾಕವಾದ

**ಇದಂ ದ್ಯಾವಾಪೃಥಿವೀ ಭದ್ರಮಭೂತ್ ।**

ಎಂದು ಆರಂಭಗೊಳ್ಳುವ ಮಂತ್ರಗಳನ್ನು ಹೇಳಲು ಹೋತೃವಿಗೆ ಪ್ರೈಷವನ್ನು ನೀಡಬೇಕು. ಹೋತೃವು ಸೂಕ್ತವಾಕವನ್ನು ಪಠಿಸಿದ ಮೇಲೆ ಪ್ರಸ್ತರವನ್ನು ಅಗ್ರದಿಂದ ಆರಂಭಿಸಿ ಅಗ್ರವು ಮೇಲೆ ಬರುವಂತೆ ಆಹವನೀಯದಲ್ಲಿ ಅರ್ಪಿಸುತ್ತಾನೆ. ತೆಗೆದಿಟ್ಟ ಒಂದು ತೃಣವನ್ನೂ ಅರ್ಪಿಸುತ್ತಾನೆ. ಇದನ್ನು



ಅನುಪ್ರಹರಣ ಎನ್ನುತ್ತಾರೆ. ನಂತರ ಅಧ್ವರ್ಯುವು ಶಂಯುವಾಕವನ್ನು ಹೇಳುವಂತೆ ಹೋತೃವಿಗೆ ಪ್ರೈಷವನ್ನು ನೀಡುತ್ತಾನೆ. ಹೋತೃವು

**ತಚ್ಛಂಯೋರಾವೃಣೀಮಹೇ ।**

ಎಂದು ಆರಂಭಗೊಳ್ಳುವ ಅನುವಾಕವಾದ ಶಂಯುವಾಕವನ್ನು ಪಠಿಸುತ್ತಾನೆ.

ನಂತರ ಅಧ್ವರ್ಯುವು ಆಹವನೀಯಾಗ್ನಿಯ ಉಪಸ್ಥಾನವನ್ನು (ಪ್ರಾರ್ಥನೆ) ಮಾಡಿ ಮಧ್ಯಮಪರಿಧಿಯನ್ನು ಆಹವನೀಯಕ್ಕೆ ಅರ್ಪಿಸಿ, ಉಳಿದ ಎರಡು ಪರಿಧಿಗಳನ್ನೂ ಒಟ್ಟಿಗೇ ಅರ್ಪಿಸುತ್ತಾನೆ. ನಂತರ ಆಹವನೀಯದ ಆಗ್ನೇಯ ಮತ್ತು ಈಶಾನ್ಯದಲ್ಲಿ ಇಟ್ಟಿದ್ದ ಎರಡು ಊರ್ಧ್ವ ಸಮಿಧೆಗಳನ್ನು ಹವನ ಮಾಡಿ ಜುಹೂ ಮತ್ತು ಉಪಭೃತ್ ಗಳಲ್ಲಿರುವ ಆಜ್ಯದಿಂದ ಪರಿಧಿಗಳ ಮೇಲೆ ಸಂಸ್ರಾವಹೋಮವನ್ನು ಮಾಡುತ್ತಾನೆ. ನಂತರ ಜುಹೂ ಮತ್ತು ಉಪಭೃತ್ ಗಳನ್ನು ಧಾನ್ಯಶಕಟದ ಮೇಲೆ ಯಾಗಲೀ, ಉತ್ಕರದಲ್ಲಿಯಾಗಲೀ ವಿಮೋಕ ಮಾಡುತ್ತಾನೆ(ಇಡುತ್ತಾನೆ).

## ಪತ್ನೀಸಂಯಾಜ; ಪ್ರಾಯಶ್ಚಿತ್ತಹವನಗಳು

ನಂತರ ಗಾರ್ಹಪತ್ಯಾಗ್ನಿಯಲ್ಲಿ ದೇವತೆಗಳ ಪತ್ನಿಯರಿಗೆ ನೀಡುವ ಹವಿಸ್ಸಿನ ಸಲುವಾಗಿ ಪತ್ನೀಸಂಯಾಜವು ನಡೆಯುವುದು. ಈ ಸಂದರ್ಭದಲ್ಲಿ ಹವನಮಂತ್ರಗಳನ್ನು ಮೆಲ್ಲಗೆ ಉಚ್ಚರಿಸಬೇಕಲ್ಲದೆ, ಹೋಮವನ್ನು ಮಾಡುವಾಗ ಅಂತರ್ಧಾನಕಟವನ್ನು ಗಾರ್ಹಪತ್ಯದ ಪೂರ್ವದಿಕ್ಕಿನಲ್ಲಿ ಉತ್ತರಾಗ್ರವಾಗಿ ಹಿಡಿದಿರಬೇಕು. ಅಧ್ವರ್ಯುವು ಹೋತೃವಿಗೆ ವೇದವನ್ನು (ಯಜ್ಞಸಾಧನ) ಕೊಟ್ಟು, ಆಜ್ಯಸ್ಥಾಲಿ ಮತ್ತು ಸ್ರುವಗಳನ್ನು ಬಲಗೈ ಯಿಂದಲೂ, ಜುಹೂವನ್ನು ಎಡಗೈಯಿಂದಲೂ ತೆಗೆದುಕೊಂಡು ಗಾರ್ಹಪತ್ಯದ ಪಶ್ಚಿಮದ ದಕ್ಷಿಣಾರ್ಧದಲ್ಲಿ ಊರ್ಧ್ವಜಾನು (ಮಂಡಿ ಮೇಲೆ ಮಾಡಿ) ವಾಗಿಯೂ, ಉತ್ತರಾಭಿಮುಖನಾಗಿಯೂ ಕೂರುತ್ತಾನೆ. ಹೋತೃವು ಗಾರ್ಹಪತ್ಯದ ಪಶ್ಚಿಮದ ಉತ್ತರಾರ್ಧದಲ್ಲಿ ಪೂರ್ವಾಭಿಮುಖನಾಗಿ ಕೂರುತ್ತಾನೆ. ಆಗ್ನೀಧ್ರನು ಗಾರ್ಹಪತ್ಯದ ಉತ್ತರಕ್ಕೆ ದಕ್ಷಿಣಾಭಿಮುಖನಾಗಿ ಸ್ಫ್ಯವನ್ನು ಕೈಯಲ್ಲಿ ಹಿಡಿದು ಕೂರುತ್ತಾನೆ. ಅಧ್ವರ್ಯುವು ಹೋತೃವಿನಿಂದ ವೇದವನ್ನು ತೆಗೆದುಕೊಂಡು ಉಪಭೃತ್



ಅನ್ನು ಹಿಡಿಯುವಂತೆ ಜುಹೂವಿನ ಕೆಳಗೆ ವೇದವನ್ನು ಹಿಡಿದುಕೊಂಡು **ಸೋಮಾಯಾನುಬ್ರೂಹಿ** ಎಂದು ಪ್ರೈಷವನ್ನು ಕೊಡುತ್ತಾನೆ. ನಂತರ ಸ್ರುವದಿಂದ ಜುಹೂವಿನಲ್ಲಿ ನಾಲ್ಕು ಬಾರಿ ಆಜ್ಯವನ್ನು ಗ್ರಹಿಸಿ (ತೆಗೆದುಕೊಂಡು) ಆಶ್ರಾವಣ-ಪ್ರತ್ಯಾಶ್ರಾವಣಗಳನ್ನು ಮಾಡಿ **ಸೋಮಂ ಯಜ** ಎಂದು ಪ್ರೈಷವನ್ನು ನೀಡಬೇಕು. ಪ್ರಯಾಜವಿಧಿಯೊಡನೆ ಆರಂಭವಾದ ಆಶ್ರಾವಣ- ಪ್ರತ್ಯಾಶ್ರಾವಣಗಳು ಈ ವಿಧಿಯೊಡನೆ ಮುಗಿಯುತ್ತವೆ. ನಂತರ ವಷಟ್ಕಾರವನ್ನು ಹೋತೃವು ಹೇಳುವಾಗ ಹೋಮವನ್ನು ಮಾಡಬೇಕು.

ಇದರಂತೆಯೇ ತ್ವಷ್ಟೃದೇವತೆ, ದೇವಾನಾಂ ಪತ್ನೀ, ರಾಕಾ, ಸಿನೀವಾಲೀ, ಕುಹೂ, ಅನುಮತಿ, ಮತ್ತು ಅಗ್ನಿ-ಗೃಹಪತಿ ದೇವತೆಗಳಿಗೆ ಚತುರ್ಗೃಹೀತಾಜ್ಯದಿಂದ (ನಾಲ್ಕು ಬಾರಿ ತೆಗೆದುಕೊಂಡ ಆಜ್ಯ) ಹವನವನ್ನು ಮಾಡಬೇಕು. ಅಗ್ನಿಗೃಹಪತಿಗೆ ಆಜ್ಯಗ್ರಹಣವಾದ ಮೇಲೆ ರಾಕಾ ಮುಂತಾದ ದೇವತೆಗಳ ಉಪಹೋಮ. ಸಂಪತ್ನೀಯ ಹೋಮ. ನಂತರ ನಾರಿಷ್ಠಹೋಮ. ಬಳಿಕ ಅಗ್ನಿಗೃಹಪತಿಗೆ ಹೋಮವನ್ನು ಮಾಡಬೇಕು. ಸ್ರುವದಲ್ಲಿ ಆಜ್ಯವನ್ನು ತೆಗೆದುಕೊಂಡು ಹೋತೃವಿನ ತರ್ಜನೀ ಬೆರಳಿನ ಎರಡು ಪರ್ವಗಳಿಗೆ (ಗೆಣ್ಣುಗಳು) ಅಂಜನವನ್ನು ಮಾಡಿ, ಹೋತೃವು ಘ್ರಾಣಭಕ್ಷಣ (ಆಘ್ರಾಣಿಸುವುದು) ಮಾಡಿದ ನಂತರ ಹೋತೃವಿನ ಹಸ್ತದಲ್ಲಿ ನಾಲ್ಕು ಸಲ ಆಜ್ಯವನ್ನು ಹಾಕಿ ಹೋತೃವಿನಿಂದ ಇಡೋಪಾಹ್ವಾನವನ್ನು ಮಾಡಿಸಬೇಕು. ಆಗ ಅಧ್ವರ್ಯುವು ಆಗ್ನೀಧ್ರನಿಗೆ ಆಜ್ಯದಿಂದಲೇ ಷಡವತ್ತವನ್ನು ಕೊಡುತ್ತಾನೆ. ಹೋತೃವು ಇಡೋಪಾಹ್ವಾನವನ್ನು ಮಾಡುವಾಗ ಪತ್ನಿಯು ಅನ್ವಾರಂಭ ಮಾಡುವಳು. ಪ್ರಾಶನ ಮತ್ತು ಮಾರ್ಜನಗಳ ತರುವಾಯ ಅನ್ವಾಹಾರ್ಯಪಚನ (ದಕ್ಷಿಣಾಗ್ನಿ)ದಲ್ಲಿ ಅಧ್ವರ್ಯುವು ಚತುರ್ಗೃಹೀತಾಜ್ಯದಿಂದ ಪ್ರಾಯಶ್ಚಿತ್ತ ಹೋಮವನ್ನು ಮಾಡುತ್ತಾನೆ. ಇನ್ನೊಮ್ಮೆ ಚತುರ್ಗೃಹೀತಾಜ್ಯದೊಡನೆ ಫಲೀಕರಣಗಳನ್ನು ಸೇರಿಸುತ್ತಾನೆ. ಫಲೀಕರಣಗಳೆಂದರೆ ಪುರೋಡಾಶ ಅಥವಾ ಚರುವಿಗಾಗಿ ಧಾನ್ಯವನ್ನು ಕುಟ್ಟಿ, ಕೇರಿ ಶುದ್ಧಗೊಳಿಸುವಾಗ ಬಿದ್ದ ಧಾನ್ಯಕಣಗಳು.

ಫಲೀಕರಣಗಳನ್ನು ಸೇರಿಸಿದ ನಂತರ ಇಧ್ಮವನ್ನು ಕತ್ತರಿಸುವಾಗ ಉಂಟಾಗುವ ಚೂರುಗಳಾದ ಇಧ್ಮಪ್ರವ್ರಶ್ಚನಗಳನ್ನು ಅಗ್ನಿಯಲ್ಲಿ ಅರ್ಪಿಸಿ ಫಲೀಕರಣಹೋಮವನ್ನು ಮಾಡುತ್ತಾನೆ. ನಂತರ ಅಧ್ವರ್ಯುವು ವೇದವನ್ನು



ಯಜಮಾನನಿಗೆ ಕೊಡುತ್ತಾನೆ. ಯಜಮಾನನು ಮಂತ್ರವನ್ನು ಪಠಿಸಿದ ಬಳಿಕ ಅದನ್ನು ಅಧ್ವರ್ಯುವು ಹೋತೃವಿಗೆ ಕೊಡಬೇಕು. ಬಳಿಕ ಪತ್ನಿಗೆ ಕಟ್ಟಿದ ಯೋಕ್ತ್ರವೆಂಬ ಹೆಸರಿನ ದರ್ಭೆಯ ಹುರಿಯನ್ನು ಬಿಚ್ಚಿ ಪತ್ನಿಯ ಅಂಜಲಿಯಲ್ಲಿ ಹಾಕಿ ಅಗ್ನಿಹೋತ್ರಹವಣಿಯಿಂದ ಜಲವನ್ನು ಹಾಕಬೇಕು. ಆ ಜಲದಿಂದ ಪತ್ನಿಯು ಮುಖಮಾರ್ಜನೆಯನ್ನು ಮಾಡುವಳು. ನಂತರ ಪತ್ನಿಯು ಆಚಮನವನ್ನು ಮಾಡಿ ವ್ರತವಿಸರ್ಜನೆಯನ್ನು ಮಾಡುತ್ತಾಳೆ.

## ಸಮಿಷ್ಟಯಜುರ್ಹೋಮ (ಪೂರ್ಣಾಹುತಿ), ಪ್ರೋಕ್ಷಣ

ಅಧ್ವರ್ಯುವು ಪತ್ನೀಸಂಯಾಜಕ್ಕಾಗಿ ಹೋದ ಮಾರ್ಗದಿಂದಲೇ ಆಹವನೀಯದ ಸಮೀಪಕ್ಕೆ ಬಂದು ಆಜ್ಯಸ್ಥಾಲಿಯಲ್ಲಿದ್ದ ಆಜ್ಯವನ್ನು ಸ್ರುವ ದಿಂದ ತೆಗೆದುಕೊಂಡು ಧ್ರುವಾವನ್ನು ತುಂಬಬೇಕು. ನಂತರ ಆಹವನೀಯದಲ್ಲಿ ಪ್ರಾಯಶ್ಚಿತ್ತಹೋಮಗಳನ್ನು ಮಾಡಬೇಕು. ವೇದಿಯಲ್ಲಿ ಆಸ್ತರಣ (ಹರಡಿದ) ಮಾಡಿದ ಮೂರು ದರ್ಭೆಮುಷ್ಟಿಗಳಲ್ಲಿ ಸ್ವಲ್ಪ ಸ್ವಲ್ಪ ಭಾಗವನ್ನು ತೆಗೆದುಕೊಂಡು ಧ್ರುವಾಜ್ಯದಲ್ಲಿ ಪ್ರಸ್ತರವನ್ನು ಹಿಂದೆ ಅಂಜನ ಮಾಡಿದಂತೆಯೇ ಈ ದರ್ಭೆಗಳನ್ನೂ ಅಂಜನ ಮಾಡಿ ಆಹವನೀಯದಲ್ಲಿ ಪ್ರಹರಣ ಮಾಡಬೇಕು (ಅರ್ಪಿಸಬೇಕು). ಆಮೇಲೆ ನಿಂತುಕೊಂಡು ಬಲ ಗಾಲನ್ನು ವೇದಿಯ ಒಳಗೂ ಎಡಗಾಲನ್ನು ವೇದಿಯ ಹೊರಗೂ ಇಟ್ಟು ಕೊಂಡು ಧ್ರುವೆಯನ್ನೆತ್ತಿಕೊಂಡು ಸಮಿಷ್ಟಯಜುರ್ಹೋಮವನ್ನು ಮಾಡ ಬೇಕು. ಇಲ್ಲಿಯವರೆಗೂ ಧ್ರುವೆಯ ಜಾಗವು ಬದಲಾಯಿಸಿರುವುದೇ ಇಲ್ಲ. ಆದುದರಿಂದ ಆ ಯಜ್ಞಪಾತ್ರೆಗೆ ಧ್ರುವಾ (ಸ್ಥಿರ) ಎಂಬ ಹೆಸರು ಯಥಾರ್ಥವಾಗಿದೆ.

ಬಳಿಕ ಧ್ರುವಾವನ್ನು ಬಹಿರ್ವೇದಿಯಲ್ಲಿ ಉದ್ವಾಸನ ಮಾಡಬೇಕು. ಆಹವನೀಯದ ಉತ್ತರಕ್ಕಿದ್ದ ಪ್ರಣೀತಾಪಾತ್ರವನ್ನು ಅಂತರ್ವೇದಿಯಲ್ಲಿಟ್ಟು ಯಜಮಾನ ಮತ್ತು ಅಧ್ವರ್ಯುಗಳಿಬ್ಬರೂ ಪ್ರಣೀತಾಜಲದಿಂದ ಎಲ್ಲ ದಿಕ್ಕು ಗಳಲ್ಲಿಯೂ ಪ್ರೋಕ್ಷಿಸುವರು. ನಂತರ ಪ್ರಣೀತಾಜಲವನ್ನು ಯಜಮಾನನ ಬೊಗಸೆಯಲ್ಲಿ ಹಾಕುತ್ತಾರೆ.



## ವಿಷ್ಣುಕ್ರಮ, ವ್ರತವಿಸರ್ಜನೆ

ಇದು ದರ್ಶ-ಪೂರ್ಣಮಾಸೇಷ್ಟಿಗಳ ಕಡೆಯ ಘಟ್ಟ. ಯಜಮಾನನು ತನ್ನ ಸ್ಥಾನದಲ್ಲಿ ಪೂರ್ವಾಭಿಮುಖನಾಗಿ ನಿಂತು ಮಂತ್ರಕ್ಕೆ ಒಂದರಂತೆ ಬಲ ಗಾಲಿನ ಪಾದವನ್ನು ಮೂರು ಹೆಜ್ಜೆ ಮುಂದಕ್ಕಿಡುವನು. ನಾಲ್ಕನೆಯ ಮಂತ್ರ ವನ್ನು ನಿಂತಲ್ಲಿಯೇ ಪಠಿಸುತ್ತಾನೆ. ನಂತರ ಅಲ್ಲಿಯೇ ನಿಂತು ಆಹವನೀಯೋಪಸ್ಥಾನವನ್ನು ಮಾಡಿ ಆದಿತ್ಯೋಪಸ್ಥಾನವನ್ನೂ ಮಾಡು ತ್ತಾನೆ. ಸಮಿದಾಧಾನವನ್ನು ಮಾಡಿದ ನಂತರ ಆಹವನೀಯ-ಗಾರ್ಹಪತ್ಯಗಳ ಉಪಸ್ಥಾನ ಮಾಡಿ ಕುಳಿತುಕೊಂಡು ಯಜ್ಞವಿಮೋಕಮಂತ್ರವನ್ನು ಪಠಿಸುತ್ತಾನೆ. ನಂತರ ಪ್ರಾರಂಭದಲ್ಲಿ ಮಾಡಿದಂತೆ ಪಯಸ್ವತೀಮಂತ್ರದಿಂದ ಆಚಮನವನ್ನು ಮಾಡಿ ಆಹವನೀಯದಲ್ಲಿ ವ್ರತವಿಸರ್ಜನೆಯನ್ನು ಮಾಡು ತ್ತಾನೆ. ಪುನಃ ನಿಂತುಕೊಂಡು ಯಜ್ಞದ ಪುನರಾಲಂಭದ ಮಂತ್ರವನ್ನು ಪಠಿಸಿ, ಪೂರ್ವಕ್ಕೆ ಜಿಗಿದು ಗೋಮತೀಮಂತ್ರವನ್ನು ಪಠಿಸಬೇಕು.

ಬಳಿಕ ಯಜಮಾನದಂಪತಿಗಳು ಗಾರ್ಹಪತ್ಯದ ಪಶ್ಚಿಮಕ್ಕೆ ಕುಳಿತು ಬ್ರಾಹ್ಮಣತರ್ಪಣ (ಸಂತರ್ಪಣೆ) ಮಾಡುವಂತೆ ಪ್ರೈಷವನ್ನು ನೀಡಬೇಕು. ನಂತರ ತಾವು ಅನುಷ್ಠಿಸಿದ ದರ್ಶ-ಪೂರ್ಣಮಾಸೇಷ್ಟಿಯಾಗದ ಕರ್ಮಕಲಾಪ ವೆಲ್ಲವನ್ನೂ ಈಶ್ವರಾರ್ಪಣ ಮಾಡಬೇಕು. ಇಲ್ಲಿಗೆ ದರ್ಶ-ಪೂರ್ಣ ಮಾಸೇಷ್ಟಿಯ ಕಲಾಪವು ಪೂರ್ಣಗೊಳ್ಳುವುದು.

## ಅನೇಕ ಬಗೆಯ ಇಷ್ಟಿಗಳು

ದರ್ಶ-ಪೂರ್ಣಮಾಸೇಷ್ಟಿಗಳು ಎಲ್ಲ ಇಷ್ಟಿಗಳಿಗೂ ಪ್ರಕೃತಿಗಳು. ವೇದದಲ್ಲಿ ಅನೇಕ ಬಗೆಯ ಇಷ್ಟಿಗಳು ಹೇಳಲ್ಪಟ್ಟಿವೆ. ದರ್ಶ-ಪೂರ್ಣಮಾಸ ಗಳು ಸಪ್ತ ಹವಿಃಸಂಸ್ಥೆಗಳಲ್ಲಿ ಸೇರಿರುವುದರಿಂದ ಅವು ನಿತ್ಯಕರ್ಮಗಳು. ಬಗೆಬಗೆಯ ಕಾಮನೆಯಿಂದ ಮಾಡುವ ಇಷ್ಟಿಗಳು ಕಾಮ್ಯೇಷ್ಟಿಗಳು. ನಿತ್ಯೇಷ್ಟಿ ಗಳಿಗೂ ಕಾಮ್ಯೇಷ್ಟಿಗಳಿಗೂ ದ್ರವ್ಯ, ದೇವತೆಗಳ ಭೇದವಿರುತ್ತದೆ. ಮಿಕ್ಕದ್ದೆಲ್ಲವೂ ಪ್ರಕೃತಿಯಂತೆಯೇ ಎಂದು ಹಿಂದೆಯೇ ತಿಳಿಸಿದ್ದಾಗಿದೆಯಷ್ಟೆ. ಕೃಷ್ಣಯಜುರ್ವೇದದಲ್ಲಿ ಈ ಬಗೆಯ ಕಾಮ್ಯೇಷ್ಟಿಗಳು - ನೈಮಿತ್ತಿಕೇಷ್ಟಿಗಳು ಸುಮಾರು ೨೦೦ (ಇನ್ನೂರು) ಉಪದೇಶಿಸಲ್ಪಟ್ಟಿವೆ. ಇವುಗಳನ್ನು ಮುಂದೆ ಸಂಗ್ರಹಿಸಿ ನೀಡಲಾಗುವುದು.



ಯಾವ ಕಾಮ್ಯೇಷ್ಟಿಗೆ ನಿರ್ದಿಷ್ಟವಾದ ಕಾಲವು ಶ್ರುತಿಯಲ್ಲಿ ಹೇಳಲ್ಪಟ್ಟಿಲ್ಲವೋ ಅವುಗಳನ್ನು ಪರ್ವಕಾಲದಲ್ಲಿಯಾಗಲೀ, (ಪೂರ್ಣಿಮೆ-ಅಮಾವಾಸ್ಯೆ) ಶುಕ್ಲಪಕ್ಷದಲ್ಲಿ ದೇವನಕ್ಷತ್ರವಿರುವಂದಾಗಲೀ ಅನುಷ್ಠಿಸ ಬಹುದು. ನೈಮಿತ್ತಿಕ ಇಷ್ಟಿಗಳನ್ನು ಆಯಾ ನಿಮಿತ್ತವು ಒದಗಿದಾಗಲೇ ಅನುಷ್ಠಿಸಬೇಕು.

ಈ ಕಾಮ್ಯೇಷ್ಟಿಗಳಲ್ಲಿ ದರ್ಶ-ಪೂರ್ಣಮಾಸಗಳಂತೆಯೇ ಪ್ರಕ್ರಿಯೆಯು ಇದ್ದರೂ ಚಾತುರ್ಮಾಸ್ಯೇಷ್ಟಿಯ ಕಲಾಪದಲ್ಲಿ ಸ್ವಲ್ಪ ವ್ಯತ್ಯಾಸವು ಇದೆ. ಅಲ್ಲದೆ ಚಾತುರ್ಮಾಸ್ಯೇಷ್ಟಿಯು ರಾಜಸೂಯಯಾಗದ ಅಂಗವಾಗಿಯೂ, ಸ್ವತಂತ್ರವಾಗಿಯೂ ಉಪದೇಶಿಸಲ್ಪಟ್ಟಿದೆ. ಚಾತುರ್ಮಾಸ್ಯೇಷ್ಟಿಯ ಬಗ್ಗೆ ಸ್ವಲ್ಪ ಪರಿಚಯವನ್ನು ನೀಡಲಾಗುವುದು.

## ಚಾತುರ್ಮಾಸ್ಯೇಷ್ಟಿ

ಚಾತುರ್ಮಾಸ್ಯೇಷ್ಟಿಯು ಕರ್ಮಸಮುದಾಯ. ಚಾತುರ್ಮಾಸ್ಯೇಷ್ಟಿಯು ನಿತ್ಯಕರ್ಮವಾದುದರಿಂದ ತಾನು ಬದುಕಿರುವವರೆಗೂ ಅಗ್ನಿಹೋತ್ರದಂತೆಯೇ ಅದನ್ನು ಅನುಷ್ಠಿಸಬಹುದಾಗಿದೆ. ಆ ಅನುಷ್ಠಾನದ ರೀತಿಯು ಮೂರು ಬಗೆಯಾಗಿರುತ್ತದೆ.

೧. ಸಾಂವತ್ಸರಿಕ ೨. ದ್ವಾದಶಾಹ (ಹನ್ನೆರಡು ದಿನಗಳವರೆಗೆ) ೩. ಯಥಾ ಪ್ರಯೋಗ (ಐದು ದಿನಗಳವರೆಗೆ).

ಚಾತುರ್ಮಾಸ್ಯೇಷ್ಟಿಯನ್ನು ನಾಲ್ಕು ಪರ್ವಗಳನ್ನಾಗಿ ವಿಂಗಡಿಸಲಾಗಿದೆ. ೧. ವೈಶ್ವದೇವಪರ್ವ ೨. ವರುಣಪ್ರಘಾಸಪರ್ವ ೩. ಸಾಕಮೇಧಪರ್ವ ೪. ಶುನಾಸೀರೀಯಪರ್ವ.

### ಇಷ್ಟಿಯು ಯಾವಾಗ?

ಸಂವತ್ಸರದಲ್ಲಿ ೧೨ ತಿಂಗಳುಗಳಷ್ಟೆ. ಆದುದರಿಂದ ಫಾಲ್ಗುಣಮಾಸದ ಪೂರ್ಣಿಮೆಯಂದಾಗಲೀ, ಚೈತ್ರಮಾಸದ ಪೂರ್ಣಿಮೆಯಂದಾಗಲೀ ವೈಶ್ವದೇವಪರ್ವವನ್ನು ಅನುಷ್ಠಿಸಿ, ನಂತರ ಆಷಾಢ ಪೂರ್ಣಿ ಮೆಗಾಗಲೀ,



ಶ್ರಾವಣ ಪೂರ್ಣಿಮೆಗಾಗಲೀ (ನಾಲ್ಕು ತಿಂಗಳುಗಳ ನಂತರ) ವರುಣಪ್ರಘಾಸ ಪರ್ವವನ್ನೂ, ಕಾರ್ತಿಕ ಅಥವಾ ಮಾರ್ಗಶೀರ್ಷಪೂರ್ಣಿಮೆಗೆ ಸಾಕಮೇಧ ಪರ್ವವನ್ನೂ, ನಂತರದ ಫಾಲ್ಗುಣ ಅಥವಾ ಚೈತ್ರ ಪೂರ್ಣಿಮೆಗೆ ಶುನಾಸೀರೀಯಪರ್ವವನ್ನೂ ಅನುಷ್ಠಿಸುವುದು ವಿಧಿ. ಪ್ರತಿವರ್ಷವೂ ಹೀಗೆಯೇ ಅನುಷ್ಠಿಸುತ್ತಾ ಬಂದರೆ ಅದೇ ಯಾವಜ್ಜೀವಾನುಷ್ಠಾನವೆನಿಸುತ್ತದೆ. ಯಾವುದಾದರೂ ಒಂದು ವರ್ಷ ಮಾತ್ರ ಅನುಷ್ಠಿಸಿದರೆ ಅದು ಸಕೃದನುಷ್ಠಾನ ವೆನಿಸುತ್ತದೆ. ಹನ್ನೆರಡು ದಿನಗಳಲ್ಲಿ ನಾಲ್ಕು ಪರ್ವಗಳ ಅನುಷ್ಠಾನವನ್ನೂ, ಐದು ದಿನಗಳಲ್ಲಿ ನಾಲ್ಕು ಪರ್ವಗಳ ಅನುಷ್ಠಾನವನ್ನೂ ಮಾಡಿದರೆ ಅವು ಕ್ರಮವಾಗಿ ದ್ವಾದಶಾಹಾನುಷ್ಠಾನ ಮತ್ತು ಯಥಾಪ್ರಯೋಗಾನುಷ್ಠಾನ ವೆನಿಸಿಕೊಳ್ಳುತ್ತವೆ. ಈ ಎರಡೂ ರೀತಿಯ ಅನುಷ್ಠಾನವನ್ನು ಪುಣ್ಯನಕ್ಷತ್ರ ದಲ್ಲಿಯೂ, ಶುಕ್ಲಪಕ್ಷದಲ್ಲಿಯೂ, ಉತ್ತರಾಯಣದಲ್ಲಿಯೂ ಆರಂಭಿಸ ಬೇಕು. ಹೀಗೆ ನಾಲ್ಕು ಪರ್ವಗಳ ಮೂಲಕವಾಗಿ ಅನುಷ್ಠಿಸುವ ಕರ್ಮ ಸಮೂಹವೇ ಒಂದು ಚಾತುರ್ಮಾಸ್ಯಯಾಗವೆನ್ನಿಸಿಕೊಳ್ಳುತ್ತದೆ.

ನಾಲ್ಕು ತಿಂಗಳಿಗೊಮ್ಮೆ ಅನುಷ್ಠಿಸುವ ಇಷ್ಟಿಯಾದುದರಿಂದ ಚಾತುರ್ಮಾಸ್ಯೇಷ್ಟಿ ಎಂಬುದು ಅನ್ವರ್ಥನಾಮವು ಹೌದಾದರೂ ಉಳಿದ ಪ್ರಕಾರವೂ ಶಾಸ್ತ್ರಸಮ್ಮತವಾಗಿಯೇ ಇದೆ.

ಚಾತುರ್ಮಾಸ್ಯೇಷ್ಟಿಯನ್ನು ಆರಂಭಿಸುವ ಮೊದಲು ಅನ್ವಾರಂಭಣೀಯೇಷ್ಟಿಯನ್ನು ಅನುಷ್ಠಿಸಬೇಕು. ಈ ಇಷ್ಟಿಯ ಎಲ್ಲ ಪ್ರಯೋಗಕ್ರಮವೂ ಪೂರ್ಣಮಾಸೇಷ್ಟಿಯಂತೆ (ಪ್ರಕೃತಿಯಂತೆ). ಈ ಇಷ್ಟಿಯಲ್ಲಿ ವೈಶ್ವಾನರದೇವತೆಗೆ ದ್ವಾದಶಕಪಾಲ ಪುರೋಡಾಶ ಹವಿಸ್ಸು. ಪರ್ಜನ್ಯದೇವತೆಗೆ ಚರು, ಹವಿಸ್ಸು ಇವುಗಳನ್ನು ಅರ್ಪಿಸಬೇಕು.

## ವೈಶ್ವದೇವಪರ್ವ

ಹಿಂದಿನ ದಿನದ ಅನ್ವಾರಂಭಣೀಯೇಷ್ಟಿಯ ನಂತರ ಚಾತು ರ್ಮಾಸ್ಯೇಷ್ಟಿಯ ಪ್ರಾರಂಭ. ಚಾತುರ್ಮಾಸ್ಯೇಷ್ಟಿಗೆ ಐವರು ಋತ್ವಿಜರು.



**ತಸ್ಮಾಚ್ಚಾತುರ್ಮಾಸ್ಯಾನಾಂ ಯಜ್ಞಕ್ರತೋಃ । ಪಂಚರ್ತ್ವಿಜಃ ।**

— ತೈತ್ತಿರೀಯ ಬ್ರಾಹ್ಮಣ.

ಅಧ್ವರ್ಯು, ಹೋತಾ, ಬ್ರಹ್ಮಾ, ಆಗ್ನೀಧ್ರ ಮತ್ತು ಪ್ರತಿಪ್ರಸ್ಥಾತಾ ಇವರೇ ಆ ಋತ್ವಿಜರು. ವೈಶ್ವದೇವಪರ್ವದಲ್ಲಿ ದೇವತೆಗಳು ಎಂಟು. ೧. ಅಗ್ನಿ, ೨. ಸೋಮ, ೩. ಸವಿತಾ, ೪. ಸರಸ್ವತೀ, ೫. ಪೂಷಾ, ೬. ಮರುತ್ತುಗಳು, ೭. ವಿಶ್ವೇದೇವರು ಮತ್ತು ೮. ದ್ಯಾವಾಪೃಥಿವೀ. ಈ ಎಂಟು ದೇವತೆಗಳಲ್ಲಿ ಅಗ್ನಿ, ಸೋಮ, ಸವಿತಾ, ಸರಸ್ವತೀ ಮತ್ತು ಪೂಷಾ ಈ ಐದು ದೇವತೆಗಳಿಗೆ ಪ್ರತಿಯೊಂದು ಪರ್ವದಲ್ಲಿಯೂ ಹವಿಸ್ಸಿನ ಅರ್ಪಣೆಯು ಇದೆ. ಆದುದರಿಂದ ಈ ಐದು ದೇವತೆಗಳನ್ನು ಸಂಚರದೇವತೆಗಳೆನ್ನುತ್ತಾರೆ. ಉಳಿದ ಮೂರು ದೇವತೆಗಳು ಈ ಪರ್ವಕ್ಕೆ ಮಾತ್ರ ಇರುತ್ತಾರೆ. ವೈಶ್ವದೇವಪರ್ವದ ದೇವತೆಗಳು ಮತ್ತು ಹವಿಸ್ಸುಗಳು ಈ ರೀತಿಯಾಗಿ ಇರುತ್ತವೆ.

| ದೇವತೆ | ಹವಿಸ್ಸು |
|---|---|
| ೧. ಅಗ್ನಿ | ಅಷ್ಟಾಕಪಾಲಪುರೋಡಾಶ |
| ೨. ಸೋಮ | ಚರು |
| ೩. ಸವಿತಾ | ದ್ವಾದಶಕಪಾಲಪುರೋಡಾಶ |
| ೪. ಸರಸ್ವತೀ | ಚರು |
| ೫. ಪೂಷಾ | ಚರು |
| ೬. ಮರುತ್ತುಗಳು | ಸಪ್ತಕಪಾಲಪುರೋಡಾಶ |
| ೭. ವಿಶ್ವೇದೇವರು | ಆಮಿಕ್ಷಾ |
| ೮. ದ್ಯಾವಾಪೃಥಿವೀ | ಏಕಕಪಾಲಪುರೋಡಾಶ |

ಬಿಸಿಯಾದ ಹಾಲಿಗೆ ಮೊಸರನ್ನು ಹಾಕಿದಾಗ ಉಂಟಾಗುವ ಹವಿಸ್ಸಿಗೆ **ಆಮಿಕ್ಷಾ** ಎಂದು ಹೆಸರು (ಹಾಲು ಒಡಕು). ಮೇಲ್ಭಾಗದ ನೀರಿನಂತಹ ಅಂಶಕ್ಕೆ **ವಾಜಿನ** ಎಂದು ಹೆಸರು.

**ಆಮಿಕ್ಷಾ ಸಾ ಶೃತೋಷ್ಣೇ ಯಾ ಕ್ಷೀರೇ ಸ್ಯಾದ್ದಧಿಯೋಗತಃ ।**

— ಅಮರಕೋಶ, ಬ್ರಹ್ಮವರ್ಗ



ಚಾತುರ್ಮಾಸ್ಯದ ಎಲ್ಲ ನಾಲ್ಕು ಪರ್ವಗಳಲ್ಲಿಯೂ ಒಂಬತ್ತು ಪ್ರಯಾಜಗಳು, ಒಂಬತ್ತು ಅನೂಯಾಜಗಳು, ಹದಿನೇಳು ಸಾಮಿಧೇನಿಗಳು ಇರುತ್ತವೆ. ಅಂತೆಯೇ ಈ ಪರ್ವದಲ್ಲಿಯೂ ಹೀಗೆಯೇ ಇರುತ್ತವೆ.

## ವರುಣಪ್ರಘಾಸಪರ್ವ

ಈ ಪರ್ವದಲ್ಲಿ ಸಂಚರದೇವತೆಗಳೊಡನೆ ನಾಲ್ಕು ದೇವತೆಗಳಿರುತ್ತಾರೆ. ಅವರಿಗೆ ಅರ್ಪಿಸುವ ಹವಿಸ್ಸು ಹೀಗಿರುತ್ತದೆ;

ಸಂಚರದೇವತೆಗಳಿಗೆ ಹಿಂದಿನ ಪರ್ವದಂತೆಯೇ.

| **ದೇವತೆ** | **ಹವಿಸ್ಸು** |
|---|---|
| ೧. ಇಂದ್ರಾಗ್ನಿ | ಏಕಾದಶಕಪಾಲಪುರೋಡಾಶ |
| ೨. ಮರುತ್ತುಗಳು | ಆಮಿಕ್ಷಾ |
| ೩. ವರುಣ | ಆಮಿಕ್ಷಾ |
| ೪. ಕಃ (ಪ್ರಜಾಪತಿ) | ಏಕಕಪಾಲಪುರೋಡಾಶ |

ವರುಣಪ್ರಘಾಸಪರ್ವವನ್ನು ಅನುಷ್ಠಿಸುವಾಗ ಎರಡು ವೇದಿಗಳಿರುತ್ತವೆ. ಅವುಗಳಿಗೆ ಉತ್ತರವೇದಿ, ದಕ್ಷಿಣವೇದಿ ಎಂದು ಹೆಸರು. ಉತ್ತರವೇದಿಯಲ್ಲಿ ಅಧ್ವರ್ಯುವೂ ದಕ್ಷಿಣವೇದಿಯಲ್ಲಿ ಪ್ರತಿಪ್ರಸ್ಥಾತನೂ ಇದ್ದು, ಪ್ರತಿಪ್ರಸ್ಥಾತನು ಅಧ್ವರ್ಯುವು ಮಾಡುವ ಕಾರ್ಯವನ್ನೇ ಮಾಡುತ್ತಾನೆ. ಉತ್ತರವೇದಿಯಲ್ಲಿ ಮರುತ್ ದೇವತೆಯನ್ನು ಬಿಟ್ಟು ಉಳಿದ ದೇವತೆಗಳಿಗೆ ಪ್ರಧಾನಯಾಗ. ದಕ್ಷಿಣವೇದಿಯಲ್ಲಿ ಕೇವಲ ಮರುತ್ ದೇವತೆಗೆ ಯಾಗ. ಈ ಪರ್ವದ ಕೊನೆಯಲ್ಲಿ ಅವಭೃಥೇಷ್ಟಿಯು ಇರುತ್ತದೆ. ಈ ಇಷ್ಟಿಯಲ್ಲಿ ನೀರಿನಲ್ಲಿಯೇ ಯಾಗವು ನಡೆಯುತ್ತದೆ. ಈ ಇಷ್ಟಿಯಲ್ಲಿ ನಾಲ್ಕು ಪ್ರಯಾಜಗಳು ಎರಡು ಅನೂಯಾಜಗಳು ಇರುತ್ತವೆ.

## ಸಾಕಮೇಧಪರ್ವ

ಈ ಪರ್ವವನ್ನು ಎರಡು ದಿನಗಳವರೆಗೆ ಅನುಷ್ಠಿಸುತ್ತಾರೆ. ಮೊದಲನೆಯ ದಿನ ಸೂರ್ಯೋದಯದ ಸಮಯದಲ್ಲಿ ಅಗ್ನಿಃ (ಅನೀಕವಾನ್) ದೇವತೆಗೆ ಅಷ್ಟಾಕಪಾಲಪುರೋಡಾಶದಿಂದ ಯಾಗವನ್ನು ಮಾಡುತ್ತಾರೆ. ಮಧ್ಯಾಹ್ನ ಮರುತ್ (ಸಾಂತಪನ) ದೇವತೆಗಳಿಗೆ



ಚರುವಿನಿಂದ ಇಷ್ಟಿ. ಸಾಯಂಕಾಲದಲ್ಲಿ ಮರುತ್ (ಗೃಹಮೇಧಿನಃ) ದೇವತೆಗಳಿಗೆ ಚರುವಿನಿಂದ ಇಷ್ಟಿ. ಈ ಚರುವಿನ ಶೇಷದಿಂದ ಮರುದಿನ ಉಷಃ ಕಾಲದಲ್ಲಿ ಇಂದ್ರದೇವತೆಗೆ ಪೂರ್ಣಾದರ್ವಿಹೋಮ. ಸೂರ್ಯೋದಯಕ್ಕೆ ಮರುತ್ (ಕ್ರೀಡಿನಃ) ದೇವತೆಗಳಿಗೆ ಸಪ್ತಕಪಾಲಪುರೋಡಾಶದಿಂದ ಯಾಗ. ಆಮೇಲೆ ಪರ್ವದ ಮಹಾಹವಿಸ್ಸಿನಿಂದ ಪರ್ವದ ದೇವತೆಗಳಿಗೆ ಯಾಗ. ದೇವತೆಗಳು ಮತ್ತು ಹವಿಸ್ಸು ಹೀಗಿರುತ್ತದೆ.

| **ದೇವತೆ** | **ಹವಿಸ್ಸು** |
|---|---|
| ಇಂದ್ರಾಗ್ನೀ | ಏಕಾದಶಕಪಾಲಪುರೋಡಾಶ |
| ಇಂದ್ರ | ಚರು |
| ವಿಶ್ವಕರ್ಮಾ | ಏಕಕಪಾಲಪುರೋಡಾಶ |

ಐದು ಸಂಚರದೇವತೆಗಳಿಗೆ ಹಿಂದಿನ ಪರ್ವದಂತೆಯೇ ಹವಿಸ್ಸು.

ಈ ದೇವತೆಗಳಿಗೆ ಯಾಗವು ನಡೆದ ನಂತರ ವೇದಿಯ ದಕ್ಷಿಣಕ್ಕಿರುವ ಪೈತೃಕವೇದಿಯಲ್ಲಿ ಮಹಾಪಿತೃಯಜ್ಞ. ಈ ಮಹಾಪಿತೃಯಜ್ಞದಲ್ಲಿ ದೇವತೆಗಳು ಮತ್ತು ಹವಿಸ್ಸುಗಳು ಈ ರೀತಿಯಾಗಿ ಇರುತ್ತವೆ.

| **ದೇವತೆ** | **ಹವಿಸ್ಸು** |
|---|---|
| ಸೋಮಃ (ಪಿತೃಮಾನ್) | ಷಟ್ಕಪಾಲಪುರೋಡಾಶ |
| ಪಿತರಃ (ಬರ್ಹಿಷದಃ) | ಧಾನಾಃ |
| ಪಿತರಃ (ಅಗ್ನಿಷ್ವಾತ್ತಾಃ) | ಮಂಥಃ |

ಕರುವನ್ನು ಕಳೆದುಕೊಂಡ ತಾಯಿಹಸುವಿನ ಬಳಿ ಬೇರೆ ಕರುವನ್ನು ಬಿಟ್ಟು ಹಾಲನ್ನು ಕರೆದು ಆ ಹಾಲಿನಲ್ಲಿ ಯವಪಿಷ್ಟ (ಹುರಿದ ಜವೆಗೋಧಿಯ ಹಿಟ್ಟು) ವನ್ನು ಹಾಕಿ ಇಕ್ಷುಖಂಡ (ಕಬ್ಬಿನ ತುಂಡು)ದಿಂದ ಮಥಿಸಿದಾಗ ಉಂಟಾಗುವ ಹವಿಸ್ಸೇ ಮಂಥ.

ಮೇಲಿನ ಹವಿಸ್ಸುಗಳಿಂದ ಮಾಡುವ ಪ್ರಧಾನಯಾಗದ ನಂತರ ಹವಿಸ್ಸಿನ ಶೇಷದಿಂದ ಯಜಮಾನನ ಪಿತೃ, ಪಿತಾಮಹ, ಪ್ರಪಿತಾಮಹರಿಗೆ ಪಿಂಡಪ್ರದಾನ. ಈ ಮಹಾಪಿತೃಯಜ್ಞದಲ್ಲಿ ನಾಲ್ಕು ಪ್ರಯಾಜಗಳು ಮತ್ತು ಎರಡು ಅನೂಯಾಜಗಳು. ನಂತರ ಚತುಷ್ಪಥ (ನಾಲ್ಕುದಾರಿಗಳು ಸೇರುವ ಜಾಗ) ದಲ್ಲಿ ತ್ರ್ಯಂಬಕ ಪುರೋಡಾಶಯಾಗವನ್ನು ಮಾಡಬೇಕು. ಈ ತ್ರ್ಯಂಬಕ ಪುರೋಡಾಶಯಾಗಕ್ಕಾಗಿ ಪ್ರತಿಪ್ರಸ್ಥಾತನು ಯಾಗಕ್ಕೆ ಮೊದಲೇ



ಯಜಮಾನನ ಮನೆಯ ಜನರ ಸಂಖ್ಯೆ ಎಷ್ಟೋ ಅದಕ್ಕಿಂತಲೂ ಒಂದು ಹೆಚ್ಚಾಗುವಂತೆ ಪುರೋಡಾಶವನ್ನು ಮಾಡಿಟ್ಟಿರುತ್ತಾನೆ. ಈ ತ್ರ್ಯಂಬಕ ಯಾಗದ ನಂತರ ಆದಿತ್ಯೇಷ್ಟಿಯು ನಡೆಯುವುದು. ಈ ಇಷ್ಟಿಗೆ ಅದಿತಿಯು ಪ್ರಧಾನ ದೇವತೆ. ಚರು ಹವಿಸ್ಸಾಗಿರುವುದು.

ಶುನಾಸೀರೀಯಪರ್ವ

ಈ ಪರ್ವದಲ್ಲಿ ಪ್ರತಿ ಪರ್ವದಂತೆಯೇ ಐದು ಸಂಚರದೇವತೆಗಳಿರುತ್ತಾರೆ. ಇದಲ್ಲದೆ ಪ್ರಧಾನದೇವತೆಗಳು ಮತ್ತು ಹವಿಸ್ಸು ಹೀಗೆ ಇರುತ್ತವೆ.

| **ದೇವತೆ** | **ಹವಿಸ್ಸು** |
|---|---|
| ೧. ಇಂದ್ರಾಗ್ನೀ | ದ್ವಾದಶಕಪಾಲಪುರೋಡಾಶ |
| ೨. ವಿಶ್ವೇ ದೇವಾಃ | ಚರು |
| ೩. ಇಂದ್ರಃ(ಶುನಾಸೀರ) | ದ್ವಾದಶಕಪಾಲಪುರೋಡಾಶ |
| ೪. ವಾಯುಃ | ಪಯಃ(ಹಾಲು) |
| ೫.ಸೂರ್ಯಃ | ಏಕಕಪಾಲಪುರೋಡಾಶ |

ಚಾತುರ್ಮಾಸ್ಯೇಷ್ಟಿಯಲ್ಲಿ ಹವಿಸ್ಸುಗಳನ್ನು ಆಸಾದನೆ ಮಾಡಿದ ನಂತರ ಪ್ರತಿಪರ್ವದಲ್ಲಿಯೂ ಅಗ್ನಿಯ ಮಂಥನವಿದೆ. ಈ ರೀತಿ ಮಥಿಸಲ್ಪಟ್ಟ ಅಗ್ನಿಯನ್ನು ಆಹವನೀಯದಲ್ಲಿ ಸಂಯೋಜಿಸುತ್ತಾರೆ.

ಈ ರೀತಿ ಚಾತುರ್ಮಾಸ್ಯೇಷ್ಟಿಯು ಅನೇಕ ಕಲಾಪಗಳಿಂದಲೂ ಪರ್ವಗಳಿಂದಲೂ ಕೂಡಿದ ಕರ್ಮಸಮುದಾಯವೆನಿಸಿದೆ. ಐಷ್ಟಿಕವಾದ ಯಾಗಗಳಲ್ಲಿ ಚಾತುರ್ಮಾಸ್ಯೇಷ್ಟಿಯು ಒಂದು ವಿಶಿಷ್ಟವಾದ ಇಷ್ಟಿಯೆನಿಸಿದೆ.



## ಪಾಶುಕ

### ನಿರೂಢಪಶುಬಂಧಯಾಗ

ಅನೇಕ ಬಗೆಯ ಐಷ್ಟಿಕಯಾಗಗಳನ್ನು ಅನುಷ್ಠಿಸುವಂತೆಯೇ ಯಾಜ್ಞಿಕರು ಪಾಶುಕ ಯಾಗಗಳನ್ನೂ ಸಹ ಅನುಷ್ಠಿಸುತ್ತಾರೆ. ಪಾಶುಕಯಾಗಗಳಲ್ಲಿ ಪಶುವೂ ಸಹ ಯಜ್ಞಕ್ಕೆ ಪ್ರಧಾನ ಹವಿಸ್ಸು. **ಮಾ ಹಿಂಸ್ಯಾತ್ ಸರ್ವಾ ಭೂತಾನಿ** ಎನ್ನುವ ನಮ್ಮ ಪರಂಪರೆಯಲ್ಲಿ ಪಶುಬಂಧದಂತಹ ಯಾಗಗಳನ್ನು ಅನುಷ್ಠಿಸಬೇಕೆಂಬ ಉಪದೇಶದ ರಹಸ್ಯವನ್ನರಿಯುವುದು ಅವಶ್ಯಕ. ಈ ವಿಚಾರಗಳನ್ನು ಅನುಬಂಧ-೧ ರಲ್ಲಿ ತಿಳಿಸಲಾಗಿದೆ.

ಐಷ್ಟಿಕಯಾಗಗಳಿಗೆ ದರ್ಶ-ಪೂರ್ಣಮಾಸಗಳು ಹೇಗೆ ಪ್ರಕೃತಿಯೋ ಹಾಗೆ ಎಲ್ಲ ನೈಮಿತ್ತಿಕ ಮತ್ತು ಕಾಮ್ಯಪಶುಬಂಧಗಳಿಗೆ ಐಂದ್ರಾಗ್ನ ಪಶುಬಂಧಯಾಗವು ಪ್ರಕೃತಿಯಾಗಿದೆ. ಇದನ್ನು **ನಿರೂಢಪಶುಬಂಧ** ವೆಂದೂ ಕರೆಯುತ್ತಾರೆ.

ಈ ಪಶುಬಂಧಯಾಗವನ್ನು ಎರಡು ದಿನಗಳ ಕಾಲ ಅನುಷ್ಠಿಸಬೇಕಾಗುತ್ತದೆ. ಈ ಯಾಗಕ್ಕೆ ಚಾತುರ್ಮಾಸ್ಯೇಷ್ಟಿಯ ಐವರು ಋತ್ವಿಜರೊಡನೆ ಮೈತ್ರಾವರುಣನೂ ಇರುತ್ತಾನೆ. ಹೀಗೆ ಪಶುಬಂಧಯಾಗಕ್ಕೆ ಆರು ಋತ್ವಿಜರು.

**ತಸ್ಮಾತ್ಪಶುಬಂಧಸ್ಯ ಯಜ್ಞಕ್ರತೋಃ । ಷಡೃತ್ವಿಜಃ ।**

— ತೈತ್ತಿರೀಯ ಬ್ರಾಹ್ಮಣ.

ಎಂಬ ಶ್ರುತಿವಚನವೇ ಇದಕ್ಕೆ ಆಧಾರ.

ನಿರೂಢ ಪಶುಬಂಧಕ್ಕೆ ಇಂದ್ರಾಗ್ನಿಯು ಪ್ರಧಾನದೇವತೆ. ವಪಾ, ಪುರೋಡಾಶ, ಅಂಗಗಳು, ಆಜ್ಯ ಮತ್ತು ಪೃಷದಾಜ್ಯಗಳು ಹವಿಸ್ಸು.

ಪೃಷದಾಜ್ಯವೆಂದರೆ ಮೊಸರು ಮತ್ತು ತುಪ್ಪವನ್ನು ಬೆರೆಸಿದಾಗಿನ ದ್ರವ್ಯ.



**ಪೃಷದಾಜ್ಯಂ ಸದಧ್ಯಾಜ್ಯೇ. . . . .**

ಅಮರಕೋಶ, ಬ್ರಹ್ಮವರ್ಗ.

ಈ ಯಾಗದಲ್ಲಿ ಸಾಮಿಧೇನಿಗಳು ಪದಿನೇಳು. ಪನ್ನೊಂದು ಪ್ರಯಾಜಗಳು, ಹನ್ನೊಂದು ಅನೂಯಾಜಗಳು, ಪನ್ನೊಂದು ಉಪಯಾಜಗಳು. ಚಾತು ರ್ಮಾಸ್ಯೇಷ್ಟಿಯಲ್ಲಿರುವಂತೆಯೇ ಈ ಪಶುಬಂಧದಲ್ಲಿಯೂ ಅಗ್ನಿಮಂಥನ ವಿದೆ. ಈ ಯಾಗದಲ್ಲಿ ಆಜ್ಯಭಾಗವನ್ನು ಮಾಡಬಹುದು ಅಥವಾ ಬಿಡಬಹುದು. ಪತ್ನೀಸಂಯಾಜವಿದೆ. ಈ ಪಶುಬಂಧವು ನಿತ್ಯಕರ್ಮಗಳಲ್ಲಿ ಸೇರಿದೆ. ಸಪ್ತ ಹವಿಃಸಂಸ್ಥೆಯಲ್ಲಿ ಪಶುಬಂಧವೂ ಇದೆ. ಪಶುಬಂಧಯಾಗ ವನ್ನು ದಕ್ಷಿಣಾಯನ ಮತ್ತು ಉತ್ತರಾಯಣಗಳ ಆರಂಭದಲ್ಲಿ ವರ್ಷಕ್ಕೆ ಎರಡು ಬಾರಿ ಅನುಷ್ಠಿಸಬೇಕು. ಕೃಷ್ಣಯಜುರ್ವೇದದಲ್ಲಿ ಸುಮಾರು ೭೦ ಬಗೆಯ ನೈಮಿತ್ತಿಕ ಮತ್ತು ಕಾಮ್ಯಪಶುಬಂಧಗಳು ಉಪದೇಶಿಸಲ್ಪಟ್ಟಿವೆ. ದೀರ್ಘರೋಗನಿವೃತ್ತಿಕಾಮನು ಮಾಡಬೇಕಾದ ಆಗ್ನೇಯ, ಸೌಮ್ಯಪಶು ಬಂಧವು ಕಾಮ್ಯಪಶುಬಂಧ. ಅಶ್ವಿನಶಸ್ತ್ರವು ಸೂರ್ಯೋದಯದ ವೇಳೆಗೆ ಮುಗಿಯದಿದ್ದರೆ ಮಾಡುವ ಸೌರ್ಯ ಪಶುಬಂಧ ಮುಂತಾದವುಗಳು ನೈಮಿತ್ತಿಕ ಪಶುಬಂಧಗಳು. ಇವುಗಳನ್ನು ಮುಂದೆ ಸಂಗ್ರಹಿಸಿ ನೀಡಲಾಗುವುದು.

ನೈಮಿತ್ತಿಕ ಮತ್ತು ಕಾಮ್ಯಪಶುಬಂಧವಲ್ಲದೆ ಕೌಕಿಲೀಸೌತ್ರಾಮಣೀ ಮತ್ತು ಚರಕ ಸೌತ್ರಾಮಣೀಯಾಗಗಳೂ ಸಹ ನಿರೂಢಪಶುಬಂಧದ ವಿಕೃತಿ ಯಾಗಗಳೇ ಆಗಿವೆ.



# ಸೌಮಿಕ

## ಜ್ಯೋತಿಷ್ಟೋಮ-ಅಗ್ನಿಷ್ಟೋಮ

ಯಾಗಗಳಲ್ಲಿ ಮೂರನೆಯ ಬಗೆಯ ಯಾಗಗಳು ಸೌಮಿಕ ಯಾಗಗಳು. ಸೋಮಯಾಗಗಳು ಋಗ್ವೇದ, ಯಜುರ್ವೇದ ಮತ್ತು ಸಾಮ ವೇದಗಳಿಂದ ನಡೆಯುತ್ತವೆ. ಸೋಮಯಾಗಕ್ಕೆ ಯಜಮಾನ ಮತ್ತು ಹದಿನಾರು ಜನ ಋತ್ವಿಜರಿರುತ್ತಾರೆ. ಎಲ್ಲ ಬಗೆಯ ಸೋಮಯಾಗಗಳಿಗೆ ಪ್ರಕೃತಿಯಾದ ಸೋಮಯಾಗವೇ ಅಗ್ನಿಷ್ಟೋಮ. ಇದು ಏಕಾಹ. ಇಲ್ಲಿ ಅಹ ಎಂದರೆ ಹಗಲು ಎಂದರ್ಥವಲ್ಲ. ಸೋಮಯಾಗದಲ್ಲಿ ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನಗಳೆಂಬ ವಿಧಿಯಿದೆ. ಇವು ಪೂರ್ಣಗೊಳ್ಳುವ ಅವಧಿಗೆ **ಅಹ** ಎಂದು ಹೆಸರು.

ಈ ಏಕಾಹ ಅಗ್ನಿಷ್ಟೋಮವು ಎಲ್ಲ ಅಹೀನಯಾಗಗಳಿಗೆ ಪ್ರಕೃತಿ. ದ್ವಾದಶರಾತ್ರದವರೆಗಿನ ಸೋಮಯಾಗಗಳು ಅಹೀನಗಳೆನಿಸಿಕೊಳ್ಳುತ್ತವೆ. ದ್ವಾದಶರಾತ್ರಸೋಮಯಾಗವು ಅಹೀನವೂ ಹೌದು. ಸತ್ರವೂ ಹೌದು. ಮುಂದಿನ ಸತ್ರಯಾಗಗಳಿಗೆ ದ್ವಾದಶರಾತ್ರವು ಪ್ರಕೃತಿಯಾಗವಾಗುತ್ತದೆ. ಅಗ್ನಿಷ್ಟೋಮಯಾಗವನ್ನು ವಸಂತಋತುವಿನಲ್ಲಿ ಕೃತ್ತಿಕಾನಕ್ಷತ್ರದಿಂದ ವಿಶಾಖಾನಕ್ಷತ್ರದವರೆಗಿನ ದೇವನಕ್ಷತ್ರಗಳಲ್ಲಿ ಯಾವುದಾದರೊಂದು ದೇವನಕ್ಷತ್ರವಿರುವ ದಿನದಂದು ಅನುಷ್ಠಿಸಬಹುದು. ಅಥವಾ ಯಾವುದೇ ಪರ್ವದಿನಗಳಲ್ಲಿ ಅಥವಾ ನಂತರದ ಪ್ರತಿಪದೆಯಂದು ದೀಕ್ಷಾವಿಧಿಯಾಗಲೀ, ಸೋಮಯಾಗದಲ್ಲಿ ಪ್ರಧಾನವಾದ ಯಾಗವನ್ನು ಮಾಡುವ ದಿನವಾದ ಸುತ್ಯಾಹವಾಗಲೀ ಬರುವಂತೆ ಅನುಷ್ಠಿಸಬಹುದು. ಅಗ್ನಿಷ್ಟೋಮ ಸೋಮ ಯಾಗವು ಸಪ್ತ ಸೋಮಸಂಸ್ಥೆಗಳಲ್ಲಿ ಸೇರಿರುವುದರಿಂದ ಅದು ನಿತ್ಯಕರ್ಮ ವೆನ್ನಿಸಿಕೊಂಡಿದೆ.

## ಅಗ್ನಿಷ್ಟೋಮದ ಕಲಾಪಗಳು: ಋತ್ವಿಜರ ಆಹ್ವಾನ

ಅಗ್ನಿಷ್ಟೋಮವನ್ನು ಅನುಷ್ಠಿಸುವ ಯಜಮಾನನು ಸಂಕಲ್ಪವನ್ನು ಮಾಡಿದ ನಂತರ ಸೋಮಪ್ರವಾಕನು ಋತ್ವಿಜರನ್ನು ಯಜ್ಞಕ್ಕಾಗಿ ಆಹ್ವಾನಿಸಬೇಕು. ಸೋಮಯಾಗದಲ್ಲಿ ಯಜಮಾನನಿಂದ ನಿರ್ದೇಶಿಸಲ್ಪಟ್ಟ



ಬ್ರಹ್ಮಾ ಮುಂತಾದ ಋತ್ವಿಜರನ್ನು ಆಹ್ವಾನ ಮಾಡುವವನಿಗೆ **ಸೋಮಪ್ರವಾಕ** ಎಂದು ಹೆಸರು. ಯಜಮಾನನು ಆಗ

**ಸೋಮಂ ಮೇ ಬ್ರೂಹ್ಯೃತ್ವಿಗ್ಭ್ಯಃ ।**

ನಾನು ಅನುಷ್ಠಿಸುವ ಸೋಮಯಾಗದ ಬಗ್ಗೆ ಋತ್ವಿಜರಿಗೆ ಹೇಳು ಎಂದು ಸೋಮಪ್ರವಾಕನಿಗೆ ಹೇಳುತ್ತಾನೆ. ಸೋಮಪ್ರವಾಕನು **ಕೇಭ್ಯಃ ?** ಎಂದು ಕೇಳುತ್ತಾನೆ. ಯಜಮಾನನು ಋತ್ವಿಜರ ಹೆಸರನ್ನು ಹೇಳಿ ಅವರನ್ನು ಆಹ್ವಾನಿಸಲು ಹೇಳುತ್ತಾನೆ. ನಂತರ ಸೋಮಪ್ರವಾಕನು ಒಬ್ಬೊಬ್ಬ ಋತ್ವಿಜನನ್ನು ಸಮೀಪಿಸಿ ಆಹ್ವಾನಿಸುತ್ತಾನೆ. ಆಗ ಋತ್ವಿಜರು

**ಕೋ ಯಜ್ಞಃ ? ಕ ಋತ್ವಿಜಃ ? ಕಾ ದಕ್ಷಿಣಾ ? ಕಚ್ಚಿನ್ನಾಹೀನಃ ? ಕಚ್ಚಿನ್ನ ನ್ಯಸ್ತಮಾರ್ತ್ವಿಜ್ಯಮ್?**

ಯಾವ ಯಜ್ಞ? ಋತ್ವಿಜರು ಯಾರು? ದಕ್ಷಿಣೆಯು ಏನು? ಅಹೀನ ಯಾಗವಲ್ಲವಷ್ಟೆ? ಯಾರೂ ಆರ್ತ್ವಿಜ್ಯವನ್ನು ಮಾಡಿ ಬಿಟ್ಟಿಲ್ಲವಷ್ಟೆ? ಎಂದು ಕೇಳುತ್ತಾರೆ.

**ನ ನ್ಯಸ್ತಮಾರ್ತ್ವಿಜ್ಯಂ ಯಜಮಾನದೋಷೇಣ ।**

ಯಜಮಾನನ ತಪ್ಪಿನಿಂದ ಯಾರೂ ಆರ್ತ್ವಿಜ್ಯವನ್ನು ಬಿಟ್ಟಿಲ್ಲ ಎಂದು ಸೋಮ ಪ್ರವಾಕನು ಉಳಿದ ಉತ್ತರಗಳೊಂದಿಗೆ ಹೇಳುತ್ತಾನೆ. ಈ ಪ್ರಶ್ನೆಗಳನ್ನು ಕೇಳುವಾಗ ಪ್ರತಿಯೊಂದು ವಾಕ್ಯದ ಹಿಂದೆಯೂ ಕಲ್ಯಾಣ ಎಂಬ ಪದವನ್ನು ಸೇರಿಸಬೇಕೆಂಬ ವಿಧಿಯಿದೆ. ಹೀಗೆ ಋತ್ವಿಜರನ್ನು ಆಹ್ವಾನ ಮಾಡಿದ ನಂತರ ಅವರು ಸೋಮಯಾಗವನ್ನು ನಿರ್ವಹಿಸುವುದಕ್ಕಾಗಿ ಯಜ್ಞಶಾಲೆಗೆ ಬರು ತ್ತಾರೆ. ಅಲ್ಲಿ ಆಗ ಯಜಮಾನನು ಎಲ್ಲರನ್ನೂ ಕ್ರಮವಾಗಿ ಋತ್ವಿಜ ರನ್ನಾಗಿರಲು ಪ್ರಾರ್ಥಿಸುತ್ತಾನೆ. ಅಗ್ನಿಯನ್ನು ಆಧಾನ ಮಾಡುವಾಗ ಋತ್ವಿಜ ರನ್ನು ಪ್ರಾರ್ಥಿಸಿದಂತೆಯೇ ಇಲ್ಲಿಯೂ ಅನುಷ್ಠಿಸುತ್ತಾನೆ. ಇದನ್ನು **ಋತ್ವಿಗ್ವರಣ** ಎನ್ನುತ್ತಾರೆ.



## ಸೋಮಯಾಗದ ದೀಕ್ಷಾಗ್ರಹಣ

ಅಗ್ನಿಷ್ಟೋಮವನ್ನು ಅನುಷ್ಠಿಸುವ ಯಜಮಾನನಿಗೆ ಪ್ರಥಮ ದಿನದಂದು ದೀಕ್ಷಾಗ್ರಹಣದ ಅಂಗವಾಗಿ ವಪನ, ಅಪ್ಸು ದೀಕ್ಷಾ (ಸ್ನಾನ), ಕ್ಷೌಮವಸ್ತ್ರಧಾರಣ, ಅಭ್ಯಂಜನ ಮತ್ತು ಅಂಜನ-ಪವನಗಳಿರುತ್ತವೆ. ನಂತರ ಯಾಗಶಾಲಾಪ್ರವೇಶ. ಅಲ್ಲಿ ದೀಕ್ಷಣೀಯೇಷ್ಟಿಯನ್ನು ಪತ್ನೀಸಂಯಾಜಾಂತ ಮಾತ್ರ ಅನುಷ್ಠಿಸಬೇಕು. ದೀಕ್ಷಣೀಯೇಷ್ಟಿಗೆ ಅಗ್ನಾವಿಷ್ಣು ದೇವತೆ. ಏಕಾದಶಕಪಾಲ ಪುರೋಡಾಶ. ದೀಕ್ಷಾಗ್ರಹಣವನ್ನು ಮಾಡಿದ ನಂತರ ಕನಿಷ್ಠ ಮೂರುದಿನ ಅಥವಾ ಕನಿಷ್ಠ ಒಂದುದಿನ ದೀಕ್ಷಾಬದ್ಧನಾಗಿರಬೇಕು. ದೀಕ್ಷೆಯ ನಂತರ ಏಕದೀಕ್ಷಾಪಕ್ಷದಲ್ಲಿ ಎರಡನೆಯ ದಿನದಂದು ಪ್ರಾಯಣೀ ಯೇಷ್ಟಿಯು ನಡೆಯುತ್ತದೆ. ಅನುಷ್ಠಾನವು ಹೆಚ್ಚಾಗಿ ಏಕದೀಕ್ಷಾಪಕ್ಷ ದಂತೆಯೇ ನಡೆಯುತ್ತದೆ. ಏಕದೀಕ್ಷಾಪಕ್ಷವು ವಾಜಸನೇಯ ಶಾಖೆಯಲ್ಲಿ ಉಕ್ತವಾಗಿದೆ. ಇಲ್ಲಿ ಹೇಳಿರುವ ಅಗ್ನಿಷ್ಟೋಮದ ವಿವರವು ಏಕದೀಕ್ಷಾ ಕ್ರಮದಂತೆ ಇದೆ.

ಸೋಮಯಾಗವನ್ನು ಅನುಷ್ಠಿಸುವ ಪ್ರಾರಂಭದಲ್ಲಿ ಮಾಡುವ ಇಷ್ಟಿಯು ಇದಾದುದರಿಂದ ಈ ಇಷ್ಟಿಗೆ ಪ್ರಾಯಣೀಯೇಷ್ಟಿ ಎನ್ನುತ್ತಾರೆ. ಪ್ರಾಯಣೀಯ ಎಂದರೆ ಪ್ರಾರಂಭ ಎಂದು ಅರ್ಥ. ಈ ಪ್ರಾಯಣೀಯೇಷ್ಟಿಗೆ ಪಥ್ಯಾ ಸ್ವಸ್ತಿಃ, ಅಗ್ನಿ, ಸೋಮ, ಸವಿತಾ ಮತ್ತು ಅದಿತಿ ಹೀಗೆ ಐದು ದೇವತೆ ಗಳು. ವ್ರೀಹಿಯ ಚರು ಮತ್ತು ಆಜ್ಯವು ಹವಿಸ್ಸು. ಈ ಪ್ರಾಯಣೀ ಯೇಷ್ಟಿಯನ್ನು ಶಂಯುವಾಕಾಂತ ಮಾತ್ರ ಅನುಷ್ಠಿಸಬೇಕು. ಈ ಇಷ್ಟಿಯನ್ನು ಅನುಷ್ಠಿಸಿದ ನಂತರ ಸೋಮಕ್ರಯ ಅಂದರೆ ಸೋಮಲತೆಯನ್ನು ಯಾಗಕ್ಕಾಗಿ ಕೊಂಡುಕೊಳ್ಳುವುದು. ನಂತರ ಸೋಮಲತೆಯನ್ನು ಯಾಗಶಾಲೆಗೆ ತರುತ್ತಾರೆ. ಬಳಿಕ ಆತಿಥ್ಯೇಷ್ಟಿಯನ್ನು ಅನುಷ್ಠಿಸಬೇಕು. ಸೋಮರಾಜನಿಗೆ ಇಷ್ಟಿಯ ಮೂಲಕ ಆತಿಥ್ಯವನ್ನು ಮಾಡಿದಂತಾಗುವುದರಿಂದ ಈ ಇಷ್ಟಿಯು ಆತಿಥ್ಯೇಷ್ಟಿಯೆನಿಸಿದೆ. ಈ ಇಷ್ಟಿಗೆ ವಿಷ್ಣುವು ದೇವತೆ. ನವಕಪಾಲಪುರೋಡಾಶ ಹವಿಸ್ಸು. ಈ ಆತಿಥ್ಯೇಷ್ಟಿಯನ್ನು ಇಡಾಭಕ್ಷಣಾಂತ ಮಾತ್ರ ಅನುಷ್ಠಿಸಬೇಕು. ಈ ಇಷ್ಟಿಯಲ್ಲಿ ಹವಿಸ್ಸನ್ನು ಆಸಾದನೆ ಮಾಡಿದ ನಂತರ ಅಗ್ನಿಯ ಮಂಥನ ಇದೆ. ಈ ದೀಕ್ಷಣೀಯ, ಪ್ರಾಯಣೀಯ ಮತ್ತು ಆತಿಥ್ಯೇಷ್ಟಿಗಳು ಪ್ರಕೃತಿ ಯಾದ ದರ್ಶ-ಪೂರ್ಣಮಾಸಗಳಂತೆಯೇ ಎಲ್ಲ ಕಲಾಪಗಳನ್ನು



ಒಳಗೊಂಡಿದ್ದರೂ ಸಹ ದೀಕ್ಷಣೀಯವು ಪತ್ನೀಸಂಯಾಜಾಂತ, ಪ್ರಾಯಣೀಯವು ಶಂಯುವಾಕಾಂತ ಮತ್ತು ಆತಿಥ್ಯೇಷ್ಟಿಯು ಇಡಾಭಕ್ಷಣಾಂತ ಅನುಷ್ಠಿಸಲ್ಪಡಬೇಕು. ಈ ಇಷ್ಟಿಗಳ ಅನುಷ್ಠಾನದ ಬಗ್ಗೆ ವೇದದಲ್ಲಿಯೇ ಆಖ್ಯಾನವಿದೆ.

**ದೇವಾಸುರಾಃ ಸಂಯತ್ತಾ ಆಸನ್ ।**

— ತೈ.ಬ್ರಾ. 1.5.9.

ದೇವತೆಗಳಿಗೂ ಅಸುರರಿಗೂ ಯುದ್ಧವು ಪ್ರಸಿದ್ಧವಷ್ಟೆ. ರಾಕ್ಷಸರು ಇಂದ್ರನನ್ನು ಸಂಹರಿಸಿಯಾರೆಂಬ ಭೀತಿಯಿಂದ ಪ್ರಜಾಪತಿ ಬ್ರಹ್ಮನು ಇಂದ್ರನನ್ನು ಅಡಗಿಸಿಟ್ಟನು. ಇಂದ್ರನನ್ನು ಪಡೆಯಲು ದೇವತೆಗಳು ಈ ಸೋಮಯಾಗವನ್ನು ಅನುಷ್ಠಿಸಿದಾಗ, ಪ್ರಾರಂಭದ ಈ ಮೂರು ಇಷ್ಟಿಗಳನ್ನು ಅನುಷ್ಠಿಸಿದರು. ಇಷ್ಟಿಗಳ ಮಧ್ಯದಲ್ಲೇ ರಾಕ್ಷಸರು ಬಂದುದರಿಂದ ಯಾವ ಯಾವ ಸಮಯದಲ್ಲಿ ರಾಕ್ಷಸರು ಬಂದರೋ ಅಲ್ಲಲ್ಲಿಯೇ ಆಯಾ ಇಷ್ಟಿ ಗಳನ್ನು ನಿಲ್ಲಿಸಿ ಬೇರೆಡೆಗೆ ಹೋದರು. ದೇವತೆಗಳು ಎಲ್ಲೆಲ್ಲಿ ಇಷ್ಟಿಗಳನ್ನು ನಿಲ್ಲಿಸಿದರೋ ಅಲ್ಲಿಯವರೆಗೆ ಮಾತ್ರ ಈ ಇಷ್ಟಿಗಳ ಅನುಷ್ಠಾನ.

ಸೋಮಯಾಗದಲ್ಲಿ ಆತಿಥ್ಯೇಷ್ಟಿಯ ನಂತರ ತಾನೂನಪ್ತ್ರವಿಧಿ. ಯಾಗವು ಮುಗಿಯುವವರೆಗೆ ಋತ್ವಿಜರು ಪರಸ್ಪರ ಮೈತ್ರಿಯಿಂದ ಇರುವ ಬಗ್ಗೆ ಋತ್ವಿಜರು ಕೈಗೊಳ್ಳುವ ಪ್ರತಿಜ್ಞಾವಿಧಿಯೇ ತಾನೂನಪ್ತ್ರ.

ಈ ವಿಧಿಗಳು ಮುಗಿದ ನಂತರ ಅದೇ ದಿನ ಪ್ರವರ್ಗ್ಯ ಮತ್ತು ಉಪಸದಿಷ್ಟಿಗಳನ್ನು ಅನುಷ್ಠಿಸಬೇಕು. ಪ್ರವರ್ಗ್ಯಕ್ಕೆ ಘರ್ಮ (ಇಂದ್ರ), ಉಪಸತ್ತಿಗೆ ಅಗ್ನಿ, ಸೋಮ ಮತ್ತು ವಿಷ್ಣು ಈ ದೇವತೆಗಳು. ಈ ಪ್ರವರ್ಗ್ಯೋ ಪಸತ್ತುಗಳನ್ನು ದಿನಕ್ಕೆರಡು ಬಾರಿಯಂತೆ ಅನುಷ್ಠಿಸ ಬೇಕಾಗುತ್ತದೆ. ಪೂರ್ವಾಹ್ನದಲ್ಲಿಯೂ, ಅಪರಾಹ್ನದಲ್ಲಿಯೂ ಇವುಗಳನ್ನು ಅನುಷ್ಠಿಸಬೇಕು. ಈ ರೀತಿ ಮೂರು ದಿನಗಳು, ಆರು ದಿನಗಳು ಅಥವಾ ಹನ್ನೆರಡು ದಿನಗಳವರೆಗೆ ಮಾಡುವ ಕ್ರಮವಿದೆ. ಈ ಪ್ರವರ್ಗ್ಯೋಪಸತ್ತುಗಳನ್ನು ಅನುಷ್ಠಿಸುವಾಗ ಮಧ್ಯಮ ಪ್ರವರ್ಗ್ಯೋಪಸತ್ತಿನಂದು (ಮೂರು ದಿನಗಳಾದರೆ ಎರಡನೆಯ ದಿನದಂದು, ಆರಾದರೆ ನಾಲ್ಕನೆಯ ದಿನದಂದು, ಹನ್ನೆರಡಾದರೆ ಎಂಟನೆಯ



ದಿನದಂದು) ಪೂರ್ವಾಹ್ಣದ ಪ್ರವರ್ಗ್ಯೋಪಸತ್ತನ್ನು ಮುಗಿಸಿದ ನಂತರ ಮಹಾ ವೇದಿವಾನವಿರುತ್ತದೆ. ಸೋಮಯಾಗವನ್ನು ಅನುಷ್ಠಿಸಲು ನಿರ್ಮಿಸುವ ವೇದಿಯೇ ಮಹಾವೇದಿ.

ಪ್ರವರ್ಗ್ಯೋಪಸತ್ತು ಮುಗಿಯುವ ದಿನದಂದು ಪೂರ್ವಾಹ್ಣದಲ್ಲಿಯೇ ಅಪರಾಹ್ಣದ ಪ್ರವರ್ಗ್ಯೋಪಸತ್ತುಗಳನ್ನೂ ಮುಗಿಸಬೇಕು. ಬಳಿಕ ಉತ್ತರ ವೇದಿಯಲ್ಲಿ ಪ್ರವರ್ಗ್ಯೋದ್ವಾಸನವನ್ನು ಮಾಡಬೇಕು. ನಂತರ ಅಗ್ನೀಷೋಮೀಯ ಯಾಗವನ್ನು ಮಾಡಬೇಕು. ಅಗ್ನೀಷೋಮೀಯಯಾಗ ವನ್ನು ಪತ್ನೀಸಂಯಾಜಾಂತ ಅನುಷ್ಠಿಸಬೇಕು. ಸೂರ್ಯಾಸ್ತಕ್ಕೆ ಮೊದಲು ವಪಾಯಾಗವನ್ನು ಮಾಡಿ ವಸತೀವರೀಗ್ರಹಣವನ್ನು ಎಂದರೆ **ವಸತೀವರೀ** ಎಂಬ ಹೆಸರಿನ ಜಲವನ್ನು ಪರಿಗ್ರಹಿಸಬೇಕು.

ಹೀಗೆ ಸೋಮಯಾಗದಲ್ಲಿ ದೀಕ್ಷಣೀಯೇಷ್ಟಿಯಿಂದ ಇಲ್ಲಿಯವರೆಗೆ ನಡೆಯುವ ವಿಧಿಗಳು ಪೂರ್ವಾಂಗವೆನಿಸಿಕೊಳ್ಳುತ್ತವೆ.

ಮರುದಿನವೇ ಪ್ರಧಾನವಾದ ಸೋಮಯಾಗ. ಸೋಮಯಾಗದ ದಿನವನ್ನು **ಸುತ್ಯಾಹ** ಎಂದು ಕರೆಯುತ್ತಾರೆ. ಸುತ್ಯಾ ಎಂದರೆ ಸೋಮಲತೆಯನ್ನು ಕುಟ್ಟಿ ಸೋಮರಸವನ್ನು ತೆಗೆಯುವಿಕೆ. ಸುತ್ಯಾಹದಂದು ಬೆಳಗಿನ ಜಾವ ಅಂದರೆ ಹಿಂದಿನ ರಾತ್ರಿಯ ನಾಲ್ಕನೆಯ ಯಾಮದಿಂದಲೇ ಸುತ್ಯಾಹವು ಆರಂಭಗೊಳ್ಳುವುದು. ಸೋಮಯಾಗದಲ್ಲಿ ಸುತ್ಯಾಹದಂದು ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನಗಳೆಂಬ ಮೂರು ಭಾಗಗಳಿರುತ್ತವೆ.

ಪ್ರಾತಃಸವನ

ಪ್ರಾತಃಸವನವು ಪ್ರಾತರನುವಾಕದಿಂದ ಪ್ರಾರಂಭಗೊಳ್ಳುವುದು. ಅಧ್ವರ್ಯುವಿನಿಂದ ಪ್ರೈಷವನ್ನು ಪಡೆದ ಹೋತೃವು ಹೇಳುವ ಮಂತ್ರಗಳೇ ಪ್ರಾತರನುವಾಕವೆನಿಸುತ್ತವೆ. ಬಳಿಕ ಅಧ್ವರ್ಯುವು ಮಂತ್ರಪುರಸ್ಸರವಾಗಿ ಸೋಮದ ಅಭಿಷವಕ್ಕೆ ಬೇಕಾಗುವ ಮೂರು ಜಲಕುಂಭಗಳನ್ನು ತರಬೇಕು. ಈ ಮೂರು ಜಲಕುಂಭಗಳಲ್ಲಿರುವ ನೀರಿನಲ್ಲಿ ಮೂರನೆಯ ಒಂದು ಭಾಗ ವನ್ನು (ಒಂದೊಂದರಲ್ಲಿಯೂ) ವಸತೀವರಿಯ ಮೂರನೆಯ ಒಂದು



ಅಂಶದಷ್ಟು ನೀರಿನೊಡನೆ ಬೆರೆಸಿ ಆ ನೀರಿನಿಂದ ಪ್ರಾತಃಸವನದಲ್ಲಿ ಮಾಡ ಬೇಕಾದ ಸೋಮಾಭಿಷವ (ಸೋಮಲತೆಯನ್ನು ಕುಟ್ಟಿ ರಸವನ್ನು ತೆಗೆಯುವುದು) ವನ್ನು ಸೋಮಾಭಿಷವದ ಸ್ಥಾನವಾದ ಉಪರವದಲ್ಲಿ ಮಾಡಬೇಕು. ಜಲಕುಂಭಗಳಲ್ಲಿ ಉಳಿದ ನೀರು ಉಳಿದೆರಡು ಸವನಗಳಲ್ಲಿ ಅಭಿಷವಕ್ಕೆ ವಿನಿಯೋಗವಾಗುತ್ತದೆ. ಸೋಮವನ್ನು ಕುಟ್ಟಿ ರಸವನ್ನು ತೆಗೆದ ನಂತರ ನಿರ್ದಿಷ್ಟವಾದ ಯಾಜ್ಞಿಕವೃಕ್ಷಗಳಿಂದ ನಿರ್ಮಿಸಿದ ಸೋಮರಸ ವನ್ನಿಡುವ ಒರಳಿನ ಆಕಾರದ ಮರದ ಪಾತ್ರೆಗಳಾದ ಗ್ರಹಗಳಲ್ಲಿ ಇಂದ್ರ ವಾಯೂ, ಮಿತ್ರಾವರುಣೌ, ಅಶ್ವಿನೀದೇವತೆಗಳು (ಇಬ್ಬರು) ಮೊದಲಾದ ದೇವತೆಗಳಿಗೆ ಸೋಮರಸವನ್ನು ತುಂಬಿಡಬೇಕು. ಸಾಮಾನ್ಯವಾಗಿ ಸೋಮ ಯಾಗದಲ್ಲಿ ಹದಿನೇಳು ಗ್ರಹಗಳು ಅವಶ್ಯ. ಈ ಗ್ರಹಗಳಲ್ಲದೆ ಪ್ರಣೀತಾ ಪ್ರಣಯನದಂತೆಯೇ ಆಕಾರವಿರುವ ಹನ್ನೆರಡು ಯಜ್ಞಪಾತ್ರೆಗಳು ಇರುತ್ತವೆ. ಇವುಗಳಿಗೆ ಚಮಸಗಳೆಂದು ಹೆಸರು. ಸೋಮಯಾಗದಲ್ಲಿ ಸ್ತೋತ್ರ ಮತ್ತು ಶಸ್ತ್ರಗಳೆಂಬ ವಿಶೇಷಸ್ತುತಿಗಳಿರುತ್ತವೆ. ಗಾನಪೂರ್ವಕವಾಗಿ ಉದ್ಗಾತಾ, ಪ್ರಸ್ತೋತಾ ಮತ್ತು ಪ್ರತಿಹರ್ತಾ-ಇವರು ಮಾಡುವ ಸ್ತುತಿಗೆ ಸ್ತೋತ್ರವೆಂದು ಹೆಸರು. ಸಾಮಗಾನವನ್ನು ಪ್ರಸ್ತೋತನು ಪ್ರಾರಂಭಿಸುತ್ತಾನೆ. ಇದನ್ನು ಪ್ರಸ್ತಾವವೆನ್ನುತ್ತಾರೆ. ಉದ್ಗಾತೃವು ಸಾಮಗಾನವನ್ನು ಮಾಡುತ್ತಾನೆ. ಇದನ್ನು ಉದ್ಗೀಥವೆನ್ನುತ್ತಾರೆ. ಪ್ರತಿಹರ್ತನೂ ಸಾಮವನ್ನು ಹೇಳುತ್ತಾನೆ. ಇದನ್ನು ಪ್ರತಿಹಾರವೆನ್ನುತ್ತಾರೆ. ನಂತರ ನಿಧನಭಾಗವನ್ನು ಎಲ್ಲರೂ ಸೇರಿ ಹೇಳುತ್ತಾರೆ. ಹೀಗೆ ಇವರ ಹೆಸರುಗಳು ಅನ್ವರ್ಥವಾಗಿವೆ.

ಹೀಗೆಯೇ ಹೋತಾ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ ಮತ್ತು ಅಚ್ಛಾವಾಕ ಇವರು ಋಙ್ಮಂತ್ರಗಳಿಂದ ಮಾಡುವ ಸ್ತುತಿಗೆ ಶಂಸನ ಅಥವಾ ಶಸ್ತ್ರವೆಂದೂ ಹೆಸರು. ಹೋತೃವೇ ಮೊದಲಾದವರು ಶಸ್ತ್ರವನ್ನು ಹೇಳುವ ಸಮಯದಲ್ಲಿ ಓಂಕಾರವನ್ನು ಹೇಳುತ್ತಾರೆ. ಈ ಪ್ರಣವೋಚ್ಚಾರಣೆಯ ಸಮಯದಲ್ಲಿ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತಾ ಇವರು

**ಓಂ ಶೋಂ, ಸಾವೋದ ಇವ, ಓಥಾವೋದ ಇವ**

ಎಂಬುದಾಗಿ ಮೆಚ್ಚುಗೆಯನ್ನು ಸೂಚಿಸುವ ಪದಗಳನ್ನು ಹೇಳುತ್ತಾರೆ. ಇದನ್ನು **ಪ್ರತಿಗರ** ಎನ್ನುತ್ತಾರೆ. ಪ್ರಾತಃಸವನದಲ್ಲಿ ಬಹಿಷ್ಪವಮಾನವೇ ಮೊದಲಾದ



ಐದು ಸ್ತೋತ್ರಗಳು. ಆಜ್ಯವೇ ಮೊದಲಾದ ಐದು ಶಸ್ತ್ರಗಳು. ಮಾಧ್ಯಂದಿನ ಸವನದಲ್ಲಿ ಮಾಧ್ಯಂದಿನಪವಮಾನವೇ ಮೊದಲಾದ ಐದು ಸ್ತೋತ್ರಗಳು. ಮರುತ್ವತೀಯ ಮುಂತಾದ ಐದು ಶಸ್ತ್ರಗಳು. ತೃತೀಯಸವನದಲ್ಲಿ ಆರ್ಭವ ಪವಮಾನ ಮತ್ತು ಯಜ್ಞಾಯಜ್ಞಿಯ ಎಂಬ ಎರಡು ಸ್ತೋತ್ರಗಳು. ವೈಶ್ವ ದೇವ ಮತ್ತು ಆಗ್ನಿಮಾರುತ ಎಂಬ ಎರಡು ಶಸ್ತ್ರಗಳು. ಅಂತೂ ಅಗ್ನಿಷ್ಟೋಮ ಯಾಗದಲ್ಲಿ ಹನ್ನೆರಡು ಸ್ತೋತ್ರಗಳು ಮತ್ತು ಹನ್ನೆರಡು ಶಸ್ತ್ರಗಳಿರುತ್ತವೆ.

ಸೋಮರಸವನ್ನು ಗ್ರಹಗಳಲ್ಲಿ ತುಂಬಿಟ್ಟ ನಂತರ ಆಸ್ತಾವದಲ್ಲಿ ಉದ್ಗಾತೃಗಣದವರು ಬಹಿಷ್ಪವಮಾನಸ್ತೋತ್ರವನ್ನು ಮಾಡುತ್ತಾರೆ. ಮಹಾವೇದಿಯಲ್ಲಿ ಚಾತ್ವಾಲ-ಉತ್ಕರಗಳ ಮಧ್ಯದ ಸ್ಥಾನವೇ ಆಸ್ತಾವ. ಅಲ್ಲಿ ಋತ್ವಿಜರು ಆಸೀನರಾಗಿ ಸ್ತೋತ್ರವನ್ನು ಹೇಳುತ್ತಾರೆ. ನಂತರ ಸವನೀಯ ಪಶುವಿನ ವಪಾಯಾಗ. ಬಳಿಕ ಯಜಮಾನ ಮತ್ತು ಋತ್ವಿಜರು ಸದಸ್ಸನ್ನು ಪ್ರವೇಶಿಸುವರು. ಬಳಿಕ ಸವನೀಯಯಾಗವು ನಡೆಯುತ್ತದೆ. ಈ ಸವನೀಯ ಯಾಗಕ್ಕೆ ಇಂದ್ರನೇ ದೇವತೆ. ಪುರೋಡಾಶ, ಧಾನಾಃ ಅಂದರೆ ಆಜ್ಯದಲ್ಲಿ ಹುರಿದ ಜವೇಗೋಧಿ, ಕರಂಭಾಃ ಅಂದರೆ ಆಜ್ಯಮಿಶ್ರಿತ ಹುರಿದ ಜವೇ ಗೋಧಿಯ ಹಿಟ್ಟು, ಪರಿವಾಪ ಅಂದರೆ ಅರಳು ಮತ್ತು ಆಮಿಕ್ಷಾ-ಇವು ದ್ರವ್ಯಗಳು.

ನಂತರ ಐಂದ್ರವಾಯವವೇ ಮೊದಲಾದ ದ್ವಿದೇವತ್ಯ ಸೋಮಯಾಗ ವನ್ನು ಮಾಡಬೇಕು. ಬಳಿಕ ಶುಕ್ರಾಮಂಥಿಯಾಗವು ನಡೆಯುವುದು. ಈ ಯಾಗಕ್ಕೆ ಇಂದ್ರನೇ ದೇವತೆ. ಈ ಯಾಗದೊಡನೆಯೇ ಚಮಸಗಳಿಂದ ಸೋಮರಸದ ಹೋಮವು ನಡೆಯುತ್ತದೆ. ನಂತರ ಐಂದ್ರವಾಯವ ಮುಂತಾದ ದ್ವಿದೇವತ್ಯಯಾಗದ ಹವಿಃಶೇಷಭಕ್ಷಣವು ನಡೆಯುತ್ತದೆ. ಇಡಾ ಭಕ್ಷಣ, ಚಮಸದಲ್ಲಿ ಉಳಿದಿರುವ ಸೋಮರಸದ ಶೇಷವನ್ನು ಸ್ವೀಕರಿಸುತ್ತಾರೆ. ನಂತರ ಋತುಯಾಗವು ನಡೆಯುತ್ತದೆ. ಈ ಯಾಗದ ಹವಿಃಶೇಷಭಕ್ಷಣ. ಬಳಿಕ ಐಂದ್ರಾಗ್ನಗ್ರಹಗ್ರಹಣ ಅಂದರೆ ಇಂದ್ರಾಗ್ನಿ ದೇವತೆಗಾಗಿ ಇಟ್ಟಿರುವ ಗ್ರಹವನ್ನು ತೆಗೆದುಕೊಳ್ಳುವುದು. ನಂತರ ಹೋತೃವು ಆಜ್ಯಶಸ್ತ್ರವನ್ನು ಹೇಳು ತ್ತಾನೆ. ಶಸ್ತ್ರವು ಮುಗಿದ ಮೇಲೆ ಐಂದ್ರಾಗ್ನಯಾಗವು ನಡೆಯುತ್ತದೆ. ನಂತರ ಉದ್ಗಾತೃಗಣದವರು ಕ್ರಮವಾಗಿ ನಾಲ್ಕು ಸ್ತೋತ್ರಗಳನ್ನು ಹೇಳುತ್ತಾರೆ. ಬಳಿಕ ಹುತಶೇಷಭಕ್ಷಣ. ಪ್ರಾತಃಸವನದಲ್ಲಿ ಮೊದಲನೆಯ ಸ್ತೋತ್ರ



ಬಹಿಷ್ಪವಮಾನಸ್ತೋತ್ರ. ಮೊದಲನೆಯ ಶಸ್ತ್ರ ಆಜ್ಯಶಸ್ತ್ರ. ಮೊದಲನೆಯ ಸ್ತೋತ್ರ ಮತ್ತು ಪ್ರಥಮಶಸ್ತ್ರವು ಇಲ್ಲಿಗೆ ಮುಗಿದಂತಾಗುತ್ತದೆ. ಹೋತೃವೂ, ಮೈತ್ರಾವರುಣನೂ, ಬ್ರಾಹ್ಮಣಾಚ್ಛಂಸೀ ಮತ್ತು ಅಚ್ಛಾವಾಕ ಈ ನಾಲ್ವರು ಋತ್ವಿಜರು ನಾಲ್ಕು ಶಸ್ತ್ರಗಳನ್ನು ಹೇಳುವರು. ಸ್ತೋತ್ರ ಮತ್ತು ಶಸ್ತ್ರಗಳನ್ನು ಹೇಳುವ ಕ್ರಮವು ಹೀಗಿದೆ; ಮೊದಲನೆಯ ಸ್ತೋತ್ರ ಮತ್ತು ಶಸ್ತ್ರವು ಮುಗಿದ ನಂತರ ಉದ್ಗಾತೃಗಣದವರಿಂದ ಪ್ರಥಮಾಜ್ಯಸ್ತೋತ್ರ. ಅದರ ನಂತರ ಹೋತೃವಿನಿಂದ ಪ್ರಉಗಶಸ್ತ್ರ. ಬಳಿಕ ಉದ್ಗಾತೃಗಣದವರಿಂದ ದ್ವಿತೀಯಾಜ್ಯ ಸ್ತೋತ್ರ. ಮೈತ್ರಾವರುಣನಿಂದ ಪ್ರಥಮ ಉಕ್ಥ್ಯಪರ್ಯಾಯಶಸ್ತ್ರ. ನಂತರ ಉದ್ಗಾತೃಗಣದವರಿಂದ ತೃತೀಯಾಜ್ಯಸ್ತೋತ್ರ. ಬ್ರಾಹ್ಮಣಾಚ್ಛಂಸಿಯಿಂದ ದ್ವಿತೀಯ ಉಕ್ಥ್ಯಪರ್ಯಾಯಶಸ್ತ್ರ. ಆಮೇಲೆ ಉದ್ಗಾತೃಗಣದವರಿಂದ ಚತುರ್ಥ ಆಜ್ಯಸ್ತೋತ್ರ. ಅಚ್ಛಾವಾಕನಿಂದ ತೃತೀಯ ಉಕ್ಥ್ಯಪರ್ಯಾಯ ಶಸ್ತ್ರ. ಸ್ತೋತ್ರವು ಮುಗಿದ ನಂತರ ಶಸ್ತ್ರವನ್ನು ಹೇಳುತ್ತಾರೆ.

**ಸ್ತೋತ್ರಮಗ್ರೇ ಶಸ್ತ್ರಾತ್ ।**

— ಆಪಸ್ತಂಬ ಶ್ರೌತಸೂತ್ರ

ಪ್ರತಿ ಸ್ತೋತ್ರದ ಪ್ರಾರಂಭದಲ್ಲಿ ಆಯಾ ದೇವತೆಗೆ ಗ್ರಹಗ್ರಹಣವು ನಡೆಯುತ್ತದೆ. ಶಸ್ತ್ರವು ಮುಗಿದ ಮೇಲೆ ಯಾಗ. ಈ ಸ್ತೋತ್ರ ಮತ್ತು ಶಸ್ತ್ರಗಳಿಗೆ ವಿಶ್ವೇ ದೇವಾಃ, ಮಿತ್ರಾವರುಣೌ, ಇಂದ್ರ ಮತ್ತು ಇಂದ್ರಾಗ್ನಿ ಈ ನಾಲ್ವರು ದೇವತೆಗಳು. ಇಲ್ಲಿಗೆ ಸೋಮಯಾಗದ ಪ್ರಾತಃಸವನದ ವಿಧಿಗಳು ಪೂರ್ಣಗೊಳ್ಳುವುವು. ನಂತರ ಋತ್ವಿಜರು ಸದಸ್ಸಿನಿಂದ ಹೊರಬರುತ್ತಾರೆ.

## ಮಾಧ್ಯಂದಿನಸವನ

ಮಾಧ್ಯಂದಿನಸವನದಲ್ಲಿ ಪ್ರಾತರನುವಾಕವಿರುವುದಿಲ್ಲ. ಏಕಧನಗ್ರಹಣ ವಿರುವುದಿಲ್ಲ. ಏಕಧನಗ್ರಹಣವೆಂದರೆ ಕುಂಭಗಳಲ್ಲಿ ನೀರು ತರುವಿಕೆ.

ಈ ಸವನದಲ್ಲಿ ಋತ್ವಿಜರು ನೇರವಾಗಿ ಸದಃಪ್ರವೇಶವನ್ನು ಮಾಡು ವರು. ನಂತರ ಸೋಮಾಭಿಷವ. ಸೋಮರಸವನ್ನು ಈ ಸವನದಲ್ಲಿ ಶುಕ್ರಾ-ಮಂಥಿ, ಎರಡು ಮರುತ್ವತೀಯ, ಆಗ್ರಯಣ ಮತ್ತು ಉಕ್ಥ್ಯ ಈ ಗ್ರಹಗಳಲ್ಲಿ ಗ್ರಹಣ ಮಾಡಬೇಕು. ನಂತರ ಈ ಎಲ್ಲವನ್ನೂ ಆಸಾದನೆ



ಮಾಡಬೇಕು. ನಂತರ ಸದಸ್ಸಿನಲ್ಲಿ ಉದ್ಗಾತೃಗಣದವರು ಮಾಧ್ಯಂದಿನ ಪವಮಾನ ಸ್ತೋತ್ರವನ್ನು ಮಾಡುವರು. ನಂತರ ದಧಿಘರ್ಮಯಾಗವು ನಡೆಯುವುದು. ಹವಿಃಶೇಷಭಕ್ಷಣ. ಪಶುಪುರೋಡಾಶ ಯಾಗವನ್ನು ಮಾಡಿದ ನಂತರ ಸವನೀಯ (ಸವನಕ್ಕೆ ಸಂಬಂಧಿಸಿದ) ಪುರೋಡಾಶಯಾಗ. ಈ ಯಾಗದಲ್ಲಿ ಪ್ರಾತಃಸವನದಲ್ಲಿಯ ಎಲ್ಲ ಹವಿಸ್ಸುಗಳಿದ್ದರೂ ಅವಿಕ್ಷಾ ಮಾತ್ರ ಇರುವುದಿಲ್ಲ. ನಂತರ ಶುಕ್ರಾ-ಮಂಥಿ ಯಾಗ. ಇಡಾಭಕ್ಷಣ. ಚಮಸ ಗಳಲ್ಲಿರುವ ಸೋಮಶೇಷಭಕ್ಷಣ.

ಈ ಮಾಧ್ಯಂದಿನಸವನದಲ್ಲಿನ ವೈಶಿಷ್ಟ್ಯವೆಂದರೆ ಈ ಸಂದರ್ಭದಲ್ಲಿ ದಾಕ್ಷಿಣಹೋಮಗಳ ನಂತರ ಆತ್ರೇಯ ಪೂಜಾ ಅಥವಾ ಅಗ್ರಪೂಜೆಯು ನಡೆಯುತ್ತದೆ. ನಂತರ ಋತ್ವಿಜರಿಗೆ ದಕ್ಷಿಣಾದಾನ. ಎರಡು ಮರುತ್ವತೀಯ ಗ್ರಹಗಳಿಂದ ಸೋಮವನ್ನು ದೇವತೆಗಳಿಗೆ ಅರ್ಪಿಸುವುದು. ಶೇಷಸೋಮ ಭಕ್ಷಣ. ನಂತರ ಮೂರನೆಯ ಮರುತ್ವತೀಯಗ್ರಹಗ್ರಹಣ. ನಂತರ ಗ್ರಹವನ್ನು ಆಸಾದನೆ ಮಾಡುವುದು. ಆಗ ಹೋತೃವು ಮರುತ್ವತೀಯಶಸ್ತ್ರವನ್ನು ಹೇಳುತ್ತಾನೆ. ಶಸ್ತ್ರದ ಅಂತ್ಯದಲ್ಲಿ ಮರುತ್ವತೀಯಯಾಗ. ಹವಿಃಶೇಷಭಕ್ಷಣ. ನಂತರ ಮಂತ್ರಪೂರ್ವಕವಾಗಿ ಮಾಹೇಂದ್ರಗ್ರಹಗ್ರಹಣ. ಆಗ ಉದ್ಗಾತೃ ಗಣದವರು ರಥಂತರಪೃಷ್ಠದಿಂದ ಮಾಹೇಂದ್ರ ಸ್ತೋತ್ರವನ್ನು ಮಾಡುತ್ತಾರೆ. ನಂತರ ಹೋತೃವು ನಿಷ್ಕೇವಲ್ಯಶಂಸನವನ್ನು ಮಾಡುತ್ತಾನೆ. ಬಳಿಕ ಅಧ್ವರ್ಯುವು ಮಾಹೇಂದ್ರಯಾಗವನ್ನು ಮಾಡುತ್ತಾನೆ. ಈ ಮಾಹೇಂದ್ರ ಯಾಗದೊಡನೆ ಪ್ರಾತಃಸವನದಲ್ಲಿಯೇ ಆಸಾದನೆ ಮಾಡಿದ ಆಗ್ನೇಯ, ಐಂದ್ರ ಮತ್ತು ಸೌರ್ಯ ಈ ಅತಿಗ್ರಾಹ್ಯಗಳಿಂದ ಯಾಗ. ಮಾಹೇಂದ್ರಶೇಷಭಕ್ಷಣದ ನಂತರ ಯಜಮಾನನು ಅತಿಗ್ರಾಹ್ಯಶೇಷವನ್ನೂ ಭಕ್ಷಣ ಮಾಡಬೇಕು. ಅನಂತರ ಪ್ರಾತಃಸವನದಂತೆ ಉದ್ಗಾತೃಗಣದವರಿಂದ ಮೂರು ಪೃಷ್ಠ ಸ್ತೋತ್ರಗಳು. ಬಳಿಕ ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ ಮತ್ತು ಅಚ್ಛಾವಾಕ ಈ ಮೂವರಿಂದ ಕ್ರಮವಾಗಿ ಮೂರು ಶಸ್ತ್ರಗಳು. ಈ ಎಲ್ಲವುಗಳಿಗೂ ಇಂದ್ರನೇ ದೇವತೆ. ಪ್ರಾತಃಸವನದಲ್ಲಿಯಂತೆಯೇ ಈ ಮೂರು ಶಸ್ತ್ರಗಳಿಗೆ ಉಕ್ಥ್ಯಪರ್ಯಾಯವೆಂದು ಹೆಸರು. ಈ ಸ್ತೋತ್ರ-ಶಸ್ತ್ರಗಳೊಡನೆ ಮಾಧ್ಯಂದಿನಸವನವು ಮುಕ್ತಾಯಗೊಳ್ಳುವುದು. ನಂತರ ಋತ್ವಿಜರು ಸದಸ್ಸಿನಿಂದ ಹೊರಬರುತ್ತಾರೆ.



## ತೃತೀಯಸವನ

ತೃತೀಯಸವನದ ಕಲಾಪಗಳೂ ಸಹ ಮಾಧ್ಯಂದಿನಸವನದಂತೆಯೇ ಋತ್ವಿಜರ ಸದಃಪ್ರವೇಶದಿಂದ ಆರಂಭಗೊಳ್ಳುವುದು. ನಂತರ ಋಜೀಷಾಭಿಷವ. ಋಜೀಷವೆಂದರೆ ಜಜ್ಜಿದ ಸೋಮಲತೆಯ ಉಳಿದ ಭಾಗ ಅಂದರೆ ಚರಟ. ಅದರ ಅಭಿಷವದ ನಂತರ ಹವಿರ್ಧಾನದ ಪೂರ್ವ ಮತ್ತು ಪಶ್ಚಿಮದ್ವಾರಗಳನ್ನು ಮುಚ್ಚಿಕೊಂಡು ಆದಿತ್ಯಗ್ರಹಗ್ರಹಣವನ್ನು ಮಾಡ ಬೇಕು. ನಂತರ ಪರಿಶ್ರಯಣ (ತೆರೆ)ವನ್ನು ತೆಗೆದು ಆದಿತ್ಯಗ್ರಹಯಾಗವನ್ನು ಮಾಡಬೇಕು. ನಂತರ ಆಗ್ರಯಣಗ್ರಹಗ್ರಹಣ. ಉದ್ಗಾತೃಗಣದವರು ಆರ್ಭವಪವಮಾನಸ್ತೋತ್ರವನ್ನು ಹೇಳುತ್ತಾರೆ. ಬಳಿಕ ಅಂಗಯಾಗವು ನಡೆಯುವುದು. ಮಾಧ್ಯಂದಿನಸವನದಂತೆಯೇ ಈ ಸವನದಲ್ಲಿಯೂ ಸಹ ಸವನೀಯ ಪುರೋಡಾಶಯಾಗವು ನಡೆಯುತ್ತದೆ. ನಂತರ ಚಮಸಗಳಿಂದ ಸೋಮರಸಯಾಗವು ನಡೆಯುತ್ತದೆ. ಇಡಾಭಕ್ಷಣ ಮತ್ತು ಚಮಸಸ್ಥ ಸೋಮಶೇಷಭಕ್ಷಣ. ನಂತರ ಸವನೀಯ ಹವಿಃಶೇಷದಿಂದ ಹವಿರ್ಧಾನ ಮಂಟಪದಲ್ಲಿಯೇ ಚಮಸಗಳ ದಕ್ಷಿಣಕ್ಕೆ ಪಿಂಡದಾನ. ನಂತರ ಸಾವಿತ್ರಗ್ರಹಣ ಪೂರ್ವಕಯಾಗ. ನಂತರ ಅದೇ ಗ್ರಹದಲ್ಲಿಯೇ ವೈಶ್ವದೇವಗ್ರಹಗ್ರಹಣ ಮತ್ತು ಆಸಾದನೆ. ಹೋತೃವು ವೈಶ್ವದೇವ ಶಸ್ತ್ರವನ್ನು ಹೇಳುತ್ತಾನೆ. ವೈಶ್ವದೇವ ಗ್ರಹಯಾಗವು ನಡೆಯುತ್ತದೆ. ಹವಿಃಶೇಷಭಕ್ಷಣ. ನಂತರ ಸೌಮ್ಯಚರು ಯಾಗವು ನಡೆಯುತ್ತದೆ. ಬಳಿಕ ಪಾತ್ನೀವತಗ್ರಹಗ್ರಹಣ ಮತ್ತು ಯಾಗ ಗಳು. ಆಗ್ನೀಧ್ರನು ಹವಿಃಶೇಷವನ್ನು ಸ್ವೀಕರಿಸುತ್ತಾನೆ. ಉದ್ಗಾತೃಗಣದವರಿಂದ ಯಜ್ಞಾಯಜ್ಞಿಯಸ್ತೋತ್ರವು ಹೇಳಲ್ಪಡುತ್ತದೆ. ಹೋತೃವು ಆಗ್ನಿಮಾರುತ ಶಸ್ತ್ರವನ್ನು ಹೇಳುತ್ತಾನೆ. ಶಸ್ತ್ರವು ಮುಗಿದಾಗ ಸೋಮಯಾಗ. ಶೇಷಭಕ್ಷಣಗಳು. ಹೀಗೆ ತೃತೀಯಸವನವು ಮುಕ್ತಾಯಗೊಳ್ಳುವುದು.

ಈ ರೀತಿ ಮೂರು ಸವನಗಳೇ ಸೋಮಯಾಗದ ಮುಖ್ಯ ಕಲಾಪ ಗಳು. ನಂತರ ಉತ್ತರಾಂಗವಾಗಿ ಹನ್ನೊಂದು ಅನೂಯಾಜಗಳಿಂದ ಹೋಮ ವನ್ನು ಮಾಡಬೇಕು. ನಂತರ ಹನ್ನೊಂದು ಉಪಯಾಜಗಳಿಂದಲೂ ಹೋಮ. ಬಳಿಕ ಉನ್ನೇತೃವಿನಿಂದ ಹಾರಿಯೋಜನಗ್ರಹದ (ದ್ರೋಣಕಲಶ) ಪ್ರಚಾರ. ನಂತರ ಹವಿರ್ಧಾನಮಂಟಪದ ದಕ್ಷಿಣಕ್ಕಿರುವ ಸ್ಥಾನವಾದ



ಮಾರ್ಜಾಲೀಯದಲ್ಲಿ ದಕ್ಷಿಣಕ್ಕೆ ಧಾನಾಗಳಿಂದ ಯಜಮಾನನ ಪಿತೃಗಳಿಗೆ ಪಿಂಡದಂತೆ ಪ್ರದಾನ. ಬಳಿಕ ಋತ್ವಿಜರು ದಧಿದ್ರಪ್ಸ (ಮೊಸರು) ಭಕ್ಷಣ ಮಾಡಿ ಹಿಂದೆ ಮಾಡಿದ ಸಭ್ಯದ ವಿಸರ್ಜನೆಯನ್ನು ಮಾಡುತ್ತಾರೆ. ಬಳಿಕ ಪತ್ನೀಸಂಯಾಜಹೋಮವು ನಡೆಯುತ್ತದೆ. ಪ್ರಾಯಶ್ಚಿತ್ತಹೋಮಗಳ ನಂತರ ಸಮಿಷ್ಟಯಜುರ್ಹೋಮ ಅಂದರೆ ಪೂರ್ಣಾಹುತಿಯು ನಡೆಯುತ್ತದೆ. ಬಳಿಕ ಏಕಕಪಾಲಪುರೋಡಾಶದಿಂದ ಅವಭೃಥೇಷ್ಟಿಯು ನಡೆಯುತ್ತದೆ. ಇದಕ್ಕೆ ವರುಣನು ದೇವತೆ. ನೀರಿನಲ್ಲಿ ಯಾಗ. ನಂತರ ಯಜಮಾನದಂಪತಿಗಳು, ಋತ್ವಿಜರು ಅಲ್ಲದೆ ಶ್ರದ್ಧಾಳುಗಳೆಲ್ಲರೂ ಅವಭೃಥ ಸ್ನಾನವನ್ನು ಮಾಡುತ್ತಾರೆ. ಯಜಮಾನದಂಪತಿಗಳು ದೀಕ್ಷಾವಸ್ತ್ರ, ಮೇಖಲ ಮತ್ತು ಯೋಕ್ತ್ರಾದಿಗಳನ್ನು ವಿಸರ್ಜಿಸಿ ಬಂದು. ಉದಯನೀಯೇಷ್ಟಿಯನ್ನು ಅನುಷ್ಠಿಸುವರು. ಈ ಇಷ್ಟಿಯಲ್ಲಿ ಅಗ್ನಿಃ, ಸೋಮಃ, ಸವಿತಾ, ಪಥ್ಯಾಸ್ವಸ್ತಿಃ, ಅದಿತಿಃ - ಹೀಗೆ ಐದು ದೇವತೆಗಳು. ಮೊದಲಿನ ನಾಲ್ಕು ದೇವತೆಗಳಿಗೆ ಆಜ್ಯವು ಹವಿಸ್ಸು. ಐದನೆಯ ದೇವತೆಗೆ ಚರು ಹವಿಸ್ಸು. ಈ ಇಷ್ಟಿಯು ಶಂಯುವಾಕಾಂತದವರೆಗೆ ಮಾತ್ರ ನಡೆಯುವುದು. ನಂತರ ಮೈತ್ರಾವರುಣೀ ಆಮಿಕ್ಷಾಯಾಗವು ನಡೆಯುತ್ತದೆ. ಅದರೊಡನೆಯೇ ಆಜ್ಯದಿಂದ ದೇವಿಕಾಯಾಗವು ನಡೆಯುತ್ತದೆ. ಈ ಯಾಗವು ಇಡಾಭಕ್ಷಣದವರೆಗೆ ಮಾತ್ರ ನಡೆಯುತ್ತದೆ. ಬಳಿಕ ಉದವಸಾನೀಯೇಷ್ಟಿಯು ನಡೆಯುತ್ತದೆ. ಈ ಉದವಸಾನೀಯೇಷ್ಟಿಗೆ ಅಷ್ಟಾ ಕಪಾಲ ಪುರೋಡಾಶವು ಹವಿಸ್ಸು. ಅಗ್ನಿಯು ದೇವತೆ. ಈ ಇಷ್ಟಿಯೊಂದಿಗೆ ಅಗ್ನಿಷ್ಟೋಮಯಾಗದ ಉತ್ತರಾಂಗವು ಪೂರ್ಣಗೊಂಡು ಯಾಗವೂ ಪೂರ್ಣಗೊಳ್ಳುವುದು.

ಸೋಮಯಾಗಗಳ ಪ್ರಕೃತಿಯಾಗಿರುವ ಈ ಅಗ್ನಿಷ್ಟೋಮಯಾಗದ ಪ್ರಕ್ರಿಯೆಯ ಬಗ್ಗೆ ಮನನ ಮಾಡಬೇಕಾದದ್ದಿಷ್ಟು:

- ಎಲ್ಲ ಸೌಮಿಕಯಾಗಗಳಿಗೂ ಅಗ್ನಿಷ್ಟೋಮವೇ ಪ್ರಕೃತಿಯಾಗ.
- ಈ ಯಾಗದಲ್ಲಿ ಐಷ್ಟಿಕ, ಪಾಶುಕದ ತಂತ್ರಗಳೂ ಸೇರಿವೆ
- ಅಗ್ನಿಷ್ಟೋಮದ ಪೂರ್ವಾಂಗವಾಗಿ ದೀಕ್ಷಣೀಯ, ಪ್ರಾಯಣೀಯ ಮತ್ತು ಆತಿಥ್ಯೇಷ್ಟಿಗಳು ಇರುತ್ತವೆ.



- ಪೂರ್ವಾಂಗದಲ್ಲಿ ಪ್ರವರ್ಗ್ಯ ಮತ್ತು ಉಪಸದಿಷ್ಟಿಗಳ ಅನುಷ್ಠಾನವಿದೆ.
- ಪ್ರಧಾನ ಸೋಮಯಾಗವು ಮೂರು ಸವನಗಳನ್ನೊಳಗೊಂಡಿರುತ್ತದೆ.
- ಪ್ರಾತಃಸವನದಲ್ಲಿ ಐದು ಸ್ತೋತ್ರಗಳು ಮತ್ತು ಐದು ಶಸ್ತ್ರಗಳು.
- ಸ್ತೋತ್ರಗಳನ್ನು ಉದ್ಗಾತೃಗಣದವರೂ, ಶಸ್ತ್ರಗಳನ್ನು ಹೋತೃ ಗಣದವರೂ ಹೇಳುತ್ತಾರೆ.
- ಮಾಧ್ಯಂದಿನಸವನದಲ್ಲಿಯೂ ಐದು ಸ್ತೋತ್ರಗಳು ಮತ್ತು ಐದು ಶಸ್ತ್ರಗಳು.
- ತೃತೀಯಸವನದಲ್ಲಿ ಎರಡು ಸ್ತೋತ್ರಗಳು ಮತ್ತು ಎರಡು ಶಸ್ತ್ರಗಳು.
- ಗ್ರಹಗಳೆಂಬ ಪಾತ್ರೆಗಳಲ್ಲಿ ಮಂತ್ರಪೂರ್ವಕವಾಗಿ ಆಯಾ ದೇವತೆಗಳಿಗೆ ಸೋಮರಸವನ್ನು ತುಂಬಿಡಲಾಗುತ್ತದೆ. ಇದೇ ಗ್ರಹಗ್ರಹಣ.
- ಪ್ರಾತಃಸವನದಲ್ಲಿ ಮಾತ್ರ ಅನೇಕ ಕಲಾಪಗಳ ನಂತರ ಋತ್ವಿಜರ ಸದಃಪ್ರವೇಶ.
- ಅಗ್ನಿಷ್ಟೋಮದಲ್ಲಿ ೧೬ ಜನ ಋತ್ವಿಜರು. ಸದಸ್ಯನನ್ನು ಹದಿನೇಳನೆಯವನನ್ನಾಗಿಟ್ಟುಕೊಳ್ಳುವುದೂ ಉಂಟು.
- ಯಾವ ಸೋಮಯಾಗದಲ್ಲಿ ತ್ರಿವೃತ್ ಸ್ತೋಮ, ಪಂಚದಶಸ್ತೋಮ, ಸಪ್ತದಶಸ್ತೋಮ, ಮತ್ತು ಏಕವಿಂಶ ಸ್ತೋಮಗಳಿರುತ್ತವೆಯೋ ಆ ಸೋಮಯಾಗವನ್ನು **ಜ್ಯೋತಿಷ್ಟೋಮ** ಎನ್ನುತ್ತಾರೆ. ಈ ನಾಲ್ಕು ಸ್ತೋಮಗಳಿಗೆ **ಜ್ಯೋತಿಃ** ಎಂದು ಸಂಜ್ಞೆಯಿರುವುದೇ ಅದಕ್ಕೆ ಕಾರಣ. ಈ ನಾಲ್ಕೇ ಸ್ತೋಮಗಳಿರುವ ಸೋಮಯಾಗಕ್ಕೆ **ಚತುಷ್ಟೋಮ** ಎಂಬ ಸಂಜ್ಞೆಯೂ ಇದೆ. ಕೆಲವು ಸೋಮಯಾಗಗಳಲ್ಲಿ ಈ ನಾಲ್ಕು ಸ್ತೋಮಗಳಲ್ಲದೆ ತ್ರಿಣವ, ತ್ರಯಸ್ತ್ರಿಂಶ ಮುಂತಾದ ಸ್ತೋಮಗಳಿರುತ್ತವೆ. ಈ ನಾಲ್ಕು ಸ್ತೋಮಗಳಿರುವುದರಿಂದ ಅವು ಜ್ಯೋತಿಷ್ಟೋಮ ಎನ್ನಿಸಿಕೊಂಡರೂ



ಚತುಷ್ಟೋಮಗಳಲ್ಲ. ಅತಿರಾತ್ರವು ಇದಕ್ಕೆ ಉದಾಹರಣೆಯಾಗುತ್ತದೆ. ಅದು ಜ್ಯೋತಿಷ್ಟೋಮ. ಆದರೆ ಚತುಷ್ಟೋಮವಲ್ಲ.

ಅಗ್ನಿಷ್ಟೋಮವು ಸಪ್ತ ಸೋಮಸಂಸ್ಥೆಗಳಲ್ಲಿ ಸೇರಿರುವುದರಿಂದ ಇದು ನಿತ್ಯಕರ್ಮವೆನಿಸುತ್ತದೆ. ಅಗ್ನಿಷ್ಟೋಮದ ವಿಕೃತಿಯಾಗಗಳಾದ ಅತ್ಯಗ್ನಿಷ್ಟೋಮ ಮುಂತಾದ ಆರು ಸೋಮಯಾಗಗಳಲ್ಲಿಯೂ ಪೂರ್ವಾಂಗ ಕ್ರಮವು ಒಂದೇ ರೀತಿಯಾಗಿದೆ. ದೀಕ್ಷಾಗ್ರಹಣ, ದೀಕ್ಷಣೀಯೇಷ್ಟಿಯಿಂದ ಅಗ್ನೀಷೋಮೀಯಯಾಗದವರೆಗೆ ಯಾವ ವ್ಯತ್ಯಾಸವೂ ಇರುವುದಿಲ್ಲ. ಸುತ್ಯಾಹದಲ್ಲಿ ಅತ್ಯಗ್ನಿಷ್ಟೋಮದಲ್ಲಿ ಹದಿಮೂರು ಸ್ತೋತ್ರ- ಶಸ್ತ್ರಗಳಿರುತ್ತವೆ. ಉಕ್ಥ್ಯದಲ್ಲಿ ಹದಿನೈದು ಸ್ತೋತ್ರ-ಶಸ್ತ್ರಗಳಿರುತ್ತವೆ. ಷೋಡಶಿಯಲ್ಲಿ ಹದಿನಾರು ಸ್ತೋತ್ರ-ಶಸ್ತ್ರಗಳಿರುತ್ತವೆ. ವಾಜಪೇಯಯಾಗ ದಲ್ಲಿ ಹದಿನೇಳು ಸ್ತೋತ್ರ-ಶಸ್ತ್ರಗಳಿರುತ್ತವೆ. ಅತಿರಾತ್ರದಲ್ಲಿ ಇಪ್ಪತ್ತೊಂಬತ್ತು ಸ್ತೋತ್ರ-ಶಸ್ತ್ರಗಳಿರುತ್ತವೆ. ಅಪ್ತೋರ್ಯಾಮದಲ್ಲಿ ಮೂವತ್ತಮೂರು ಸ್ತೋತ್ರ-ಶಸ್ತ್ರಗಳಿರುತ್ತವೆ. ಈ ಎಲ್ಲ ವಿಕೃತಿಯಾಗಗಳ ಪೈಕಿ ಉಕ್ಥ್ಯಯಾಗದಲ್ಲಿ ಪ್ರವರ್ಗ್ಯವಿರುವುದಿಲ್ಲ. ಉಪಸದಿಷ್ಟಿಗಳು ಮಾತ್ರ ಇರುತ್ತವೆ. ಈ ಎಲ್ಲ ಯಾಗಗಳೂ ಏಕಾಹ ಸೋಮಯಾಗಗಳೇ ಆಗಿವೆ.

ಈ ಎಲ್ಲ ಏಕಾಹಯಜ್ಞಗಳಲ್ಲಿಯೂ ಒಂದೊಂದು ಸುತ್ಯಾಹವಿರುತ್ತದೆ. ಒಂದು ಪ್ರಾತಃಸವನ, ಒಂದು ಮಾಧ್ಯಂದಿನಸವನ ಮತ್ತು ಒಂದು ತೃತೀಯಸವನವನ್ನೊಳಗೊಂಡ ಸೋಮಾಭಿಷವವಿದ್ದರೆ ಅದು ಒಂದು ಸುತ್ಯಾಹವೆನಿಸುತ್ತದೆ. ದ್ವಿರಾತ್ರದಿಂದ ಮುಂದೆ ದ್ವಾದಶರಾತ್ರದವರೆಗಿನ ಸೋಮಯಾಗಗಳು ಅಹೀನಗಳೆನ್ನಿಸಿಕೊಳ್ಳುತ್ತವೆ. ಈ ಅಹೀನಯಾಗಗಳಲ್ಲಿ ಎಷ್ಟು ರಾತ್ರಗಳ ಯಜ್ಞಗಳೋ ಅಷ್ಟು ಸುತ್ಯಾಹಗಳಿರುತ್ತವೆ. ದ್ವಿರಾತ್ರದಲ್ಲಿ ಎರಡು ಸುತ್ಯಾಹಗಳು. ತ್ರಿರಾತ್ರದಲ್ಲಿ ಮೂರು ಸುತ್ಯಾಹಗಳಿರುತ್ತವೆ. ಏಕಾದಶರಾತ್ರ ಮತ್ತು ದ್ವಾದಶರಾತ್ರಗಳು ಅಹೀನಗಳೂ ಹೌದು. ಸತ್ರಗಳೂ ಹೌದು. ಅನೇಕ ಸೋಮಯಾಜಿಗಳೇ ಸೇರಿ ಮಾಡಬೇಕಾದ ಯಾಗ ಸತ್ರಯಾಗ. ಸತ್ರಯಾಗಕ್ಕೆ ಪ್ರತ್ಯೇಕ ಯಜಮಾನನಿರುವುದಿಲ್ಲ. ಎಲ್ಲರೂ ಯಜಮಾನರೇ. ಎಲ್ಲರೂ ಋತ್ವಿಜರೇ. ಸತ್ರಯಾಗಕ್ಕೆ ದಕ್ಷಿಣೆಯು ಇರುವುದಿಲ್ಲ. ಶಕುನವನ್ನು ನೋಡಿ ಸತ್ರಯಾಗವನ್ನು ಆರಂಭಿಸಬೇಕು. ಶ್ರೌತಸೂತ್ರದಲ್ಲಿ



ಅನೇಕ ಬಗೆಯ ಸತ್ರಯಾಗಗಳು ನಿರೂಪಿತವಾಗಿವೆ. ಕೃಷ್ಣಯಜುರ್ವೇದದಲ್ಲಿ ಏಕೋನಪಂಚಾಶದ್ರಾತ್ರದವರೆಗಿನ ರಾತ್ರಿಸತ್ರಯಾಗಗಳು ಉಕ್ತವಾಗಿವೆ. ಆಶ್ವಲಾಯನ ಶ್ರೌತಸೂತ್ರದಲ್ಲಿ ಶತರಾತ್ರದವರೆಗಿನ ಸತ್ರಯಾಗಗಳು ನಿರೂಪಿತವಾಗಿವೆ. ಇವೆಲ್ಲವೂ ರಾತ್ರಿಸತ್ರಯಾಗವೆನಿಸಿಕೊಳ್ಳುತ್ತವೆ. ಗವಾಮಯನ ಮುಂತಾದವು ಸಂವತ್ಸರಸತ್ರಗಳೆನ್ನಿಸಿಕೊಳ್ಳುತ್ತವೆ. ಹೀಗೆ ಅಗ್ನಿಷ್ಟೋಮ (ಏಕಾಹ) ಮತ್ತು ಅದರ ವಿಕೃತಿಯಾಗಗಳು (ಏಕಾಹಗಳು), ದ್ವಿರಾತ್ರ (ಅಹೀನ) ಮತ್ತು ಅದರ ವಿಕೃತಿಗಳು (ಅಹೀನಗಳು), ದ್ವಾದಶರಾತ್ರ (ಸತ್ರ) ಮತ್ತು ಅದರ ವಿಕೃತಿಯಾಗಗಳು (ಸತ್ರಗಳು), ಗವಾಮಯನ (ಸಂವತ್ಸರ ಸತ್ರ) ಮತ್ತು ಅದರ ವಿಕೃತಿಯಾಗಗಳು- ಇವೆಲ್ಲವೂ ಅಗ್ನಿಷ್ಟೋಮಯಾಗದ ವಿಸ್ತೃತರೂಪಗಳೇ ಆಗಿವೆ.



## ಚಯನಗಳು

ಸೋಮಯಾಗವನ್ನು ಅನುಷ್ಠಿಸುವಾಗ ಉತ್ತರವೇದಿಯಲ್ಲಿ ಅಗ್ನಿಚಯನವನ್ನು ಮಾಡುತ್ತಾರೆ. **ಅಗ್ನಿ** ಎಂದರೆ ಈ ಚಯನಪ್ರಸಂಗದಲ್ಲಿ ಜೋಡಿಸಿದ ಇಟ್ಟಿಗೆಗಳ ರಾಶಿ ಎಂದು ಅರ್ಥ. ಆ ಇಟ್ಟಿಗೆಗಳನ್ನು ಮಂತ್ರ ಪೂರ್ವಕವಾಗಿ ನಾನಾ ಆಕೃತಿಗಳು ಉಂಟಾಗುವಂತೆ ಯಾಜ್ಞಿಕರು ಜೋಡಿಸುತ್ತಾರೆ. **ಶ್ಯೇನಚಿತ್** ಎಂಬ ಚಯನವಾದರೆ ಜೋಡಿಸಿದ ಇಟ್ಟಿಗೆಗಳಿಂದ ಶ್ಯೇನಪಕ್ಷಿಯ (ಗಿಡುಗ) ಆಕೃತಿಯ ಯಜ್ಞವೇದಿಕೆಯು ರೂಪುಗೊಳ್ಳುತ್ತದೆ. ಇಟ್ಟಿಗೆಗಳ ಜೋಡಣೆಯಿಂದ ರಥದ ಚಕ್ರದ ಆಕೃತಿಯ ಯಜ್ಞವೇದಿಕೆಯು ರೂಪುಗೊಂಡಾಗ ಆ ಚಯನವು **ರಥಚಕ್ರಚಿತ್** ಎನ್ನಿಸಿಕೊಳ್ಳುತ್ತದೆ. ಈ ಚಯನಗಳು ಸ್ವತಂತ್ರವಾಗಿ ಯಾಗಗಳಲ್ಲ. ಸೋಮಯಾಗದ ಅಂಗವಾಗಿಯೂ, ಅಥವಾ ಚಾತುರ್ಮಾಸ್ಯೇಷ್ಟಿಯ ಅಂಗವಾಗಿಯೂ ಈ ಚಯನಗಳು ನಡೆಯುತ್ತವೆ. ಈ ಚಯನಗಳಲ್ಲಿ ಎರಡು ಬಗೆಯಿದೆ. ಮಹಾಗ್ನಿಚಯನ ಮತ್ತು ಕ್ಷುದ್ರಚಯನ. ಶ್ಯೇನಚಿತ್ ಚಯನವೇ ಎಲ್ಲ ಮಹಾಗ್ನಿಚಯನಗಳಿಗೂ, ಕ್ಷುದ್ರಚಯನಗಳಿಗೂ ಪ್ರಕೃತಿಯಾಗಿದೆ. ಮಹಾಗ್ನಿಚಯನದಲ್ಲಿ ಮೂರು ರೀತಿಗಳಿವೆ. ಸಹಸ್ರ ಇಟ್ಟಿಗೆಗಳಿಂದ ವೇದಿನಿರ್ಮಾಣ, (ಸಾಹಸ್ರ ಚಯನ) ಎರಡು ಸಹಸ್ರ ಇಟ್ಟಿಗೆಗಳಿಂದ ವೇದಿನಿರ್ಮಾಣ (ದ್ವಿಷಾಹಸ್ರ ಚಯನ) ಮತ್ತು ಮೂರು ಸಹಸ್ರ ಇಟ್ಟಿಗೆಗಳಿಂದ ವೇದಿನಿರ್ಮಾಣ (ತ್ರಿಷಾಹಸ್ರಚಯನ). ಸಾವಿತ್ರ, ನಾಚಿಕೇತ, ಚಾತುರ್ಹೋತ್ರಿಯ, ವೈಶ್ವಸೃಜ ಮತ್ತು ಆರುಣಕೇತುಕಗಳೆಂಬ ಐದು ಚಯನಗಳು ಕ್ಷುದ್ರಚಯನಗಳು. ಈ ಚಯನಗಳಲ್ಲಿ ಇಟ್ಟಿಗೆಗಳ ಬದಲಾಗಿ ಮರಳನ್ನು ತುಪ್ಪದಲ್ಲಿ ಬೆರೆಸಿ ಇಷ್ಟಕೋಪಧಾನವನ್ನು ಮಾಡಬೇಕು. ಆರುಣಕೇತುಕಚಯನದಲ್ಲಿ ಮಾತ್ರ ಹೀಗಲ್ಲ. ಆ ಚಯನವನ್ನು ಮಾಡುವಾಗ ಉತ್ತರವೇದಿಯಲ್ಲಿ ಜಾನುದಘ್ನ (ಮೊಳಕಾಲಿನವರೆಗೆ) ಖಾತ (ಗುಂಡಿ) ವನ್ನು ಮಾಡಬೇಕು. ಆ ಖಾತದಲ್ಲಿ ಇಟ್ಟಿಗೆಗಳ ಬದಲಾಗಿ ನೀರನ್ನು ಉಪಧಾನ ಮಾಡಬೇಕು. ಈ ಚಯನದಲ್ಲಿ ಉಪಧಾನ ಮಾಡುವ ನೀರು ಬಗೆಬಗೆಯದಾಗಿರುತ್ತದೆ. ಬಿಸಿಲು ಇದ್ದಾಗ ಬಂದ ಮಳೆಯ ನೀರು, ಬಾವಿಯ ನೀರು, ಹೊಂಡದಲ್ಲಿ ಹರಿಯದೇ ನಿಂತ ನೀರು, ಹರಿಯುತ್ತಿರುವ ನದಿಯ ನೀರು, ಸಂಗ್ರಹಿಸಿಟ್ಟ ನೀರು ಮತ್ತು ಸಣ್ಣ ಕೆರೆಯ ನೀರು. ಇವುಗಳು ಕ್ರಮವಾಗಿ ಶ್ರುತಿಯಲ್ಲಿ



ಆತಪತಿ ವರ್ಷ್ಯಾ ಗೃಹ್ಣಾತಿ ।

ಕೂಪ್ಯಾ ಗೃಹ್ಣಾತಿ ।

ಸ್ಥಾವರಾ ಗೃಹ್ಣಾತಿ ।

ವಹಂತೀರ್ಗೃಹ್ಣಾತಿ ।

ಸಂಭಾರ್ಯಾ ಗೃಹ್ಣಾತಿ ।

ಪಲ್ವಲ್ಯಾ ಗೃಹ್ಣಾತಿ ।

ಎಂದು ಹೇಳಲ್ಪಟ್ಟಿವೆ.

ಈ ಎಲ್ಲ ನೀರುಗಳನ್ನು ಉಪಧಾನ ಮಾಡಿ ಅದರ ಮೇಲೆ ಮಂಚವನ್ನಿಟ್ಟು ಮಣ್ಣನ್ನು ಹರಡಿ ಆ ಮಣ್ಣಿನ ಮೇಲೆ ಅಗ್ನಿಯನ್ನು ಸ್ಥಾಪಿಸಿ ಮುಂದಿನ ಯಾಗಗಳನ್ನನುಷ್ಠಿಸಬೇಕು.

ಹೀಗೆ ಚಯನವು ಸ್ವತಂತ್ರವಾದದ್ದಲ್ಲದಿದ್ದರೂ, ಉತ್ತರವೇದಿಯಲ್ಲಿ ಯಜ್ಞವೇದಿಯ ನಿರ್ಮಾಣವೆಂದು ಹೇಳಬಹುದು.

## ಉಪಸಂಹಾರ

ಅಗ್ನ್ಯಾಧೇಯದಿಂದ ಆರಂಭಿಸಿ ಅಗ್ನಿಹೋತ್ರ, ದರ್ಶ-ಪೂರ್ಣಮಾಸೇಷ್ಟಿಗಳು, ನಿರೂಢ ಪಶುಬಂಧ, ಅಗ್ನಿಷ್ಟೋಮ, ಸತ್ರಯಾಗ, ಅಯನ ಮತ್ತು ಚಯನ ಇದೆಲ್ಲವನ್ನೂ ಸ್ಥೂಲವಾಗಿ ಪರಿಚಯ ಮಾಡಿ ಕೊಟ್ಟಂತಾಯಿತು. ಯಜ್ಞದ ಕಲಾಪವು ಅತಿವಿಸ್ತೃತವಾದುದರಿಂದ ಅಲ್ಲಿಯ ಕಲಾಪಗಳ ಸಂಪೂರ್ಣ ವಿವರಣೆಯನ್ನು ನೀಡುವುದು ತುಂಬ ಕಷ್ಟ. ಈ ಭಾಗದಲ್ಲಿ ಕಲಾಪಗಳ ವಿಸ್ತೃತ ಪರಿಚಯಕ್ಕಾಗಿ ದರ್ಶ-ಪೂರ್ಣಮಾಸೇಷ್ಟಿಯನ್ನು ಮಾತ್ರ ಆಯ್ದುಕೊಂಡು ವಿವರಣೆಯನ್ನು ನೀಡಲು ಯತ್ನಿಸಲಾಗಿದೆ. ವಾಚಕರು ಉಳಿದ ಯಜ್ಞಗಳ ಬಗ್ಗೆಯೂ ವಿಸ್ತೃತ ವಿವರಣೆಯನ್ನು



ತಿಳಿಯಲು ಇದೊಂದು ದಿಕ್ಸೂಚಿಯಂತಿದೆಯಷ್ಟೆ ಎಂದು ನಿವೇದಿಸ ಬಯಸುವೆವು.

ಶ್ರೌತಯಜ್ಞಗಳು ಬದಲಾಯಿಸದ ವಿಧಿ-ನಿಯಮಗಳಿಂದ ಕೂಡಿವೆ. ವೇದಿಯಲ್ಲಿ ಋತ್ವಿಜರು ಯಾವ ದಾರಿಯಲ್ಲಿ ಹೋಗಬೇಕು? ಹೇಗೆ ನಿಲ್ಲ ಬೇಕು? ಇತ್ಯಾದಿಗಳಿಗೂ ಸಹ ನಿಯಮಗಳಿವೆ. ಒಂದು ಹೆಜ್ಜೆ ಸಹ ನಿಯಮ ವನ್ನು ಮೀರಿ ಇಡಲಾಗದು. ಯಜ್ಞದ ಸಂದರ್ಭದಲ್ಲಿ ಸಂಸ್ಕೃತಭಾಷೆ ಯಲ್ಲಿಯೇ ಮಾತನಾಡಬೇಕೆಂಬ ನಿಯಮವಿದೆ. ಯಜ್ಞದ ವಿಷಯ ದಲ್ಲಿಯೇ ಋತ್ವಿಜನು ಮನಸ್ಸಿಟ್ಟವನಾಗಿರಬೇಕು. ಹೀಗೆ ಶರೀರ, ಮನಸ್ಸು ಮತ್ತು ಮಾತು ಈ ಮೂರನ್ನು ಸಹ ನಿಯಮಕ್ಕೆ ಒಳಪಡಿಸಿ ಯಜ್ಞಾನುಷ್ಠಾನವನ್ನು ಮಾಡುವುದು ನಿಜಕ್ಕೂ ತ್ರಿಕರಣಸಂಸ್ಕಾರವೆಂದರೆ ತಪ್ಪಲ್ಲ. ಅಲ್ಲದೆ ಯಜ್ಞದಲ್ಲಿ ಸಾಮೂಹಿಕ ಶಿಸ್ತನ್ನು ಚೆನ್ನಾಗಿ ಕಾಣಬಹುದು. ಅಧ್ವರ್ಯುವು ಯಜ್ಞದ ಪ್ರಮುಖ ಋತ್ವಿಜನಾಗಿರುತ್ತಾನೆ. ಅವನು ನೀಡುವ ಆದೇಶವನ್ನು ಉಳಿದ ಋತ್ವಿಜರು ಪಾಲಿಸುತ್ತಾರೆ. ಯಜ್ಞವನ್ನು ಅನುಷ್ಠಿಸುವ ಮೊದಲಿನ ತಾನೂನಪ್ತ್ರಗ್ರಹಣವು ದೊಡ್ಡದೊಂದು ಕಾರ್ಯವನ್ನು ನಿರ್ವಹಿಸುವ ಮೊದಲಿನ ಸ್ನೇಹಭಾವ, ಸಹಕಾರ ಮನೋಭಾವದ ಅವಶ್ಯಕತೆಗೆ ಗುರುತಾಗಿದೆ.

**ಸರ್ವೇಣ ವೈ ಯಜ್ಞೇನ ದೇವಾಃ ಸುವರ್ಗಂ ಲೋಕಮಾಯನ್ ।**

— ತೈ. ಸಂ 1.7.1 ಮತ್ತು ಬೋಧಾಯನ ಗೃಹ್ಯ ಪರಿಭಾಷಾಸೂತ್ರ 1.2.1.

ದೇವತೆಗಳು ಯಜ್ಞದಿಂದ ಆತ್ಯಂತಿಕ ಸುಖವನ್ನು ಬಯಸಿ ಸ್ವರ್ಗವನ್ನು ಸೇರಿದರು.

ಎಂಬ ಮಾತಿನಿಂದ ಬೋಧಾಯನರು ದೇವತೆಗಳಿಗೂ ಸಹ ಯಜ್ಞವು ಇಷ್ಟಪ್ರಾಪ್ತಿಗೆ ಸಾಧನವೆಂಬುದನ್ನು ಮನಗಾಣಿಸಿದ್ದಾರೆ. ಅಲ್ಲದೆ ಆಚಾರ್ಯ ಬೋಧಾಯನರು ಸಾರಭೂತವಾದ ಇನ್ನೊಂದು ಅಂಶವನ್ನು ಸೂತ್ರದಲ್ಲಿ ಸೇರಿಸಿದ್ದಾರೆ.



**ಯಜ್ಞವಿತ್ ಸರ್ವವಿದ್ ಭವತಿ। ಯಜ್ಞಃ ಸರ್ವಮ್ ತಸ್ಮಾದ್ ಯಜ್ಞೇಷು ಚಿಂತಾಸು ರಮಂತೇ ತತ್ತ್ವದರ್ಶಿನಃ ॥**

ಯಜ್ಞವನ್ನು ತಿಳಿದವನು ಎಲ್ಲವನ್ನೂ ತಿಳಿದವನಾಗುತ್ತಾನೆ. ಯಜ್ಞವೇ ಸರ್ವಸ್ವ. ಆದ್ದರಿಂದ ತತ್ತ್ವದರ್ಶಿಗಳು ಯಜ್ಞದ ಚಿಂತನೆಯಲ್ಲಿ ಅನಿರ್ವಚನೀಯ ಆನಂದವನ್ನು ಅನುಭವಿಸುತ್ತಾರೆ. ಆದ್ದರಿಂದ ಯಜ್ಞವನ್ನು ಕುರಿತು ನಾವು ಎಷ್ಟು ತಿಳಿದರೂ ಸಾಲದು.

ಹಲವು ಯಜ್ಞಗಳಿಗೆ ಪೂರ್ವಾಭಿಮುಖವಾಗಿ ಸುಮಾರು ೭೫ ಅಡಿ ಉದ್ದ, ೩೦ ಅಡಿ ಅಗಲದ ಒಂದು ವೇದಿಯಿದ್ದರೆ, ಕೆಲವು ಯಜ್ಞಗಳಿಗೆ ದಕ್ಷಿಣಾಭಿಮುಖವಾಗಿ ಒಂದು ವೇದಿ, ಉತ್ತರಾಭಿಮುಖವಾಗಿ ಒಂದು ವೇದಿ ಹೀಗೆ ಎರಡು ವೇದಿಗಳಿರುತ್ತವೆ. ಕೆಲವು ಯಜ್ಞಗಳಿಗೆ ಪೂರ್ವಾಭಿಮುಖವಾಗಿ ದಕ್ಷಿಣದಲ್ಲೊಂದು, ಉತ್ತರದಲ್ಲಿ ಒಂದು ಹೀಗೆ ಎರಡು ವೇದಿಗಳಿರುತ್ತವೆ. ಋತ್ವಿಜರು ಎರಡು ಪಟ್ಟು ಇರುತ್ತಾರೆ. ಸರ್ವತೋಮುಖವೆಂಬ ಸೋಮಯಾಗದಲ್ಲಿ ನಾಲ್ಕು ದಿಕ್ಕುಗಳಿಗೂ ಆಯಾ ದಿಕ್ಕಿಗೆ ಅಭಿಮುಖವಾಗಿ ನಾಲ್ಕು ವೇದಿಗಳಿರುತ್ತವೆ. ಎಲ್ಲ ವೇದಿಗಳಲ್ಲಿಯೂ ಏಕಕಾಲದಲ್ಲಿಯೇ ಯಜ್ಞದ ಅನುಷ್ಠಾನವು ನಡೆಯುತ್ತದೆ. ಈ ನಾಲ್ಕು ವೇದಿಗಳಿಗೆ ನಾಲ್ಕು ಪಟ್ಟು ಋತ್ವಿಜರು. ಕೆಲವು ಯಾಗಗಳಲ್ಲಿ ದಾಸಿಯರಿಂದ ನೃತ್ಯ-ಗಾಯನಗಳಿರುತ್ತವೆ. ದುಂದುಭಿವಾದ್ಯದ ವಾದನವಿರುತ್ತದೆ. ಕೆಲವು ಯಾಗಗಳಲ್ಲಿ ಋತ್ವಿಜರಿಗೆ ಉನ್ನತಾಸನ (ಕುರ್ಚಿ) ಗಳಿರುತ್ತವೆ. ವೇದದಲ್ಲಿ ಒಂದೊಂದು ಕಡೆ ಇರುವ ಮಂತ್ರಗಳನ್ನು ಹೇಳುತ್ತಾ ಅನೇಕ ಸಹಸ್ರ ಇಟ್ಟಿಗೆಗಳನ್ನು ಇಟ್ಟು ಶ್ಯೇನಪಕ್ಷಿ ಮುಂತಾದ ಆಕೃತಿಯು ರೂಪುಗೊಳ್ಳುವಂತೆ ಮಾಡುವ ಕೌಶಲ್ಯವು ದರ್ಶನೀಯವಾಗಿರುತ್ತದೆ. ಸೋಮಯಾಗದಲ್ಲಿ ಸ್ತೋತ್ರ ಮತ್ತು ಶಸ್ತ್ರಗಳನ್ನು ಹೇಳುವ ಕೌಶಲವೂ ಸಾಧಾರಣವಾದುದಲ್ಲ. ಮಹಾವಾಲಭಿತ್ ಮುಂತಾದ ಶಸ್ತ್ರಗಳಲ್ಲಿ ವೇದಮಂತ್ರದ ಒಂದು ಪಾದವನ್ನು ಒಂದು ಕಡೆ, ಇನ್ನೊಂದು ಪಾದವನ್ನು ಇನ್ನೊಂದು ಕಡೆ ಸಮಾವೇಶಗೊಳಿಸಿ, ಒಂದು ಅರ್ಧಮಂತ್ರವನ್ನು ಒಂದು ಸ್ಥಾನದಲ್ಲಿ, ಇನ್ನೊಂದು ಅರ್ಧಮಂತ್ರವನ್ನು ಮತ್ತೊಂದು ಸ್ಥಾನದಲ್ಲಿ ಸೇರಿಸಿ ಹೇಳುವುದು - ಇವೇ ಮೊದಲಾದ ಕಷ್ಟಸಾಧ್ಯವಾದ ಚಾತುರ್ಯಗಳು ಯಜ್ಞದಲ್ಲಿ ಮನಸೆಳೆಯುತ್ತವೆ.



ಚಯನಗಳಲ್ಲಿಯೂ ಸಹ ಇಟ್ಟಿಗೆಗಳ ಆಕಾರವೂ, ಅದರಿಂದ ಶ್ಯೇನಪಕ್ಷಿಯ ಆಕೃತಿ, ರಥಚಕ್ರದ ಆಕೃತಿ ಇವುಗಳ ನಿರ್ಮಾಣ - ಇವು ನಮ್ಮ ಪೂರ್ವಜರಿಗಿದ್ದ ವಾಸ್ತುಜ್ಞಾನ ಮತ್ತು ರೇಖಾಶಾಸ್ತ್ರ(ಜಾಮಿಟ್ರಿ)ದ ಜ್ಞಾನದ ಪರಿಚಯವನ್ನು ನಮಗೆ ಮಾಡಿಸುವುವು. ಇಟ್ಟಿಗೆಗಳು ತ್ರಿಕೋಣಾಕೃತಿಯಲ್ಲಿಯೂ, ಚೌಕಾಕಾರವಾಗಿಯೂ, ಪಂಚಕೋನಾಕೃತಿಯಿಂದಲೂ (pentagon) ರಚಿತವಾಗಿರುತ್ತವೆ. ಸಹಸ್ರಚಯನದಲ್ಲಿ ಐದು ಪ್ರಸ್ತಾರಗಳಿದ್ದು ಒಂದೊಂದು ಪ್ರಸ್ತಾರಕ್ಕೆ ಇನ್ನೂರು ಇಟ್ಟಿಗೆಗಳನ್ನು ಬಳಸುತ್ತಾರೆ. ೧,೩, ಮತ್ತು ೫ನೆಯ ಪ್ರಸ್ತಾರವಿನ್ಯಾಸವು ಸಮಾನವಾಗಿರುತ್ತದೆ. ೨ ಮತ್ತು ೪ನೆಯ ಪ್ರಸ್ತಾರವಿನ್ಯಾಸವು ಸಮಾನವಾಗಿರುತ್ತದೆ. ಐದನೆಯ ಪ್ರಸ್ತಾರದಲ್ಲಿ ಐದು ಇಟ್ಟಿಗೆಗಳು ಹೆಚ್ಚು ಇರುತ್ತವೆ. ನಿರ್ದಿಷ್ಟರೀತಿಯ ವಿನ್ಯಾಸ, ನಿರ್ದಿಷ್ಟ ಆಕೃತಿಯ ನಿರ್ಮಿತಿ ಇವುಗಳು ಚಯನಗಳಲ್ಲಿ ನಮ್ಮ ಗಮನಸೆಳೆಯುತ್ತವೆ.

ವಾಜಪೇಯಯಾಗದಲ್ಲಿ ಎರಡೆರಡು ಅಶ್ವಗಳನ್ನು ಕಟ್ಟಿದ ರಥಗಳನ್ನೋಡಿಸುವ ಸ್ಪರ್ಧೆಯಿದೆ. ಯಜಮಾನನು ಕೂರುವ ರಥಕ್ಕೆ ಮಾತ್ರ ಮೂರು ಅಶ್ವಗಳಿರುತ್ತವೆ. ಹದಿನಾರು ರಥಗಳಿಗೆ ಎರಡೆರಡು ಅಶ್ವಗಳಿದ್ದು ಯಜಮಾನನ ರಥವು ವೇಗದಿಂದ ಇತರ ರಥಗಳನ್ನು ಹಿಮ್ಮೆಟ್ಟಿಸುವ ದೃಶ್ಯವು ವೈದಿಕ ವಿಧಿಕಲಾಪಗಳಲ್ಲಿಯೂ ಮನೋರಂಜನೆಯನ್ನು ಕಾಣುವ ನಮ್ಮ ಪೂರ್ವಜರ ಪ್ರವೃತ್ತಿಗೆ ದೃಷ್ಟಾಂತವಾಗಿದೆ.

ಹೀಗೆ ಅನೇಕ ಬಗೆಯ ವೈಶಿಷ್ಟ್ಯಗಳಿಂದ ಕೂಡಿದ ಯಜ್ಞಗಳು ಮಹಾಸಾಗರದಂತೆ ವಿಶಾಲವಾಗಿದೆ. ನೂರಾರು ಹವಿರ್ಯಜ್ಞಗಳು, ನೂರಾರು ಸೋಮಯಾಗಗಳು, ನೂರಾರು ಪಾಶುಕಯಾಗಗಳು ವೇದದಲ್ಲಿ ಹೇಳಲ್ಪಟ್ಟಿವೆ. ಅನುಬಂಧ-೨ ರಲ್ಲಿ ಅನೇಕ ಬಗೆಯ ಹವಿರ್ಯಜ್ಞಗಳನ್ನೂ, ಸೌಮಿಕಗಳನ್ನೂ, ಕೃಷ್ಣಯಜುರ್ವೇದದಲ್ಲಿ ನಿರೂಪಿತವಾಗಿರುವ ಯಜ್ಞಗಳನ್ನೂ ನಿರ್ದೇಶಿಸಲಾಗಿದೆ. ಅಲ್ಲದೇ ಯಾಗಗಳು ಯಾವುದೋ ಪ್ರಾಚೀನ ಕಾಲದ್ದಾಗಿರಬಹುದು ಎಂಬ ವಿಚಾರವೂ ಬರಬಹುದು. ಆದರೆ ಈ ಶತಮಾನದಲ್ಲಿಯೇ ಅನೇಕ ಯಜ್ಞಗಳು ಅನುಷ್ಠಿತವಾಗಿವೆ. ಅನುಬಂಧ-೩ರಲ್ಲಿ ಈ ಶತಮಾನದಲ್ಲಿಯೇ ಅನುಷ್ಠಿತವಾಗಿರುವ ಯಜ್ಞಗಳನ್ನು ನಿರ್ದೇಶಿಸಿ ತಿಳಿಸಲಾಗಿದೆ.



ನಮ್ಮ ಪರಂಪರೆಯಲ್ಲಿ ನಾವು ಅನುಷ್ಠಿಸಿಕೊಂಡು ಬರುತ್ತಿರುವ ಯಜ್ಞಗಳ ಬಗ್ಗೆ ಇಂದು ವಿದೇಶೀಯರೂ ಸಹ ಅಚ್ಚರಿಯಿಂದ ಗಮನಿಸಿ ಪರೀಕ್ಷಿಸುತ್ತಿರುವುದನ್ನು ಕಂಡಾಗ ಯಜ್ಞಗಳ ಭೌತಿಕವಾದ ಪರಿಣಾಮವೂ ಕಡಿಮೆಯೇನಲ್ಲ ಎನಿಸುತ್ತದೆ. ಅಗ್ನಿಹೋತ್ರವನ್ನು ಅನುಷ್ಠಿಸುವುದರಿಂದ ವಾತಾವರಣದಲ್ಲಿನ ಮಾಲಿನತೆಯು ದೂರಾಗುವುದೆಂದೂ, ವಾಯುವು ಪರಿಶುದ್ಧವಾಗುವುದೆಂದೂ ಇತ್ತೀಚೆಗೆ ವಿಜ್ಞಾನಿಗಳು ಶೋಧನೆಯಿಂದ ಕಂಡಿದ್ದಾರೆ. ಅಂತೆಯೇ **ಅಗ್ನಿಹೋತ್ರಥೆರೆಪಿ** ಎಂಬ ಹೆಸರಿನಲ್ಲಿ ಚಿಕಿತ್ಸಾಕ್ರಮವೂ ಆರಂಭಗೊಂಡಿದೆಯೆಂದು ಕೇಳಿರುತ್ತೇವೆ. ಭೋಪಾಲ್‌ನಲ್ಲಿ ಇತ್ತೀಚೆಗೆ ನಡೆದ ಗ್ಯಾಸ್ ದುರಂತದಲ್ಲಿ ಅಗ್ನಿಹೋತ್ರವನ್ನು ಅನುಷ್ಠಿಸುತ್ತಿದ್ದವರ ಮನೆಯಲ್ಲಿ ದುಷ್ಪರಿಣಾಮವು ಕಡಿಮೆಯೆಂದೂ ಕೇಳಿಬಂದಿದೆ.

ನಮ್ಮ ಪೂರ್ವಜರಾದ ಋಷಿಮುನಿಗಳಿಂದ ನಿರ್ದೇಶಿಸಿದ ರೀತಿಯ ಅನುಷ್ಠಾನವು ಪಾರಮಾರ್ಥಿಕವಾಗಿ ಪ್ರಯೋಜನಕಾರಿಯಾಗಿದ್ದರೂ ಲೌಕಿಕ ಪ್ರಯೋಜನಗಳೂ ಇಲ್ಲದಿಲ್ಲ. ವೈದಿಕಕರ್ಮಾಂಗವಾಗಿ ಮಾಡಬೇಕಾದ ಪ್ರಾಣಾಯಾಮವಿಧಿಯಿಂದ ಶರೀರದ ಶೋಧನೆಯು ಆಗಿಯೇ ಆಗುತ್ತದೆ. ಆದುದರಿಂದ ವಿಶ್ವಾಸಪೂರ್ವಕವಾದ ಅನುಷ್ಠಾನವು ಮುಖ್ಯಫಲವನ್ನೀಯು ವುದಲ್ಲದೆ ಉಳಿದ ಪ್ರಯೋಜನವನ್ನೂ ನೀಡಿಯೇ ನೀಡುತ್ತದೆ.

ಅನುಷ್ಠಾನವು ಮಾತ್ರವಲ್ಲದೆ ಯಜ್ಞಗಳ ಬಗ್ಗೆ ತಿಳಿಯುವುದೂ ಪುಣ್ಯಪ್ರದವೇ ಆಗಿದೆ. ಏಕೆಂದರೆ ಜಗತ್ತಿನ ಆಧುನಿಕ ಜೀವನಸಂದರ್ಭಗಳು ಬದಲಾವಣೆಯಾಗಿರುವುದರಿಂದ ಬದಲಾದ ಸನ್ನಿವೇಶದಲ್ಲಿಯೂ ಸಹ ಯಜ್ಞಾನುಷ್ಠಾನದ ಫಲವು ದೊರೆಯಬೇಕಾದರೆ ಯಜ್ಞಗಳ ಪ್ರಕ್ರಿಯೆಯ ಬಗ್ಗೆ ತಿಳಿಯುವುದು ಅಗತ್ಯ. ಯಜ್ಞಗಳ ಬಗ್ಗೆ ತಿಳಿಯುವುದರಿಂದಲೂ ಶ್ರೇಯಸ್ಸು ಸ್ವಲ್ಪಮಟ್ಟಿಗೆ ದೊರೆತೇ ದೊರೆಯುವುದು. ವೇದಾಧ್ಯಯನವನ್ನು ಮಾಡಿರುವವರಿಗೂ ಸಹ ಇಂದಿನ ಜೀವನಸನ್ನಿವೇಶಗಳಲ್ಲಿ ವೇದಾರ್ಥವನ್ನು ವಿಶದವಾಗಿ ತಿಳಿಯಲು ಅನುಕೂಲ ಸಾಲದು. ಅಂತೆಯೇ ಯಜ್ಞಗಳನ್ನು ತಾವೇ ಅನುಷ್ಠಿಸುವುದಂತೂ ಇನ್ನೂ ದುರ್ಲಭ. ಅಂತಹವರೂ ಸಹ



**ಯಂ ಯಂ ಕ್ರತುಮಧೀತೇ ತೇನ ತೇನಾಸ್ಯೇಷ್ಟಂ ಭವತಿ ... ...**

— ತೈತ್ತಿರೀಯ ಆರಣ್ಯಕ 2. 15

ಎಂಬ ಶ್ರುತಿವಾಕ್ಯದಂತೆ ಯಜ್ಞದ ಫಲವನ್ನು ಪಡೆಯುವರು. ಯಜ್ಞಗಳು ಮೂರು ಬಗೆಯಾಗಿದ್ದು ಅವುಗಳಿಗೆ ಕಾಯಿಕ, ಮಾನಸಿಕ ಮತ್ತು ವಾಚಿಕ ಗಳೆಂದು ಹೆಸರು. ತಾನೇ ಅನುಷ್ಠಾನವನ್ನು ಮಾಡಲು ಅಸಮರ್ಥನಾದವನು ಅಗ್ನಿಷ್ಟೋಮ, ವಾಜಪೇಯ, ರಾಜಸೂಯ, ಅಶ್ವಮೇಧ ಮುಂತಾದ ಯಜ್ಞ ಗಳನ್ನು ನಿರೂಪಿಸುವ ಮಂತ್ರ-ಬ್ರಾಹ್ಮಣಭಾಗಗಳನ್ನು ಹೇಳುವ ಮಾತ್ರ ದಿಂದಲೇ ವಾಚಿಕ ಯಜ್ಞವನ್ನು ಅನುಷ್ಠಿಸಿದಂತಾಗಿ ಫಲವನ್ನು ಪಡೆಯು ತ್ತಾನೆ. ವೇದಾಧ್ಯಯನದೊಡನೆ ಯಾರಿಗೆ ಮಂತ್ರಾರ್ಥವೂ ತಿಳಿದಿದೆಯೋ ಅಂತಹವರು ಅರ್ಥವನ್ನು ಅನುಸಂಧಾನ ಮಾಡಿದರೆ ಮಾನಸಿಕಯಜ್ಞವನ್ನು ಅನುಷ್ಠಿಸಿದಂತಾಗುತ್ತದೆ. ಯಜ್ಞವನ್ನು ಅನುಷ್ಠಿಸಲು ಸಾಮರ್ಥ್ಯವುಳ್ಳವರು ಕಾಯಿಕವಾಗಿಯೇ ಅನುಷ್ಠಾನವನ್ನು ಮಾಡುತ್ತಾರೆ. ಅಂತೂ ಯಜ್ಞಗಳ ಬಗ್ಗೆ ವಿಸ್ತಾರವಾಗಿ ತಿಳಿಯುವುದು ವೇದಾಧ್ಯಯನ ಮಾಡಿದವರಿಗೂ, ಮಾಡದವರಿಗೂ ಫಲಪ್ರದವೇ. ಆದುದರಿಂದ ಯಜ್ಞಾನುಷ್ಠಾನದ ಬಗ್ಗೆ ತಿಳಿಯುವುದು ಅಗತ್ಯವೇ ಸರಿ.

## ರಾಷ್ಟ್ರೀಯ ವೈಶಿಷ್ಟ್ಯ

ಜಗತ್ತಿನಲ್ಲಿರುವ ಪ್ರತಿಯೊಂದು ರಾಷ್ಟ್ರಕ್ಕೂ ತನ್ನದೇ ಆದ ವೈಶಿಷ್ಟ್ಯವಿದೆ. ಭಾರತೀಯರಾದ ನಮಗೆ ಅನಾದಿಯಾದ, ಅನುಪಮವಾದ ವೈದಿಕ ಪರಂಪರೆ ಇರುವುದೇ ನಮ್ಮ ವೈಶಿಷ್ಟ್ಯ. ಭೌತಿಕವಿದ್ಯೆಗಳಲ್ಲಿ ಇಂದು ಪಾಶ್ಚಾತ್ಯ ಜಗತ್ತು ನಾಗಾಲೋಟದಲ್ಲಿ ಮುಂದುವರಿಯುತ್ತಿರುವುದು ನಿಜ. ಅತ್ಯಂತ ನವೀನವಾದ ಕಂಪ್ಯೂಟರಿನಂತಹ ಯಂತ್ರಗಳ ವಿಷಯದಲ್ಲಿಯೂ ಸಂಸ್ಕೃತ ಭಾಷೆಯನ್ನೂ, ಪಾಣಿನಿಯ ಸೂತ್ರಪದ್ಧತಿಯನ್ನೂ ಅನ್ವಯಿಸಲು ಬರುತ್ತದೆಯೆಂಬುದನ್ನು ನಿರ್ವಿಕಾರದೃಷ್ಟಿಯಿಂದ ಪರಿಶೀಲಿಸಿದಾಗ ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಅದೆಷ್ಟು ಸಂಗತಿಗಳು ನವೀನ ಶೋಧನೆಗಳಿಗೆ ಅನ್ವಯವಾಗುವಂತೆ ಇವೆಯೋ ಅವುಗಳನ್ನು ಕಂಡುಹಿಡಿಯಬೇಕಾಗಿದೆ.



ಅಂತೆಯೇ ಯಜ್ಞಗಳೂ ಸಹ ನಮ್ಮ ರಾಷ್ಟ್ರೀಯ ವೈಶಿಷ್ಟ್ಯವೇ ಸರಿ. ಮನುಷ್ಯನು ಅಗ್ನಿಯೊಡನೆಯೇ ಜನಿಸಿ, ಬಾಲ್ಯದಿಂದಲೂ ಆಯುಷ್ಯವಿಡೀ ಒಂದಲ್ಲ ಒಂದು ರೂಪದಲ್ಲಿ ಯಜ್ಞಕಾಮಧೇನುವನ್ನು ನಿಷ್ಠೆಯಿಂದಾಶ್ರಯಿಸಿರುತ್ತಾನೆ. ಹೀಗೆ ಆಶ್ರಯಿಸಿ ಕೃತಕೃತ್ಯತೆಯ ಮತ್ತು ಧನ್ಯತೆಯ ಅನುಭವವನ್ನು ಪಡೆದ ನಮ್ಮ ಪ್ರಾಚೀನರ ಅನುಷ್ಠಾನ ಸಾಮರ್ಥ್ಯವು ವರ್ಣಿಸಲಸದಳವಾಗಿದೆ. ಪುರುಷಪ್ರಯತ್ನದೊಡನೆ ದೈವವನ್ನು ನಿಷ್ಠೆಯಿಂದ ನಂಬಿ ಬಂದ ನಮ್ಮ ಪೂರ್ವಜರು ದೇಶಕ್ಕೆ ವೈರಿಗಳು ಎರಗಿದಾಗ, ಮಳೆಯ ಅಭಾವವುಂಟಾದಾಗ, ಆಹಾರಗಳ ಕೊರತೆ ಉಂಟಾದಾಗ, ರೋಗದಿಂದ ಪೀಡಿತನಾದಾಗ, ಸಂತಾನಪ್ರಾಪ್ತಿಯಾಗದಿದ್ದಾಗ ಇಂದ್ರಿಯಗಳಿಗೆ ಅಗೋಚರವಾದ ದೈವವನ್ನು ನಂಬಿದ್ದಲ್ಲದೆ ವೈದಿಕ ಸಿದ್ಧಾಂತದ ತಳಹದಿಯಾದ ಕರ್ಮಸಿದ್ಧಾಂತವನ್ನು ನಂಬಿದ್ದರು. ಅಂತೆಯೇ ಅನೇಕ ಜನ್ಮಗಳಿಂದ ಬಂದಿರಬಹುದಾದ ಪಾಪನಿವಾರಣೆಗಾಗಿ ಯಜ್ಞಗಳನ್ನು ಅನುಷ್ಠಿಸಿ ನಮ್ಮ ರಾಷ್ಟ್ರೀಯ ವೈಶಿಷ್ಟ್ಯವನ್ನು ಮೆರೆದಿದ್ದಾರೆ. ಪುರುಷ ಪ್ರಯತ್ನವು ಎಲ್ಲೆಡೆ ಫಲಿಸುತ್ತದೆಯೆಂದೇನೂ ಇಲ್ಲ. ಅಂತಹ ಸಂದರ್ಭಗಳಲ್ಲಿ ವೈದಿಕವಾದ ಯಜ್ಞಾನುಷ್ಠಾನಗಳು ಫಲವನ್ನು ಚೆನ್ನಾಗಿ ನೀಡಿರುವ ಸಂದರ್ಭ ಗಳೂ ಇಲ್ಲದಿಲ್ಲ. ಆದುದರಿಂದ ಯಜ್ಞಗಳ ಅನುಷ್ಠಾನವು ಕೇವಲ ಫಲವನ್ನೀಯುವುದಷ್ಟೇ ಅಲ್ಲದೆ ಹಲವು ಸಂದರ್ಭಗಳಲ್ಲಿ ಪುರುಷಪ್ರಯತ್ನದ ವೈಫಲ್ಯದಿಂದ ಮನಸ್ಸಿಗೆ ಉಂಟಾದ ದುಗುಡ-ದುಮ್ಮಾನಗಳನ್ನು ದೂರ ಮಾಡುವ ಸಾಧನವೂ ಅಹುದು.

ಇಂದು ಯಜ್ಞಯಾಗಗಳನ್ನು ಸಂಪೂರ್ಣವಾಗಿ ಅನುಷ್ಠಿಸಿ ನಮ್ಮ ಪೂರ್ವಜರಷ್ಟು ಕೃತಕೃತ್ಯತೆಯ ಅನುಭವವನ್ನು ನಾವು ಪಡೆಯಲಾರೆ ವಾದರೂ ಪೂರ್ವಕಾಲದಲ್ಲಿ ಹೇಗೆ ಯಜ್ಞಗಳು ಅನುಷ್ಠಿಸಲ್ಪಟ್ಟಿರಬಹುದೆಂಬ ಸ್ಥೂಲ ಕಲ್ಪನೆಯನ್ನು ಮನಸ್ಸಿಗೆ ತಂದುಕೊಂಡು ಅದರ ಮೂಲಕವಾಗಿ ಆಂಶಿಕವಾದ ಶ್ರೇಯಃಪ್ರಾಪ್ತಿಯನ್ನು ಪಡೆಯಲು ಈ ವಿವರಣೆಯು ಸಹಾಯಕವಾಗುವುದೆಂದು ನಂಬಿ ಯಜ್ಞಗಳ ಈ ಸ್ಥೂಲಪರಿಚಯವನ್ನು ನೀಡಲಾಗಿದೆ.



# ಅನುಬಂಧ-೧

ನಿರೂಢಪಶುಬಂಧ, ಸೌತ್ರಾಮಣೀ, ಎಲ್ಲಾ ಪ್ರಕೃತಿ ಮತ್ತು ವಿಕೃತಿ ಸೋಮಯಾಗಗಳಲ್ಲಿಯೂ ಆಜ್ಯ, ಪೃಷದಾಜ್ಯ, ಚರು, ಪುರೋಡಾಶ, ಸೋಮ, ಆಮಿಕ್ಷಾ-ವಾಜಿನ ಮುಂತಾದವುಗಳಂತೆಯೇ ಪಶುವಿನ ವಪೆ ಮತ್ತು ಅದರ ಹನ್ನೊಂದು ಅಂಗಗಳು ಹವನೀಯದ್ರವ್ಯಗಳಾಗಿ ಶ್ರುತಿಯಲ್ಲಿ ಹೇಳಲ್ಪಟ್ಟಿವೆ. ಈ ಪಾಶುಕಹವಿಸ್ಸಿಗಾಗಿ ಪಶುವಿನ ಆಲಂಭನ ಮತ್ತು ಸಂಜ್ಞಪನಗಳು ವೇದದಲ್ಲಿಯೇ ಹೇಳಲ್ಪಟ್ಟಿವೆ.

ಕೆಲವರು ವೇದದಲ್ಲಿ ಪಶುವಧೆಯು ಹೇಳಿಲ್ಲವೆಂದೂ, ವೇದವಾಕ್ಯಗಳಿಗೆ ಅಪಾರ್ಥವನ್ನು ಮಾಡಿ ಈ ಹಿಂಸಾಕೃತ್ಯವನ್ನು ನಡೆಸುವುದು ತೀರಾ ಅನ್ಯಾಯವೆಂದೂ, ಅಲ್ಲದೆ **ಅಹಿಂಸಾ ಪರಮೋ ಧರ್ಮಃ** ಎಂದು ತಿಳಿಯುವ ನಮ್ಮ ಸಂಸ್ಕೃತಿಗೆ ಪಾಶುಕಯಜ್ಞಾನುಷ್ಠಾನವು ಅವಹೇಳನವೆಂದೂ ಹೇಳುತ್ತಾರೆ. ಆದುದರಿಂದ ಯಜ್ಞಗಳಲ್ಲಿ ಪಾಶುಕಹವಿಸ್ಸನ್ನು ನೀಡುವುದು ಯುಕ್ತವೇ? ಎಂಬುದನ್ನು ನಿರ್ವಿಕಾರವಾಗಿಯೂ, ಪ್ರಸಕ್ತ ಜಗತ್ತಿನ ಸಂದರ್ಭಗಳ ಜೊತೆಯಲ್ಲಿ ತುಲನೆ ಮಾಡಿಯೂ ವಿಮರ್ಶಿಸಬೇಕಾಗಿದೆ. ವೇದದ ನೆಲೆಗಟ್ಟಿನಲ್ಲಿಯೂ, ವ್ಯವಹಾರದ ದೃಷ್ಟಿಯಿಂದಲೂ ಇದನ್ನು ಗಮನಿಸೋಣ.

ಭಾರತೀಯರಾದ ನಮಗೆ ನಮ್ಮ ಎಲ್ಲಾ ಮಾಡು-ಬೇಡಗಳಿಗೆ (ವಿಧಿ-ನಿಷೇಧಗಳಿಗೆ) ವೇದವೇ ಪರಮಪ್ರಮಾಣವಾದ ಗ್ರಂಥ. ವೇದದಲ್ಲಿ ಯಜ್ಞದ ಪ್ರಸಂಗಗಳು ಬಂದಾಗ ಸ್ಪಷ್ಟವಾದ ಶಬ್ದಗಳಲ್ಲಿ ಪಶುವಿನ ಆಲಂಭನವು ನಿರೂಪಿತವಾಗಿದೆ.

**ಪಶುಮಾಲಭ್ಯ ಪುರೋಡಾಶಂ ನಿರ್ವಪತಿ। ವಾಯವ್ಯಗ್ಂ ಶ್ವೇತಮಾಲಭೇತ ಭೂತಿಕಾಮಃ। ತಾರ್ಪ್ಯೇಣಾಶ್ವಗ್ಂ ಸಂಜ್ಞಪಯಂತಿ।**

ಈ ವಿಧಿವಾಕ್ಯಗಳಲ್ಲಿ **ಆಲಭ್ಯ, ಸಂಜ್ಞಪಯಂತಿ** ಈ ಸ್ಪಷ್ಟವಾದ ಶಬ್ದಗಳು ಪಶುವಿನ ಹವಿಸ್ಸನ್ನು ಅರ್ಪಿಸಬೇಕೆಂಬುದನ್ನು ತಿಳಿಸುತ್ತಿವೆ. ಈ ಶಬ್ದಗಳಿಗೆ



ಅರ್ಥವು ಬೇರೆಯೆಂದೂ, ವೇದದಲ್ಲಿ ಬರುವ ಪಶು ಮುಂತಾದ ಶಬ್ದಗಳಿಗೆ ಧಾನ್ಯ ಎಂಬುದಾಗಿ ಅರ್ಥವನ್ನು ಗ್ರಹಿಸಬೇಕೆಂದೂ ಕೆಲವರು ಹೇಳುವುದುಂಟು. ಆದರೆ ಯಾವುದೇ ಶಬ್ದಕ್ಕೆ ಪ್ರಸಿದ್ಧವಾದ ಅರ್ಥವನ್ನು ಬಿಟ್ಟು ಅಪ್ರಸಿದ್ಧವಾದ ಅರ್ಥವನ್ನು ಕಲ್ಪಿಸುವುದು ನಮ್ಮೆಲ್ಲ ಭಾರತೀಯಶಾಸ್ತ್ರಗಳ ಪ್ರಕ್ರಿಯೆಗೆ ಹೊರತಾದದ್ದು.

ಇನ್ನು ಕೆಲವರು ವೇದದಲ್ಲಿ ಮಂತ್ರಭಾಗಗಳಿಗೆ ಮಾತ್ರ ಪ್ರಾಮಾಣ್ಯವೆಂದೂ, ಪಶುವಿನ ಆಲಂಭನವು ಬ್ರಾಹ್ಮಣವಾಕ್ಯಗಳಲ್ಲಿ ತೋರುವುದರಿಂದ ಬ್ರಾಹ್ಮಣವಾಕ್ಯಗಳಿಗೆ ವೇದತ್ವವಿಲ್ಲವೆಂದೂ ಅಭಿಪ್ರಾಯಪಡುತ್ತಾರೆ. ಈ ವಿಚಾರವೂ ಸರಿಯಾದುದಲ್ಲ. **ಮಂತ್ರಬ್ರಾಹ್ಮಣಯೋರ್ವೇದನಾಮಧೇಯಮ್** ಎಂಬ ಸೂತ್ರವಚನವು ಬ್ರಾಹ್ಮಣಗಳಿಗೂ ಶ್ರುತಿತ್ವ ಇದೆ ಎಂಬುದನ್ನು ದೃಢಪಡಿಸುತ್ತದೆ. ಅಲ್ಲದೆ ವೇದದ ಒಂದು ಅಂಶವು ಪ್ರಮಾಣವಾಗಿ ಮತ್ತೊಂದಂಶವು ಪ್ರಮಾಣವಾಗದಿದ್ದರೆ ಅದು ಏಕದೇಶ ಪ್ರಾಮಾಣ್ಯವಾದವಾಗಿ ಯುಕ್ತಿಸಹವೆನಿಸುವುದಿಲ್ಲ. ಆದುದರಿಂದ ವೇದ ವಾಕ್ಯಗಳಿಗೆ ನೇರವಾದ ಅರ್ಥವನ್ನು ಗ್ರಹಿಸುವುದು ಉಚಿತ.

ವೇದದಲ್ಲಿಯೇ ಒಂದು ಆಖ್ಯಾನವಿದ್ದು ಅದರಲ್ಲಿ ವಪೆಯ ಪ್ರಸಂಗವು ಉಲ್ಲೇಖವಾಗಿದೆ.

**ಪ್ರಜಾಪತಿರ್ವಾ ಇದಮೇಕ ಆಸೀತ್.....ಪ್ರಜಾಃ ಪಶೂನಸೃಜತ...**

— ತೈ.ಸಂ. 2.1.1

ಪ್ರಜಾಪತಿಯು ಪ್ರಪಂಚಕ್ಕೆ ಜೀವಕೋಟಿಯನ್ನು ಸೃಷ್ಟಿಸುವ ಸಂಕಲ್ಪ ಮಾಡಿ ಯಾಗವೊಂದನ್ನು ಅನುಷ್ಠಿಸಿದನು. ವಪಾಯಾಗದ ಸ್ಥಾನದಲ್ಲಿ ತನ್ನ ವಪೆಯನ್ನು ತೆಗೆದು ಯಜ್ಞಕುಂಡದಲ್ಲಿ ಅರ್ಪಿಸಿದನು. ನಂತರ ಕೋಡುಗಳಿಲ್ಲದ ಪಶುವಿನ (ತೂಪರ) ಜನ್ಮವಾಯಿತು. ನಂತರ ಯಜ್ಞಗಳಲ್ಲಿ ಪಶುವಿನ ವಪೆಯನ್ನು ತೆಗೆದು ಯಾಗ ಮಾಡುವ ಕ್ರಮ ಪ್ರಾರಂಭವಾಯಿತು. ಈ ಅರ್ಥವಾದದಿಂದ ವಪಾಹೋಮವು ಪ್ರಶಸ್ತವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗೆ ಪಾಶುಕಹವಿಸ್ಸಿನ ಮೂಲದ ಬಗ್ಗೆ ವೇದದಲ್ಲಿಯೇ ಉಲ್ಲೇಖವಿದೆ. ವೇದದಲ್ಲಿರುವ **ವಾಯವ್ಯಂ ಶ್ವೇತಮಾಲಭೇತ,**



**ಅಗ್ನೀಷೋಮೀಯಂ ಪಶುಮಾಲಭೇತ, ಮಾರುತ್ಯಾ ಪ್ರಚರ್ಯ। ಏತಾನ್ ಸಂಜ್ಞಪಯೇತ್** ಇತ್ಯಾದಿ ನೂರಾರು ವಚನಗಳು ಪಶ್ವಾಲಂಭನವನ್ನು ಸ್ಪಷ್ಟವಾಗಿ ತಿಳಿಸಿವೆ.

ಶ್ರುತಿಯಲ್ಲಿ ಮಾತ್ರವಲ್ಲದೆ ಬೋಧಾಯನ ಮುಂತಾದ ಆಚಾರ್ಯರ ಸೂತ್ರವಚನಗಳೂ ಪಶ್ವಾಲಂಭನಕ್ಕೆ ಪ್ರಮಾಣವಾಗಿವೆ.

**ಪಶುಂ ಪಲ್ಪೂಲಿತಂ ಅಂತರೇಣ ಚಾತ್ವಾಲೋತ್ಕರೌ ಪ್ರಪಾದ್ಯ**

ಎಂಬ ಸೂತ್ರವಚನದಂತೆ ಚಾತ್ವಾಲ ಮತ್ತು ಉತ್ಕರಗಳ ನಡುವೆ ಪಶುವನ್ನು ತರುತ್ತಾರೆ. ನಂತರ ಶಾಮಿತ್ರಾಗಾರದಲ್ಲಿ

**ಪ್ರತೀಚೀನಶಿರಸಮುದೀಚೀನಪಾದಂ ನಿಘ್ನಂತಿ।**

ಎಂಬ ಸೂತ್ರವಚನದಂತೆ ಪಶ್ಚಿಮಕ್ಕೆ ತಲೆಯನ್ನು ಮಾಡಿ ಉತ್ತರಕ್ಕೆ ಪಾದವನ್ನುಮಾಡಿ ಆಲಂಭನವನ್ನು ಮಾಡುತ್ತಾರೆ. ಈ ಬೋಧಾಯನ ಶ್ರೌತಸೂತ್ರವಚನಗಳು ಪಶ್ವಾಲಂಭನವನ್ನು ಸ್ಪಷ್ಟವಾಗಿ ತಿಳಿಸುತ್ತಿವೆ. ಹೀಗೆ ಶ್ರುತಿ-ಸೂತ್ರವಚನಗಳಿಂದಲೂ ಪಾಶುಕ ಹವಿಸ್ಸು ಸಮರ್ಥಿಸಲ್ಪಟ್ಟಿದೆ.

ಯುಕ್ತಿಯ ನೆಲೆಗಟ್ಟಿನಲ್ಲಿ ನಿಂತು ಪಾಶುಕಹವಿಸ್ಸನ್ನು ಕುರಿತು ವಿಮರ್ಶಿಸೋಣ. **ಮಾ ಹಿಂಸ್ಯಾತ್ಸರ್ವಾ ಭೂತಾನಿ, ಅಹಿಂಸಾ ಪರಮೋ ಧರ್ಮಃ** ಎಂಬ ಮಾತುಗಳು ಶ್ರುತಿಯ ಸಾರಾಂಶವನ್ನು ಹೇಳುವ ಮಾತುಗಳೇ ಆಗಿವೆ. ಶ್ರುತಿಯಲ್ಲಿಯೇ ಹಿಂಸೆಯ ನಿಷೇಧವನ್ನು ತಿಳಿಸಿ, ಶ್ರುತಿಯಲ್ಲಿಯೇ ಪಶುವಿನ ಆಲಂಭನವನ್ನು ಮಾಡಬೇಕೆಂಬ ಮಾತು ಬಂದಾಗ ಪರಸ್ಪರ ವಿರುದ್ಧವಾದ ಮಾತುಗಳು ಬಂದಂತಾದವು. ಈ ಎರಡೂ ಮಾತುಗಳ ತಾತ್ಪರ್ಯವನ್ನು ಗ್ರಹಿಸಬೇಕು. ತಾತ್ಪರ್ಯವನ್ನು ಗ್ರಹಿಸದೆ ಶ್ರುತಿಯೇ ವಿರುದ್ಧವಾದ ವಚನಗಳನ್ನು ತಿಳಿಸುತ್ತಿದೆಯೆಂದಾದರೆ ಶ್ರುತಿಯು ಅಪ್ರಮಾಣವಾದೀತು. ಆದುದರಿಂದ ಶ್ರುತಿವಚನದ ತಾತ್ಪರ್ಯವನ್ನು ಗ್ರಹಿಸುವುದಾದರೆ ಯಜ್ಞದಲ್ಲಿ ಮಾಡುವ ಪಶುವಿನ ಆಲಂಭನೆಯು ಹಿಂಸೆಯಲ್ಲವೆನ್ನುವುದೇ ಶ್ರುತಿಯ ತಾತ್ಪರ್ಯವೆನ್ನಬೇಕಾಗುತ್ತದೆ. ಈ ಸಂದರ್ಭದಲ್ಲಿಯೇ ಹಿಂಸೆ ಮತ್ತು ಅಹಿಂಸೆ ಈ ಎರಡನ್ನೂ ಶೋಧಿಸಿ ತಿಳಿಯಬೇಕಾಗುತ್ತದೆ. ಯಾರಿಗಾದರೂ ತೊಂದರೆ ಮಾಡುವುದೇ ಹಿಂಸೆ, ತೊಂದರೆಯನ್ನಾಗಲೀ, ಪೀಡೆಯನ್ನಾಗಲೀ



ಉಂಟುಮಾಡದಿರುವುದೇ ಅಹಿಂಸೆ ಎಂಬುದು ಸಾಧಾರಣವಾದ ಅರ್ಥ. ಆದರೆ ಇಷ್ಟೇ ಸರಳವಾದ ವಿವರಣೆಯು ಹಿಂಸೆ-ಅಹಿಂಸೆಗಳ ಅರ್ಥವ್ಯಾಪ್ತಿಯನ್ನು ಮನವರಿಕೆ ಮಾಡಿಕೊಡಲಾರದು. ಇನ್ನೊಬ್ಬರಿಗೆ ತೊಂದರೆಯನ್ನುಂಟುಮಾಡುವವನ ಉದ್ದೇಶವೇನಾಗಿದೆಯೆಂಬುದನ್ನೂ ಸಹ ನಾವು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಇನ್ನೊಬ್ಬರಿಗೆ ಪೀಡೆಯನ್ನುಂಟು ಮಾಡುವುದೇ ಹಿಂಸೆಯೆನ್ನುವುದಾದರೆ ಆಸ್ಪತ್ರೆಯಲ್ಲಿ ನಿತ್ಯವೂ ನಡೆಯುವ ನೂರಾರು ಶಸ್ತ್ರಚಿಕಿತ್ಸೆಗಳೂ, ಕೈಕಾಲುಗಳನ್ನು ಕತ್ತರಿಸುವುದೂ ಹಿಂಸೆಯೇ ಎನಿಸೀತು. ಆದುದರಿಂದ ಹಿಂಸೆ ಎಂಬುದು ಮಾಡುವ ಕ್ರಿಯೆಯನ್ನು ಮಾತ್ರ ಅವಲಂಬಿಸದೆ, ಉದ್ದೇಶವನ್ನವಲಂಬಿಸಿದೆಯೆಂಬ ನಿರ್ಣಯಕ್ಕೆ ನಾವು ಬರಲೇಬೇಕಾಗುತ್ತದೆ. ಹೀಗೆಯೇ ಅಹಿಂಸೆ ಎಂಬುದೂ ಸಹ ಇನ್ನೊಬ್ಬರಿಗೆ ಪೀಡೆಯನ್ನು ನೀಡದಿರುವುದಷ್ಟೇ ಅಲ್ಲ. ಏಕೆಂದರೆ ಕೊಂಚವೂ ಹಿಂಸೆಯನ್ನು ಯಾವ ರೀತಿಯಿಂದಾಗಲೀ ಕಲ್ಪಿಸದೆ ಯಾರೂ ಬದುಕಲು ಸಾಧ್ಯವೇ ಇಲ್ಲ. ವ್ಯಾವಹಾರಿಕವಾಗಿ ನಾವು ಆಲೋಚಿಸಿದಾಗ ಪ್ರಪಂಚವು ಅನೇಕ ಹಿಂಸೆಗಳನ್ನು ಒಪ್ಪಿಕೊಂಡಿದೆ.

ದೇಶದ ರಕ್ಷಣೆಗಾಗಿ ನಾಡಿನ ಗಡಿಯಲ್ಲಿ ಸಾವಿರಾರು ಸೈನಿಕರು ತಮ್ಮ ಪ್ರಾಣವನ್ನೇ ಬಲಿ ನೀಡುತ್ತಾರೆ. ಇದು ನಾವಾಗಿಯೇ ಸೈನಿಕರನ್ನು ಹಿಂಸಿಸಿದಂತೆ ಎಂದು ಹೇಳಲು ಬರುವುದೇ?

ದೊಡ್ಡ ದೊಡ್ಡ ರೈಲುಮಾರ್ಗ, ಅಣೆಕಟ್ಟು, ಅಣುಸ್ಥಾವರ ಮುಂತಾದವುಗಳನ್ನು ನಿರ್ಮಿಸುವ ಸಲುವಾಗಿ ನೂರಾರು ಮನೆ, ಗುಡಿಸಲು, ತೋಟಗಳನ್ನು ಕಿತ್ತೊಗೆಯುತ್ತಾರೆ. ನೀರಿನಲ್ಲಿ ಮುಳುಗಿಸುತ್ತಾರೆ. ಇದು ಸರ್ಕಾರವು ಅವರಿಗೆ ನೀಡುವ ಹಿಂಸೆ ಎಂದು ಹೇಳಲು ಬರುವುದೇ?

ಮಕ್ಕಳು ಚೆನ್ನಾಗಿ ಓದಬೇಕೆಂಬ ಉದ್ದೇಶಕ್ಕಾಗಿ ಬಾಲ್ಯದಲ್ಲಿ ದಾರಿ ತಪ್ಪಿದಾಗ ತಾಯಿತಂದೆಗಳು ಎರಡು ಏಟನ್ನು ಬಿಗಿದರೆ ಅದು ಹಿಂಸೆ ಎಂದು ಹೇಳಲು ಬರುತ್ತದೆಯೇ?

ದೇಶಹಿತಕ್ಕಾಗಿ ಗ್ರಾಮವನ್ನು ತೊಂದರೆಗೆ ಈಡು ಮಾಡುವುದೂ, ಗ್ರಾಮದ ಹಿತಕ್ಕಾಗಿ ಕುಟುಂಬವನ್ನು ತೊಂದರೆಗೆ ಈಡು ಮಾಡುವುದೂ, ಕುಟುಂಬದ ಹಿತರಕ್ಷಣೆಗಾಗಿ ಒಬ್ಬನನ್ನು ದೂರಮಾಡುವುದೂ



ವ್ಯಾವಹಾರಿಕವಾಗಿ ಪ್ರಪಂಚದಲ್ಲಿ ಒಪ್ಪಿಕೊಂಡು ಅನುಸರಿಸುತ್ತಿರುವ ಹಿಂಸೆಯೇ ಆಗಿದೆ.

ಹೀಗೆ ಹಲವು ವಿಧದಿಂದ ಹಿಂಸಾಹಿಂಸೆಗಳ ವಿಶ್ಲೇಷಣೆಯನ್ನು ಮಾಡಬಹುದು. 'ಇದು ಹಿಂಸೆಯಾದುದರಿಂದ ತ್ಯಾಜ್ಯ, ಅಹಿಂಸೆಯಾದುದರಿಂದ ಗ್ರಾಹ್ಯ' ಎಂದು ನಿಷ್ಕರ್ಷಿಸುವುದು ಸಾಧ್ಯವಿಲ್ಲ. ಆ ದಾರಿಯಲ್ಲಿ ನಾವೂ ಹೋಗುತ್ತಿಲ್ಲ. ಪ್ರಪಂಚವೂ ಹೋಗುತ್ತಿಲ್ಲ. ಕರ್ತವ್ಯವೇ ಅಥವಾ ಅಕರ್ತವ್ಯವೇ ಎಂಬುದನ್ನು ಮಾತ್ರ ನಾವು ವಿಮರ್ಶಿಸಿ, ಪ್ರವೃತ್ತರಾಗುವುದೇ ಸರಿಯಾದುದು.

ಇದೇ ಲೋಕದ ನಿಯಮವು ಪಾಶುಕಹವಿಸ್ಸಿಗೂ ಅನ್ವಯವಾಗುತ್ತದೆ. ಮನುಷ್ಯಕೋಟಿಯ ಆತ್ಯಂತಿಕ ಹಿತಸಾಧನೆಗಾಗಿ ಯಜ್ಞಗಳು ಶ್ರುತಿ-ಸೂತ್ರಗಳಲ್ಲಿ ಪ್ರತಿಪಾದಿತವಾಗಿವೆ. ಪಶುವಿನ ಅಂಗಗಳ ಭಕ್ಷಣಕ್ಕಾಗಿ ಯಾಗವನ್ನು ಮಾಡಬೇಕೆಂದು ಯಾವ ವಿಧಿಯೂ ಇಲ್ಲ. ಯಾಗಾಂಗವಾದ ಅಂಗಗಳ ಭಕ್ಷಣೆಯು ವಿಧಿಯೆಂದು ಅನುಸರಿಸಲ್ಪಡುತ್ತದೆಯಷ್ಟೆ. ಎಲ್ಲ ನಿಯಮಗಳಿಗೂ ಅಪವಾದವಿರುವಂತೆ **ಮಾ ಹಿಂಸ್ಯಾತ್ ಸರ್ವಾ ಭೂತಾನಿ** ಎಂಬ ನಿಯಮಕ್ಕೂ ಸಹ ಯಜ್ಞದ ವಿಷಯದಲ್ಲಿ ಅಪವಾದವಿದೆ. ಈ ಅಂಶವನ್ನು ಮನವರಿಕೆ ಮಾಡುವುದಕ್ಕಾಗಿಯೇ ಯಜ್ಞಕ್ಕೆ **ಅಧ್ವರ** ಎಂದು ಹೆಸರು. **ಧ್ವರ** ಎಂದರೆ ಹಿಂಸೆ ಎಂದರ್ಥ. ಹಿಂಸೆಯೆಂದು ಹೇಳಲು ಬಾರದುದು **ಅಧ್ವರ**.

ಲೋಕದಲ್ಲಿ ಕರ್ತವ್ಯವನ್ನು ನಿರ್ವಹಿಸುವ ನ್ಯಾಯಮೂರ್ತಿಗಳು ಅಪರಾಧಿಗೆ ಫಾಸೀ ಶಿಕ್ಷೆಯನ್ನು ಘೋಷಿಸಿದೊಡನೆಯೇ ನ್ಯಾಯಮೂರ್ತಿಗಳು ನಿರ್ದಯಿಗಳೆನ್ನಲುಬಾರದು. ಕಾನೂನಿನಂತೆ ಅವರು ತಮ್ಮ ಕರ್ತವ್ಯವನ್ನು ನಿರ್ವಹಿಸಿದ್ದಾರೆಂದೇ ನಾವೆಲ್ಲರೂ ತಿಳಿಯುತ್ತೇವೆ. ಅಂತೆಯೇ ವಿಶ್ವದ ಹಿತಸಾಧನೆಗಾಗಿ ಇರುವ ವೇದಗಳು ಕಾನೂನಿನಂತೆ ಇವೆ. ಈ ವೇದಗಳನ್ನು ಅನುಸರಿಸುವವರು ಅದರ ಶಾಸನದಂತೆ ಪಶ್ವಾಲಂಭನ, ಸಂಜ್ಞಪನಗಳನ್ನು ಮಾಡಿದರೆ ಅದು ಅವರ ಕರ್ತವ್ಯವೇ ವಿನಹ ತಪ್ಪು ಅಲ್ಲ. ಚಾಪಲ್ಯವೂ ಅಲ್ಲ.

ಕೌರವ-ಪಾಂಡವರ ನಡುವಿನ ಯುದ್ಧಸಂದರ್ಭದಲ್ಲಿ ಹಿಂಸೆಯಾಗುತ್ತದೆಯೆಂದು ಯುದ್ಧದಿಂದ ಹಿಂಜರಿದ ಅರ್ಜುನನನ್ನು ಭಗವಂತನು



ಕರ್ತವ್ಯದೃಷ್ಟಿಯನ್ನು ತುಂಬಿ ಯುದ್ಧಕ್ಕೆ ಪ್ರೇರೇಪಿಸಿದುದರ ಓನ್ನೆಲೆಯನ್ನು ನಾವು ಗಮನಿಸಬೇಕು.

ಆದುದರಿಂದ ಜಗತ್ತಿನ ವ್ಯವಹಾರಧರ್ಮವನ್ನೂ, ವೇದಗಳ ಪರಮ ಪ್ರಾಮಾಣ್ಯವನ್ನೂ, ವಿಶಾಲವಾದ ಈ ಬ್ರಹ್ಮಾಂಡದಲ್ಲಿ ನಮ್ಮ ವಿಮರ್ಶನ ಶಕ್ತಿಯ ಪರಿಮಿತಿಯನ್ನೂ, ಹಿಂಸೆ-ಅಹಿಂಸೆ ಇವೆರಡರ ವ್ಯಾವಹಾರಿಕ ಅನ್ವಯವನ್ನೂ, ಇಂದಿನ ಜಗತ್ತಿನ ಮನೋಧರ್ಮವನ್ನೂ, ನಿರ್ವಿಕಾರಚಿತ್ತ ದಿಂದಲೂ ಪೂರ್ವಗ್ರಹವಿಲ್ಲದೆಯೂ ವಿಮರ್ಶಿಸಿದಾಗ ಇಂದು ಯಜ್ಞ ಯಾಗಾದಿಗಳು ಬಹುತೇಕ ಕಡಿಮೆಯಾಗಿದ್ದರೂ ವೇದೋಕ್ತವಾದ ಪಾಶುಕ ಹವಿಸ್ಸಿನ ವಿಚಾರವೂ, ಪಶ್ವಾಲಂಭನ - ಸಂಜ್ಞಪನಗಳೂ ಹಿಂಸೆಯಲ್ಲ ಎಂದೆನಿಸದಿರದು.



# ಅನುಬಂಧ-೨

ಶ್ರುತಿಯಲ್ಲಿಯೂ ಶ್ರೌತಸೂತ್ರಗಳಲ್ಲಿಯೂ ಉಪದಿಷ್ಟವಾಗಿರುವ ಯಜ್ಞಗಳು ಸಾಮ್ರಾಜ್ಯದಷ್ಟು ವಿಸ್ತಾರವಾಗಿವೆ. ಅವುಗಳ ಹೆಸರುಗಳನ್ನು ಪರಿಚಯ ಮಾಡಿಕೊಡಲಾಗುವುದು.

ಈ ಕೆಳಗೆ ನೀಡುವ ಯಜ್ಞಗಳು ಕೆಲವು ಬೋಧಾಯನ ಶ್ರೌತಸೂತ್ರದಲ್ಲಿಯೂ, ಕೆಲವು ಆಪಸ್ತಂಬ ಶ್ರೌತಸೂತ್ರದಲ್ಲಿಯೂ ಮತ್ತು ಕೆಲವು ಆಶ್ವಲಾಯನ ಶ್ರೌತಸೂತ್ರದಲ್ಲಿಯೂ ವಿಹಿತವಾದವುಗಳು. ಒಂದೇ ಹೆಸರಿನ ಯಜ್ಞವು ಎರಡು ಬಾರಿ ಬಂದಿದ್ದರೆ ಅವುಗಳನ್ನು ಹೇಳಿದ ಆಚಾರ್ಯರು ಬೇರೆಬೇರೆಯಾದುದರಿಂದ ಅವುಗಳ ಅನುಷ್ಠಾನದಲ್ಲಿ ವ್ಯತ್ಯಾಸವಿರುತ್ತದೆ. ಅಥವಾ ಅನುಷ್ಠಾನಕ್ಕೆ ಅಧಿಕಾರಿಗಳು ಬೇರೆಬೇರೆಯವರಾಗಿದ್ದರೂ ಯಜ್ಞದ ಹೆಸರು ಆವೃತ್ತಿಯಾಗುವುದು.

## ಅ) ಶ್ರುತಿ-ಶ್ರೌತಸೂತ್ರಗಳಲ್ಲಿ ವಿಧಿಸಿದ ಹವಿರ್ಯಜ್ಞಗಳು.

೧. ದರ್ಶ-ಪೂರ್ಣಮಾಸಗಳು
೨. ಕಾಮ್ಯ ದರ್ಶಪೂರ್ಣಮಾಸಗಳು
೩. ಆಗ್ರಯಣೇಷ್ಟಿಃ
೪. ಕಾಮ್ಯೇಷ್ಟಿಗಳು
೫. ನಕ್ಷತ್ರೇಷ್ಟಿಗಳು
೬. ಚಾತುರ್ಮಾಸ್ಯಾನಿ
೭. ಐಂದ್ರಾಗ್ನಪಶುಬಂಧಃ
೮. ಕಾಮ್ಯಪಶುಬಂಧಗಳು
೯. ಕೌಕಿಲ ಸೌತ್ರಾಮಣೀ
೧೦. ಚರಕಸೌತ್ರಾಮಣೀ
೧೧. ಆಗ್ನಾವೈಷ್ಣವೀಷ್ಟಿಃ
೧೨. ಸುಮನಾ ನಾಮೇಷ್ಟಿಃ
೧೩. ಸಾಕಂಪ್ರಸ್ಥಾಯೀಯೇಷ್ಟಿಃ
೧೪. ಇಳಾದಧಃ
೧೫. ಸಾರ್ವಸೇನಿಯಜ್ಞಃ
೧೬. ಶೌನಕಯಜ್ಞಃ
೧೭. ವಸಿಷ್ಠಯಜ್ಞಃ
೧೮. ಚತುಶ್ಚಕ್ರಕಾ
೧೯. ಮುನ್ಯಯನಮ್
೨೦. ತುರಾಯಣಮ್
೨೧. ಸ್ವರ್ಗದ್ವಾರೇಷ್ಟಿಗಳು
೨೨. ಪವಿತ್ರೇಷ್ಟಿಃ
೨೩. ಮಹಾಪವಿತ್ರೇಷ್ಟಿಃ
೨೪. ಸರ್ವಪೃಷ್ಠೇಷ್ಟಿಃ



## ಆ) ಶ್ರುತಿ-ಶ್ರೌತಸೂತ್ರಗಳಲ್ಲಿ ವಿಧಿಸಿರುವ ಸೋಮಯಾಗಗಳು

### ಏಕಾಹಗಳು

೧. ಅಗ್ನಿಷ್ಟೋಮಃ
೨. ಅತ್ಯಗ್ನಿಷ್ಟೋಮಃ
೩. ಉಕ್ಥ್ಯಃ
೪. ಷೋಡಶೀ
೫. ವಾಜಪೇಯಃ
೬. ಅತಿರಾತ್ರಃ
೭. ಅಪ್ತೋರ್ಯಾಮಃ
೮. ಅಗ್ನಿಷ್ಟುತ್
೯. ಇಂದ್ರಸ್ತುತ್
೧೦. ದಿಶಾಂ ಚತುಷ್ಟೋಮಃ

### ಆಭಿಚರಣೀಯ ಸೋಮಯಾಗಗಳು (ಏಕಾಹಗಳು)

೧. ಶ್ಯೇನಃ
೨. ಇಷುಃ
೩. ಸಂದಂಶಃ
೪. ಇಂದ್ರವಜ್ರಃ

### ಚಾತುರ್ಮಾಸ್ಯ ಸೋಮಯಾಗಗಳು (ಏಕಾಹಗಳು)

೧. ಜ್ಯೋತಿರಯನಮ್
೨. ಜ್ಯೋತಿರತಿರಾತ್ರಃ
೩. ಬೃಹಸ್ಪತಿಸವಃ
೪. ಸ್ಥಪತಿಸವಃ ಅಥವಾ ವೈಶ್ಯಸವಃ ಅಥವಾ ಮಾಸಸವಃ
೫. ಸೂತಸವಃ ಅಥವಾ ಗ್ರಾಮಣೀಸವಃ ಅಥವಾ ಋತುಸವಃ
೬. ಸೋಮಸವಃ
೭. ಪೃಥಿಸವಃ
೮. ಗೋಸವಃ
೯. ಓದನಸವಃ
೧೦. ಮೃತ್ಯುಸವಃ
೧೧. ವನಿಷ್ಠುಸವಃ

### ಅಹೀನಗಳು

೧. ದ್ವಿರಾತ್ರಃ
೨. ತ್ರಿರಾತ್ರಃ
೩. ಚತೂರಾತ್ರಃ (ಜಾಮದಗ್ನ್ಯ ಮತ್ತು ಆತ್ರೇಯ)
೪. ಪಂಚರಾತ್ರಃ
೫. ಷಡ್ರಾತ್ರಃ
೬. ಪೃಷ್ಠ್ಯಃಷಡಹಃ
೭. ಸಪ್ತರಾತ್ರಃ
೮. ಅಷ್ಟರಾತ್ರಃ
೯. ನವರಾತ್ರಃ
೧೦. ದಶರಾತ್ರಃ
೧೧. ಏಕಾದಶರಾತ್ರಃ
೧೨. ದ್ವಾದಶಾಹಃ
೧೩. ತ್ರಯೋದಶರಾತ್ರಃ
೧೪. ಪೂರ್ವಶ್ಚತುರ್ದಶರಾತ್ರಃ
೧೫. ಉತ್ತರಶ್ಚತುರ್ದಶರಾತ್ರಃ



೧೬. ಪೂರ್ವಃ ಪಂಚದಶರಾತ್ರಃ
೧೭. ಉತ್ತರಃ ಪಂಚದಶರಾತ್ರಃ
೧೮. ಅಬ್ರಾಹ್ಮಣಃ ಷೋಡಶರಾತ್ರಃ
೧೯. ಸಪ್ತದಶರಾತ್ರಃ
೨೦. ಅಬ್ರಾಹ್ಮಣಾಷ್ಟಾದಶರಾತ್ರಃ
೨೧. ವಿಂಶತಿರಾತ್ರಃ
೨೨. ಏಕವಿಂಶತಿರಾತ್ರಃ
೨೩. ಪೂರ್ವಶ್ಚತುರ್ವಿಂಶತಿರಾತ್ರಃ
೨೪. ಉತ್ತರಶ್ಚತುರ್ವಿಂಶತಿರಾತ್ರಃ
೨೫. ಅಬ್ರಾಹ್ಮಣಃ ಪಂಚವಿಂಶತಿರಾತ್ರಃ
೨೬. ತ್ರಿಂಶದ್ರಾತ್ರಃ
೨೭. ದ್ವಾತ್ರಿಂಶದ್ರಾತ್ರಃ
೨೮. ತ್ರಯಸ್ತ್ರಿಂಶದ್ರಾತ್ರಃ
೨೯. ಅಬ್ರಾಹ್ಮಣಃ ಚತುಸ್ತ್ರಿಂಶದ್ರಾತ್ರಃ
೩೦. ಷಟ್ ತ್ರಿಂಶದ್ರಾತ್ರಃ
೩೧. ಅಬ್ರಾಹ್ಮಣಃ ಸಪ್ತತ್ರಿಂಶದ್ರಾತ್ರಃ
೩೨. ಏಕಸ್ಮಾನ್ನಪಂಚಾಶದ್ರಾತ್ರಃ
೩೩. ಸಂವತ್ಸರಕ್ಲೃಪ್ತ ಏಕಸ್ಮಾನ್ನ ಪಂಚಾಶದ್ರಾತ್ರಃ
೩೪. ಏಕಷಷ್ಟಿರಾತ್ರಃ
೩೫. ಶತರಾತ್ರಃ
೩೬. ಸಹಸ್ರರಾತ್ರಃ

**ಅಯನಗಳು:**

೧. ಗವಾಮಯನಮ್
೨. ದ್ವಿತೀಯಂ ಗವಾಮಯನಮ್
೩. ತೃತೀಯಂ ಗವಾಮಯನಮ್
೪. ಅಂಗಿರಸಾಮಯನಮ್
೫. ಆದಿತ್ಯಾನಾಮಯನಮ್
೬. ಪ್ರಜಾಪತೇರಯನಮ್
೭. ದ್ವಿತೀಯಂ ಪ್ರಜಾಪತೇರಯನಮ್
೮. ತೃತೀಯಂ ಪ್ರಜಾಪತೇರಯನಮ್
೯. ಸಾರಸ್ವತಾಮಯನಮ್
೧೦. ಮುನ್ಯಯನಮ್ [1]
೧೧. ಜ್ಯೋತಿರಯನಮ್
೧೨. ಕುಂಡಪಾಯಿನಾಮಯನಮ್
೧೩. ಉತ್ಸರ್ಗಿಣಾಮಯನಮ್
೧೪. ತಪಶ್ಚಿತಾಮಯನಮ್
೧೫. ಬ್ರಹ್ಮಣೋಽಯನಮ್
೧೬. ಅಗ್ನಿಷ್ಟೋಮಾಯನಮ್
೧೭. ದರ್ಶ-ಪೂರ್ಣಮಾಸಯೋರಯನಮ್

1. ಅಯನಗಳಲ್ಲಿ ಬಂದಿರುವ ಈ ಮುನ್ಯಯನದಲ್ಲಿ ಸುತ್ಯಾಪವಿರುವುದಿಲ್ಲ.



## ಇ) ರಾಜಯಜ್ಞಾಃ

೧. ರಾಜಸೂಯಃ
೨. ಅಶ್ವಮೇಧಃ
೩. ಪುರುಷಮೇಧಃ
೪. ಸರ್ವಮೇಧಃ
* ಸೋಮಸವಃ
* ಪೃಥಿಸವಃ
* ಮೃತ್ಯುಸವಃ
೫. ಕಾಣಾಂಧಯಜ್ಞಃ
೬. ಶುನಸ್ಕರ್ಣಯಜ್ಞಃ
* ಓದನಸವಃ
೭. ರಾಜ್ಞಃ ಬೃಹಸ್ಪತಿಸವಃ
೮. ಪಂಚಶಾರದೀಯಃ
೯. ದಿಶಾಮಯನಮ್
೧೦. ಋತೂನಾಮಯನಮ್
೧೧. ಋಷೀಣಾಮಯನಮ್
೧೨. ದೇವಾನಾಮಯನಮ್
೧೩. ಸರ್ಪಸತ್ರಮ್
೧೪. ವಿಶ್ವಸೃಜಾಂ ಸಹಸ್ರ ಸಂವತ್ಸರಸತ್ರಮ್
೧೫. ಸಂವತ್ಸರಸತ್ರಮ್
೧೬. ವಿಷೂಚೀನಶಾಲಃ
೧೭. ಔಶೀನರಸ್ಯ ಸರ್ವತೋಮುಖಃ
೧೮. ಪಾರ್ಥಃ ಸರ್ವತೋಮುಖಃ
೧೯. ಯಮೌ ಸ್ತೋಮೌ
೨೦. ಸದ್ಯಸ್ಕ್ರೀಃ (ಯವ್ಯೈಃ ದೀಕ್ಷಾ)
೨೧. ಅನುಕ್ರೀಃ (ವ್ರೀಹಿಭಿಃ ದೀಕ್ಷಾ, ದ್ವ್ಯಹಃ)
೨೨. ಪರಿಕ್ರೀಃ (ಮಾಷ್ಯೈರ್ದೀಕ್ಷಾ, ತ್ರ್ಯಹಃ)
೨೩. ಅತಿಕ್ರೀಃ (ತಿಲ್ಯೈರ್ದೀಕ್ಷಾ ಚತುರಹಃ)
೨೪. ವ್ರಾತ್ಯಸ್ತೋಮಃ
೨೫. ಭಾಲ್ಲವಿಸ್ತೋಮಃ
೨೬. ವೈಮೃಧಃ
೨೭. ಉದ್ಭಿತ್
೨೮. ವಲಭಿತ್ ಅಥವಾ ಬಲಭಿತ್
೨೯. ಋತಪೇಯಃ
೩೦. ದಿಶಾಂ ಚತುಷ್ಟೋಮಃ೧
೩೧. ಛಂದಸಾಮೇಕತ್ರಿಕಃ
೩೨. ಸ್ತೋಮಾನಾಮೇಕತ್ರಿಕಃ
೩೩. ಇಂದ್ರಾಗ್ನಿಯೋಃ ಕುಲಾಯಃ
೩೪. ದುರಶಃ
೩೫. ದುರ್ಣಾಶಃ
೩೬. ತ್ರಿಷಿವುತ್
೩೭. ಋಷಭಃ
೩೮. ಕಾನಾಂಧಯಜ್ಞಃ
೩೯. ಮನೋರ್ವೈವಸ್ವತಸ್ಯ ಯಜ್ಞಃ
೪೦. ವಾಗಾಂಭೃಣೀಯಜ್ಞಃ
೪೧. ಸಂಸವಃ
೪೨. ಯಮಸ್ಯ ವೈವಸ್ವತಸ್ಯ ಯಜ್ಞಃ
೪೩. ಪುರೂರವಸಃ ಶದಃ
೪೪. ಉಪಶದಃ



೪೫. ಪ್ರಾಜಾಪತ್ಯೌ ಶದೋಪಶದೌ
೪೬. ನೈಧ್ರುವಸ್ಯ ಕಶ್ಯಪಸ್ಯ ಶದೋಪಶದೌ
೪೭. ಔಶೀನಸೌ ಪುನಃಸ್ತೋಮೌ
೪೮. ಇಂದ್ರಯಜ್ಞಃ
೪೯. ಪ್ರಣೋದಃ
೫೦. ವಿಭಾದಃ
೫೧. ಪ್ರತಿನೋದಃ
೫೨. ಅಗ್ನೇರತಿವ್ಯಾಧಃ
೫೩. ಇಂದ್ರವಜ್ರಃ

ಶುನಸ್ಕರ್ಣಯಜ್ಞಃ

೫೪. ರಾಶಿಃ
೫೫. ಮರಾಯಃ
೫೬. ಆಂಜನಃ
೫೭. ಅಭ್ಯಂಜನಃ
೫೮. ಪೇಯಾಃ
೫೯. ವಾಜಾಃ
೬೦. ಅಹೀನವಿಧಿಃ
೬೧. ಅಯುಜಃ
೬೨. ಯುಗ್ಮಾಃ

1. ಇದನ್ನು ರಾಜನೇ ಮಾಡಬೇಕು. ಸೌಮಿಕದ ದಿಶಾಂ ಚತುಷ್ಟೋಮವನ್ನು ಎಲ್ಲರೂ ಮಾಡಬಹುದು.



## ಈ) ಮಹಾಗ್ನಿಚಯನಗಳು

೧. ಶ್ಯೇನಚಿತ್[1]
೨. ಛಂದಶ್ಚಿತ್
೩. ಕಂಕಚಿತ್
೪. ಅಲಜಚಿತ್
೫. ಪ್ರಉಗಚಿತ್
೬. ಉಭಯತಃ ಪ್ರಉಗಚಿತ್
೭. ರಥಚಕ್ರಚಿತ್
೮. ದ್ರೋಣಚಿತ್
೯. ಸಮೂಹ್ಯಚಿತ್
೧೦. ಪರಿಚಾಯ್ಯಚಿತ್
೧೧. ಶ್ಮಶಾನಚಿತ್
೧೨. ಕೂರ್ಮಚಿತ್
೧೩. ಪುನಶ್ಚಿತಿಃ

## ಕ್ಷುದ್ರಚಯನಗಳು

೧. ಸಾವಿತ್ರಚಯನ
೨. ನಾಚಿಕೇತಚಯನ
೩. ಬ್ರಹ್ಮಚಿತ್
೪. ವೈಶ್ವಸೃಜಚಯನ
೫. ಆರುಣಕೇತುಕಚಯನ
೬. ಯೂಪೈಕಾದಶಿನೀ-

1.ಇದು ಸಹಸ್ರ, ದ್ವಿಸಾಹಸ್ರ, ತ್ರಿಸಾಹಸ್ರವೆಂಬುದಾಗಿ ಮೂರು ಬಗೆಯಿರುತ್ತದೆ.



ಬೋಧಾಯನ ಶ್ರೌತಸೂತ್ರದಲ್ಲಿಯೂ ಮತ್ತು ಯಜುರ್ವೇದ ದಲ್ಲಿಯೂ ಹೇಳಲ್ಪಟ್ಟ ನೂರಾರು ಯಜ್ಞಗಳಲ್ಲದೆ ಆಶ್ವಲಾಯನ ಶ್ರೌತಸೂತ್ರ ದಲ್ಲಿ ಅನೇಕ ಸೋಮಯಾಗಗಳು ವಿಹಿತವಾಗಿವೆ.

## ಅ) ಏಕಾಹಗಳು

೧. ಶ್ಯೇನ
೨. ಅಜಿರ
೩. ಸಾದ್ಯಸ್ಕ್ರ
೪. ವಿಘನ
೫. ಇಂದ್ರವಿಷ್ಣೋರುತ್ಕ್ರಾಂತಿ
೬. ಅತಿಮೂರ್ತಿ ಅಥವಾ ದೂನಾಶ ಅಥವಾ ಬಹುಸುವರ್ಣ
೭. ಸೂರ್ಯಸ್ತುತ್
೮. ವ್ಯೋಮ
೯. ವಿಶ್ವೇದೇವಸ್ತುತ್
೧೦. ವಿವಧಃ
೧೧. ತ್ರಿಷಿಃ
೧೨. ಅಪಚಿತಿಃ
೧೩. ಸಮ್ರಾಟ್
೧೪. ಸ್ವರಾಟ್
೧೫. ರಾಟ್
೧೬. ವಿರಾಟ್
೧೭. ವಿನುತಿಃ
೧೮. ಅಭಿಭೂತಿಃ
೧೯. ಇಷುಃ
೨೦. ವಜ್ರಃ
೨೧. ಋಷಿಸ್ತೋಮಃ
೨೨. ವ್ರಾತ್ಯಸ್ತೋಮಃ
೨೩. ನಾಕಸದಃ
೨೪. ಋತುಸ್ತೋಮಃ
೨೫. ದಿಕ್ ಸ್ತೋಮಃ
೨೬. ಜ್ಯೋತಿಃ
೨೭. ನವಸಪ್ತದಶಃ
೨೮. ವಿಷುವತ್ ಸ್ತೋಮಃ
೨೯. ಗೌರಭಿಜಿತ್
೩೦. ಅಭಿಜಿತ್
೩೧. ಗೌರುಭಯುಸಾಮ ಸರ್ವಸ್ತೋಮಃ
೩೨. ಆಯುಃ
೩೩. ವಿಶ್ವಜಿತ್
೩೪. ಪೃಷ್ಠ್ಯಹಾನಿ (ಬ್ರಹ್ಮವರ್ಚಸಕಾಮಸ್ಯ,
೩೫. ಪೃಷ್ಠ್ಯಹಾನಿ (ವೀರ್ಯಕಾಮಸ್ಯ)
೩೬. ಪೃಷ್ಠ್ಯಹಾನಿ (ಪ್ರಜಾಕಾಮಸ್ಯ)
೩೭. ಪೃಷ್ಠ್ಯಹಾನಿ (ಪ್ರತಿಷ್ಠಾಕಾಮಸ್ಯ)



# ಆ) ದ್ವಿರಾತ್ರಾದಿ ದ್ವಾದಶರಾತ್ರಪರಾರ್ಧ್ಯಾಃ

೧. ಆಂಗಿರಸಂ ದ್ವಿರಾತ್ರಮ್
೨. ಚೈತ್ರರಥದ್ವಿರಾತ್ರಮ್
೩. ಕಾಪಿವನಂ ದ್ವಿರಾತ್ರಮ್
೪. ಗರ್ಗತ್ರಿರಾತ್ರಮ್
೫. ಬೈದತ್ರಿರಾತ್ರಮ್
೬. ಛಂದೋಮಪವಮಾನಾಂತ-ರ್ವಸೂತ್ರಿರಾತ್ರಮ್
೭. ಪರಾಕ ಛಂದೋಮಯು ಪರಾಕತ್ರಿರಾತ್ರಮ್
೮. ಅತ್ರೇಶ್ಚತುರ್ವೀರಂ ಚತೂರಾತ್ರಮ್
೯. ಜಾಮದಗ್ನ್ಯಂ ಚತೂರಾತ್ರಮ್
೧೦. ವೈಶ್ವಾಮಿತ್ರಂ ಭ್ರಾತೃವ್ಯವಾನ್ ಚತೂರಾತ್ರಮ್
೧೧. ವಸಿಷ್ಠ ಸಂಸರ್ಪ ಚತೂರಾತ್ರಮ್
೧೨. ಸಾರ್ವಸೇನಂ ಪಂಚರಾತ್ರಮ್
೧೩. ದೈವಂ ಪಂಚರಾತ್ರಮ್
೧೪. ಪಂಚಶಾರದೀಯಂ ಪಂಚರಾತ್ರಮ್
೧೫. ವ್ರತವಂತಂ ಪಂಚರಾತ್ರಮ್
೧೬. ವಾವರಂ ಪಂಚರಾತ್ರಮ್
೧೭. ಋತೂನಾಂ ಷಡಹಂ ಷಡ್ರಾತ್ರಮ್
೧೮. ಪೃಷ್ಠ್ಯಾವಲಂಬಂ ಷಡ್ರಾತ್ರಮ್
೧೯. ಸಂಭಾರ್ಯಂ ಷಡ್ರಾತ್ರಮ್
೨೦. ಋಷಿ ಸಪ್ತರಾತ್ರಮ್
೨೧. ಪ್ರಾಜಾಪತ್ಯಂ ಸಪ್ತರಾತ್ರಮ್
೨೨. ಛಂದೋಮಪವಮಾನವ್ರತಮ್ (ಸಪ್ತರಾತ್ರಮ್)
೨೩. ಜಾಮದಗ್ನ್ಯಂ ಸಪ್ತರಾತ್ರಮ್
೨೪. ಐಂದ್ರಂ ಸಪ್ತರಾತ್ರಮ್
೨೫. ದೇವತ್ವಕಾಮಸ್ಯ ಅಷ್ಟರಾತ್ರಮ್
೨೬. ಆಯುಷ್ಕಾಮಸ್ಯ ನವರಾತ್ರಮ್
೨೭. ತ್ರಿಕದ್ರುಕ ಪೃಷ್ಠ್ಯಾವಲಂಬಃ
೨೮. ತ್ರಿಕಕುಪ್ ನವರಾತ್ರಮ್
೨೯. ಅಧ್ಯರ್ಧಪೃಷ್ಠ್ಯಃ (ನವರಾತ್ರಮ್)
೩೦. ಮಹಾತ್ರಿಕಕುಪ್ (ನವರಾತ್ರಮ್)
೩೧. ವ್ಯೂಢತ್ರಿಕಕುಪ್ (ನವರಾತ್ರಮ್)
೩೨. ಸಮೂಢತ್ರಿಕಕುಪ್ (ನವರಾತ್ರಮ್)
೩೩. ಚತುಷ್ಟೋಮತ್ರಿಕಕುಪ್ (ನವರಾತ್ರಮ್)
೩೪. ಅಧ್ಯರ್ಧೋಽಭಿಪ್ಲವಃ (ನವರಾತ್ರಮ್)
೩೫. ಕುಸುರುಬಿಂದಂ ದಶರಾತ್ರಮ್
೩೬. ಛಂದೋಮವಂತಂ ದಶರಾತ್ರಮ್
೩೭. ಪೌಃ ದಶರಾತ್ರಮ್
೩೮. ಶಲಲೀಪಿಶಂಗಂ ದಶರಾತ್ರಮ್



೩೯. ಪೌಂಡರೀಕ ಏಕಾದಶರಾತ್ರಮ್

೪೦. ಸಂಭಾರ್ಯ
(ಏಕಾದಶರಾತ್ರಮ್)

೪೧. ಇಂದ್ರವಜ್ರ
(ಏಕಾದಶರಾತ್ರಮ್)

೪೨. ಸಂಭಾರ್ಯ
(ದ್ವಾದಶರಾತ್ರಮ್)

೪೩. ಸಂವತ್ಸರಪ್ರವಹ್ಲಃ
(ದ್ವಾದಶರಾತ್ರಮ್)

೪೪. ಭರತ ದ್ವಾದಶಾಹಃ
(ಕೈವಲ್ಯಕಾಮಸ್ಯ)

೪೫. ಭರತದ್ವಾದಶಾಹಃ (ಪ್ರಜಯಾ ಪಶುಭಿಃ ಪ್ರಜನಯಿಷ್ಯತಃ)

೪೬. ಭರತದ್ವಾದಶಾಹಃ
(ಸ್ವರ್ಗಂ ಲೋಕಮೇಷ್ಯಂತಃ)

೪೭. ಭರತದ್ವಾದಶಾಹಃ
(ಸ್ವಾನಾಂ ಶ್ರೈಷ್ಠ್ಯಮಿಚ್ಛಂತಃ)



## ೩) ರಾತ್ರಿಸತ್ರಾಣಿ

೧. ಋದ್ಧಿಕಾಮಸ್ಯ
ತ್ರಯೋದಶರಾತ್ರಮ್
೨. ಪ್ರತಿಷ್ಠಾಕಾಮಸ್ಯ
ತ್ರಯೋದಶರಾತ್ರಮ್
೩. ಚತುರ್ದಶರಾತ್ರಗಳು
(ಮೂರುಯಜ್ಞಗಳು)
೪. ದೇವತ್ವಕಾಮಸ್ಯ
ಪಂಚದಶರಾತ್ರಮ್
೫. ಬ್ರಹ್ಮವರ್ಚಸಕಾಮಸ್ಯ
ಪಂಚದಶರಾತ್ರಮ್
೬. ಲೋಕದ್ವಯೇಪ್ಸುಃ
ಪಂಚದಶರಾತ್ರಮ್
೭. ಪ್ರತಿಷ್ಠಾಕಾಮಸ್ಯ
ಪಂಚದಶರಾತ್ರಮ್
೮. ಷೋಡಶರಾತ್ರಮ್
(ಅನ್ನಾದ್ಯಕಾಮಾನಾಮ್)
೯. ಸಪ್ತದಶರಾತ್ರಮ್
(ಪಶುಕಾಮಾನಾಮ್)
೧೦. ಅಷ್ಟಾದಶರಾತ್ರಮ್
(ಆಯುಃಕಾಮಾನಾಮ್)
೧೧. ಏಕಾನ್ನವಿಂಶತಿರಾತ್ರಮ್
(ಗ್ರಾಮ್ಯಾರಣ್ಯಾನ್ ಪಶೂನ್
ಅವರುರುತ್ಸಮಾನಾಃ)
೧೨. ವಿಂಶತಿರಾತ್ರಮ್
(ಪ್ರತಿಷ್ಠಾಕಾಮಾನಾಮ್)
೧೩. ಏಕವಿಂಶತಿರಾತ್ರಮ್
(ಪ್ರತಿಷ್ಠಾಕಾಮಾನಾಮ್)
೧೪. ಏಕವಿಂಶತಿರಾತ್ರಮ್
(ಬ್ರಹ್ಮವರ್ಚಸಕಾಮಾನಾಮ್)
೧೫. ದ್ವಾವಿಂಶತಿರಾತ್ರಮ್
(ಅನ್ನಾದ್ಯಕಾಮಾನಾಮ್)
೧೬. ತ್ರಯೋವಿಂಶತಿರಾತ್ರಮ್
(ಪಶುಕಾಮಾನಾಮ್)
೧೭. ಚತುರ್ವಿಂಶತಿರಾತ್ರಮ್
(ಪ್ರಜಾತಿಕಾಮಾನಾಮ್)
೧೮. ಚತುರ್ವಿಂಶತಿರಾತ್ರಮ್
ಸ್ವರ್ಗೇ ಲೋಕೇ ಸತ್ ಸ್ಯಂತಃ,
ಪ್ರತಿಷ್ಠಾತುಮಿಚ್ಛಂತಃ,
ಬ್ರಧ್ನಸ್ಯ ವಿಷ್ಟಪಂ ರೋಕ್ಷ್ಯಂತಃ)
೧೯. ಪಂಚವಿಂಶತಿರಾತ್ರಮ್
(ಅನ್ನಾದ್ಯಕಾಮಾನಾಮ್)
೨೦. ಷಡ್ವಿಂಶತಿರಾತ್ರಮ್
(ಪ್ರತಿಷ್ಠಾಕಾಮಾನಾಮ್)
೨೧. ಸಪ್ತವಿಂಶತಿರಾತ್ರಮ್
(ಋದ್ಧಿಕಾಮಾನಾಮ್)
೨೨. ಅಷ್ಟಾವಿಂಶತಿರಾತ್ರಮ್
(ಬ್ರಹ್ಮವರ್ಚಸಕಾಮಾನಾಮ್)
೨೩. ಏಕಾನ್ನತ್ರಿಂಶದ್ರಾತ್ರಮ್
(ಪರಮಾಂ ವಿಜಿತಿಂ
ವಿಜಿಗೀಷಮಾಣಾನಾಮ್)
೨೪. ತ್ರಿಂಶದ್ರಾತ್ರಮ್
(ಅನ್ನಾದ್ಯಕಾಮಾನಾಮ್)
೨೫. ಏಕತ್ರಿಂಶದ್ರಾತ್ರಮ್
(ಅನ್ನಾದ್ಯಕಾಮಾನಾಮ್)



೨೬. ದ್ವಾತ್ರಿಂಶದ್ರಾತ್ರಮ್
(ಪ್ರತಿಷ್ಠಾಕಾಮಾನಾಮ್)

೨೭. ತ್ರಯಸ್ತ್ರಿಂಶದ್ರಾತ್ರಮ್
(ಪ್ರತಿಷ್ಠಾಕಾಮಾನಾಮ್)

೨೮. ತ್ರಯಸ್ತ್ರಿಂಶದ್ರಾತ್ರಮ್
(ಬ್ರಹ್ಮವರ್ಚಸಕಾಮಾನಾಮ್)

೨೯. ತ್ರಯಸ್ತ್ರಿಂಶದ್ರಾತ್ರಮ್
(ಉಭೌ ಲೋಕಾವಾಪ್ಸ್ಯತಾಮ್)

೩೦. ಚತುಸ್ತ್ರಿಂಶದ್ರಾತ್ರಮ್
(ಅನ್ನಾದ್ಯಕಾಮಾನಾಮ್)

೩೧. ಪಂಚತ್ರಿಂಶದ್ರಾತ್ರಮ್
(ಪಶುಕಾಮಾನಾಮ್)

೩೨. ಷಟ್ ತ್ರಿಂಶದ್ರಾತ್ರಮ್
(ಪಶುಕಾಮಾನಾಮ್)

೩೩. ಸಪ್ತತ್ರಿಂಶದ್ರಾತ್ರಮ್
(ಪಶುಕಾಮಾನಾಮ್)

೩೪. ಅಷ್ಟಾತ್ರಿಂಶದ್ರಾತ್ರಮ್
(ಪಶುಕಾಮಾನಾಮ್)

೩೫.ಏಕಾನ್ನಚತ್ವಾರಿಂಶದ್ರಾತ್ರಮ್
(ಅನಂತಶ್ರೀಕಾಮಾನಾಮ್)

೩೬. ಚತ್ವಾರಿಂಶದ್ರಾತ್ರಮ್
(ಪರಮಾಯಾಂ ವಿರಾಜಿ
ಪ್ರತಿತಿಷ್ಠನ್ತಃ) [1]

೩೭. ಏಕಸ್ಮಾನ್ನಪಂಚಾಶದ್ರಾತ್ರಮ್
(ವಿಪಾಪ್ಮನಾ ವತ್ಸ್ಯಂತಃ) [2]

೩೮. ಏಕಷಷ್ಟಿರಾತ್ರಮ್
(ಪ್ರತಿಷ್ಠಾಕಾಮಾನಾಮ್) [3]

೩೯. ಶತರಾತ್ರಮ್
(ಆಯುಃಕಾಮಾನಾಮ್)

1. ನಲವತ್ತೊಂದು ರಾತ್ರಿಗಳಿಂದ ನಲವತ್ತೆಂಟು ರಾತ್ರಿಸತ್ರಗಳವರೆಗೆ ಎಂಟು ಯಜ್ಞಗಳು)

2. ಈ ಯಜ್ಞವು ದ್ವಿಗುಣೀಕೃತಾಂ ಶ್ರಿಯಮಿಚ್ಛಂತಃ, ಸ್ವಾನಾಂ ಶ್ರೈಷ್ಠ್ಯಕಾಮಾಃ, ಯೇ ವರ್ಚಸಾ ವಧಾಯುಃ, ಯೇ ವಾ ಆತ್ಮಾನಂ ನೈವ ಜಾನೀರನ್, ಮತ್ತು ಸಂವತ್ಸರಕಾಮಾನ್ ಆಪ್ಸ್ಯಂತಃ ಎಂಬ ಕಾಮ್ಯಭೇದಗಳಿಂದ ಐದು ಬಗೆಯಾಗಿರುತ್ತದ
ಐವತ್ತು ರಾತ್ರಿಸತ್ರಗಳಿಂದ ಅರವತ್ತು ರಾತ್ರಿಸತ್ರಗಳವರೆಗೆ ಮೂವತ್ತೆಂಟು ಯಜ್ಞಗಳು

3. ಅರವತ್ತೆರಡು ರಾತ್ರಿಸತ್ರಗಳಿಂದ ತೊಂಭತ್ತೊಂಭತ್ತು ರಾತ್ರಿಸತ್ರಗಳವರೆಗೆ ಮೂವತ್ತೂರು ಯಜ್ಞಗಳು.



## ಈ) ಅಯನಾನಿ

೧. ಗವಾಮಯನಮ್
(ಸರ್ವಕಾಮಾನಾಮ್)
೨. ಆದಿತ್ಯಾನಾಮಯನಮ್
೩. ಅಂಗಿರಸಾಮಯನಮ್
೪. ದೃತಿವಾತವತೋರಯನಮ್
೫. ಕುಂಡಪಾಯಿನಾಮಯನಮ್
೬. ಸರ್ಪಾಣಾಮಯನಮ್
೭. ಕ್ಷುಲ್ಲಕ ತಾಪಶ್ಚಿತಮ್
೮. ತ್ರೈವರ್ಷಿಕಂ ತಾಪಶ್ಚಿತಮ್
೯. ದ್ವಾದಶವರ್ಷಿಕಂ ತಾಪಶ್ಚಿತಮ್
೧೦. ಷಟ್ ತ್ರಿಂಶದ್ವರ್ಷಿಕಂ ತಾಪಶ್ಚಿತಮ್
೧೧. ಪ್ರಜಾಪತೇರ್ದ್ವಾದಶ
ಸಂವತ್ಸರಮ್
೧೨. ಶಾಕ್ತಾನಾಂ ಷಟ್
ತ್ರಿಂಶದ್ವರ್ಷಿಕವಮ್
೧೩. ಸಾಧ್ಯಾನಾಂ ಶತ
ಸಂವತ್ಸರಮ್
೧೪. ವಿಶ್ವಸೃಜಾಂ ಸಹಸ್ರ
ಸಂವತ್ಸರಮ್
೧೫. ಅಗ್ನಿಷ್ಟೋಮಸಹಸ್ರಮ್
(ಅಗ್ನೇರಯನಮ್)
೧೬. ಮಿತ್ರಾವರುಣಯೋ
ರಯನಮ್
೧೭. ಇಂದ್ರಾಗ್ನಿಯೋರಯನಮ್
೧೮. ಅರ್ಯಮ್ಣೋರಯನಮ್



ಆಪಸ್ತಂಬ ಶ್ರೌತಸೂತ್ರ, ತಾಂಡ್ಯಬ್ರಾಹ್ಮಣ, ತೈತ್ತಿರೀಯಬ್ರಾಹ್ಮಣ ಮತ್ತು ಷಡ್ವಿಂಶಬ್ರಾಹ್ಮಣಗಳಲ್ಲಿ ಈ ಕೆಳಗಿನ ಯಜ್ಞಗಳು ವಿಹಿತವಾಗಿವೆ. ಇವುಗಳಲ್ಲಿ ಬಗೆಬಗೆಯ ಏಕಾಹಗಳೂ, ಸಾಹಸ್ರಗಳೂ, ಸಾದ್ಯಸ್ಕಗಳೂ, ವ್ರಾತ್ಯಯಜ್ಞಗಳೂ, ಅಗ್ನಿಷ್ಟುತ್ ಗಳೂ, ತ್ರಿವೃತ್ ಸ್ತೋಮಗಳೂ, ಸೌಮಿಕ ಚಾತುರ್ಮಾಸ್ಯಗಳೂ, ರಾಜಸೂಯಗಳೂ, ದ್ವಂದ್ವಸೋಮಗಳೂ ಸೇರಿವೆ. ಅಲ್ಲದೆ ಅಹೀನಗಳಲ್ಲಿ ದ್ವಿರಾತ್ರದಿಂದ ಏಕಾದಶರಾತ್ರದವರೆಗಿನ ಬಗೆಬಗೆಯ ಅಹೀನಗಳೂ, ಸವಗಳೂ, ಅನೇಕ ಬಗೆಯ ಸತ್ರಗಳೂ ಮತ್ತು ಅಯನಗಳೂ ಸೇರಿವೆ.

೧. ಗವಾಮಯನಮ್
೨. ಅಗ್ನಿಷ್ಟೋಮಃ
೩. ವ್ಯೂಢದ್ವಾದಶಾಹಃ
೪. ಜ್ಯೋತಿಃ
೫. ಗೌಃ
೬. ಆಯುಃ
೭. ಅಭಿಜಿತ್
೮. ವಿಶ್ವಜಿತ್
೯. ಸರ್ವಜಿತ್
೧೦. ಜ್ಯೋತಿಃ
೧೧. ಸರ್ವಜ್ಯೋತಿಃ
೧೨. ವಿಶ್ವಜ್ಯೋತಿಃ
೧೩. ತ್ರಿರಾತ್ರಸಮ್ಮಿತಃ
೧೪. ಸ್ವರ್ಗಕಾಮಾದೀನಾಂ ಪ್ರಥಮಃ
೧೫. ಆಮಯಾವಿಪ್ರಭೃತೀನಾಂ ದ್ವಿತಿಯಃ
೧೬. ಅಂಗಿರಸಾಮನುಕ್ರೀಃ ತೃತೀಯಃ
೧೭. ವಿಶ್ವಜಿತ್ ಶಿಲ್ಪಃ ಚತುರ್ಥಃ
೧೮ ಶ್ಯೇನಃ
೧೯. ಏಕತ್ರಿಕಃ ಪಂಚಮಃ
೨೦. ವ್ರಾತ್ಯಗಣಶಿಕ್ಷಕಾಣಾಂ ಪ್ರಥಮಃ
೨೧. ನಿಂದಿತಾನಾಂ ದ್ವಿತೀಯಃ
೨೨. ಕನಿಷ್ಠಾನಾಂ ತೃತೀಯಃ
೨೩. ಜ್ಯೇಷ್ಠಾನಾಂ ಚತುರ್ಥಃ
೨೪. ಪಾಪನಿರ್ಹರಣಾರ್ಥಃ ಪ್ರಥಮಃ
೨೫. ಬ್ರಹ್ಮವರ್ಚಸಕಾಮಸ್ಯ ದ್ವಿತೀಯಃ
೨೬. ಪಶುಕಾಮಸ್ಯ ತೃತೀಯಃ
೨೭. ಯಜ್ಞವಿಭ್ರಷ್ಟಸ್ಯ ಚತುರ್ಥಃ
೨೮. ಅನ್ನಾದ್ಯಕಾಮಸ್ಯ ಪಂಚಮಃ
೨೯. ಪ್ರಜಾಪತೇರಪೂರ್ವಃ ಪ್ರಥಮಃ
೩೦. ಬೃಹಸ್ಪತಿಸವೋ ದ್ವಿತೀಯಃ
೩೧. ಇಷುಃ
೩೨. ಸರ್ವಸ್ವಾರಸ್ತೃತೀಯಃ
೩೩. ವೈಶ್ವದೇವಸ್ಥಾನಿಕಃ ಅಗ್ನಿಷ್ಟೋಮಃ
೩೪. ವಾರುಣಪ್ರಘಾಸಿಕಃ ದ್ವಿದಿವಃ
೩೫. ಸಾಕಮೇಧಸ್ಥಾನಿಕಃ ತ್ರಿರಾತ್ರಃ
೩೬. ಶುನಾಸಿರೀಯಸ್ಥಾನಿಕಃ ಅಗ್ನಿಷ್ಟೋಮಃ



೩೭. ಉಪಹವ್ಯಃ ಅನಿರುಕ್ತಃ
೩೮. ಋತಪೇಯಃ
೩೯. ಅನ್ಯಃ ಋತಪೇಯಃ
೪೦. ವೈಶ್ಯಸ್ತೋಮಃ
೪೧. ತೀವ್ರಸ್ತುತ್
೪೨. ವಾಜಪೇಯಃ
೪೩. ಪವಿತ್ರಃ
೪೪. ಅಭಿಷೇಚನೀಯಃ
೪೫. ದಶಪೇಯಃ
೪೬. ಕೇಶವಪನೀಯಃ
೪೭. ವ್ಯಷ್ಟಿದ್ವಿರಾತ್ರಃ
೪೮. ರಾಟ್
೪೯. ವಿರಾಟ್
೫೦. ಔಪಶದಃ
೫೧. ಪುನಸ್ತೋಮಃ
೫೨. ಉಪಚ್ಛದಃ
೫೩. ಛದಃ
೫೪. ಸರ್ವತೋಮುಖಮ್
೫೫. ಚತುಷ್ಟೋಮಃ
೫೬. ಅನ್ಯಚತುಷ್ಟೋಮಃ
೫೭. ಉದ್ಭಿತ್
೫೮. ಬಲಭಿತ್
೫೯. ಅಪಚಿತಿಃ ಪ್ರಥಮಃ
೬೦. ಅಪಚಿತಿಃ ದ್ವಿತೀಯಃ
೬೧. ಪಕ್ಷೀ
೬೨. ಜ್ಯೋತಿಃ
೬೩. ಋಷಭಃ
೬೪. ಗೋಸವಃ
೬೫. ಮರುತ್ ಸ್ತೋಮಃ
೬೬. ಕುಲಾಯಃ
೬೭. ಇಂದ್ರಸ್ತೋಮಃ
೬೮. ಇಂದ್ರಾಗ್ನಿಸ್ತೋಮಃ
೬೯. ವಿಘನಃ ಪ್ರಥಮಃ
೭೦. ವಿಘನೋ ದ್ವಿತೀಯಃ
೭೧. ವಜ್ರಃ
೭೨. ಸಂದಂಶಃ
೭೩. ಜ್ಯೋತಿಷ್ಟೋಮಃ
೭೪. ಸರ್ವಸ್ತೋಮಃ
೭೫. ನವಸಪ್ತದಶಃ
೭೬. ವಿಷುವದತಿರಾತ್ರಃ
೭೭. ಗೋಷ್ಟೋಮಾತಿರಾತ್ರಃ
೭೮. ಆಯುಷ್ಟೋಮಾತಿರಾತ್ರಃ
೭೯. ಅಭಿಜಿದತಿರಾತ್ರಃ
೮೦. ವಿಶ್ವಜಿದತಿರಾತ್ರಃ
೮೧. ತ್ರಿವೃದತಿರಾತ್ರಃ
೮೨. ಪಂಚದಶಾತಿರಾತ್ರಃ
೮೩. ಸಪ್ತದಶಾತಿರಾತ್ರಃ
೮೪. ಏಕವಿಂಶಾತಿರಾತ್ರಃ
೮೫. ಅಪ್ತೋರ್ಯಾಮಃ
೮೬. ಅಂಗಿರಸಾಂ ದ್ವಿರಾತ್ರಃ
೮೭. ಚೈತ್ರರಥೋ ದ್ವಿರಾತ್ರಃ
೮೮. ಕಾಪಿವನೋ ದ್ವಿರಾತ್ರಃ
೮೯. ಗರ್ಗತ್ರಿರಾತ್ರಃ
೯೦. ಅಶ್ವತ್ರಿರಾತ್ರಃ
೯೧. ಬೈದತ್ರಿರಾತ್ರಃ
೯೨. ಛಂದೋಮಪವಮಾನಃ
೯೩. ಅಂತರ್ವಸುಃ
೯೪. ಪರಾಕಃ
೯೫. ಚತುರ್ವೀರಃ
೯೬. ಜಾಮದಗ್ನ್ಯ
೯೭. ವಾಸಿಷ್ಠಃ
೯೮. ವಿಶ್ವಾಮಿತ್ರಸ್ಯ ಸಂಚಯಃ



೯೯. ಅಭ್ಯಾಸಂಗ್ಯಃ
೧೦೦. ಪಂಚಶಾರದೀಯಃ
೧೦೧. ಅಂತರ್ವಹಾವ್ರತಃ
೧೦೨. ಋತೂನಾಂ ಷಡ್ರಾತ್ರಃ
೧೦೩. ತ್ರಿಕದ್ರುಕಃ
೧೦೪. ಅಭ್ಯಾಸಂಗ್ಯಃ
೧೦೫. ಸಪ್ತರ್ಷೀಣಾಂ ಸಪ್ತರಾತ್ರಃ
೧೦೬. ಪ್ರಜಾಪತೇಃ ಸಪ್ತರಾತ್ರಃ
೧೦೭. ಛಂದೋಮಪವಮಾನಃ
೧೦೮. ಜಾಮದಗ್ನ್ಯ
೧೦೯. ಪ್ರಜಾಪತೇರವಧಾನಮ್
೧೧೦. ಜನಕಸಪ್ತರಾತ್ರಃ
೧೧೧. ಪೃಷ್ಠ್ಯಸ್ತೋಮಃ
೧೧೨. ಅಷ್ಟರಾತ್ರಃ
೧೧೩. ದೇವಾನಾಂ ನವರಾತ್ರಃ
೧೧೪. ಅನ್ಯೋ ನವರಾತ್ರಃ
೧೧೫. ತ್ರಿಕಕುಪ್
೧೧೬. ಕೌಸುರುಬಿಂದಃ
೧೧೭. ಅನ್ಯೋ ದಶರಾತ್ರಃ
೧೧೮. ದೇವಪುರಮ್
೧೧೯. ಪೌಂಡರೀಕಃ
೧೨೦. ಬೃಹಸ್ಪತಿಸವಃ
೧೨೧. ವೈಶ್ಯಸವಃ
೧೨೨. ಬ್ರಾಹ್ಮಣಸವಃ
೧೨೩. ಸೋಮಸವಃ
೧೨೪. ಪೃಥಿಸವಃ
೧೨೫. ಗೋಸವಃ
೧೨೬. ಓದನಸವಃ
೧೨೭. ಪಂಚಶಾರದೀಯಃ
೧೨೮. ಇಂದ್ರಸ್ತುತ್
೧೨೯. ಅಪ್ತೋರ್ಯಾಮಃ
೧೩೦. ವಿಘನಃ
೧೩೧. ಅಪ್ತದ್ವಾದಶಾಹಃ
೧೩೨. ಪ್ರತಿಷ್ಠಾಫಲಕಃ
೧೩೩. ಸರ್ವರ್ಧಿಸಾಧನಮ್
೧೩೪. ಅನ್ಯಃ ಚತುರ್ದಶರಾತ್ರಃ
೧೩೫. ಪ್ರತಿಷ್ಠಾಸಾಧನಮ್
೧೩೬. ದೇವತ್ವಪ್ರಾಪ್ತಿಫಲಕಃ
೧೩೭. ಬ್ರಹ್ಮವರ್ಚಸಫಲಕಃ
೧೩೮. ಸತ್ರಾಹೀನೋಭಯಫಲಕಃ
೧೩೯. ಪ್ರಜಾಫಲಕಃ
೧೪೦. ಐಂದ್ರಃ ಷೋಡಶರಾತ್ರಃ
೧೪೧. ಪ್ರಜಾಪತೇಃ ಸಪ್ತದಶರಾತ್ರಃ
೧೪೨. ದೇವಾನಾಮಷ್ಟಾದಶರಾತ್ರಃ
೧೪೩. ವಾಯೋರೇಕೋನ
ವಿಂಶತಿರಾತ್ರಃ
೧೪೪. ಪುರುಷಫಲಸಾಧನಂ
ವಿಂಶತಿರಾತ್ರಃ
೧೪೫. ಪಶುಫಲಸಾಧನಃ
೧೪೬. ಬ್ರಹ್ಮವರ್ಚಸಫಲಕಃ
೧೪೭. ದ್ವಾವಿಂಶತಿರಾತ್ರಃ
೧೪೮. ತ್ರಯೋವಿಂಶತಿರಾತ್ರಃ
೧೪೯. ಸ್ವರ್ಗಸಾಧನಮ್
೧೫೦. ಪ್ರಜಾಪಶುಸಾಧನಮ್
೧೫೧. ಪ್ರಜಾಪತೇಃ
ಪಂಚವಿಂಶತಿರಾತ್ರಃ
೧೫೨. ಷಡ್ವಿಂಶತಿರಾತ್ರಃ
೧೫೩. ಸಪ್ತವಿಂಶತಿರಾತ್ರಃ
೧೫೪. ಅಷ್ಟಾವಿಂಶತಿರಾತ್ರಃ
೧೫೫. ಏಕೋನತ್ರಿಂಶರಾತ್ರಃ
೧೫೬. ತ್ರಿಂಶರಾತ್ರಃ
೧೫೭. ಪ್ರಜಾಪತೇರೇಕತ್ರಿಂಶದ್ರಾತ್ರಃ



೧೫೮. ದ್ವಾತ್ರಿಂಶದ್ರಾತ್ರಃ
೧೫೯. ಪ್ರತಿಷ್ಠಾಫಲಕಃ
೧೬೦. ಋದ್ಧಿಫಲಕಃ
೧೬೧. ಸರ್ವಫಲಸಾಧನಃ
೧೬೨. ಚತುಸ್ತ್ರಿಂಶದ್ರಾತ್ರಃ
೧೬೩. ಪಂಚತ್ರಿಂಶದ್ರಾತ್ರಃ
೧೬೪. ಷಟ್ ತ್ರಿಂಶದ್ರಾತ್ರಃ
೧೬೫. ಸಪ್ತತ್ರಿಂಶದ್ರಾತ್ರಃ
೧೬೬. ಅಷ್ಟತ್ರಿಂಶದ್ರಾತ್ರಃ
೧೬೭. ಏಕೋನಚತ್ವಾರಿಂಶದ್ರಾತ್ರಃ
೧೬೮. ಚತ್ವಾರಿಂಶದ್ರಾತ್ರಃ
೧೬೯. ಪಾಪವ್ಯಾವೃತ್ತಿಫಲಕಃ
೧೭೦. ಶ್ರೀಫಲಕಃ
೧೭೧. ಆಂಜನಾಭ್ಯಂಜನಾಖ್ಯಃ
೧೭೨. ಸಂವತ್ಸರಸಮ್ಮಿತಃ
೧೭೩. ಸವಿತುಃ ಕಕುಭಃ
೧೭೪. ಪ್ರತಿಷ್ಠಾಫಲಕಃ
೧೭೫. ಪ್ರಜಾವಿಭವಫಲಕಃ
೧೭೬. ಏಕಷಷ್ಟಿರಾತ್ರಃ
೧೭೭. ಶತರಾತ್ರಃ
೧೭೮. ಆದಿತ್ಯಾನಾಮಯನಮ್
೧೭೯. ಅಂಗಿರಸಾಮಯನಮ್
೧೮೦. ಧೃತಿವಾತವತೋರಯನಮ್
೧೮೧. ಕುಂಡಪಾಯಿನಾಮಯನಮ್
೧೮೨. ತಪಶ್ಚಿತಾಮಯನಮ್
೧೮೩. ಪ್ರಜಾಪತೇರ್ದ್ವಾದಶ ಸಂವತ್ಸರಮ್
೧೮೪. ಶಾಕ್ತ್ಯಾನಾಮಯನಂ ಷಟ್ ತ್ರಿಂಶತ್ ಸಂವತ್ಸರಮ್
೧೮೫. ಶತಸಂವತ್ಸರಮ್
೧೮೬. ಅಗ್ನೇಃಸಹಸ್ರಮ್
೧೮೭. ಮಿತ್ರಾವರುಣಯೋ ರಯನಮ್
೧೮೮. ಇಂದ್ರಾಗ್ನಿಯೋರಯನಮ್
೧೮೯. ಅರ್ಯವ್ಣೋರಯನಮ್
೧೯೦. ದಾರ್ಶದ್ವತಮ್
೧೯೧. ತುರಾಯಣಮ್
೧೯೨. ಸರ್ಪಾಣಾಂ ಸತ್ರಮ್
೧೯೩. ತ್ರಿಸಂವತ್ಸರಮ್
೧೯೪. ಪ್ರಜಾಪತೇಃ ಸಹಸ್ರಸಂವತ್ಸರಮ್
೧೯೫. ವಿಶ್ವಸೃಜಾಮಯನಂ ಸಹಸ್ರಸಂವತ್ಸರಮ್



## ಕೃಷ್ಣಯಜುರ್ವೇದದಲ್ಲಿ ಉಪದಿಷ್ಟವಾಗಿರುವ ಯಜ್ಞಗಳು

ಯಜುರ್ವೇದದಲ್ಲಿ ಯಜ್ಞಗಳೇ ಪ್ರಧಾನವಾಗಿ ಹೇಳಲ್ಪಟ್ಟಿವೆಯಷ್ಟೆ. ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಯಲ್ಲಿ ಒಟ್ಟು ಎಷ್ಟು ಯಜ್ಞಗಳು ನಿರೂಪಿತವಾಗಿವೆಯೆಂಬುದನ್ನೂ, ಯಾವ ಫಲವನ್ನು ಬಯಸಿ ಈ ಯಜ್ಞಗಳ ಅನುಷ್ಠಾನವೆಂಬುದನ್ನೂ, ಯಜುರ್ವೇದದಲ್ಲಿ ಎಲ್ಲಿ ಉಪದಿಷ್ಟವಾಗಿವೆ ಎಂಬುದನ್ನೂ, ವೇದದಲ್ಲಿಯೇ ಯಜ್ಞದ ದೇವತೆ ಮತ್ತು ಹವಿಸ್ಸನ್ನು ನಿರ್ದೇಶಿಸಿದ್ದರೆ ಅದನ್ನೂ ಸಹ ಈ ಕೋಷ್ಟಕದಿಂದ ತಿಳಿಯಬಹುದಾಗಿದೆ.

| ಬಯಸುವ ಫಲ-ನಿಮಿತ್ತ | ಯಜ್ಞಗಳು ಮತ್ತು ಅವು ವೇದದಲ್ಲಿ ನಿರೂಪಿತವಾಗಿರುವ ಸ್ಥಾನ |
|---|---|
| ಸರ್ವಕಾಮಃ | ಅಗ್ನ್ಯಾಧಾನ<br>ಅಗ್ನ್ಯಾಧಾನವೂ ಅದರ ವಿಶೇಷಗಳೂ ಯಜ್ಞಗಳಲ್ಲ. ಎಲ್ಲ ಯಜ್ಞಗಳಿಗೂ ಅಗ್ನಿಯೇ ಆಧಾರವಾದುದರಿಂದ ಅದನ್ನು ಪ್ರಾಸಂಗಿಕವಾಗಿ ನೀಡಿದೆ.<br>ತೈ.ಬ್ರಾ.1 1.2 ರಿಂದ 1.2.1 ನೆಯ ಅನುವಾಕ ಪೂರ್ಣ. |
| ಋದ್ಧಿಕಾಮಃ | ಪುನರಾಧಾನ<br>ತೈ.ಸಂ.1.5.1ರಿಂದ 4ನೆಯ ಅನುವಾಕ ಪೂರ್ಣ ಮತ್ತು<br>ತೈ.ಬ್ರಾ.1.3.1ನೆಯ ಅನುವಾಕ ಪೂರ್ಣ. |
| ಋದ್ಧಿಕಾಮಃ | ತೃತೀಯಾಧಾನ<br>ತೈ.ಸಂ.1.5.1ರಿಂದ 4ನೆಯ ಅನುವಾಕ ಪೂರ್ಣ ಮತ್ತು<br>ತೈ.ಬ್ರಾ.1.3.1ನೆಯ ಅನುವಾಕ ಪೂರ್ಣ. |



| | |
|---|---|
| ವಿಚ್ಛಿನ್ನಸಂಧಾನಕಾಮಃ (ಅಗ್ನಿಯು ನಷ್ಟವಾದಾಗ ಪುನಃ ಆಧಾನ ಮಾಡಬಯಸುವವನು) | ವಿಚ್ಛಿನ್ನಾಧಾನ<br>ತೈ.ಸಂ. 1.5.1ರಿಂದ 4ನೆಯ ಅನುವಾಕ ಪೂರ್ಣ ಮತ್ತು ತೈ.ಬ್ರಾ.1.3.1ನೆಯ ಅನುವಾಕ ಪೂರ್ಣ. |
| ಸ್ವರ್ಗಕಾಮಃ | ೧. ಅಗ್ನಿಹೋತ್ರ<br>ಇಲ್ಲಿಂದ ಹವಿರ್ಯಜ್ಞಗಳು ಪ್ರಾರಂಭಗೊಳ್ಳುತ್ತವೆ.<br>ತೈ.ಬ್ರಾ. 2.1ನೆಯ ಪ್ರಪಾಠಕ ಪೂರ್ಣ ಮತ್ತು ತೈ.ಬ್ರಾ. 1.4.3ರಿಂದ 4ನೆಯ ಅನುವಾಕ ಪೂರ್ಣ.<br>ಅಗ್ನ್ಯುಪಸ್ಥಾನ<br>ತೈ.ಸಂ.1.5.5ರಿಂದ 9ನೆಯ ಅನುವಾಕ ಪೂರ್ಣ.<br>ಪ್ರವಾಸೋಪಸ್ಥಾನ<br>ತೈ. ಸಂ. 1.5.10ನೆಯ ಅನುವಾಕದ ಮೊದಲ ಆರು ಮಂತ್ರಗಳು.<br>ಈ ಮೇಲಿನ ಎರಡೂ ಉಪಸ್ಥಾನ (ಪ್ರಾರ್ಥನೆ)ಗಳು ಪ್ರತ್ಯೇಕ ಯಜ್ಞಗಳಲ್ಲ. |
| ಸ್ವರ್ಗಕಾಮಃ | ೨) ದರ್ಶ-ಪೂರ್ಣಮಾಸೇಷ್ಟಿಗಳು.<br>ತೈ. ಸಂ. 1.1.1ರಿಂದ 13ನೆಯ ಅನುವಾಕ ಪೂರ್ಣ. ತೈ. ಸಂ. 2.5ನೆಯ ಪ್ರಪಾಠಕ, 6ನೆಯ ಪ್ರಪಾಠಕಗಳಲ್ಲಿನ ಪ್ರಾರಂಭದ ಆರು ಅನುವಾಕಗಳು ಮತ್ತು ತೈ.ಸಂ. 2.5.11ನೆಯ ಅನುವಾಕದ ಉತ್ತರಾರ್ಧ.<br>ತೈ.ಬ್ರಾ.3.2.ನೆಯ ಮತ್ತು 3ನೆಯ ಪ್ರಪಾಠಕಗಳು ಪೂರ್ಣ. |



ತೈ.ಬ್ರಾ. 1.3.10ನೆಯ
ಅನುವಾಕ ಪೂರ್ಣ.

ಈ ಇಷ್ಟಿಗಳ ಯಾಜಮಾನ
(ಯಜಮಾನನು ಹೇಳಬೇಕಾದ ಮಂತ್ರಗಳು
ಮತ್ತು ಅವುಗಳ ಬ್ರಾಹ್ಮಣ).

ತೈ. ಸಂ. 1.5.10ರಲ್ಲಿ ಪಯಸ್ವತೀ
ಮಂತ್ರದಿಂದ ಆರಂಭಿಸಿ ಅನುವಾಕ ಪೂರ್ಣ.

ತೈ.ಸಂ. 1.6.1ರಿಂದ 11ನೆಯ
ಅನುವಾಕ ಪೂರ್ಣ.

ತೈ.ಸಂ. 1.7.1 ಮತ್ತು 3,4,5,6ನೆಯ
ಅನುವಾಕ ಪೂರ್ಣ.

ಈ ಇಷ್ಟಿಗಳ ಹೌತ್ರ (ಹೋತೃವು
ಹೇಳಬೇಕಾದ ಮಂತ್ರಗಳು ಮತ್ತು
ಅವುಗಳ ಬ್ರಾಹ್ಮಣಗಳು).

ತೈ. ಬ್ರಾ. 3.5ನೆಯ ಪ್ರಪಾಠಕ
ಪೂರ್ಣ. ತೈ.ಸಂ. 2.5.7ರಿಂದ 10ನೆಯ
ಅನುವಾಕಪೂರ್ಣ. ಮತ್ತು 11ನೆಯ
ಅನುವಾಕದ ಪೂರ್ವಾರ್ಧ.

ತೈ.ಸಂ. 2.6.7ರಿಂದ 10ನೆಯ
ಅನುವಾಕ ಪೂರ್ಣ.

ಶತ್ರುಪರಾಜಯಕಾಮಃ

ಖ) ಆಗ್ನಾವೈಷ್ಣವೀಷ್ಟಿಃ
ಇಲ್ಲಿಂದ ಕಾಮ್ಯೇಷ್ಟಿಗಳು ಪ್ರಾರಂಭ
ಗೊಳ್ಳುತ್ತವೆ. ನಿರ್ದಿಷ್ಟವಾದ ನಿಮಿತ್ತ
ವೊದಗಿದಾಗ ಮಾಡುವ ಯಜ್ಞಗಳೂ
ಮುಂದೆ ಸೂಚಿತವಾಗಿವೆ. ಅವು
ನೈಮಿತ್ತಿಕಯಜ್ಞಗಳು.
ತೈ.ಸಂ. 2.5.4ನೆಯ ಅನುವಾಕ



| | |
|---|---|
| ಪಶುಕಾಮಃ | ೪) ಸಾಕಂ ಪ್ರಸ್ಥಾಯೀಯೇಷ್ಟಿಃ<br>ತೈ.ಸಂ. 2.5.4ನೆಯ ಅನುವಾಕ |
| ಭೂಯೋ ಯಜ್ಞಕಾಮಃ (ಅನೇಕ ಯಜ್ಞಗಳನ್ನು ಮಾಡ ಬಯಸುವವನು) | ೫) ಸುಮನಾ ನಾಮೇಷ್ಟಿಃ<br>ತೈ.ಸಂ. 2.5.5ನೆಯ ಅನುವಾಕ |
| ಸ್ವರ್ಗಕಾಮಃ | ೬) ದಾಕ್ಷಾಯಣಯಜ್ಞಃ<br>ತೈ.ಸಂ.2.5.5ನೆಯ ಅನುವಾಕ |
| ಪ್ರಜಾಕಾಮಃ | ೭) ಐಂದ್ರಾಗ್ನೇಷ್ಟಿಃ<br>ತೈ.ಸಂ.2.2.1ನೆಯ ಅನುವಾಕ |
| ಪ್ರಜಾಕಾಮಃ | ೮) ಐಂದ್ರಾಗ್ನೇಷ್ಟಿಃ<br>ತೈ.ಸಂ. 2.2.1ನೆಯ ಅನುವಾಕ<br>ಒಂದೇ ಇಷ್ಟಿಯನ್ನು ಬಗೆಬಗೆಯ ಫಲವನ್ನು ಬಯಸಿ ಮಾಡುವುದು ಶ್ರುತಿವಿಹಿತವಾಗಿದೆ. ಕೆಲವೆಡೆ ಒಂದೇ ಫಲದಂತೆ ಕಂಡರೂ ಸೂಕ್ಷ್ಮ ವ್ಯತ್ಯಾಸ ವಿರುತ್ತದೆ. ಒಂದೇ ಫಲಕ್ಕೆ ಬಗೆಬಗೆಯ ಇಷ್ಟಿಯೂ ಇದೆ. |
| ಯುದ್ಧಕ್ಕೆ ಹೊರಡುವವನು | ೯) ಐಂದ್ರಾಗ್ನೇಷ್ಟಿಃ<br>ತೈ.ಸಂ. 2.2.1ನೆಯ ಅನುವಾಕ |
| ಯುದ್ಧದಲ್ಲಿ ಜಯವಾದ ಮೇಲೆ | ೧೦) ಐಂದ್ರಾಗ್ನೇಷ್ಟಿಃ<br>ತೈ.ಸಂ 2.2.1.ನೆಯ ಅನುವಾಕ |
| ಸಭಾಸ್ಥಾನಕ್ಕೆ ಹೋಗುವಾಗ | ೧೧) ಐಂದ್ರಾಗ್ನೇಷ್ಟಿಃ<br>ತೈ.ಸಂ. 2.2.1ನೆಯ ಅನುವಾಕ |
| ಸಭಾಸ್ಥಾನಕ್ಕೆ ಹೋಗುವಾಗ | ೧೨) ಪೌಷ್ಣೇಷ್ಟಿಃ<br>ತೈ.ಸಂ. 2.2.1ನೆಯ ಅನುವಾಕ |



| | |
|---|---|
| ಪ್ರತಿಷ್ಠಾಕಾಮಃ | ೧೩) ಕ್ಷೈತ್ರಪತ್ಯೇಷ್ಟಿಃ<br>ತೈ.ಸಂ. 2.2.1ನೆಯ ಅನುವಾಕ |
| ವೀರ್ಯಕಾಮಃ | ೧೪) ಐಂದ್ರಾಗ್ನೇಷ್ಟಿಃ<br>ತೈ.ಸಂ. 2.2.1ನೆಯ ಅನುವಾಕ |
| ದರ್ಶ-ಪೂರ್ಣಮಾಸಗಳ<br>ಕಾಲಾತಿಕ್ರಮದೋಷ<br>ನಿವೃತ್ತಿಕಾಮಃ | ೧೫) ಪಾಥಿಕೃತೀಷ್ಟಿಃ<br>ತೈ.ಸಂ. 2.2.2.ನೆಯ ಅನುವಾಕ. |
| ವ್ರತಭಂಗದೋಷನಿವೃತ್ತಿಕಾಮಃ | ೧೬) ವ್ರಾತಪತೀಷ್ಟಿಃ<br>ತೈ.ಸಂ 2.2.2ನೆಯ ಅನುವಾಕ |
| ರಕ್ಷೋಬಾಧಾನಿವೃತ್ತಿಕಾಮಃ | ೧೭) ರಾಕ್ಷೋಘ್ನೇಷ್ಟಿಃ<br>ತೈ.ಸಂ. 2.2.2ನೆಯ ಅನುವಾಕ |
| ಆಯುಷ್ಕಾಮಃ | ೧೮) ಆಯುಃಕಾಮೇಷ್ಟಿಃ<br>ತೈ.ಸಂ. 2.2.2ನೆಯ ಅನುವಾಕ |
| ಶತ್ರುಮಾರಣಕಾಮಃ | ೧೯) ಅಭಿಚಾರೇಷ್ಟಿಃ<br>ದೇವತಾ: ಅಗ್ನಿಃ ರುದ್ರವಾನ್<br>ತೈ.ಸಂ 2.2.2ನೆಯ ಅನುವಾಕ |
| ಗೋವುಗಳಾಗಲೀ, ಸೇವಕರಾಗಲೀ,<br>ದೈವಿಕರೋಗದಿಂದ ಮೃತಪಟ್ಟರೆ<br>ಅಥವಾ ತನಗೇ ಮರಣ<br>ಭಯವು ಉಂಟಾದಾಗ: | ೨೦) ಮರಣಭಯನಿವೃತ್ತಿಕಾಮೇಷ್ಟಿಃ<br>ದೇವತಾ: ಅಗ್ನಿಃ ಸುರಭಿಮಾನ್<br>ತೈ.ಸಂ 2.2.2ನೆಯ ಅನುವಾಕ |
| ಯುದ್ಧಾಸಕ್ತರಿಗೆ ಆಹಾರಗಳ<br>ಅಭಾವವು ಉಂಟಾದಾಗ: | ೨೧) ಕ್ಷಾಮವತೀಷ್ಟಿಃ<br>ದೇವತಾ: ಅಗ್ನಿಃ ಕ್ಷಾಮವಾನ್<br>ತೈ.ಸಂ 2.2.2ನೆಯ ಅನುವಾಕ |



